# ದೂರವಾದವರು

ಕಾದಂಬರಿ

ಪದ್ಮಾ ಶ್ರೀಧರ್

ಮಂಜುಶ್ರೀ ಪ್ರಕಾಶನ
೧೬ನೇ ಮೆಯಿನ್, ಕುವೆಂಪು ಹೈಸ್ಕೂಲ್ ಹಿಂಭಾಗ,
ಸರಸ್ವತಿಪುರಂ, ಮೈಸೂರು ೫೭೦೦೦೯

**DOORA VAADAVARU**- A social novel by Smt **Padma Sreedhar**, 1248, HIG, 7th B Cross, KHB Colony, New Town, Yalahanka, Bangalore 560064, (Ph. 8565466) and published by M/S MANJUSHREE PRAKASHANA, 16th Main, Behind Kuvempu High School, Kamakshi Hospital Road, Saraswathipuram, Mysore 570009. Pp 280.

First publication: 2004.
ISBN-81-86675-49-3


Price: Rs.210/-

D. T. P: KUM. M V LATHA,
KANIVE COMPUTERS, MYSORE-9

Impression at: Vagle Offset Printers, BANGALORE

## ಅರಿಕೆ-ಕಾದಂಬರಿಯ ಸಾರಾಂಶ

**'ದೂರವಾದವರು'** ಒಂದು ಸಾಮಾಜಿಕ ಕಾದಂಬರಿ. ಒಂದೇ ಕುಟುಂಬದ ಎರಡು ಪೀಳಿಗೆಯವರ ನಡುವೆ ಈ ಕಥೆ ಸಾಗುತ್ತದೆ.

ಕಥೆಯ ಪೂರ್ವಾರ್ಧದ ನಾಯಕ ರಂಗನಾಥ, ಮಧ್ಯಮವರ್ಗದ ಕುಟುಂಬದಲ್ಲಿ ಹುಟ್ಟಿ ಬೆಳೆದು ವಿದ್ಯಾವಂತನಾಗಿ, ಕಾಲೇಜಿನಲ್ಲಿ ಅಧ್ಯಾಪಕನಾಗಿರುತ್ತಾನೆ. ಡಾ॥ ನಿರ್ಮಲಾಳನ್ನು ಪ್ರೀತಿಸಿ ಮದುವೆಯಾಗುತ್ತಾನೆ. ಪರಿಸ್ಥಿತಿಯ ವಿಕೋಪಕ್ಕೆ ಬಲಿಯಾಗಿ ಕಣ್ಮರೆಯಾದ ತನ್ನ ತಂಗಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲು, ತನ್ನ ಪತ್ನಿಯಿಂದ ದೂರನಾಗುತ್ತಾನೆ. ತಂಗಿಯ ಮಗನನ್ನು ಒಬ್ಬ ಜವಾಬ್ದಾರಿಯುತ, ಆದರ್ಶ ಡಾಕ್ಟರನನ್ನಾಗಿ ಮಾಡುವುದು ತನ್ನ ಮೊದಲ ಕರ್ತವ್ಯ ಎಂದು ಪರಿಗಣಿಸಿ ಅದಕ್ಕೆ ಪ್ರಾಧಾನ್ಯತೆಯನ್ನು ಕೊಡುತ್ತಾನೆ.

ಮನೋಜ ಮಾವನ ಮುದ್ದಿನ ಕಣ್ಮಣಿಯಾಗಿ ಬೆಳೆದು ಮಾವನ ವಿಶ್ವಾಸಕ್ಕೆ ಕುಂದು ಬರದಂತೆ, ತನ್ನ ಇತಿಮಿತಿಯನ್ನು ಅರಿತುಕೊಂಡು ಮಾವನ ಶ್ರಮವನ್ನು ಸಫಲಗೊಳಿಸಿ, ಸಾರ್ಥಕತೆಯನ್ನು ಹೊಂದುತ್ತಾನೆ.

ಡಾ॥ ನಿರ್ಮಲಾ, ರಂಗನಾಥನನ್ನು ಮೆಚ್ಚಿ ಮದುವೆಯಾದರೂ, ಭಿನ್ನಾಭಿಪ್ರಾಯಗಳು ಮೂಡಿ, ಪತಿ ತನ್ನಿಂದ ದೂರವಾದರೂ, ಎದೆಗುಂದದೆ, ಧೈರ್ಯಗೆಡದೆ, ಛಲದಿಂದ, ಹಠದಿಂದ ತನ್ನ ವೃತ್ತಿಯಲ್ಲಿ ಮುಂದುವರೆಯುತ್ತಾ, ತನ್ನ ಮಗಳನ್ನು ತನ್ನ ಇಚ್ಛೆಗೆ ತಕ್ಕಂತೆ ಬೆಳೆಸುತ್ತಾಳೆ. ಆದರೆ ಬೆಳೆದು ದೊಡ್ಡವಳಾಗುತ್ತಾ ರಾಧಿಕಾ, ಮೆಡಿಕಲ್ ವ್ಯಾಸಂಗವನ್ನು, ವಿರೋಧಿಸುತ್ತಾ, ಮೆಡಿಕಲ್ ವೃತ್ತಿಯನ್ನು ದ್ವೇಷಿಸುತ್ತಾ, ತಾನು ಜೀವನದಲ್ಲಿ ವಂಚಿತಳು ಎಂಬ ಭಾವನೆಯನ್ನು ಬೆಳೆಸಿಕೊಳ್ಳುತ್ತಾಳೆ. ಮಗಳ ಈ ಬದಲಾವಣೆ ನಿರ್ಮಲಳನ್ನು ಹೆದರಿಸುತ್ತದೆ. ಮಗಳ ಮನೋಭಾವನೆ ಬದಲಾಗಬೇಕಾದರೆ ತಾನು ತನ್ನ ಅಭಿಮಾನವನ್ನು ಬಲಿಕೊಡಬೇಕಾಗುತ್ತದೆ. ಎಂಬ ಪರಿಸ್ಥಿತಿ ಉಂಟಾದಾಗ ನಿರ್ಮಲ ತಳಮಳಗೊಳ್ಳುತ್ತಾಳೆ.

ಸುಮಾರು ಇಪ್ಪತ್ತು ವರ್ಷಗಳ ನಂತರ ಮತ್ತೆ ಅವರಿಬ್ಬರ ಜೀವನದಲ್ಲಿ ಹೊಸ ಅಧ್ಯಾಯ ಪ್ರಾರಂಭವಾಗುತ್ತದೆ.

ಆಕಸ್ಮಿಕವಾಗಿ ರಾಧಿಕಾಳನ್ನು ತನ್ನ ಸ್ನೇಹಿತ ಸತ್ಯಮೂರ್ತಿಯ ಮನೆಯಲ್ಲಿ ಕಂಡ ರಂಗನಾಥ, ಭಾವನೆಗಳ ತಿಕ್ಕಾಟದಲ್ಲಿ ತೊಳಲಾಡುತ್ತಾನೆ. ರಾಧಿಕಾ ತನ ಸ್ವಂತ ಮಗಳೆಂದು ತಿಳಿದಾಗ, ಸಂತಸದಿಂದ ನಿರ್ಮಲಳನು

ಭೇಟಿಯಾಗಿ ಕ್ಷಮೆ ಯಾಚಿಸಿ ತಾವುಗಳು ಮತ್ತೆ ಒಂದಾಗಿ ಬಾಳೋಣ ಎನ್ನುವ ಆಸೆ ಯನ್ನು ವ್ಯಕ್ತಪಡಿಸುತ್ತಾನೆ. ಆದರೆ ನಿರ್ಮಲ ಅವನ ಆಸೆಗಳನ್ನು ತಿರಸ್ಕರಿಸಿ, ಹೀಯಾಳಿಸುತ್ತಾಳೆ.

ಕಾಲೇಜಿನಲ್ಲಿ ಪ್ರಾರಂಭವಾದ ಮನೋಜ ರಾಧಿಕಾರ ಸ್ನೇಹವು ಪ್ರೇಮವಾಗಿ ಪರಿಣಮಿಸುತ್ತದೆ. ಇದಕ್ಕೆ ರಂಗನಾಥನ ಪುಷ್ಠಿ ದೊರಕುತ್ತದೆ. ಆದರೆ ನಿರ್ಮಲ ವಿರೋಧಿಸುತ್ತಾಳೆ. ಆದರೆ ಈ ಹಿನ್ನೆಲೆಗಳ ಬಗ್ಗೆ ಕಿಂಚಿತ್ತು ಅರಿವಿಲ್ಲದ ಮನೋಜ ಡಾಕ್ಟರ್ ಪದವಿಯನ್ನು ಶ್ರದ್ಧೆಯಿಂದ ಪಡೆಯುತ್ತಾನೆ.

ನಾನಾ ಮನೋಕ್ಷೋಭೆಗಳಿಂದ, ತನ್ನ ವ್ಯಥೆಯನ್ನು ಯಾರೊಡನೆಯೂ ಹೇಳಿಕೊಳ್ಳ ಲಾಗದ ನಿರ್ಮಲಾ, ರಾಧಿಕಾಳಂತಹ ಮುಗ್ಧ ಹುಡುಗಿಗೆ, ರಂಗನಾಥನಂತಹ ತಂದೆ, ಮನೋಜನಂತಹ ಪತಿಯ ಅವಶ್ಯಕತೆ ಅತ್ಯಗತ್ಯ ಎಂಬ ಅರಿವು ಮೂಡಿದಾಗ ತನ್ನ ಸ್ವಾಭಿಮಾನಕ್ಕೆ ವಿರೋಧವೆನಿಸಿದರೂ, ಒಂದು ನಿರ್ಧಾರಕ್ಕೆ ಬರುತ್ತಾಳೆ. ಯಾವ ವಿಷಯವನ್ನು ಬಹಿರಂಗಪಡಿಸದೇ, ರಾಧಿಕಾ, ರಂಗನಾಥನ ಮನೆಯನ್ನು ಸೇರುವಂತೆ ಮಾಡಿ, ತಾನು ಎಲ್ಲರಿಂದ ದೂರವಾಗುತ್ತಾಳೆ.

ರಂಗನಾಥನ ವಾತ್ಸಲ್ಯ, ಮನೋಜನ ಪ್ರೀತಿ, ಅವಳು ಡಾಕ್ಟರ್ ಪದವಿಯನ್ನು ಪಡೆಯುವುದರಲ್ಲಿ ಸಫಲಳಾಗುವಂತೆ ಮಾಡುತ್ತದೆ. ಹೀಗೆ ನಿರ್ಮಲಳ ಆಸೆಯೂ ನೆರವೇರುತ್ತದೆ. ರಂಗನಾಥನ ಆಸೆಯೂ ಕೈಗೂಡುತ್ತದೆ.

ಈ ನಿಟ್ಟಿನಲ್ಲಿ ಮನೋಜನಿಗೆ ಸಹಾಯಕನಾಗಿ ಬರುವವನು, ಮುರಳಿ. ಮುರಳಿ, ರಂಗನಾಥನ ಸ್ನೇಹಿತ. ಸತ್ಯಮೂರ್ತಿಯ ಮಗ. ಮರೆತು ಹೋಗಿದ್ದ ಈ ಸಂಬಂಧ ಸ್ನೇಹಗಳೆಲ್ಲ ಪ್ರಕಟವಾಗುವ ಹೊತ್ತಿಗೆ ಏನೇನೋ ಘಟನೆಗಳು ನಡೆದು ಹೋಗಿರುತ್ತವೆ.

ಮುರಳಿ, ರಂಗನಾಥ ಮೇಷ್ಟ್ರ ಅಭಿಮಾನಿಯಾಗಿ, ಮನೋಜನ ಆಪ್ತ ಗೆಳೆಯನಾಗಿ, ರಾಧಿಕಾಳಿಗೆ ಸ್ವಂತ ಸೋದರನಿಗಿಂತ ಹೆಚ್ಚಾಗಿ ವಾತ್ಸಲ್ಯವನ್ನು ತೋರುವ ಮುರಳಿಯು, ಮನೋಜನ ಇವರೆಲ್ಲರೊಡನೆ ಒಂದಾಗಿ ಬೆರೆತು, ಆತ್ಮೀಯ ನೆನೆಸಿಕೊಳ್ಳುತ್ತಾನೆ. ಸತ್ಯಮೂರ್ತಿಗೆ ತಕ್ಕ ಮಗ.

ಆದರೆ, ನಿರ್ಮಲೆಯನ್ನು ಕ್ಷಮೆ ಕೇಳಲೆಂದು, ಅವಳು ಹೋದ ದಾರಿಯಲ್ಲೇ ಹೋಗಿ ಅವಳು ಸೇರಿದ ಜಾಗವನ್ನು ಸೇರುವ ವೇಳೆಗೆ, ರಂಗನಾಥನ ದಾರಿಯೂ ಮುಗಿಯುತ್ತದೆ. ಕಥೆ ಅಂತ್ಯಗೊಳ್ಳುತ್ತದೆ.

**ಓದುಗರು ನನ್ನ ಈ ಕಾದಂಬರಿಯನ್ನೂ ಸ್ವೀಕರಿಸಿ ಮೆಚ್ಚುವರೆಂದು ಭಾವಿಸುತ್ತೇನೆ.**

**ಪದ್ಮಾ ಶ್ರೀಧರ್**

# ದೂರವಾದವರು

"ನಿರ್ಮಲಾ"ಕ್ಲಿನಿಕ್ ನಲ್ಲಿ ತನ್ನ ಸರದಿಗಾಗಿ ಕಾಯುತ್ತಾ ಕುಳಿತಿದ್ದ ರಂಗನಾಥ ಬೇಜಾರಿನಿಂದ ಆಕಳಿಸಿದ. ಸುಮಾರು ಅರ್ಧ ಗಂಟೆಗೂ ಹೆಚ್ಚು ಹೊತ್ತಿನಿಂದ ಅಸಹನೆಯಿಂದ.ಕಾಯುತ್ತಿದ್ದವನಿಗೆ ಬೇಜಾರಿನಿಂದ ಆಕಳಿಕೆ ಬರಲು ಶುರುವಾಗಿತ್ತು. ಸಾಯಂಕಾಲ ಕಾಲೇಜಿನಿಂದ ಮನೆಗೆ ಬಂದೊಡನೆಯೇ ತಾಯಿ ಕಾವೇರಮ್ಮ ಮಗನಿಗೆ ಹೇಳಿದ್ದಳು.

"ಮಗೂಗೆ ನೆನ್ನೆ ಬಂದ ಜ್ವರ ಬಿಟ್ಟೇ ಇಲ್ಲ ಕಣೋ.. ಯಾರಾದ್ರೂ ಡಾಕ್ಟ್ರನ್ನ ಕರ್ಕೊಂಡು ಬರ್ತೀಯಾ?"

ಆ ಕ್ಷಣದಲ್ಲಿ ಅವನಿಗೆ ಆಯಾಸದಿಂದ ಬೇಜಾರಾದರೂ, ತಾಯಿಯ ಮುಖದಲ್ಲಿನ ಆತಂಕವನ್ನು ಗುರುತಿಸಿ, ಡಾಕ್ಟರನ್ನು ಹುಡುಕಿಕೊಂಡು ಹೊರಟಿದ್ದ. ಅದೇ ರಸ್ತೆಯಲ್ಲಿ ತಿರುಗಾಡುವಾಗ ಎಂದೋ ಕಂಡಿದ್ದ ಬೋರ್ಡ್‌ನ್ನು ನೆನೆಸಿಕೊಂಡು ಆ ಕ್ಲಿನಿಕ್‌ಗೆ ಬಂದಿದ್ದ. ಬಾಗಿಲ ಬಳಿ ಇದ್ದ ಬೋರ್ಡ್‌ನ್ನು ಮತ್ತೊಮ್ಮೆ ಓದಿದ. ಡಾ. ನಿರ್ಮಲಾ, ಮಕ್ಕಳ ತಜ್ಞೆ ಎಂದು ಓದಿಕೊಂಡಾಗ ಸ್ವಲ್ಪ ನೆಮ್ಮದಿಯಾಗಿತ್ತು. ಒಳಗೆ ಇಣಿಕಿ ನೋಡಿದಾಗ, ಸಾಲು ಸಾಲಾಗಿ ಡಾಕ್ಟರಿಗಾಗಿ ಕಾದು ಕುಳಿತವರನ್ನು ಕಂಡು ದಿಗಿಲಾಗಿತ್ತು ಅಲ್ಲೇ ಒಂದು ಕಡೆ ತಾನೂ ಕುಳಿತ.

ತನ್ನ ಸರದಿ ಬಂದು, ಡಾಕ್ಟರ ಕರೆ ಬಂದಾಗ, ಗಡಬಡಿಸಿ ಎದ್ದು ಒಳಗಿನ ಕೋಣೆಗೆ ಬಂದ. ಅಲ್ಲಿ ಚಿಕ್ಕ ವಯಸ್ಸಿನ ಲೇಡಿ ಡಾಕ್ಟರನ್ನು ಕಂಡು ಮನಸ್ಸಿಗೆ ಪಿಚ್ಚೆನ್ನಿಸಿದರೂ, ಕೈ ಮುಗಿದು'ನಮಸ್ಕಾರ' ಎಂದ. ಪ್ರತಿವಂದಿಸಿದ ಡಾಕ್ಟರು, ಕುರ್ಚಿಯ ಕಡೆ ಕೈಮಾಡಿ ಕುಳಿತುಕೊಳ್ಳುವಂತೆ ಹೇಳಿದಳು.

' ಥ್ಯಾಂಕ್ಸ್ ' ಎಂದು ಹೇಳಿ ಕುರ್ಚಿಯ ಮೇಲೆ ಕುಳಿತ ರಂಗನಾಥ ತನ್ನನ್ನೇ ಗಮನಿಸುತ್ತಿದ್ದ ಡಾಕ್ಟರಿಗೆ ಹೇಳಿದ.

" ಡಾಕ್ಟರ್ ..ಪ್ಲೀಸ್.. ನೀವು ನಮ್ಮ ಮನೆಗೆ ಬರಬೇಕು..."

"ಪೇಷೆಂಟ್ ಬಂದಿಲ್ವಾ? ನಾನು ಮನೆ ವಿಸಿಟ್ಸಗೆ ಹೋಗುಲ್ಲ."

-" ಪ್ಲೀಸ್ ಹಾಗೆ ಹೇಳ್ಬೇಡಿ.. ನೆನ್ನೆಯಿಂದ ಮಗೂಗೆ ಜ್ವರವಂತೆ, ನಮ್ಮ ತಾಯಿ ಹೆದರಿದ್ದಾರೆ.... ಬಂದು ನೋಡಬೇಕು" ಕೇಳಿಕೊಂಡ.

"ಮಗೂನ ಇಲ್ಲಿಗೇ ಕರೆದುಕೊಂಡು ಬಂದಿದ್ರೆ ಚೆನ್ನಾಗಿತ್ತು" ಮತ್ತೆ ನುಡಿದಳು.

"ಏನೋ ಗೊತ್ತಾಗ್ಲಿಲ್ಲ. ನಮ್ಮ ತಾಯಿ ಡಾಕ್ಟ್ರನ್ನ ಕರೆದುಕೊಂಡು ಬಾ ಅಂತಂದ್ರು.. ಇದೊಂದು ಸಲ ಬಂದು ಬಿಡಿ"

ತಬ್ಬಿಬ್ಬಾಗಿ ಮಾತಾಡಿದ ಅವನ ಬಗೆಗೆ ಅವಳಿಗೆ ನಗು ಬಂದು. ಇವನೆಂತಹ ವನಪ್ಪಾ ಇದೇ ಮೊದಲ್ನೇ ಸಲ ಡಾಕ್ಟರರ ಹತ್ತಿರ ಬಂದವನ ಹಾಗಾಡುತ್ತಾನೆನಿಸಿತು.

"ಓ. ಕೇ.. ನೋಡೋಣ. ಆದ್ರೆ ಮೊದಲು ಇಲ್ಲಿಯ ಎಲ್ಲಾ ಪೇಷೆಂಟ್ಸ್ ಗಳನ್ನು ನೋಡಬೇಕು. ನೀವು ಅನ್ನು ಸ್ವಲ್ಪ ಹೊತ್ತು ಕಾಯಬೇಕಾಗುತ್ತದೆ."

"ಆಗ್ಲಿ ಪರವಾಗಿಲ್ಲ ಕಾಯ್ತೀನಿ" ಎಂದ

"ಸರಿ, ಹಾಗಾದ್ರೆ, ಹೊರಗಡೆ ಇರಿ.. ಅದ್ಸರಿ, ನೀವು ಯಾವುದಾದರೂ ವೆಹಿಕಲ್ ತಂದಿದೀರಾ?"

ಅವಳ ಪ್ರಶ್ನೆ ವಿಚಿತ್ರವೆನಿಸಿದರೂ ಹೂಂ ಗುಟ್ಟಿದ.

"ಹೂಂ, ಸ್ಕೂಟರ್ ಇದೆ"

"ಸರಿ ಹಾಗಾದ್ರೆ.. ನನ್ನನ್ನ ಕರೆದುಕೊಂಡು ಹೋಗಿ, ಮತ್ತೆ ಕರೆದು ತಂದು ಬಿಡುವ ಹಾಗಿದ್ರೆ ಒಳ್ಳೆಯದು"

"ಆಗ್ಲಿ ಅದಕ್ಕೇನು? ಎಂದು ನುಡಿದರೂ ಅವನಿಗೆ ಆಶ್ಚರ್ಯವಾಗಿತ್ತು. ಡಾಕ್ಟರು, "ನೆಕ್ಸ್ಟ್ ಪೇಷೆಂಟ್"ಎಂದು ಕರೆದಾಗ, ಇವನು ಹೊರಗಿನ ಕೋಣೆಗೆ ಬಂದು, ಮತ್ತೆ ಕಾಯುತ್ತಾ ಕುಳಿತ. ಆದರೆ ಈ ಸಲ ಕಾಯುವುದು ಅಷ್ಟು ಅಹಿತವೆನಿಸಲಿಲ್ಲ. ಡಾಕ್ಟರ ಬಗ್ಗೆ ಯೋಚಿಸುತ್ತಾ ಕುಳಿತ.

ಸುಮಾರು ಮೂವತ್ತೈದು ನಲವತ್ತರ ಮಧ್ಯೆ ವಯಸ್ಸಿನವಳಿರಬಹುದು. ಪರವಾಗಿಲ್ಲ ನೋಡೋಕೆ ಚೆನ್ನಾಗಿದ್ದಾಳೆ. ಮಾತೂ ಅಷ್ಟೇ ನಯವಾಗಿ ಆಡ್ತಾಳೆ.. ಅದೂ ಸರಿ. ಡಾಕ್ಟರಾದವಳು ನಯವಾಗಿ ಮಾತಾನಾಡದಿದ್ದರೆ ಯಾರು ಬರ್ತಾರೆ?... ಅಮ್ಮ ಸರಿ.. ಡಾಕ್ಟರಾದವಳು ನಯವಾಗಿ ಮಾತನಾಡಿಯೇ ಅರ್ಧ ಖಾಯಿಲೆ ವಾಸಿ ಮಾಡಿಬಿಡ್ತಾರೆ ಅಂತ.. ಹೀಗೇ ತನ್ನಲ್ಲೇ ಯೋಚಿಸುತ್ತಿದ್ದವನನ್ನು ಕಾಂಪೌಂಡರ್‌ನ ಧ್ವನಿ ಎಚ್ಚರಿಸಿತು.

"ಡಾಕ್ಟರ್ ಕರೀತಿದಾರೆ ಸಾರ್"

ಮತ್ತೊಮ್ಮೆ ಗಡಿ ಬಿಡಿಯಿಂದ ಎದ್ದ ರಂಗನಾಥ, ಅಷ್ಟರಲ್ಲಿ ಡಾಕ್ಟರೇ ಹೊರಕ್ಕೆ ಬಂದಿದ್ದಳು.

"ನಾನು ಫ್ರೀ ಹೊರಡೋಣ್ವಾ? ಬೇಗ ವಾಪಸ್ಸು ಬಂದು ಬಿಡಬೇಕು." ಅವಳು ನುಡಿದಾಗ,

"ಹೌದು..ಹೌದು..ಬನ್ನಿ ಎನ್ನುತ್ತಾ ಕೈಯಲ್ಲಿ ಹೆಲ್ಮೆಟ್ ಹಿಡಿದು ಹೊರ ಹೊರಟ. ಸ್ಕೂಟರನ್ನು ನಿಲ್ಲಿಸಿದ ಜಾಗಕ್ಕೆ ಹೋಗಿ, ಹಾಕಿದ್ದ ಸ್ಟ್ಯಾಂಡನ್ನು ಕಳಚಿ ಸ್ಕೂಟರ್ ಸ್ಟಾರ್ಟ್ ಮಾಡಿ, ಡಾಕ್ಟರು ಬರುತ್ತಿದ್ದಾಳೋ ಇಲ್ಲವೋ ಎಂದು ಹಿಂತಿರುಗಿ ನೋಡಿದ. ಒಂದು ಗಳಿಗೆ ಅವನ ಮನಸ್ಸಿಗೆ ಏಕದಂ ಮಂಕು ಕವಿದಂತಾಯಿತು. ಮತ್ತೊಮ್ಮೆ ಅನುಮಾನದಿಂದ ದಿಟ್ಟಿಸಿ ನೋಡಿದ.

ಹೌದು.. ಅವಳೇ.. ಕೈಯಲ್ಲಿ ಮೆಡಿಸಿನ್ ಕಿಟ್ ಹಿಡಿದು, ಬಲಗಾಲನ್ನು ಎಳೆದೆಳೆದು ಹಾಕುತ್ತಾ ನಿಧಾನವಾಗಿ ನಡೆದು ಬರುತ್ತಿದ್ದವಳನ್ನು ಕಂಡು ಅವನಿಗೆ ಅತಿ ವ್ಯಸನವಾಯಿತು. ಇಂಥ ಚೆಂದೊಳ್ಳಿ ಚೆಲುವೆಯಾದವಳಿಗೆ ಒಂದು ಕಾಲು ಕುಂಟು ಎಂದು ನಂಬುವುದು ಕಷ್ಟವೆನಿಸಿತು. ಮೇಲಾಗಿ ಅವಳೇ ಡಾಕ್ಟರು.. ಅವಳಿಗೇ ಒಂದು ಕಾಲು ಊನ ಎಂದರೆ....ಎಂದು ಅವನಿನ್ನೂ ಗಲಿಬಿಲಿಯಲ್ಲೇ ಇದ್ದಾಗ, ಅವಳು ಅವನ ಬಳಿಗೆ ನಡೆದು ಬಂದಿದ್ದಳು.

"ಹೊರಡೋಣಾ....."ಎಂದು ನುಡಿದವಳನ್ನು ತಿರುಗಿ ನೋಡುವ ಸಾಹಸ ಮಾಡದೇ ಸ್ಕೂಟರನ್ನು ಏರಿದ್ದ. ಅವಳು ಹಿಂದಿನ ಸೀಟನ್ನು ಏರಿ, ಸರಿಯಾಗಿ ಕೂತ

ಅನುಭವವಾದ ಒಂದು ಗಳಿಗೆಯ ನಂತರ ಸ್ಕೂಟರನ್ನು ಮುಂದಕ್ಕೆ ಓಡಿಸಿದ.

ಓ.. ಇದಕ್ಕೇ ಇವಳು ನನ್ನನ್ನೇ ಕರೆದುಕೊಂಡು ಹೋಗುವಂತೆ ಕೇಳಿರಬೇಕು ಅಂತ ಅರಿವಾಯಿತು. ಮನಸ್ಸಿನಲ್ಲಿ ಏನೇನೋ ಆಲೋಚನೆಗಳು ತುಂಬಿರುವಂತೆಯೇ.. ಅಭ್ಯಾಸ ಬಲದಿಂದ ತನ್ನ ಮನೆಯ ಮುಂದೆ ಸ್ಕೂಟರನ್ನು ನಿಲ್ಲಿಸಿದ. ಅವಳು ಇಳಿಯುತ್ತಿದ್ದಂತೆಯೇ

"ಇದೇ ಮನೆ ಬನ್ನಿ" ಎಂದು ಹೇಳಿ, ಅವಳಿಂದ ಮೆಡಿಸಿನ್ ಕಿಟ್‌ನ್ನು ತನ್ನ ಕೈಗೆ ತೆಗೆದುಕೊಂಡು ಮುಂದೆ ಮುಂದೆ ನಡೆದ..

ಮುಂದೆ ಮಾಡಿದ್ದ ಬಾಗಿಲನ್ನು ದೂಡುತ್ತಾ ಒಳ ನಡೆದ

ಅವನನ್ನು ಹಿಂಬಾಲಿಸಿ, ನಿಧಾನವಾಗಿ ಕಾಲೆಳೆಯುತ್ತಾ ಬಂದವಳನ್ನು ಕಾವೇರಮ್ಮ ಬೆರಗಾಗಿ ದಿಟ್ಟಿಸಿ ನೋಡಿದರು.

"ಇವರು ನಮ್ಮ ತಾಯಿ"ಎಂದು ಪರಿಚಯಿಸುತ್ತಾ, "ಅಮ್ಮಾ ಮನೂ ಎಲ್ಲಿ?" ಎಂದು ಕೇಳಿದ.

" ಮಲಗಿದ್ದಾನೆ... ಎನ್ನುತ್ತಾ ಒಳಗಿನ ರೂಮಿಗೆ ಸರಿದ ಅವರನ್ನು ಡಾಕ್ಟರು ಹಿಂಬಾಲಿಸಿದಳು. ರಂಗನಾಥ ಡಾಕ್ಟರಿಗೆ ಕುಳಿತು ಕೊಳ್ಳಲು ಒಂದು ಕುರ್ಚಿಯನ್ನು ತಂದು ಹಾಕಿದ.

ಕುರ್ಚಿಯ ಮೇಲೆ ಕುಳಿತ ಅವಳು, "ಏನು ಕಂಪ್ಲೇಂಟ್? ಎಷ್ಟು ದಿನದಿಂದ ಜ್ವರ..?" ಎಂದು ಕೇಳಿದಳು.

"ಎರಡು ದಿನದಿಂದ " ಎನ್ನುತ್ತಾ ಕಾವೇರಮ್ಮ ಮಗುವನ್ನು ತೊಡೆಯ ಮೇಲೆ ಕೂರಿಸಿಕೊಂಡು, ಇನ್ನೊಂದು ಕುರ್ಚಿಯ ಮೇಲೆ ಕುಳಿತರು. ಡಾಕ್ಟರು ಕಿಟ್‌ನ್ನು ಓಪನ್ ಮಾಡಿ, ಸ್ಟೆಥೋಸ್ಕೋಪನ್ನು ಹೊರ ತೆಗೆದಳು. ಬಾಗಿಲೊರಗಿ ನಿಂತಿದ್ದ ರಂಗನಾಥ ಅವಳನ್ನೇ ಗಮನಿಸುತ್ತಿದ್ದ.

ನಿಧಾನವಾಗಿ ಕೂಲಂಕಷವಾಗಿ ಮಗುವನ್ನು ಪರೀಕ್ಷಿಸಿದ ಅವಳು. ಶ್ವಾಸಕೋಶದಲ್ಲಿ ಕಫ ಕಟ್ಟಿದೆ. ನಾನೀಗ ಒಂದು ಸಿರಪ್ ಬರೆದು ಕೊಡ್ತೀನಿ. ಅದನ್ನು ದಿನಕ್ಕೆ ಮೂರು ಸಲದಂತೆ, ಮೂರು ದಿನ ಕೊಡಿ... ಆಮೇಲೆ ಮಗೂನ ಕ್ಲಿನಿಕ್‌ಗೇ ಒಂದು ಸಾರಿ ಕರೆದುಕೊಂಡು ಬನ್ನಿ" ಎಂದಳು ರಂಗನಾಥನ ಕಡೆ ತಿರುಗಿ.

"ಗಾಭರಿ ಏನಿಲ್ಲ ತಾನೇ?" ಕಾವೇರಮ್ಮ ಆತಂಕದಿಂದ ಕೇಳಿದರು.

"ಏನಿಲ್ಲ .. ಇದೆಲ್ಲಾ ಸಣ್ಣ ಮಕ್ಕಳಿಗೆ ಸರ್ವೇ ಸಾಮಾನ್ಯ"ವೆನ್ನುತ್ತಾ ಮಗುವಿನ ಹೆಸರು. ವಯಸ್ಸನ್ನು ತಿಳಿದುಕೊಂಡು, ತನ್ನಲ್ಲಿದ್ದ ಪ್ರಿಸ್ಕ್ರಪ್ಶನ್‌ಬುಕ್ಕಿನ ಹಾಳೆಯಲ್ಲಿ ಬರೆದಳು. ಸಿರಪ್‌ನ ಹೆಸರನ್ನು ಬರೆದು, ಡೋಸೇಜನ್ನು ಸೂಚಿಸಿ, ಅದನ್ನು ರಂಗನಾಥನ ಕೈಗಿತ್ತಳು.

ಕ್ಲಿನಿಕ್‌ನಲ್ಲಿ ಸ್ಯಾಂಪಲ್ಸ್ ಇದೆ. ಕೊಡ್ತೀನಿ. ಎಂದು ಹೇಳಿ ಎದ್ದು ನಿಂತಳು. ಮತ್ತೊಮ್ಮೆ ಅವಳ ಕೈನಿಂದ ಬ್ಯಾಗನ್ನೆತ್ತಿಕೊಂಡು ಹೊರಟವನು ತಾಯಿಗೆ ಹೇಳಿದ ಅಮ್ಮಾ ಇವರನ್ನು ಕ್ಲಿನಿಕ್‌ಗೆ ಬಿಟ್ಟು, ಹಾಗೇ ಔಷಧಿಯನ್ನು ತೆಗೆದುಕೊಂಡು ಬರ್ತೀವಿ.

ತಾಯಿ ಉತ್ತರಿಸದಿದ್ದರೂ, ಅವನು ಮುಂದೆ ಮುಂದೆ ನಡೆದ. ಕಾಲೆಳೆಯುತ್ತಾ ಅವನನ್ನು ಹಿಂಬಾಲಿಸಿದ ಡಾಕ್ಟರನ್ನು ಕಂಡು ಆಕೆಗೆ ಮುಜುಗರವೆನಿಸಿತು. ಏನೇನೋ

ಆಲೋಚನೆಗಳು.....

ಎಲ್ಲಾ ಬಿಟ್ಟು ಈ ಡಾಕ್ಟರನ್ನೇಕೆ ಕರೆತಂದ? ಚಿಕ್ಕವಯಸ್ಸಿನ ಈ ಡಾಕ್ಟರಿಗೇಕೆ ಕುಂಟು? ಇಷ್ಟು ಹೊತ್ನಲ್ಲಿ ಆಟೋ ಎಲ್ಲಿ ಸಿಗುತ್ತೆ? ಅವಳನ್ನು ಹೇಗೆ ಬಿಟ್ಟು ಬರುತ್ತಾನೆ ಎಂದುಕೊ ಹೊರಗೆ ಬಂದು ನೋಡಿದಾಗ, ಡಾಕ್ಟರು, ಅವನ ಸ್ಕೂಟರಿನ ಹಿಂದಿನ ಸೀಟಿನಲ್ಲಿ ಕುಳಿತಿದ್ದುದು ಕಂಡು, ಮನಸ್ಸು ಅಲ್ಲೋಲ್ಲ ಕಲ್ಲೋಲ ವಾಯಿತು. ಇವಳೇನು ಇವನ ಪರಿಚಯದವಳೇ.. ಎಷ್ಟು ಸಲೀಲಾಗಿ ಕುಳಿತ್ತಿದ್ದಾಳೆ. ಬರುವಾಗಲೂ ಇವನೇ ಕರೆದುಕೊಂಡು ಬಂದನೋ ಏನೋ..? ಏನೋ, ಎಂತೋ ಈಗಿನ ಕಾಲದವರು. ತಮ್ಮ ಮನಸ್ಸಿಗೆ ಬಂದಂತೆ ಮಾಡ್ತಾರೆ.. ಆಡ್ತಾರೆ.. ಅಲ್ಲಾ ಈ ರಂಗಂಗೇನು ಬಂತು? ಬೇರೆ ಯಾವ ಗಂಡಸು ಡಾಕ್ಟರಿರಲಿಲ್ಲವೇ?...ಈ ಕತ್ತಲೆ ಹೊತ್ನಲ್ಲಿ ಒಬ್ಬಳು ಲೇಡಿ ಡಾಕ್ಟರನ್ನು ತನ್ನ ಹಿಂದೆ ಸ್ಕೂಟರ್ನಲ್ಲಿ ಕೂರಿಸಿಕೊಂಡು ಬಂದಿದಾನಲ್ಲ. ಇದೇನು ಚೆನ್ನ? ಒಳಗೊಳಗೇ ಕುದ್ದು ಕೊಂಡಳು.

ಸ್ಕೂಟರನ್ನು ಕ್ಲಿನಿಕ್ ಬಳಿ ನಿಲ್ಲಿಸಿದ. ನಿರ್ಮಲಾ ಇಳಿದು ತಾನೇ ಕ್ಲಿನಿಕ್‌ನ ಬೀಗ ತೆಗೆದು, ಷೆಲ್ಫ್‌ನಲ್ಲಿಟ್ಟಿದ್ದ ಸಿರಪ್ ಬಾಟಲನ್ನು ಹುಡುಕಿ ಅವನ ಕೈಗೆ ಕೊಟ್ಟಳು. "ಥ್ಯಾಂಕ್ಸ್"ಎಂದು ಹೇಳಿ ರಂಗನಾಥ ಹೊರಗೆ ಬಂದ.

ಅವನ ದಾರಿಯನ್ನೇ ನೋಡುತ್ತಾ ಕುಳಿತಿದ್ದ ಕಾವೇರಮ್ಮ ಅವನನ್ನು ಕಂಡೊಡನೆ ಏಕೋ ಏನೋ ಏನೂ ಹೇಳದೇ ಸುಮ್ಮನಾದಳು.

"ಅಮ್ಮಾ ತಗೋ... ಈಗಲೇ ಒಂದು ಡೋಸ್ ಕೊಟ್ಟು ಬಿಡು" ಎನ್ನುತ್ತಾ ಔಷಧಿಯ ಬಾಟಲನ್ನು ತಾಯಿಯ ಕೈಗಿತ್ತ. ತಾಯಿ ಏನನ್ನು ಕೇಳದೇ ಬಾಟಲಿಯ ಮುಚ್ಚಳವನ್ನು ತೆಗೆದು ಅರ್ಧ ಚಮಚದಷ್ಟು ಔಷದಿಯನ್ನು ಮಗುವಿನ ಬಾಯಿಗೆ ಹಾಕಿದಳು. ಏನೂ ಮಾತನಾಡದೇ ರೂಮಿಗೆ ಹೊರಟು ಹೋದ ಮಗನನ್ನು ಗಮನಿಸಿದಳು.

ಬಟ್ಟೆ ಬದಲಾಯಿಸಿ ಕೈ ಕಾಲು ತೊಳೆದು, ಊಟಕ್ಕೆ ಕುಳಿತವನಿಗೆ ತಾಯಿ ಬಡಿಸಿದಳು. ಯಾಂತ್ರಿಕವಾಗಿ ಊಟ ಮುಗಿಸಿ ಎದ್ದು, ತಟ್ಟೆ ಲೋಟವನ್ನು ತೊಳೆದು, ಗೋಮೆ ವರೆಸಿ ತನ್ನ ಪಾಡಿಗೆ ತಾನು ರೂಮು ಸೇರಿದ್ದನ್ನು ನೋಡಿ ತಾಯಿ ಪೆಚ್ಚಾದಳು. "ಅಮ್ಮಾ ನಿನ್ನ ಊಟ ಆಯ್ತಾ? ಅಂತ ಒಂದು ಮಾತು ಕೇಳಲಿಲ್ಲವಲ್ಲ, ಏನಾಗಿದೆ ಇವತ್ತು ಇವನಿಗೆ" ಎಂದುಕೊಂಡು, ಅಸಮಾಧಾನ ದಿಂದ ಒಂದು ಲೋಟ ತಣ್ಣೀರನ್ನು ಕುಡಿದು ಅಡಿಗೆ ಮನೆ ದೀಪ ಆರಿಸಿ, ಬಾಗಿಲನ್ನು ಎಳೆದು ಹಾಕಿ, ಹೊರ ಬಂದು ಮನೋಜನ ಪಕ್ಕದಲ್ಲಿ ಉರುಳಿ ಕೊಂಡಳು.

"ಯಾರೋ ಒಬ್ಬಳು ಕುಂಟು ಹುಡುಗಿಯನ್ನು ಸ್ಕೂಟರಿನಲ್ಲಿ ತನ್ನ ಹಿಂದೆ ಕೂರಿಸಿ ಕೊಂಡು ಓಡಾಡಿದ್ದಕ್ಕೇ ಇವನು ಹೀಗಾಗಿದಾನಲ್ಲ. ಇನ್ನೂ ಮದುವೆಯಾಗಿ ಹೆಂಡತಿ ಯೊಡನೆ ಮೆರೆಯುವಂತಿದ್ದರೆ, ನಾನೊಬ್ಬಳು ಇದೀನಿ ಎನ್ನುವುದು ಸಹ ಜ್ಞಾಪಕವಿರು ತ್ತಿರಲಿಲ್ಲವೇನೋ ಎಂದು ಅವಳ ಮನಸ್ಸು ಅವನ ಮೇಲೆ ರೇಗಿಕೊಂಡರೂ, ಮರು ಕ್ಷಣವೇ ಹೃದಯ ಅದನ್ನು ತಳ್ಳಿ ಹಾಕಿತ್ತು.

ಛೆ...ನನ್ನ ಮಗನ ಬಗ್ಗೆ ನಾನೇ ಹೀಗೆಲ್ಲಾ ಅಂದುಕೊಳ್ಳಬಾರದು ಪಾಪ.... ನನಗೋಸ್ಕರ, ಮನೂಗೋಸ್ಕರ ಎಷ್ಟು ಒದ್ದಾಡ್ತಾನೆ. ಮದುವೆಯಾಗಿ

ಸುಖವಾಗಿರಬೇಕಾದ ಕಾಲದಲ್ಲಿ ಬ್ರಹ್ಮಚಾರಿಯಾಗಿದ್ದುಕೊಂಡು, ತನ್ನ ಪಾಡಿಗೆ ತಾನು ಇದ್ದಾನೆ. ನಾನೇಕೆ ಏನೇನೋ ಅಂದುಕೊಳ್ಳಬೇಕು? ಒಂದು ದಿನ ಅವನು ಹೀಗೆ ಲೇಡಿ ಡಾಕ್ಟರನ್ನ ಕರೆದುಕೊಂಡು ಬಂದಿದ್ದಕ್ಕೇ ನನಗೆ ಸಹಿಸಲಾಗಲಿಲ್ಲ ವಲ್ಲ... ಹಾಗಾದ್ರೆ ಅವನು ಮದುವೆಯಾಗ್ತೀನಿ ಅಂತಂದ್ರೆ ನನಗದನ್ನು ಸಹಿಸಲಾ ಗುವುದಿಲ್ಲವೇ? ಅದಕ್ಕೆ ನಾನು ಸುಮ್ಮನಿದ್ದೇನೆಯೇ? ಅವನ ಮನಸ್ಸಿನಲ್ಲಿ ಏನಿದೆ ಅಂತ ಎಂದಾದರೂ ನಾನು ಯೋಚಿಸಿದೀನಾ? ಅವನಾಗಿಯೇ ಅವನೂ ಎಂದೂ ಹೇಳಿಕೊಂಡಿಲ್ಲ. ನಾನೂ ಕೇಳಿಲ್ಲ. ಇದಕ್ಕೆಲ್ಲ ನಮ್ಮ ಅನೂರಾಧಾಳ ಸಾವೇ ಕಾರಣ. ಅವಳು ಬದುಕಿದ್ದಿದ್ದರೆ.. ಅಣ್ಣನ ಮದುವೆಗೆ ಪ್ರಯತ್ನ ಮಾಡುತ್ತಿರಲಿಲ್ಲವೇ?.. ಆದರೆ ನಾನು ಬದುಕಿದೀನಲ್ಲ. ನಾನೇಕೆ ಸುಮ್ಮನಿದೀನಿ? ಅವನಕ ಮದುವೆ ಬಗ್ಗೆ ನಾನೇಕೆ ಯೋಚಿಸುವುದಿಲ್ಲ. ನನಗೆ ಹೆದರಿಕೆಯೇ? ಹೌದೇನೋ.. ಸೊಸೆಯಾಗಿ ಬಂದವಳು, ತನ್ನನ್ನು ಮನೋಜನನ್ನೂ ರಂಗನಿಂದ ದೂರ ಮಾಡಿಬಿಟ್ಟರೇ? ಅದನ್ನು ಸಹಿಸುವ ಶಕ್ತಿ ನನ್ನಲ್ಲಿದ್ದೆಯೆ. ನಾನು ಮಾಡುತ್ತಿರುವುದು ಸರಿಯೋ.. ತಪ್ಪೋ.. ನನಗೆ ತಿಳಿಯುತ್ತಿಲ್ಲವಲ್ಲ. ಯಾರ್‍ಯಾರ ಕರ್ಮ ಯಾರ್‍ಯಾರನ್ನ ಹೇಗೆ ಹೇಗೆ ಸತಾಯಿಸುತ್ತೋ ಇವತ್ತು ಬಂದಿತ್ತಲ್ಲ ಆ ಹುಡುಗಿ.. ಯಾವ ಕರ್ಮಕ್ಕೆ ಆ ಹುಡುಗಿಗೆ ಶಿಕ್ಷೆ?, ರೂಪವಿದೆ..ವಿದ್ಯೆ ಇದೆ.. ಆದರೇನು, ಆ ಕಾಲು...? ಛೇ..ಎಷ್ಟು ಕಷ್ಟ..?" ಎಂದು ನಿಟ್ಟುಸಿರುನೊಂದಿಗೆ ಮಗ್ಗುಲು ಬದಲಾಯಿಸಿದಳು.

ರಂಗನಾಥನ ರೂಮಿನಲ್ಲಿ ಇನ್ನೂ ದೀಪ ಉರಿಯುತ್ತಿತ್ತು. ದಿಂಬಿಗೆ ತಲೆ ಆನಿಸಿ ಕೈಯಲ್ಲಿ ಪುಸ್ತಕ ಹಿಡಿದು ಅವನೂ, ನಿರ್ಮಲಳ ಬಗ್ಗೆಯೇ ಚಿಂತಿಸುತ್ತಿದ್ದ. ಅವಳು ಕಾಲನ್ನೆಳೆದೆಳೆದು ಹಾಕುತ್ತಾ ಬರುತ್ತಿದ್ದ ಚಿತ್ರವೇ ಬಂದು ಬಂದು ಅವನೆದುರು ನಿಲ್ಲುತ್ತಿತ್ತು.

ಡಾಕ್ಟರು ಹೇಗೋ ಏನೋ ಎಂಬ ಅಂಜಿಕೆಯಿಂದ ಹೋಗಿದ್ದರೂ, ಅವಳ ನಯ ವಿನಯದ ಮಾತಿಗೆ ಬೆರಗಾಗಿದ್ದ. ಚಿಕ್ಕ ವಯಸ್ಸಿನವಳಲ್ಲದ, ಸುಂದರಿ ಎನ್ನ ಬಹುದಾಗಿದ್ದ ಅವಳು ಅವನ ಮಾನಸ್ಸನ್ನು ಆಕರ್ಷಿಸಿದ್ದಳು. ಆದರೆ ಅವಳು ಅವನೆಡೆಗೆ ನಡೆದು ಬಂದಾಗ ನಂಬಲಸಾಧ್ಯ ಆಗಿತ್ತು. ಅದನ್ನು ಮರೆಯಲು ಪ್ರಯತ್ನಿಸಿದಷ್ಟು ಅವನ ಮನದೆದುರು ಬಂದು ಅವನ ಚಿತ್ತವನ್ನು ಕಲಕುತ್ತಿತ್ತೂ.

ಯಾರೋ, ಏನೋ, ನನ್ನ ಬಂಧುವಲ್ಲ, ಬಳಗವಲ್ಲ, ಪರಿಚಯದವಳಲ್ಲ,... ನನಗೇ ಹೀಗನ್ನಿಸುತ್ತಿರಬೇಕಾದರೆ... ಪಾಪ ಅವರ ಮನೆಯವರುಗಳಿಗೆ ಹೇಗಾಗಿರ ಬೇಡ? ಪಾಪ ಯಾವಾಗ ಹೀಗಾಯ್ತೋ ಏನೋ ಮದುವೆಯಾಗಿದೆಯೋ ಇಲ್ವೋ.. ಇಂಥವಳನ್ನ ಮದುವೆ ಯಾರಾಗ್ತಾರೆ? ಮದುವೆ ಆಗದಿದ್ದರೇನಂತೆ? ಅವಳೇ ಡಾಕ್ಟರ್, ಬೇಕಾದಷ್ಟು ಸಂಪಾದಿಸುತ್ತಾಳೆ. ಅವಳಿಗೇನು ಕಮ್ಮಿ! ಆದರೂ, ಆದರೂ... ಛೆ ಹಾಗಾಗಬಾರದಾಗಿತ್ತು. ಅವಳಲ್ಲಿ ಕುಂಟುತನವೊಂದಿಲ್ಲದಿದ್ದರೇ...? ಅಂತನ್ನಿಸಿದಾಗ ತನಗೇ ನಗು ಬಂದಿತ್ತು. ಅವಳು ಕುಂಟಿಯಾಗಿಲ್ಲದಿದ್ದರೆ...ತನಗೇನು? ಅರ್ಥವಿಲ್ಲದ ಆಲೋಚನೆಗಳಲ್ಲಿ ಮುಳುಗಿದವನಿಗೆ ನಿದ್ದೆ ಬಂದಾಗ ಬೆಳಗಿನ ಝಾವವಾಗಿತ್ತು.

ಬೆಳಗ್ಗೆ ತಡವಾಗಿ ಎದ್ದು ಬಂದನವನ್ನು ತಾಯಿ ಆತಂಕದಿಂದ ನೋಡಿದಳು. ಸಾಮಾನ್ಯವಾಗಿ ಹೊತ್ತಾಗಿ ಏಳುವವನಲ್ಲ. ಹುಶಾರಿಲ್ಲದೇ ಮಲಗುವುದು

ಅಪರೂಪ... ಆದರೂ ಮಗನನ್ನು ಏನೂ ಕೇಳಲಿಲ್ಲ.

ನಿತ್ಯದಂತೆ ಸಿದ್ಧನಾಗಿ ಕಾಲೇಜಿಗೆ ಹೊರಟವನು, ತಾಯಿಗೆ ಮರೆಯದೇ ಹೇಳಿದ್ದ..."ಅಮ್ಮಾ ಮನೂಗೆ ಹೊತ್ತಿಗೆ ಸರಿಯಾಗಿ ಸಿರಪ್ ಹಾಕು.. ಮರೀಬೇಡ" ಮಲಗಿದ್ದ ಮನೋಜನ ಕೆನ್ನೆ ತಟ್ಟಿ, ಮುದ್ದಿಸಿ ಹೊರಟವನನ್ನು ಕಂಡು ತಾಯಿಯ ಮನಸ್ಸು ಹಗುರವಾಗಿತ್ತು.

ಮೂರು ದಿನದ ಹೊತ್ತಿಗೆ ಮನೋಜನ ಆರೋಗ್ಯ ಚೆನ್ನಾಗಿ ಸುಧಾರಿಸಿತ್ತು. ಬೆಳಿಗ್ಗೆ ಅವನು ಕಾಲೇಜಿಗೆ ಹೊರಟಾಗ ಜ್ಞಾಪಿಸಿದ್ದಳು.

"ಇವತ್ತು, ಮನೂನ ಕ್ಲಿನಿಕ್‌ಗೆ ಕರೆದುಕೊಂಡು ಹೋಗಬೇಕು. ಡಾಕ್ಟರು ಬರ ಹೇಳಿದಾಳಲ್ಲ..ಜ್ಞಾಪಕ ಇದೇ ತಾನೇ..?

"ಅಮ್ಮಾ ..ನೀನೇ ಹೋಗಿ ಬಾ." ಸುಮ್ಮನೇ ಎಂಬಂತೆ ಹೇಳಿದ್ದ.

" ನನ್ನ ಕೈಲಾಗುಲ್ಲಪ್ಪ....ನನಗೆ ಅದೆಲ್ಲ ತಿಳಿಯುಲ್ಲ. ನೀನೇ ಕರೆದುಕೊಂಡು ಹೋಗು"

"ಹುಂ. ಆಗಲಿ. ನಾನು ಬರುವ ಹೊತ್ತಿಗೆ ಅವನನ್ನು ರೆಡಿ ಮಾಡಿರು"

ಒಂದು ಗಳಿಗೆ ಮಗನನ್ನು ಅನುಮಾನದಿಂದ ನೋಡಿದಳು ತಾಯಿ, ಮಗ ಖುಷಿಯಾಗಿದ್ದಾನೆನಿಸಿತು. ಅವನು ತಾಯಿಗೆ ಮತ್ತೇನೂ ಹೇಳದೇ ಹೊರಟ. ಅವನಿಗೂ ಒಂದು ತರಹ ಖುಷಿಯಾಗಿತ್ತು.

ಸಾಯಂಕಾಲ ಆರೂವರೆಯ ಹೊತ್ತಿಗೆ ಕ್ಲಿನಿಕ್‌ಗೆ ಬಂದಾಗ ಆಗಲೇ ಸಾಕಷ್ಟು ಜನ ಬಂದು ಕಾಯುತ್ತಾ ಕುಳಿತಿದ್ದರು. ಮನೋಜನನ್ನು ತೊಡೆಯ ಮೇಲೆ ಕೂರಿಸಿ ಕೊಂಡು ತಾನೂ ಒಂದೆಡೆ ಕುಳಿತ. ಇವನ ಸರದಿ ಬಂದಾಗ ತುಂಬಾ ಹೊತ್ತಾಗಿ ಹೋಗಿತ್ತು. ಮನೋಜ ನಿದ್ದೆ ಮಾಡಿ ಬಿಟ್ಟಿದ್ದ. ಮಲಗಿದ್ದವನನ್ನು ಭುಜದ ಮೇಲೆ ಒರಗಿಸಿಕೊಂಡು ಒಳಗಿನ ಕೋಣೆಗೆ ಬಂದ. ಡಾಕ್ಟರ್‌ನ್ನು ಕಂಡು ಪರಿಚಯದ ನಗೆ ಸೂಸಿ, "ನಮಸ್ಕಾರ" ಎಂದ.

"ನಮಸ್ಕಾರ" ಎಂದು ಹೇಳಿ "ಮಗುವನ್ನು ಅಲ್ಲಿ ಮಲಗಿಸಿ..ಮೇಲಿನ ಬಟ್ಟೆಗಳನ್ನೆಲ್ಲ ತೆಗೆದು ಬಿಡಿ...ಈಗ ಹೇಗಿದ್ದಾನೆ?"ಎಂದು ಕೇಳಿದವಳ ಆಜ್ಞೆಯನ್ನು ಪಾಲಿಸುವನಂತೆ, ಅವಳು ಎದ್ದು ಟೇಬಲ್‌ನ ಬಳಿಗೆ ಬರುವ ಮೊದಲೇ, ಮನೋಜನ್ನ ಅಲ್ಲಿ ಮಲಗಿಸಿ, ಮೇಲಿನ ಬಟ್ಟೆಗಳನ್ನು ಕಳಚಿದ... ಕೈ ಕಟ್ಟಿ ನಿಂತು ಅವಳ ಚಲನ ವಲನಗಳನ್ನೇ ಗಮನಿಸುತ್ತಿದ್ದ. ಮೌನವಾಗಿ ನಿಂತು ತನ್ನನ್ನೇ ಗಮನಿಸುತ್ತಿದಾನೆ ಎಂಬ ಅರಿವು ಅವಳಿಗುಂಟಾದಾಗ ಮುಜುಗರ ವೆನಿಸಿತು.

ಸಾಮಾನ್ಯವಾಗಿ ಚಿಕ್ಕ ಮಕ್ಕಳೊಡನೆ ಬಂದ ತಾಯಿಗಳು ತಮ್ಮ ಮಗುವಿನೊಡನೆ ಮುದ್ದು ಮಾತುಗಳನ್ನಾಡುತ್ತಾ, ಬೇಕಾದ, ಬೇಡವಾದ ಪ್ರಶ್ನೆಗಳನ್ನು ಕೇಳುತ್ತಾ, ಮಗುವಿನ ಬಗ್ಗೆ ಹೊಗಳಿಕೊಳ್ಳುತ್ತಾ, ಮಾತಾಡುವವರೇ ಜಾಸ್ತಿ. ಆದರೆ ಈಗ? ಮೊಟ್ಟ ಮೊದಲ ಬಾರಿಗೆ, ಯಾವ ಮಾತಿನ ಗೊಂದಲವಿಲ್ಲದೇ, ಏನನ್ನೂ ಕೇಳದೇ, ಏನನ್ನೂ ಹೇಳದೇ ಕೈಕಟ್ಟಿನಿಂತ ತಂದೆ..,ತಾಯಿ ಏಕೋ ಏನೋ ಬಂದಿಲ್ಲ... ಚೇಷ್ಟೆ ಮಾಡದೇ ಅಳದೇ, ನಗದೇ ಮಲಗಿ ನಿದ್ರಿಸುತ್ತಿರುವ ಮಗು. ಅತಿಯಾದ ನಿಶ್ಯಬ್ದವಾದ ವಾತಾವರಣ... ಅವಳ ಕೈಗಳು ತಡೆದವು. ಮನಸ್ಸು ಮಂಕಾಯಿತು. ಮಗು ಎದ್ದಿದ್ದರೇ..

ಅವನು ಇಲ್ಲದಿದ್ದರೇ.. ಅವನೊಡನೆ ಅವನ ಹೆಂಡತಿಯೂ ಬಂದಿದ್ದರೇ..ತಾನು ಸುಲಭವಾಗಿ ಮಗುವನ್ನು ಪರೀಕ್ಷಿಸ ಬಹುದಾಗಿತ್ತೆನಿಸಿತ್ತು.

ಅವಳು ಸಂಕೋಚ ಪ್ರವೃತ್ತಿಯವಳೇನಲ್ಲ, ಡಾಕ್ಟರ ವೃತ್ತಿಯಲ್ಲಿ ಅವಳಿಗೆ ಗಂಡಸರು ಹೆಂಗಸರು ಎಲ್ಲಾ ಒಂದೇ. ಆದರೆ ಇವತ್ತಿನ ಈ ನಿಶ್ಯಬ್ಧ. ಈ ಮೌನ ಅಸಹನೀಯವೆಳಗಿತ್ತು. ಅದನ್ನು ಮುರಿಯಲು ಅವನನ್ನು ಏನಾದರೂ ಕೇಳಬೇಕೆಂದು ಅವನೆಡೆಗೆ ತಿರುಗಿದಳು. ತದೇಕ ದೃಷ್ಟಿಯಿಂದ ಅವಳನ್ನೇ ಗಮನಿಸುತ್ತಿದ್ದವನನ್ನೂ ಕಂಡು ಅವಳು ಗಲಿಬಿಲಿಗೊಂಡಳು. ಅವನ ದೃಷ್ಟಿಯಲ್ಲಿ ಹೊಸತನ್ನೇನನ್ನೋ ಗುರುತಿಸಿ ನಾಚಿದಳು. ತನ್ನನ್ನು ಕೇವಲ ಒಬ್ಬ ಡಾಕ್ಟರ್ ಎನ್ನುವಂತೆ ಅವನು ನೋಡುತ್ತಿಲ್ಲ,.. ತಾನು ಒಬ್ಬಳು ಮದುವೆಯಾಗದ ಹೆಣ್ಣು ಎನ್ನುವುದನ್ನು ಅವನು ಗುರುತಿಸಿದ್ದಾನೆ ಅಂತ ಎನ್ನಿಸಿದಾಗ ಅವಳ ಮನಗಳು ಗರಿ ಕೆದರಿದವು. ರೋಮಾಂಚನಗೊಂಡಳು. ಮೊಟ್ಟ ಮೊದಲ ಬಾರಿಗೆ ತನ್ನ ಹೆಣ್ಣುತನವನ್ನು ತನ್ನ ಚೆಲುವನ್ನೂ ಆರಾಧನೆಯ ದೃಷ್ಟಿಯಲ್ಲಿ ನೋಡುತ್ತಿರುವಂತೆ ಭಾಸವಾಗಿ ಬೆವತು ಹೋದಳು.

ಆದರೂ ಮಗುವನ್ನು ಪರೀಕ್ಷಿಸಿ, ಸಾವರಿಸಿಕೊಂಡು, ನಿಧಾನವಾಗಿ ತನ್ನ ಟೇಬಲ್ ಬಳಿಗೆ ಬಂದು ಕುಳಿತಳು. ಮಗುವಿಗೆ ಬಿಚ್ಚಿದ್ದ ಬಟ್ಟೆಗಳನ್ನು ಮತ್ತೆ ತೊಡಿಸಿ, ಅವನನ್ನು ಎತ್ತಿಕೊಂಡು ರಂಗನಾಥ ಟೇಬಲ್ ಬಳಿ ಬಂದಾಗ. ಅವನಿಗೆ ಕುಳಿತುಕೊಳ್ಳುವಂತೆ ಹೇಳಿದಳು. ಅವನ ಕಡೆಗೆ ನೋಡದೇನೇ ಪ್ರಶ್ನೆಗಳನ್ನು ಕೇಳತೊಡಗಿದಳು.

"ಪೇಶೆಂಟ್ ಹೆಸರು....?"

"ಮನೋಜ್..." ರಂಗನಾಥ ಅವಳನ್ನೇ ನೋಡುತ್ತಾ ಉತ್ತರಿಸಿದ.

"ಎಷ್ಟು ತಿಂಗಳು......?"

"ಒಂಭತ್ತೋ ಹತ್ತೋ ಇರಬಹುದು...."

"ಸರಿಯಾಗಿ ಗೊತ್ತಿಲ್ವಾ?...ಹುಟ್ಟಿದ ತಾರೀಖು..."ಅವನೆಡೆಗೆ ದೃಷ್ಟಿ ಬೀರಿದಳು.

ಗೊತ್ತಿಲ್ಲವೆಂಬಂತೆ ತಲೆ ಆಡಿಸಿದ ಅವನು ನಗುತ್ತಿರುವಂತೆ ಅನ್ನಿಸಿದಾಗ ಅವಳು ತಲೆ ತಗ್ಗಿಸಿದಳು.

"ಮಗೂಗೆ ಡಿ.ಪಿ.ಟಿ. ಪೋಲಿಯೋ ಡ್ರಾಪ್ಸ್ ಎಲ್ಲಾ ಕೊಡಿಸಿ ಆಗಿದೆಯಾ?...ಅದರ ಚಾರ್ಟ್... ಕಾರ್ಡ್ ಇದೆಯಾ?"

"ಇರಬಹುದೇನೋ, ಅದೆಲ್ಲಾ ನಮ್ಮ ತಾಯಿಗೆ ಗೊತ್ತಿರುತ್ತೆ,"

"ಏನ್ರೀ ಹೀಗೆ ಹೇಳ್ತಿದೀರಿ?..ಪೇರೆಂಟ್ ನಾನಲ್ಲ. ನಿಮಗೆ ಗೊತ್ತಿಲ್ವಾ?"

"ಸಾರಿ ಮೇಡಂ, ಇವನ ಪೇರೆಂಟ್ ನಾನಲ್ಲ. ನಾನು ಗಾರ್ಡಿಯನ್ ಅಷ್ಟೇ..."

"ಅಂದ್ರೇ...."

"ಅವನ ಪೇರೆಂಟ್ಸ್ ಇಲ್ಲ. ನನ್ನ ತಂಗಿಯ ಮಗು..ಇವನು"

ಅವಳ ಮುಖದ ಚಹರೆ ಬದಲಾಯಿಸಿತು. ವ್ಯಥೆಯಿಂದ, ನಾಚಿಕೆಯಿಂದ ಕೂಡಿರುವಂತನ್ನಿಸಿತು. ಒಂದುಗಳಿಗೆ ಅವಳು ತಡೆದಳು. ನಂತರ

"ಸಾರಿ...ಸಾರ್.ನನಗೆ ಗೊತ್ತಿರಲಿಲ್ಲ.ನಾನೇ ಒಂದು ಚಾರ್ಟ್ ರೆಡಿ, ಮಾಡಿ ಕೊಡ್ತೀನಿ. ಎಲ್ಲಾ ಡೀಟೈಲ್ಸ್ ಬೇಕು ನನಗೆ... ಪೇರೆಂಟ್ಸ್ ಬಗ್ಗೆ ಇತ್ಯಾದಿ ತಾಯಿಗೆ ಏನಾಗಿತ್ತು.?"

ಈ ಪ್ರಶ್ನೆಗೆ ರಂಗನಾಥ ಉತ್ತರಿಸಲಿಲ್ಲ. ಮಗುವನ್ನು ಎತ್ತಿಕೊಂಡು 'ಥ್ಯಾಂಕ್ಸ್' ಎಂದಷ್ಟೇ ಹೇಳಿ ದುಡು ದುಡು ಆಚೆ ಹೊರಟು ಹೋದಾಗ, ಅವನ ವರ್ತನೆ ವಿಚಿತ್ರವಾಗಿ ತೋರಿತು ಅವಳಿಗೆ.

ಮತ್ತೊಬ್ಬ ಪೇಶೆಂಟ್ ಒಳಗೆ ಬಂದುದರಿಂದ, ಅವಳು ಅವನ ಬಗ್ಗೆ ಯೋಚಿಸುವುದನ್ನು ಬಿಟ್ಟು ಈ ಕಡೆ ಗಮನ ಹರಿಸಿದಳು.

ದುಡು ದುಡು ಮನೆಗೆ ಬಂದವನು, ಅಸಹನೆಯಿಂದ ತಾಯಿಯ ಮೇಲೆ ರೇಗಿದ. "ನೀನೇ ಹೋಗಿ ಬಾ ಅಂದ್ರೆ ಕೇಳಲಿಲ್ಲ. ಒಂದಾದರೆ ಒಂದು ನನಗೆ ಗೊತ್ತಿಲ್ಲ. ನೂರೆಂಟು ಪ್ರಶ್ನೆ ಕೇಳ್ತಾಳೆ ಅವಳು.,..."

"ಏನು ಕೇಳಿದ್ಲೋ....?"

"ಏನೇನು ಇಂಜೆಕ್ಷನ್ ಕೊಡಿಸಿದೀರಿ...?ಡೀಟೆಲ್ಸ್ ಬೇಕು.......ಚಾರ್ಟ್ ಬೇಕು. ಅದೂ, ಇದೂ... ಎಲ್ಲಾ, ಫಜೀತಿ..."ಗೊಣಗುತ್ತಾ ಮನೋಜನನ್ನು ಹಾಸಿಗೆಯ ಮೇಲೆ ಮಲಗಿಸಿದ.

ಅವನಿಗೆ ಏನೋ ಅಸಮಾಧಾನವಾಗಿದೆಯೆಂದರಿತ ತಾಯಿ ಏನನ್ನೂ ಹೇಳಲಿಲ್ಲ. ಮತ್ತೇನನ್ನೂ ಕೇಳಲಿಲ್ಲ. ತಟ್ಟೆ ಹಾಕಿ, ಅನ್ನ ಬಡಿಸಿ, ಊಟಕ್ಕೆ ಕರೆದಳು. ಅನ್ಯ ಮನಸ್ಕನಾಗಿ ಊಟ ಮಾಡುತ್ತಿದ್ದವನನ್ನು ಕಂಡು ಮನಸ್ಸು ಮುಳ್ಳಾಯಿತು ಈ ಡಾಕ್ಟರನ್ನೂ ಬೇಟಿಯಾಗಿ ಬಂದರೆ ಇವನಿಗೇನಿ ಆಗಿ ಹೊಗುತ್ತೆ? ತನ್ನಲ್ಲೇ ಪ್ರಶ್ನಿಸಿಕೊಂಡಳು.

ದಿಂಬಿಗೆ ತಲೆಕೊಟ್ಟು. ಮೈಚಾಚಿ ಮಲಗಿದಾಗ, ಸಂಜೆ ನಡೆದುದೆಲ್ಲಾ ಮತ್ತೊಮ್ಮೆ ನೆನಪಿಗೆ ಬಂತು. ಅವಳು ನಾನೇ ಇವನ ತಂದೆ ಅಂತ ತಿಳಿದುಕೊಂಡು ನನ್ನೇ ಎಲ್ಲಾ ಕೇಳಿದಳು. ತಂದೆ ತಾಯಿ ಯಾರು? ಯಾಕೆ ಸತ್ತರು? ಇದೆಲ್ಲಾ ಯಾಕೆ ಬೇಕಾಗಿದೆ ಅವಳಿಗೆ? ಅನುರಾಧಾ ಸತ್ತ ಸಂಕಟವೇ ಸದಾ ಹಿಂಸಿಸುತ್ತೆ ನಮ್ಮನ್ನ. ಅಂಥಾದ್ದರಲ್ಲಿ.... ಅದನ್ನ ಕೇಳಿತಿಳಿದುಕೊಂಡು ಏನ್ಮಾಡ್ತಾಳೆ ಅವಳು? ನಮಗಂತೂ ಮತ್ತೆ ಮತ್ತೆ ಅದನ್ನ ಆಡುಕ್ಕೆ ಇಷ್ಟವೇ ಇಲ್ಲ. ಡಾಕ್ಟರಾದ ಮಾತ್ರಕ್ಕೆ ಎಲ್ಲಾ ಕೇಳಿ ತಿಳಿದುಕೊಳ್ಳಬಹುದು ಅಂತ ಅಂದ್ಕೊಂಡಿದಾಳೇನೋ........? ಅವಳಿಗೇನು ಗೊತ್ತು ನಮ್ಮ ಹೃದಯಕ್ಕಾಗಿರುವ ನೋವು...?

ಹೌದು. ಅವಳಿಗೇನು ಗೊತ್ತು ನಮಗಾಗಿರುವ ವ್ಯಥೆ, ನೋವು, ಎಷ್ಟಾಗಲೀ ಡಾಕ್ಟರು ಅವಳು.. ಡಾಕ್ಟರರ ಹೃದಯ ಕಲ್ಲಾಗಿರುತ್ತೆ... ಅಂತಾರೆ ಅಥನಾ ಸುಮ್ಮನೇ ಕುತೂಹಲದಿಂದ ಕೇಳಿದ್ದರೆ...? ಇಂಥಾದಕ್ಕೆಲ್ಲಾ ಎಂಥಾ ಕುತೂಹಲ?...ಯಾತಕ್ಕೆ ಕೇಳಿದಳೋ... ಅವಳೂ ಹೆಂಗಸು ತಾಯಿಯಾಗಿದ್ದರೆ... ಅವಳಿಗೆ ಅರ್ಥವಾಗುತ್ತೆ... ಆದರೆ ಅವಳಿಗೆ ಮದುವೆಯಾಗಿದೆಯೋ ಇಲ್ಲವೋ...? ತುಂಬಾ ಚಿಕ್ಕವಳಂತೆ ಕಾಣಿಸುವುದಿಲ್ಲ. ಆದರೆ ಮದುವೆಯಾಗಿ, ತಾಯಿಯಾಗಿರುವಷ್ಟು ದೊಡ್ಡವಳ ಹಾಗೇನೂ ಅನ್ನಿಸುವುದಿಲ್ಲ. ಅವಳು ಕೇಳಿದಂತೆ, ತಾನೂ ಅವಳನ್ನ ಅವಳ ಬಗ್ಗೆ ಪ್ರಶ್ನಿಸಿದರೆ.... ಏನನ್ನಿಸಬಹುದು. ಅವಳಿಗೆ? ನನ್ನನ್ನು ನೋಯಿಸಿರುವಂತೆ..ಅವಳನ್ನೂ ನೋಯಿಸಬೇಕು. ಆಗಲೇ ಸಮಾಧಾನ. ಅದೇ ಸರಿ....

ಛೆ...ನಾನೇಕೆ ಹೀಗೆ ಯೋಚಿಸುತ್ತಿದೀನಿ? ನನಗೂ ಅವಳಿಗೂ ಸರಿಯೇ?...

ನಾವಿಬ್ಬರೂ ಸ್ನೇಹಿತರಲ್ಲದಿರಬಹುದು. ಆದರೆ ಶತ್ರುಗಳೂ ಅಲ್ಲವಲ್ಲ. ಅವಳನ್ನು ಏನಾದರೂ ಕೇಳುವುದಾದರೂ ಏನು? ಕಾರಣವಿಲ್ಲದೇ ನಾನು ಅವಳನ್ನು ಏನಾದರೂ ಕೇಳುವುದಾದರೂ ಹೇಗೆ? ಅವಳು ದಿನಕ್ಕೆ ಎಷ್ಟು ಜನರನ್ನು ಬೇಟಿಯಾಗ್ತಾಳೋ... ಎಲ್ಲರ ಹತ್ತಿರವೂ ಹೀಗೇ ಮಾತಾಡ್ತಾಳೋ ಏನೋ... ನಾನೇಕೆ ಏನೇನೋ ಅಂದುಕೊಳ್ಳಬೇಕು?

ಏನೋ.. ಏನೇನೋ ಅನ್ನಿಸ್ತಿದೆ ನನಗೆ ಇವತ್ತು. ನಾನು. ಇದುವರೆಗೂ ಯಾವ ಡಾಕ್ಟರ ಹತ್ತಿರವೂ ಮಾತನ್ನೇ ಆಡಿರಲಿಲ್ಲ. ಅದೂ ಒಬ್ಬಳು ಲೇಡಿ ಡಾಕ್ಟರ ಬಳಿ.... ಇಲ್ಲವೇ ಇಲ್ಲ. ಅದಕ್ಕೇ ಹೀಗೆಲ್ಲಾ ಅನ್ನಿಸುತ್ತಿರಬಹುದೇನೋ.. ಎಂದುಕೊಂಡು, ಕಾಲಬಳಿ ಇದ್ದ ಹೊದಿಕೆಯನ್ನೆಳೆದುಕೊಂಡು, ಕತ್ತಿನವರೆಗೂ ಹೊದ್ದು ಕೈಕಟ್ಟಿ ಮಲಗಿದ.

ಕಾಲೇಜಿಗೆ ಹೊರಟು ನಿಂತಾಗ ತಾಯಿಗೆ ಹೇಳಿದ್ದ.

"ಸಾಯಂಕಾಲ ನೀನೂ ರೆಡಿಯಾಗಿರು.ಡಾಕ್ಟರ ಹತ್ತಿರ ಹೋಗಿ ಬರೋಣ. ಅದೇನೇನು ತಿಳಿಸ್ಬೇಕೋ ಅದನ್ನೆಲ್ಲ ನೀನೇ ತಿಳಿಸಿ ಬಿಡು."

"ಬೇಡಪ್ಪಾ ಬೇಡ. ನಾನು ಬರುಲ್ಲ. ಕೊಡಿಸಿರುವ ಇಂಜಕ್ಷನ್‌ನೆಲ್ಲಾ ಗುರುತಿಸಿ ಇಟ್ಟಿರುವ ಕಾರ್ಡ್ ಇದೆ. ಕೊಡ್ತೀನಿ. ನೀನೇ ಹೋಗಿ ಎಲ್ಲಾ ಹೇಳಿಬಿಡು." ಆಕೆ ಕೊಟ್ಟ ಕಾರ್ಡ್‌ನ್ನು ಜೇಬಿಗೆ ಇಳಿಬಿಟ್ಟು ಮತ್ತೇನನ್ನೂ ಹೇಳದೇ ನಡೆದ. ತಾಯಿ ಎಂದೂ ಹೊರಗೆ ಹೋದವಳಲ್ಲ ಎನ್ನುವುದು ಅವನಿಗೆ ತಿಳಿದ ವಿಷಯವೇ.

ಕಾಲೇಜಿನಿಂದ ಸೀದಾ ಕ್ಲಿನಿಕ್‌ಗೇ ಬಂದ ಕಾಲೇಜು ಕ್ಯಾಂಟೀನಿನಲ್ಲಿ ಕಾಫಿ ಕುಡಿದು. ಅಲ್ಲೇ ಮುಖ ತೊಳೆದು ಸ್ವಲ್ಪ ರಿಲಾಕ್ಸ್ ಆಗಿದ್ದ. ಪ್ರೆಷ್ ಆಗಿ ಕ್ಲಿನಿಕ್ ಬಳಿ ಬಂದಿಳಿದ.

ಡಾಕ್ಟರು ಇನ್ನೂ ಬಂದಿರಲಿಲ್ಲ. ಏಕೋ ಏನೋ ಪೇಶೆಂಟ್ಸ್‌ಗಳು ಸಹ ಯಾರಿರಲಿಲ್ಲ. ನಾನೇ ಮೊದಲನೆಯವನು ಎಂದುಕೊಂಡು ಮುಗುಳ್ನಗುತ್ತಾ ನಿಂತ.

ಕಾಂಪೌಂಡರ್ ಬಂದು ಬಾಗಿಲು ತೆಗೆದಾಗ ಒಳಗೆ ಹೋಗದೇ ಆಚೆಯೇ ಕೈ ಕಟ್ಟಿ ನಿಂತಿದ್ದ. ಕಾಂಪೌಂಡರ್ ಬಂದು "ಡಾಕ್ಟರು ಕರೀತೀದಾರೆ ಬನ್ನಿ" ಎಂದಾಗ ಇವನಿಗೆ ಆಶ್ಚರ್ಯ. ನನಗೆ ತಿಳಿಯದಂತೆ ಅವಳು ಕ್ಲಿನಿಕ್‌ಗೆ ಎಲ್ಲಿಂದ ಬಂದಳು ಅಂತ. ಸೀದಾ ಒಳಗಿನ ಕೋಣೆಗೆ ಬಂದವನನ್ನು ಕಂಡು ಅವಳೇ ಮುಗುಳ್ನಕ್ಕೂ 'ಹಲೋ' ಎಂದಳು.

ಇವನೂ "ನಮಸ್ಕಾರ " ಎಂದು ಕೈ ಮುಗಿದು ನುಡಿದು, ಟೇಬಲ್ ಬಳಿ ಇದ್ದ ಕುರ್ಚಿಯ ಮೇಲೆ ಕುಳಿತ. ತನ್ನ ಕೈಯಲ್ಲಿದ್ದ ಪುಸ್ತಕದೊಳಗಿನಿಂದ ಕಾರ್ಡ್‌ನ್ನು ತೆಗೆದು ಅವಳೆಡೆಗೆ ನೀಡಿದ.

ತನ್ನ ಕೈಗೆ ಕಾರ್ಡ್‌ನ್ನು ತೆಗೆದುಕೊಂಡು ಎಲ್ಲಾ ವಿವರವಾಗಿ ನೋಡಿಕೊಂಡು "ಗುಡ್, ಎಲ್ಲಾ ಸರಿಯಾಗಿದೆ. ಸಧ್ಯಕ್ಕೆ ಏನೂ ಬೇಡ. ಮುಂದಿನವಾರ ಮತ್ತೆ ಕರೆದುಕೊಂಡು ಬನ್ನಿ. ಇನ್ನೊಮ್ಮೆ ಚೆಕ್ ಮಾಡಿ, ಒಂದು ಟಾನಿಕ್ ಬರೆದುಕೊಡ್ತೀನಿ. ಸ್ವಲ್ಪ ವೀಕ್‌ನೆಸ್ ಇದೆ...ಜೊತೆಗೆ ಚೆನ್ನಾಗಿ ಹಾಲು ಹಣ್ಣು ತರಕಾರಿ ಕೊಟ್ಟರೆ ಸಾಕು."

"ನಮ್ಮ ತಾಯೀಗೆ ಆತಂಕ, ಅವರೇ ಸಾಕಿದ ಮಗು. ಸರಿಯಾಗಿ ಸಾಕಲು ಆಗುತ್ತಿಲ್ಲವೇನೋ ಅಂತ ಅನುಮಾನ.. ಹಳೇ ಕಾಲದವರು ನೋಡಿ."

"ಅದರಲ್ಲೇನು? ನೋ ಪ್ರಾಬ್ಲಂ..ತಾಯಿಗೋ ತಂದೆಗೋ ಏನಾದ್ರೂ ಹೆಲ್ತ್ ಪ್ರಾಬ್ಲಂ ಇದ್ದಿದ್ದರೇ...ಆತಂಕ ಸಹಜ."

ಅವಳು ಸಹಜವಾಗಿ ಆ ಮಾತುಗಳನ್ನಾಡಿದರೂ, ಅವನ ಮುಖದ ಬಣ್ಣ ಬದಲಾಯಿಸಿ ಹೋದುದನ್ನು ಗಮನಿಸಿದಳು. ಕೆಂಪಾಗಿದ್ದ ಅವನ ಮುಖ ಕಂಡು ಗಾಭರಿಗೊಂಡಳು.

"ಯಾಕೆ ಮೀಸ್ಟರ್....ಏನಾಯ್ತು? ಆರ್ ಯೂ ಆಲ್‌ರೈಟ್?"

ಅವನು ತಕ್ಷಣ ಉತ್ತರಿಸಿದ.

"ಆಫ್ ಕೋರ್ಸ್ ನಾಟ್...ನನ್ನ ತಂಗಿಗೆ ಏನಾಗಿತ್ತು? ಯಾಕೆ ಸತ್ತಳು? ಆ ವಿಚಾರ ಬಿಟ್ಟು ಬೇರೆ ಏನೂ ಪ್ರಶ್ನೇನೆ ಇಲ್ವಾ ನಿಮ್ಮ ಹತ್ತೀರ?" ಅವಳಿಗೆ ಅವನ ಮಾತು, ಪ್ರಶ್ನೆ ವಿಚಿತ್ರವೆನಿಸಿದರೂ, "ಯಾಕೆ? ಅದರಲ್ಲಿ ತಪ್ಪೇನು? ನಾನು ಎಲ್ಲಾ ಪೇಶೆಂಟ್ಸ್ ಬಗ್ಗೇನೂ ಇದೇ ತರಹ ಕೇಸ್ ಹಿಸ್ಟರಿ ಕೇಳಿ ತಿಳಿದುಕೊಳ್ತೀನಿ. ಹೆರಿಡಿಟಿ ಪ್ರಾಬ್ಲಂ ಏನಾದರೂ ಇದ್ದರೆ ಅದಕ್ಕೆ, ಪ್ರಿವೆಂಟಿವ್ ಆಗಿ ಟ್ರೀಟ್‌ಮೆಂಟ್ ಕೊಡ್ತೀನಿ. ಪ್ರಾಬ್ಲಂ ಸಾಲ್ವ್ ಮಾಡಲು ಪ್ರಯತ್ನಿಸ್ತೀನಿ... ಅದ್ಸರಿ, ಅದಕ್ಕೆ ನೀವ್ಯಾಕೆ ಇಷ್ಟು ಅಪ್ಸೆಟ್ ಆಗಿದೀರಿ?" ಮುಗುಳ್ನಗುತ್ತಾ ಅವಳು ಪ್ರಶ್ನಿಸಿದಾಗ ಅವನಿಗೆ ಮತ್ತೆ ರೇಗಿತು.

"ನನ್ನ ತಂಗಿಯ ಬಗ್ಗೆ ಯಾರು ಏನೇ ಕೇಳಿದರೂ ನನಗೆ ಅಪ್ಸೆಟ್ ಆಗುತ್ತೆ... ಆದರೆ ಒಂದು ಮಾತು ಮಾತ್ರ ನಿಜ. ನನ್ನ ತಂಗಿಗೆ ಯಾವ ಕೆಟ್ಟ ಖಾಯಿಲೆಯೂ ಇರಲಿಲ್ಲ...." ಎಂದು ಹೇಳಿ ಎದ್ದು ಹೊರಟೇ ಬಿಟ್ಟ.

ಅವನ ವಿಚಿತ್ರ ನಡೆವಳಿಕೆ ಅವಳಿಗೆ ಅರ್ಥವಾಗಲಿಲ್ಲ. ಇದುವರೆಗೂ ಇಂತಹ ವ್ಯಕ್ತಿಯ ಪರಿಚಯವಾಗಿರಲಿಲ್ಲ ಅವಳಿಗೆ. ಏಕೋ ಏನೋ ಅವನ ಬಗ್ಗೆ ಕುತೂಹಲ ಹೆಚ್ಚಾಯಿತು. ಆದರೆ ಅವನ ಬಗ್ಗೆ ತಲೆ ಕೆಡಿಸಿಕೊಳ್ಳಲು ಸಮಯವಿರಲಿಲ್ಲ. ಪೇಶೆಂಟ್ಸ್‌ಗಳು ಕಾದು ಕುಳಿತಿದ್ದರು.

ಬೆಳಗ್ಗೆ ರಂಗನಾಥ ಎಂದಿನಂತೆ ಕಾಲೇಜಿಗೆ ಹೊರಟಾಗ, ಅವನ ನೋಟ್ ಬುಕ್ ಎಲ್ಲಿಯೂ ಕಾಣಲಿಲ್ಲ. ಹಿಂದಿನ ದಿನ ತಾನು ಆ ನೋಟ್ಸ್‌ನ್ನು ಕಾಲೇಜಿಗೆ ತೆಗೆದುಕೊಂಡು ಹೋಗಿದ್ದ ನೆನಪು.... ಜತೆಗೆ ಅದರಲ್ಲೇ ಮನೋಜನ ಹೆಲ್ತ್ ಚಾರ್ಟ್ ಇಟ್ಟುದುದರ ನೆನಪಾದೊಡನೆ... ತಾನು ಆ ಕ್ಲಿನಿಕ್‌ನಲ್ಲಿ ಆ ನೋಟ್ ಬುಕ್ ಬಿಟ್ಟು ಬಂದುದು ನೆನಪಾಯಿತು...ಛೆ...!ಎಂಥಾ ಕೆಲಸವಾಗಿ ಹೋಯಿತು? ದುಡುಕಿನಿಂದ ಎದ್ದು ಬಂದಾಗ ಅಲ್ಲೇ ಟೇಬಲ್ ಮೇಲೆ ಇಟ್ಟಿದ್ದ ಪುಸ್ತಕವನ್ನು ಮರೆತು ಅಲ್ಲೇ ಬಿಟ್ಟು ಬಂದುದು ನೆನಪಾಯಿತು. ಒಂದು ವೇಳೆ ಅದು ಅಲ್ಲಿ ಇಲ್ಲದೇ ಕಳೆದು ಹೋಗಿದ್ದರೆ.. ಮತ್ತೆ ಪ್ರಿಪೇರ್ ಮಾಡಬೇಕಲ್ಲಪ್ಪಾ ಎನಿಸಿ ಬೇಜಾರಾಯಿತು. ಹೇಗಾದರಾಗಲಿ, ನೋಡೋಣ ಒಂದು ಸಲ ಕ್ಲಿನಿಕ್‌ನಲ್ಲಿ ವಿಚಾರಿಸಿದರಾಯ್ತು ಎಂದುಕೊಂಡು ಮನೆಯಿಂದ ಹೊರಟವನು ಸೀದಾ ಕ್ಲಿನಿಕ್‌ಗೆ ಬಂದ.

"ಡಾಕ್ಟರಿದಾರಾ?"ಕಸಗುಡಿಸುತ್ತಿದ್ದ ಕಾಂಪೌಂಡಾರ್‌ನ ಕೇಳಿದ.

"ಇನ್ನೂ ಬಂದಿಲ್ಲ. ಬರ್ತಾರೆ ಕೂತ್ಕೊಳ್ಳಿ" ಎಂದಳು

"ನೆನ್ನೆ ದಿನ ನನ್ನದೊಂದು ಪುಸ್ತಕವನ್ನು ಟೇಬಲ್ ಮೇಲೆ ಇಟ್ಟಿದ್ದೆ., ಹಾಗೇ ಮರೆತು ಹೋಗ್ಬಿಟ್ಟೆ. ಇದ್ರೆ ತಂದು ಕೊಡ್ತೀರಾ?" ಕೇಳಿದ.

"ಏನೋ ನನಗೆ ಗೊತ್ತಿಲ್ಲ. ಡಾಕ್ಟ್ರನ್ನ ಕೇಳ್ತೀನಿ ತಡೀರಿ" ಎಂದು ಹೇಳಿ ಅವಳು ಒಳಗೆಲ್ಲೋ ಹೊರಟೇ ಹೋದವಳು.

"ಮನೆಗೇ ಕರೀತೀದಾರೆ ಬನ್ನಿ"ಎಂದು ಅವಳು ಹೇಳಿದಾಗ ಅವನಿಗೆ ಗಲಿಬಿಲಿ. ಆದರೂ ಅವಳನ್ನು ಹಿಂಬಾಲಿಸಿದ. ಪಕ್ಕದಲ್ಲಿಯೇ ಇದ್ದ ಅವರ ಮನೆಗೆ ಬಂದ. ಮುಂಬಾಗಿಲಿನಲ್ಲಿ ನಿಂತಿದ್ದ ಡಾಕ್ಟರು ಅವನನ್ನು ಕಂಡೊಡನೆ ಮುಗುಳ್ನಕ್ಕು "ಬನ್ನಿ... ನೋಟ್‌ಬುಕ್‌ಗೋಸ್ಕರ ಬಂದ್ರಾ?" ಎಂದು ಕೇಳಿದಳು.

"ಹೌದು.. ನಿಮ್ಮ ಹತ್ತಿರ ಇದೇಯಾ? ನೆನ್ನೆ ಹಾಗೇ ಮರೆತು ಹೊರಟು ಹೋದೆ"

"ನಿಮ್ಮ ದುಡುಕಿನಿಂದ ಹಾಗೆ ಆಯ್ತು ಅಷ್ಟೆ. ಎಕ್ಸೈಟ್‌ಮೆಂಟ್ ಹೆಲ್ತ್‌ಗೆ ಒಳ್ಳೇಯದಲ್ಲ. ತಗೊಳ್ಳಿ ನಿಮ್ಮ ಪುಸ್ತಕ" ಎನ್ನುತ್ತಾ ಅವನ ಕೈಗೆ ಪುಸ್ತಕವನ್ನು ಕೊಟ್ಟಳು.

"ಥ್ಯಾಂಕ್ಸ್" ಎಂದು ಹೇಳಿ ಹೊರಟವನನ್ನು ತಡೆದಳು.

"ನಾನೂ ನಿಮಗೂ ಥ್ಯಾಂಕ್ಸ್‌ನ್ನು ಹೇಳಬೇಕು, ಅಪಾಲಜೀನೂ ಕೇಳಬೇಕು" ಯಾಕೆ ಎಂಬಂತೆ ಪ್ರಶ್ನಾರ್ಥಕವಾಗಿ ಅವಳೆಡೆಗೆ ನೋಡಿದ.

"ನಿಮ್ಮ ಪರ್ಮಿಷನ್ ಇಲ್ಲದೇ, ನಿಮ್ಮ ನೋಟ್ಸ್ ಓದಿದ್ದಕ್ಕೆ ಅಪಾಲಜಿ ಕೇಳ್ತೀನಿ. ಅದನ್ನು ಓದಿ ಎಂಜಾಯ್ ಮಾಡಿದ್ದಕ್ಕೆ ಥ್ಯಾಂಕ್ಸ್ ಹೇಳ್ತೀನಿ." ಎಂದಳು ನಗುತ್ತಾ.

ಅವನಿಗೆ ಸಂಕೋಚವಾಯಿತು. ಗಲಿಬಿಲಿಯಿಂದ ನಕ್ಕಂತೆ ಮಾಡಿದ ಅವನ ಮುಖವನ್ನು ಕಂಡು ಅವಳಿಗೆ ಮೋಜೆನಿಸಿತು.

"ನಿಮಗೇಕೆ ಇಷ್ಟು ಮುಜುಗರ? ಅಪ್ಸೆಟ್ ಆಗಿ, ಮತ್ತೆ ದುಡುದುಡು ಅಂತ ಓಡಿ ಹೋಗಬೇಡಿ. ಅದು ಹೆಲ್ತ್‌ಗೆ ಒಳ್ಳೇದಲ್ಲ... ಕುತೂಹಲದಿಂದ ಓದಿದೆ. ನಿಜಕ್ಕೂ ತುಂಬಾ ಇಂಟರೆಸ್ಟಿಂಗ್ ಆಗಿದೆ. ಲಿಟರೇಚರ್ ಇಷ್ಟು ಚೆನ್ನಾಗಿರುತ್ತೆ ಅಂತ ಇವತ್ತೇ ನನಗೆ ತಿಳಿದದ್ದು."

ಅವನು ನಾಚಿಕೆಯಿಂದ ಏನನ್ನೂ ಉತ್ತರಿಸಲಿಲ್ಲ.

"ಪಾಠಾನೂ ಇಷ್ಟೇ ಚೆನ್ನಾಗಿ ಮಾಡ್ತೀರಾ?"ಅವಳು ಮತ್ತೆ ಕೇಳಿದಾಗ ಅವನು ಮೆಚ್ಚುಗೆಯಿಂದ ಅವಳೆಡೆಗೆ ನೋಡಿದ.

"ಇನ್ನೊಂದು ಸಲ ಓದಬೇಕೆನ್ನಿಸ್ತಿದೆ. ಮತ್ತೆ ತಂದು ಕೊಡ್ತೀರಾ?" ಮುಗ್ಧಳಂತೆ ಅವಳು ಕೇಳಿದಾಗ ಅವನಿಗೆ ಅಚ್ಚರಿಯಾಯ್ತು. ತಮಾಷೆ ಮಾಡ್ತಿದ್ದಾಳೆನೋ ಎನ್ನುವ ಅನುಮಾನ ಬಂತು.

"ಅದರಲ್ಲೇನು ಬಿಡಿ? ಅದೇನು ಸ್ವಾರಸ್ಯ ಮಹಾ?" ಅಂತಂದ.

"ಛೆ. ಹಾಗೆನ್ನಬೇಡಿ. ನೀವೇ ಬರೆದಿದ್ದು ನಿಮಗೆ ಹಾಗೆನ್ನಿಸಬಹುದು. ಅಲ್ಲದೆ ನೀವು ದಿನಾ ಅದನ್ನ ಓದ್ತೀರಿ. ನನಗೆ ಅಪರೂಪ. ಖಂಡಿತವಾಗಿಯೂ ಸ್ವಾರಸ್ಯವಾಗಿದೆ".

"ತಮಾಷೆ ಮಾಡ್ತಿಲ್ಲ ತಾನೇ..?"

"ಛೆ,ಛೆ...ಖಂಡಿತಾ ಇಲ್ಲ, ಮತ್ಯಾವಾಗ ಕೊಡ್ತೀರಿ?.....?"

"ಹಾಗಾದ್ರೆ ಇದನ್ನೇ ಇಟ್ಕೊಳ್ಳಿ. ಪರವಾಗಿಲ್ಲ"

"ಮತ್ತೆ ನಿಮಗೆ?"

"ಇನ್ನೊಂದ್ಸಲ ಪ್ರಿಪೇರ್ ಮಾಡಿದ್ರಾಯ್ತು"

"ಬೇಜಾರಿಲ್ಲ ತಾನೇ.."

"ಖಂಡಿತಾ ಇಲ್ಲ. ಲಿಟರೇಚರ್‌ದಲ್ಲಿ ಆಸಕ್ತಿ ತೋರಿಸುವವರಿಗೆ ಬೇಜಾರು ಮಾಡುವುದು ಸರಿಯಲ್ಲ."ಎನ್ನುತ್ತಾ ಪುಸ್ತಕವನ್ನ ಹಿಂತಿರುಗಿಸಿದ.

"ಓಹ್... ಥ್ಯಾಂಕ್‌ಯೂ ವೆರಿಮಚ್" ಎಂದಳು ಪುಸ್ತಕವನ್ನು ಕೈಗೆತ್ತಿಕೊಂಡು.

"ಆದ್ರೆ ಒಂದ್ಮಾತು, ಈ ಲಿಟರೇಚರ್, ನಿಮ್ಮ ವೃತ್ತಿಗೆ ತೊಡಕಾಗಬಾರದು. ಆಮೇಲೆ ನನ್ನನ್ನ ಬೈದು ಕೊಳ್ಳೀರಿ ಅಷ್ಟೇ..."

"ಖಂಡಿತಾ ಇಲ್ಲ, ಎಂದು ಅವಳು ನಕ್ಕಾಗ, ಇವನೂ ತನ್ನ ನಗೆಯನ್ನು ಸೇರಿಸಿದ. ಸಂತೋಷದಿಂದ ಅರಳಿದ್ದ ಮುಖವನ್ನೇ ಗಮನಿಸಿದ ಅವಳ ಬಗ್ಗೆ ಮೆಚ್ಚುಗೆ ಮೂಡಿತು. ಅವನ ನೇರ ದೃಷ್ಟಿಯನ್ನು ಅವಳು ತಪ್ಪಿಸಿ ಪುಸ್ತಕದ ಹಾಳೆಗಳನ್ನು ಮೊಗಚಿದಾಗ ಅವನು,

'ಓ.ಕೇ. ನಾನಿನ್ನು ಬರ್ತೀನಿ" ಎಂದು ಹಿಂದಕ್ಕೆ ಅಡಿ ಇಟ್ಟ.

ಅವಳು ಹುಂ ಎಂದು ತಲೆ ಆಡಿಸಿದಳು. ಅವನು ಹೋಗುವುದನ್ನೇ ನೋಡುತ್ತಿದ್ದಳು. ಮುದದಿಂದ ಪುಸ್ತಕದಲ್ಲಿನ ಪುಟಗಳನ್ನು ಮಗುಚಿ ಹಾಕಿದಳು.

ಹಿಂದಿನ ರಾತ್ರಿ ಕ್ಲಿನ್‌ಕ್‌ನಿಂದ ಹೊರ ಹೊರಡುವ ಸಮಯದಲ್ಲಿ ಟೇಬಲ್ ಮೇಲಿದ್ದ ಆ ನೋಟ್ ಪುಸ್ತಕವನ್ನು ಗಮನಿಸಿ ಎತ್ತಿ ನೋಡಿದ್ದಳು. ಅದರಲ್ಲಿ ಮನೋಜನ ಹೆಲ್ತ್ ಕಾರ್ಡ್ ಇದ್ದುದನ್ನು ಕಂಡು. ಅದು ಅವನದೇ ಪುಸ್ತಕ ವಿರಬಹುದೆಂದು ಊಹಿಸಿದಳು. ಪುಸ್ತಕದ ಮೊದಲ ಪುಟದಲ್ಲಿ ರಂಗನಾಥ, ಎಂ. ಎ. (ಇಂಗ್ಲೀಷ್)ಎಂದು ಬರೆದಿತ್ತು. ಕಾಲೇಜಿನಲ್ಲಿ ಇಂಗ್ಲೀಷ್ ಲೆಕ್ಚರರ್ ಆಗಿರ ಬಹುದೆಂದು ಅನ್ನಿಸಿ, ಏನು ಬರೆದಿರಬಹುದು ಎಂದು ಕೂತೂಹಲದಿಂದ ಓದ ತೊಡಗಿ ದಳು. ಸ್ಟೂಡೆಂಟ್ಸ್‌ಗಳಿಗಾಗಿ ತಯಾರಿಸಿದ ನೋಟ್ಸ್ ಅದು... ಮನೆಗೆ ತಂದು ಓದಿದಳು. ನಿತ್ಯದಂತೆ ವೈದ್ಯಕೀಯಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ತಿರುವಿ ಹಾಕದೆ, ರಂಗನಾಥ ಬರೆದಿದ್ದ ಇಂಗ್ಲೀಷ್ ನೋಟ್ಸ್‌ನ್ನು ಆನಂದದಿಂದ ಓದತೊಡಗಿದಳು.

ಷೇಕ್ಸ್‌ಪಿಯರನ "ಒಥೆಲೋ" ನಾಟಕದ ಸನ್ನಿವೇಶಗಳನ್ನು ದೃಶ್ಯಗಳನ್ನು ವಿವರಣೆಯೊಂದಿಗೆ ಅರ್ಥವತ್ತಾಗಿ ಬರೆದದ್ದು. ನಾಟಕವನ್ನೇ ನೋಡಿದಷ್ಟು ಆನಂದದಿಂದ ಓದುತ್ತಿದ್ದಂತೆ, ಏನೇನೋ ಅನುಭವಗಳು. ಒಂದು ಸಾಹಿತ್ಯ ಇಷ್ಟು ಸ್ವಾರಸ್ಯವಾಗಿರಬಹುದು ಎಂದು ಅನ್ನಿಸಿದುದು ಈಗಲೇ. ಅವಳಿಗೆ ತಿಳಿದಂತೆ ಅವಳು ಇಂಟರ್‌ನಲ್ಲಿ ಓದುತ್ತಿದ್ದಾಗ ಇಂಗ್ಲೀಷ್ ಹಾಗೂ ಅದರ ಅರ್ಥವಿವರಣೆಗಳನ್ನೂ ಆಳವಾಗಿ ಅಭ್ಯಾಸಿಸಿದವಳಲ್ಲ....ಆದರೆ ಆಗ ಅದೇ ಸರಿ ಎನಿಸಿತ್ತು...ಈಗ ಇದೇ ಬೇರೆ ಎನಿಸಿತ್ತು.

ಕಾಲೇಜಿನಲ್ಲಿ ಈ ಪಾಠಗಳನ್ನು ತರಗತಿಯಲ್ಲಿ ಹೇಗೆ ವಿವರಿಸುತ್ತಾನೋ ಎಂದು ಊಹಿಸಿಕೊಳ್ಳುತ್ತಾ, ತಾನೂ ಅವನ ಕ್ಲಾಸಿನಲ್ಲಿ ಕುಳಿತು ಈ ಪಾಠಗಳನ್ನು ಕೇಳು ವಂತಿದ್ದರೇ...ಎಂದು ಕೂಡಾ ಅನ್ನಿಸಿತು... ಆದರೆ ತಾನೀಗ ಕಾಲೇಜು ಸ್ಟೂಡೆಂಟ್ ಅಲ್ಲ, ಕರ್ತವ್ಯ ಪ್ರಜ್ಞೆ ಉಳ್ಳ, ಒಬ್ಬ ಡಾಕ್ಟರು ಎಂಬ ಅರಿವಿನೊಂದಿಗೆ ವಾಸ್ತವಕ್ಕೆ ಬಂದಳು.

ಆ ದಿನ ರಂಗನಾಥನಿಗೆ ಎಂದಿನಂತೆ ಪಾಠ ಮಾಡುವುದು ಸಾಧ್ಯವಾಗಲಿಲ್ಲ. ಹುಡುಗಿಯರ ಸಾಲಿನಲ್ಲಿ ಮುಂದಿನ ಬೆಂಚಿನಲ್ಲಿ ನಿರ್ಮಲ ಕುಳಿತು ಪಾಠ ಕೇಳುತ್ತಿರುವಂತೆ ಅನ್ನಿಸುತ್ತಿತ್ತು. ತನಗೇಕೆ ಹೀಗನ್ನಿಸುತ್ತಿದೆ? ತಾನೇಕೆ ಅವಳನ್ನು ಕುರಿತು ಚಿಂತಿಸುತ್ತಿದ್ದೇನೆ ಎಂದು ಕೂಡಾ ಅನ್ನಿಸಿತು. ಇದುವರೆಗೂ ಯಾವ ಬೇರೆ ಹೆಣ್ಣನ್ನು ನೋಡಿದವನೇ ಅಲ್ಲ. ಸಹೋದ್ಯೋಗಿಗಳಲ್ಲಿ ಕೆಲವರು ಹೆಂಗಸರು ಎಷ್ಟೋ ಜನ ಸ್ಟೂಡೆಂಟ್ಸ್ ಹುಡುಗಿಯರು. ಆದರೂ ಎಂದೂ ಯಾರೂ ಬಗ್ಗೆಯೂ ಆಸಕ್ತಿ ತಳೆದವನಲ್ಲ. ಎಂದೂ ಯಾರೂ ಅವನ ಚಿತ್ತವನ್ನು ಕಲಕಿ ದವರಲ್ಲ. ಸಹೋದ್ಯೋಗಿಗಳಲ್ಲಿ ಸ್ನೇಹವಿತ್ತು. ಹುಡುಗಿಯರ ಬಗ್ಗೆ ವಿಶ್ವಾಸವಿತ್ತು. ಅಷ್ಟೇ. ಎಂದೂ ಅದಕ್ಕಿಂತ ಹೆಚ್ಚಾಗಿ ಯಾರ ಬಗ್ಗೆಯೂ ತಲೆ ಕೆಡಿಸಿಕೊಂಡ ವನಲ್ಲ. ಆದರೆ ಈಗ ಹಾಗಲ್ಲ. ನಿರ್ಮಲಳನ್ನು ಕಂಡ ದಿನದಿಂದ ಒಂದಲ್ಲ ಒಂದು ರೀತಿಯಲ್ಲಿ ಅವಳ ಬಗ್ಗೆ ಚಿಂತಿಸಿದ್ದಾನೆ.

ಅವಳನ್ನು ಭೇಟಿಯಾದ ದಿನಗಳನ್ನು, ಕಾರಣಗಳನ್ನೂ ನೆನೆಸಿಕೊಂಡ ಅವಳೊಡನೆ ಮಾತಾಡಿದ್ದನ್ನು ಮೆಲಕು ಹಾಕಿದ...ಪ್ರತಿ ಸಲವೂ ಒಂದಲ್ಲ ಒಂದು ರೀತಿ, ವಿಚಿತ್ರವಾಗಿ ನಡೆದುಕೊಂಡಿದ್ದ, ತನ್ನ ನೋಟ್ಸ್ ಓದಿ ಏನನ್ನಿಸಿದೆಯೋ?... ಮೆಚ್ಚುಗೆಯನ್ನೇನೋ ತೋರಿಸಿದಳು. ಅದರ ಅರ್ಥವೇನಿರಬಹುದು? ಅಥವಾ ತನ್ನ ಪೆದ್ದುತನಕ್ಕೆ ತಮಾಷೆ ಮಾಡಿರಬಹುದೇ? ಮುಂದಿನ ಸಲ ಬೇಟಿಯಾದಾಗ ಅವಿವೇಕದಿಂದ ದುಡುಗುತನವನ್ನು ತೋರಿಸ್ಕೋಬಾರದು. ಆದರೆ ಮುಂದಿನ ಸಲ ಏನೂಂತ ಬೇಟಿಯಾಗುವುದು? ಬೇಟಿಯಾಗಲು ಏನಾದರೂ ಕಾರಣ ಬೇಕಲ್ಲ. ಕಾರಣ ಹುಡುಕತೊಡಗಿದಾಗ ಅವಳಿಗೆ ಇದುವರೆಗೂ ಫೀಸನ್ನೇ ಕೊಟ್ಟಿಲ್ಲವೆನ್ನುವುದು ನೆನಪಾಯಿತು. ಮತ್ತೊಮ್ಮೆ ಅವಳನ್ನು ನೋಡಲು, ಮಾತಾಡಿಸಲು ಕಾರಣ ಸಿಕ್ಕಿದ್ದಕ್ಕಾಗಿ ಸಂತಸಗೊಂಡ. ಆದಷ್ಟು ಬೇಗ ಹೋಗಿ ಫೀಸು ಕೊಟ್ಟು ಬರಬೇಕೆಂದುಕೊಂಡ.

ಮನೆಗೆ ಬಂದವನೇ ತಾನೂ ರೆಡಿಯಾಗಿ ಮನೋಜನಿಗೂ ರೆಡಿಮಾಡಿ ತಾಯಿಗೆ ಹೊರಗೆ ತಿರುಗಾಡಿ ಬರುತ್ತೇನೆಂದು ತಿಳಿಸಿ ಮನೆಯಿಂದ ಹೊರಟ. ಯಥಾ ಪ್ರಕಾರ ಕ್ಲಿನಿಕ್‌ನಲ್ಲಿ ಸಾಕಷ್ಟು ಜನರಿದ್ದರು. ಇಷ್ಟೊಂದು ಜನರನ್ನು ಇವಳು ಹೇಗೆ ನೋಡ್ತಾಳೆ? ಇವಳಿಗೆ ಬೇಜಾರಾಗುವುದಿಲ್ಲವೇ? ಹಣ ಸಿಗುತ್ತಲ್ಲ, ಹಣ ಎಂತಹ ಬೇಜಾರನ್ನಾದರೂ ದೂರ ಮಾಡುತ್ತದೆ. ಅಂತನ್ನಿಸಿದಾಗ ವ್ಯಂಗ್ಯ ನಗೆ ನಕ್ಕ. ದಿನಕ್ಕೆ ಇವಳು ಎಷ್ಟು ಸಂಪಾದನೆ ಮಾಡಬಹುದು ಎಂದು ಲೆಕ್ಕ ಹಾಕುತ್ತಿದ್ದವನನ್ನು ಕಾಂಪೌಂಡರ್ ಕರೆದಳು.

ಏನನ್ನೋ ಯೋಚಿಸುತ್ತಾ ಇದ್ದವಳಂತೆ ಕಂಡ ಅವಳು ಇವನನ್ನು ಕಂಡೊಡನೆ ಗೆಲುವಾದಲು. ಇವನು ಪರಿಚಯದ ನಗೆ ನಕ್ಕು "ಹಲೋ"ಎಂದಾಗ ಅವಳೂ "ಹಲೋ"ಎಂದು ಮುಗುಳ್ನಕ್ಕಳು. ಅವಳು ಕೂತ್ಕೊಳ್ಳಿ ಎಂದು ಹೇಳುವ ಮುಂಚೆಯೇ, ಅವನು ಮುಂದಿನ ಕುರ್ಚಿಯಲ್ಲಿ ಕುಳಿತ. ಮನೋಜನನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡು, ಇವನನ್ನೇ ನೋಡುತ್ತಿದ್ದ ಅವಳು ನಗುತ್ತಿರುವಂತೆ ಭಾಸವಾಯಿತು. ಇವನಿಗೆ ಮುಜುಗರವಾಯಿತು. ಬೆಪ್ಪನಂತೆ,

"ಡಾಕ್ಟರ್ ನಿಮ್ಮ ಫೀಸು ?" ಎಂದು ಕೇಳಿದ.

ಅವಳು ನಕ್ಕು ಬಿಟ್ಟಳು. ಆ ನಗುವಿನಿಂದ ಇನ್ನು ಪೆಚ್ಚಾದ.

"ಇದುವರೆಗೂ ನಿಮಗೆ ಫೀಸನ್ನೇ ಕೊಟ್ಟಿಲ್ಲ. ಎಷ್ಟಾಯ್ತು ಅಂತ ಹೇಳಿದ್ರೆ.."ತಡವರಿಸಿದ.

"ಪರವಾಗಿಲ್ಲ ಬಿಡಿ. ಇನ್ನೊಂದು ಸಲ ಕೊಟ್ರಾಯ್ತು"

"ಛೆ...ಯಾಕೆ? ಮೂರು ನಾಲ್ಕು ಸಲದ್ದು ಕೊಡಬೇಕು..."

"ಪರವಾಗಿಲ್ಲ ಅಂತ ಅಂದ್ನಲ್ಲ..."ಮತ್ತೆ ಅದೇ ನುಡಿ.

"ನೋ..ನೋ... ಅದು ಸರಿಯಲ್ಲ.."ಸಂಕೋಚದಿಂದ ನುಡಿದ.

"ಏನಿಲ್ಲ, ಎಲ್ಲಾ ಸರಿಯಾಗಿದೆ. ನೀವು ನನ್ನ ಸ್ನೇಹಿತರು.. ನಿಮ್ಮ ಹತ್ತಿರ ಫೀಸು ತಗೋಳ್ಳಲ್ಲ."

"ಹಾಗಂದ್ರೆ ಹೇಗೆ? ನಮ್ಮಿಬ್ಬರ ಸ್ನೇಹ ಇನ್ನೂ ಹೊಸತು. ಅದಕ್ಕೂ ಫೀಸಿಗೂ ಏನು ಸಂಬಂಧ?"

"ಸ್ನೇಹ ಹೊಸದಾದರೇನು? ಹಳೆಯದಾದರೇನು? ನಾನೇ ಬೇಡ ಅಂದಿದೀನಲ್ಲ. ನಿಮಗೇಕೆ ಸಂಕೋಚ?"

"ನನ್ನನ್ನ ಪೇಚಿಗೆ ಸಿಕ್ಕಿಸ್ತಾ ಇದೀರಿ ನೀವು.."

"ಪೇಚು ಎಂಥದು? ನಿಮ್ಮ ಅಮೂಲ್ಯವಾದ ನೋಟ್ಸ್ ನನಗೆ ಕೊಟ್ಟಿಲ್ಲವೇ.?"

"ಅಮೂಲ್ಯವಾದದ್ದೇನಲ್ಲ.." ಅವನಿಗೆ ನಾಚಿಕೆ ಆಗಿತ್ತು.

"ದಿನ ನಿತ್ಯ ಬರೆಯುವವರು ನೀವು. ನಿಮಗೆ ಅದು ಅಮೂಲ್ಯವಲ್ಲದಿರ ಬಹುದು. ಆದರೆ ನನಗೆ ಹಾಗಲ್ಲ. ಜೀವನದಲ್ಲಿ ನನಗೆ ಅತ್ಯಂತ ಮುದನೀಡಿರುವ ಪುಸ್ತಕ ಅದು. ನನಗೆ ಅದು ಅಮೂಲ್ಯವೇ."

ಅವಳ ಹೊಗಳಿಕೆಯ ಮಾತಿಗೆ ಅವ್ರು ಬೆರಗಾದ. ರಂಗೇರಿದ. ಒಂದು ತರಹ ಹೆಮ್ಮೆ ಎನಿಸಿತು.

"ಓ... ಹಾಗಂತೀರಾ? ಹಾಗಾದರೆ ನನಗೂ ಇದು ಅತ್ಯಂತ ಹೆಮ್ಮೆಯ ದಿನ." ಅವನ ಮುಖದ ಕಳೆಯನ್ನು ಗಮನಿಸಿ ಅವಳು ಮತ್ತೊಮ್ಮೆ ನಕ್ಕಳು.

"ಏಕೆ ನಗುತ್ತೀದೀರಿ?" ಬೆಪ್ಪನಂತೆ ಕೇಳಿದ.

"ಏನಿಲ್ಲ.. ದಿನಾ ಎಕ್ಸೈಟ್ ಆಗಿ ಎದ್ದು ಓಡಿ ಹೋಗ್ತಿದ್ರಿ..ಇವತ್ತು ಆರಾಮವಾಗಿ ಕೂತಿದೀರಲ್ಲ. ಅದಕ್ಕೇ ನಗು ಬಂತು ಅಷ್ಟೇ."

"ಅಂದ್ರೇ..ನಾನು ಎದ್ದು ಹೋಗಲಿ ಅಂತ ಸೂಚ್ಯವಾಗಿ ಹೇಳ್ತೀದೀರಾ?" ಬೆಪ್ಪನಂತೆ ನಗುತ್ತಾ ಕೇಳಿದ.

"ಛೆ..ಹಾಗಲ್ಲ."

"ಸರಿ ಬಿಡಿ. ನನ್ನಿಂದ ನಿಮ್ಮ ಟೈಂ ವೇಸ್ಟ್ ಆಗ್ತಿದ್ದರೆ ಹೇಳಿ ಬಿಡಿ. ನಾನು ಹೊರಡ್ತೀನಿ."

"ಪ್ಲೀಸ್. ತಪ್ಪು ತಿಳ್ಕೋಬೇಡಿ ... ಆ ಅರ್ಥದಲ್ಲಿ ಹೇಳ್ತಿಲ್ಲ. ಇವನ ತಾಯಿ ಬಗ್ಗೆ ಕೇಳಿದ್ರೆ ಎದ್ದು ಓಡ್ತಿದ್ರಲ್ಲ ಅದಕ್ಕೇ ಕೇಳಿದೆ."

"ಸಾರಿ. ಡಾಕ್ಟರ್, ಯಾರಾದ್ರು, ನನ್ನ ತಂಗಿಯ ಬಗ್ಗೆ, ಏನಾದ್ರೂ ಕೇಳಿದ್ರೆ ನನಗೆ ಹುಚ್ಚು ಹಿಡಿದ ಹಾಗಾಗತ್ತೆ"

"ಅದನ್ನೇ ಒಳ್ಳೇದಲ್ಲ ಅಂತ ನಾನು ಹೇಳಿದ್ದು. ಯಾರಿಗಾದರೂ ಒಂದು ಸಲ

ಎಲ್ಲಾ ಹೇಳಿ ಬಿಡಿ. ಮನಸ್ಸು ಹಗುರವಾಗುತ್ತೆ."

"ಬೇಡ ಡಾಕ್ಟರ್.. ಅದನ್ನೆಲ್ಲ ಹೇಳುವ ಮನಸ್ಸಿಲ್ಲ. ನಾನಿನ್ನು ಬರ್ತೀನಿ." ಎನ್ನುತ್ತಾ ಏಳುತಿದ್ದವನನ್ನು ಕುರಿತು ನುಡಿದಳು.

"ನೋಡಿದ್ರಾ ಹೊರಟೇ ಬಿಟ್ರಿ.. ಹೋಗಲಿ ಬಿಡಿ. ನಾನೆಂದೂ ಅವರ ಬಗ್ಗೆ ಮತ್ತೆ ಕೇಳಲ್ಲ. ನಿಮಗೆ ಬೇಜಾರು ಮಾಡಲ್ಲ."

"ಹಾಗೇನಿಲ್ಲ. ಎಂದಾದರೂ ಸಮಯ ಬಂದಾಗ, ನಾನಾಗೇ ಹೇಳಿದ್ರೂ ಹೇಳಬಹುದು. ನಿಮ್ಮ ಸಂದೇಹಾನೂ ದೂರ ಆಗುತ್ತೆ. ನಾನಿನ್ನು ಬರ್ತೀನಿ. ಗುಡ್ ನೈಟ್" ಎಂದು ಹೇಳಿ ಮನೋಜನನ್ನು ಎತ್ತಿಕೊಂಡು ಹೊರ ಬಂದ ಅವನ ಬೆನ್ನ ಹಿಂದೆ ನಿರ್ಮಲ ನಸು ನಕ್ಕಳು. ವಿಚಿತ್ರ ವ್ಯಕ್ತಿ ಎಂದು ತನ್ನಲ್ಲೇ ಅಂದುಕೊಂಡಳು.

ಮನೆಗೆ ಹಿಂತಿರುಗಿ ಬಂದಾಗ ಸಾಕಷ್ಟು ಹೊತ್ತಾಗಿತ್ತು. ತಂದೆ ತಾಯಿ ಊಟ ಮುಗಿಸಿದ್ದರು. ಇವಳ ಭಾಗದ ಊಟ ಟೇಬಲ್ ಮೇಲೆ ಹಾಗೇ ಇತ್ತು. ಇವಳಿಗೇಕೊ ಬೇಸರವೆನಿಸಿತು. ನನಗಾಗಿ ಕಾಯುವ ಜನ ಇವರಲ್ಲ. ಎಲ್ಲರ ತಂದೆ ತಾಯಿಯೂ ಹೀಗೇನಾ? ಎಂಬ ಸಂದೇಹ ಇಣುಕಿತು. ಕೈ ಕಾಲು ತೊಳೆದು, ಬರೀ ಹಾಲನ್ನು ಕುಡುದು ತನ್ನ ರೂಮಿಗೆ ಬಂದಳು. ಅಲ್ಲಿಯೇ ಇದ್ದ ಇಂಗ್ಲೀಷ್ ನೋಟ್ಸ್‌ನ್ನು ಮತ್ತೊಮ್ಮೆ ತನ್ನ ಕೈ ಗೆತ್ತಿಕೊಂಡಳು. ಹಾಗೇ ಹಾಸಿಗೆಯ ಮೇಲೆ ಮೈ ಚಾಚಿ ಮಲಗಿ ರಂಗನಾಥನ ಬಗ್ಗೆ ಯೋಚಿಸ ತೊಡಗಿದಳು.

ಆ ದಿನ, ಅವನು ಕ್ಲಿನಿಕ್‌ಗೆ ಬಂದ ಮೊದಲ ದಿನವೇ ಅವನ ಮೊದಲ ಪರಿಚಯವಾದದ್ದು. ಅವನ ಕೇಳಿಕೆಗೆ ಒಪ್ಪಿ ಅವನ ಮನೆಗೆ ವಿಸಿಟ್ ಕೊಟ್ಟಿದ್ದಳು. ಆದರೆ ಆಗ ತಾನು ಡಾಕ್ಟರು ಮಾತ್ರ ಆಗಿದ್ದೆ. ಆದರೆ ಈಗ ನಾಲ್ಕೈದು ಭೇಟಿಗಳ ನಂತರ ಅವನ ಪರಿಚಯ ಸ್ನೇಹಕ್ಕೆ ತಿರುಗಿದೆ. ಅವನ ಬಗ್ಗೆ ಯೋಚಿಸಿದಾಗ ತನಗೆ ಏನೇನೋ ಭಾವನೆಗಳು ಹುಟ್ಟುತ್ತವೆ. ಅವನ ದೃಷ್ಟಿ ತನ್ನ ಮೇಲೆ ಬಿದ್ದಾಗ, ತನಗೆ ಆಗುವ ಅನುಭವಗಳೇ ಬೇರೆ. ಅವನ ನೋಟದಲ್ಲಿ ಏನೇನನ್ನೋ ಗುರುತಿಸುತ್ತೇವೆ. ಅದು ಆರಾಧನೆಯೆ..? ಆಕರ್ಷಣೆಯೇ? ತನಗೇಕೆ ಹೀಗಾಗುತ್ತೆ?

ಅವನು ದುಡುಕಿನಿಂದೆದ್ದು ಹೋದಾಗ ತನಗೆ ನಗು ಬಂದಿತ್ತು. ಅವನ ಪುಸ್ತಕ ಸಿಕ್ಕಾಗ ಅವನ ಬಗ್ಗೆ ಆಸಕ್ತಿ ಮೂಡಿತ್ತು. ಕುತೂಹಲದಿಂದ ಓದಿದ ನಂತರ, ಅವನ ಬರಹ ಅವನ ಬಗ್ಗೆ ಮೆಚ್ಚುಗೆಯನ್ನು ಬೆಳೆಸಿತ್ತು. ಆ ಮೆಚ್ಚುಗೆ ಸ್ನೇಹನಾಗಿ ಮಾರ್ಪಾಡಾಗಿತ್ತು.

ಹೌದು ನನಗವನ ಸ್ನೇಹ ಬೇಕು. ನನಗ್ಯಾರೂ ಸ್ನೇಹಿತರಿಲ್ಲ. ನನ್ನವರೆಂದು ಹೇಳಿಕೊಳ್ಳುನ ಆಪ್ತರಿಲ್ಲ.ನನ್ನ ಭಾವನೆಗಳನ್ನು ಹಂಚಿಕೊಳ್ಳಲು ನನಗೊಬ್ಬನ ಸ್ನೇಹ ಬೇಕು.ಇದುವರೆಗೂ ಯಾರ ಬಗ್ಗಯೂ ನನಗೆ ಹೀಗೆ ಅನ್ನಿಸಿರಲಿಲ್ಲ. ಅವನು ಒಂಟಿಯಾಗಿ ಬಂದವನೆಂದೇ ಅಥವಾ ಅವನ ವಿಚಿತ್ರ ವರ್ತನೆ ಇದಕ್ಕೆ ಕಾರಣವೇ?

ನಾನು ಎಂದೂ ಒಂಟಿಯೇ.. ತಂದೆ ತಾಯಿಗಳಿದ್ದೂ, ತಂಗಿ ತಮ್ಮನಿದ್ದೂ ನಾನು ಒಂಟಿಯೇ. ಸಾಲದ್ದಕ್ಕೆ ಈ ಕುಂಟುಬೇರೆ. ಅದು ನನ್ನನ್ನು ಇನ್ನೂ ಒಂಟಿಯನ್ನಾಗಿ ಮಾಡಿದೆ.

ಅದರಿಂದಲೇ ಏನೋ ನನ್ನ ಭವಿಷ್ಯವನ್ನು ರೂಪಿಸುವುದಕ್ಕೆಂದು ನನ್ನ ತಂದೆ

ನನ್ನನ್ನು ಹೀಗೆ ಬೆಳೆಸಿರಬಹುದು. ಮೊದಲಿನಿಂದಲೂ ಎಲ್ಲಾ ಅವರು ಹೇಳಿದ ಹಾಗೇ.. ಅವರು ಮಾಡಿದ ಹಾಗೇ.. ತಾನೆಂದೂ ಹಾಗಿರಬೇಕು ಹೀಗಿರಬೇಕು ಎಂದು ಆಸೆ ಪಟ್ಟವಳಲ್ಲ. ಅದು ಬೇಕು ಇದು ಬೇಕು ಎಂದು ಕೇಳಿದವಳಲ್ಲ ಅಥವಾ ಎಂದೂ ಅವರಿಗೆ ವಿರೋಧವಾಗಿ ನಡೆದವಳಲ್ಲ. ಅವರು ನಡೆಸಿದಂತೆ ನಡೆದು ಬಂದು ಈ ನೆಲೆ ತಲುಪಿದವಳು ನಾನು.

ಇದು ಅವರ ಸ್ವಾರ್ಥತನವಲ್ಲದೇ ಮತ್ತೇನು? ತಾನೇಕೆ ಹಾಗಿದ್ದೆ?ತನಗೇಕೆ ಏನೂ ಅನ್ನಿಸುತ್ತಿರಲಿಲ್ಲ. ಕಾಲು ಕಂಟಾದ ಮಾತ್ರಕ್ಕೆ ಆಸೆಯೂ ಕುಂಟಾಗಿತ್ತೇ? ತನಗೇಕೆ ಹೀಗಾಯಿತು? ಅವರುಗಳು ಹೀಗೇಕೆ ಮಾಡಿದರು?

ತಾನು ಹುಟ್ಟಿದಾಗಿನಿಂದಲೇ ಕುಂಟಿಯಾದುದರಿಂದಲೋ ಏನೋ ಅಮ್ಮನಿಗೆ ನನ್ನ ಕಂಡರೆ ಅಷ್ಟಕ್ಕಷ್ಟೇ. ನನ್ನ ಹಿಂದೆ ಹುಟ್ಟಿದ ವಿಮಲ, ನನಗಿಂತ ತುಂಬಾ ಚಿಕ್ಕವಳು. ಅಮ್ಮ ಅವಳನ್ನು ಅಪ್ಪಿ ಮುದ್ದಾಡಿದಾಗಲೆಲ್ಲಾ ನನ್ನ ಮನಸ್ಸು ಕುಗ್ಗಿ ಹೊಗುತ್ತಿತ್ತು. ನಂತರ ಹುಟ್ಟಿದವನು ರವಿ. ಗಂಡುಮಗುವೆಂದು ಪ್ರೀತಿ ವಾತ್ಸಲ್ಯವೆಲ್ಲಾ ಅವನ ಪಾಲಿಗೇ.

ಆದರೆ ತಂದೆ ಎಷ್ಟೋ ವಾಸಿ. ನನ್ನನು ಆಗಾಗ್ಗೆ ಮುದ್ದು ಮಾಡುತ್ತಿದ್ದರು. ಹೊರಗೆ ಕರೆದುಕೊಂಡು ಸುತ್ತಾಡಿಸಿಕೊಂಡು ಬರುತ್ತಿದ್ದರು. ಸ್ಕೂಲಿಗೆ, ಡಾಕ್ಟರ ಬಳಿಗೆ, ವಾಕಿಂಗ್‌ಗೆ ಎಲ್ಲಾದಕ್ಕೂ ಅವರೇ. ನನ್ನ ಜೊತೆಗೆ ನನ್ನ ಸ್ಕೂಲಿನ ಪಾಠ, ಹೋಂವರ್ಕ್ ಎಲ್ಲಾ ಅವರೇ ಮಾಡಿಸುತ್ತಿದ್ದರು. ದೊಡ್ಡವಳಾದಮೇಲೆ ಏನಾಗ್ತೀಯ ಅಂತ ಕೇಳಿದರೆ ನಾನು ದೊಡ್ಡ ಡಾಕ್ಟ್ರಾಗ್ತೀನಿ ಅಂತ ಹೇಳ್ತಿದ್ನಂತೆ. ಅದಕ್ಕೋ ಏನೋ ನನ್ನ ತಂದೆ ನನ್ನನ್ನು ಮೆಡಿಕಲ್ ಕಾಲೇಜಿಗೇ ಸೇರಿಸಿದರು. ಗಂಡು ಹುಡುಗನಂತೆ ಬೆಳೆಸಿದರು. ನನ್ನ ಕರ್ತವ್ಯ ನನಗೆ ತಿಳಿಸಿಕೊಟ್ಟರು. ನನಗೆ ಸೈಕಲ್ ತುಳಿಯುವುದನ್ನು ಕಲಿಸಿಕೊಟ್ಟರು. ನನಗೇ ಅಂತ ಒಂದು ಕ್ಲಿನಿಕ್ ಕಟ್ಟಿಸಿಕೊಟ್ಟರು. ಹಾಗಾದರೆ ಬರೀ ಇದಿಷ್ಟೇ ಅವರ ಕರ್ತವ್ಯವಾಗಿತ್ತೇ? ಆದರೆ ಎಂದು ನನ್ನ ಮದುವೆಯ ಬಗ್ಗೆ ಪ್ರಸ್ತಾಪ ಮಾಡಲೇ ಇಲ್ಲ. ಏಕಿರಬಹುದು?

ವಿಮಲ ಮದುವೆಯ ವಯಸ್ಸಿಗೆ ಬಂದಾಗ ನನ್ನನ್ನು ಒಂದು ಮಾತೂ ಸಹಕೇಳದೇ, ಅವಳ ಮದುವೆ ಗೊತ್ತು ಮಾಡಿದ್ದರು. ಆಗ ನನ್ನ ಮನಸ್ಸು ಕಲ್ಲಾಗಿತ್ತು. ಈ ಕುಂಟಿಯನ್ನು ಯಾರು ಮದುವೆಯಾಗ್ತಾರೆ ಎಂಬ ಅಪನಂಬಿಕೆ ಅವರಲ್ಲಿರಬಹುದು. ಆದರೆ ಒಂದು ಮಾತು ಕೇಳಬಹುದಾಗಿತ್ತೇನೋ ಅಂತ ಈಗ ಅನ್ನಿಸ್ತಿದೆ.

ಅವಳೂ ಮದುವೆಯಾಗಿ ಬೇರೆ ಹೊರಟ ನಂತರ ರವಿ, ಬೇರೆ ಜಾತಿಯ ವಳನ್ನು ಮದುವೆಯಾಗಿ ಬೇರೆ ಹೊರಟೇ ಹೋದ. ಆಗ ಅಮ್ಮನಿಗಾದ ನಿರಾಸೆ ಅಷ್ಟಿಷ್ಟಲ್ಲ. ಆಗ ಒಂದು ತರಹ ಸಂತೋಷವೂ ಆಗಿತ್ತು ನನಗೆ. ಹಾಗೇ ಆಗಬೇಕು ಅವಳಿಗೆ ಅಂತನ್ನಿಸಿತ್ತು.

ಆದರೆ ತನಗೆಂದೂ ಮದುವೆಯ ಆಸೆ ಬಂದುದೇ ನೆನಪಿಲ್ಲ. ಆದರೆ ಇಂದೇಕೆ ಈ ಅನಿಸಿಕೆಗಳು? ತಾನು ಸದಾ ಕಾಲವೂ ಹೀಗೇ ಒಂದೇ ಕಡೆ ಕುಳಿತಿರಬೇಕೆ? ಕೂಡದು, ನನ್ನ ಹೆಣ್ಣುತನ ಜಾಗ್ರತವಾಗಿದೆ. ಅದಕ್ಕೆ ಕಾರಣ ರಂಗನಾಥ. ಅದಕ್ಕೇ ಏನೋ ನನಗೆ ಅವನ ಸ್ನೇಹ ಬೇಕೆನಿಸಿದೆ. ತಾನೇಕೆ ಇದುವರೆಗೆ ಹೀಗೇ ಇದ್ದೆ? ಇನ್ನು ಮೇಲೆ ಹೀಗೇ

ಇರಬಾರದು ಎನ್ನುವ ನಿರ್ಧಾರಕ್ಕೆ ಬಂದಾಗ, ಅವಳಿಗೇ ತನ್ನ ಆಲೋಚನೆ ಬಗ್ಗೆ ಅಶ್ಚರ್ಯವೆನಿಸಿತು.

ಇದು ಅವನ ಸಾಹಿತ್ಯದ ಪ್ರಭಾವವಿರಬೇಕು. ಆಳದಲ್ಲಿ ಅಡಗಿದ್ದ ಆಸೆಯ ಅಲೆಗಳು ಮೇಲೆ ಮೇಲೆ ಬರಲಾರಂಭಿಸಿವೆ. ಅವನ ಬಗ್ಗೆ ಆಸಕ್ತಿ ಮೂಡಿದೆ. ಅವನ ರೂಪ ಕಣ್ಣ ಮುಂದೆ ಬಂದು ಬಂದು ನಿಲ್ಲುತ್ತಿದೆ ಅವನ ದುಡುಕುತನ ನಗು ಬರಿಸುತ್ತೆ. ಅವನ ವ್ಯಥೆ ತುಂಬಿದಮುಖ ನೋಡಿದರೆ ಅಯ್ಯೋ ಅಂತನ್ನಿಸುತ್ತೆ. ಅವನೂ ನನ್ನ ಹಾಗೇ ಒಂಟಿ ಇರಬಹುದು ಮನೆಯಲ್ಲಿ ,ತಾಯಿ ಬಿಟ್ಟರೆ ಬೇರೆ ಯಾರೂ ಇದ್ದಂತೆ ಕಾಣಲಿಲ್ಲ. ತಂಗಿಯ ಚಿಕ್ಕಮಗು ಒಂದು, ಅವನೂ ಸುಖವಾಗಿಲ್ಲ ಅಂತನ್ನಿಸುತ್ತೆ. ಅವನಿಗಿನ್ನು ಮದುವೆ ಆಗಿಲ್ಲ ಅಂತನ್ನಿಸುತ್ತೆ. ಮದುವೆ ಏಕೆ ಆಗಿಲ್ಲವೋ?

ವಯಸ್ಸು ಸ್ವಲ್ಪ ಜಾಸ್ತಿ ಆಗಿರಬಹುದು. ಆದರೇನು? ನೋಡೋಕೆ ಚೆನ್ನಾಗಿದ್ದಾನೆ. ಒಳ್ಳೆ ಪರ್ಸನಾಲಿಟಿ ಇದೆ. ರೂಪವಂತ, ವಿಧ್ಯಾವಂತ  ಇನ್ನೇನು ಕಮ್ಮಿ? ಆದರೆ ಅವನಿಗೆ ಮದುವೆ ಆಸೆ ಇಲ್ಲದಿರಬಹುದು..ಛೆ, ನಾನೇಕೆ ಅವನ ಬಗ್ಗೆ ತಲೆ ಕೆಡಿಸಿಕೊಳ್ಳಬೇಕು? ಎಂದು ತಲೆ ಕೊಡವಿಕೊಂಡು ಪುಸ್ತಕವನ್ನು ಎದೆಯ ಮೇಲೆ ಇಟ್ಟುಕೊಂಡು ಕಣ್ಣು ಮುಚ್ಚಿ ಮಲಗಿದವಳಿಗೆ ನಿದ್ದೆ ಆವರಿಸುತ್ತದ್ದಂತೆ ನೂರೆಂಟು ಭಾವನೆಗಳು ಮಧುರವಾದ ಸ್ವಪ್ನಗಳು ಈ ನೋಟ್ಸ್‌ನಲ್ಲಿನ ನಾಟಕದ, ನಾಯಕ ಅವನು, ನಾಯಕಿ ತಾನು ಎಂಬಂತೆ ಕನಸು ಕಂಡಳು. ಸ್ಕೂಟರ್‌ನಲ್ಲಿ ಅವನ ಹಿಂದೆ ಕುಳಿತು ಸುತ್ತಾಡುತ್ತಿರುವಂತೆ ಊಹಿಸಿಕೊಂಡಳು. ಕ್ಲಿನಿಕ್‌ನಲ್ಲಿ ಎದುರು ಬದುರು ಕುಳಿತು ನಗುನಗುತ್ತಾ ಮಾತಾಡುತ್ತಿರುವಂತೆ ಭಾವಿಸಿಕೊಂಡಳು. ಪ್ರೇಮಲೋಕದಲ್ಲಿ ವಿಹರಿಸಿದಂತೆ ಅನುಭವವುಂಟಾಯಿತು. ಅವನು ತನಗೆ ಬೇಕು. ಅವನಿಲ್ಲದೇ ತಾನು ಏನೂ ಇಲ್ಲ. ಅವನಿಲ್ಲದೆ ಜೀವನ ಬರಡು ಅಂತೆನಿಸಿತು. ಹೀಗೆ ಭಾವನೆಗಳ ತಿಕ್ಕಾಟ ಪ್ರಾರಂಭವಾಯಿತು.

ನಾಲ್ಕೈದು ದಿನಗಳು ಕಳೆದವು. ಅವನು ಕ್ಲಿನಿಕ್‌ಗೆ ಮತ್ತೆ ಬಂದಿರಲಿಲ್ಲ. ಅವಳಿಗೆ ನಿರಾಸೆಯಾಗಿತ್ತು. ಆಗ ಎನ್ನಿಸಿತ್ತು..ಛೆ.. ತಾನೆಂಥವಳು ಅವನೇಕೆ ಬರುತ್ತಾನೆ? ನಾನು ಅವನ ಸ್ನೇಹ ಬಯಸಿದ ಮಾತ್ರಕ್ಕೆ ಅವನೇಕೆ ದಿನ ದಿನ ಬಂದಾನು? ಅವನಿಗೆ ನನ್ನ ಸ್ನೇಹ ಬೇಕಿದೆಯೋ ಇಲ್ಲವೋ..? ಕಾರಣವಿಲ್ಲದೆ ಅವನೇಕೆ ಬಂದಾನು? ಎಂದು ತನ್ನಲ್ಲಿಯೇ ಅಂದುಕೊಂಡಳು.

ಆದರೆ ಪೇಶೆಂಟ್ಸ್‌ಗಳೆಲ್ಲ ಹೊರಟು ಹೋದ ಮೇಲೂ ಅವಳಿಗೆ ಮನೆಗೆ ಹೋಗಲು ಇಷ್ಟವಾಗದೇ ಕ್ಲಿನಿಕ್‌ನಲ್ಲೇ ಸುಮ್ಮನೇ ಕುಳಿತಿದ್ದಳು. ಸ್ವಲ್ಪ ಸಮಯದ ನಂತರ, ರಂಗನಾಥ ಅವಳೆದುರು ಬಂದು ನಿಂತು, ಹಲೋ ಡಾಕ್ಟರ್ ಎಂದಾಗ ಅವಳಿಗೆ ತಬ್ಬಿಬ್ಬಾಯಿತು. ಸಂದೇಹದಿಂದ ಮತ್ತೆ ಮತ್ತೆ ನೋಡಿದಳು. ಹೌದು. ನಿಜಕ್ಕೂ ಅವನು ಬಂದು ತನ್ನೆದುರು ನಿಂತಿದ್ದಾನೆ. ಎಂದು ಅರಿವಾದಾಗ ಹರ್ಷದಿಂದ ಮುಖ ಅರಳಿತು.. ಮಾತಾಡಲೂ ಸಹ ಆಗದವಳಂತೆ ಸುಮ್ಮನಾಗಿ ಬಿಟ್ಟಳು.

ರಂಗನಾಥನೇ.. ಮನೋಜನನ್ನ. ಮತ್ತೊಮ್ಮೆ ಚೆಕಪ್ ಮಾಡಬೇಕು ಅಂತ ಅಂದಿದ್ರಲ್ಲ.. ಅದಕ್ಕೆ ಕರೆದುಕೊಂಡು ಬಂದಿದೀನಿ ಎಂದಾಗ ನೆನಪಾದವಳಂತೆ.

"ಹೌದು...ಹೌದು.. ಅವನನ್ನ ಇಲ್ಲಿ ಕರೆದುಕೊಂಡು ಬನ್ನಿ" ಎಂದು ಎದ್ದು

ನಿಂತಳು.

ಎಲ್ಲಾ ನಿಧಾನವಾಗಿ ಪರೀಕ್ಷಿಸಿ, "ಓ..ಕೇ. ಹಿ ಈಸ್ ಫೈನ್" ಎಂದಳು.

"ಸರಿ ಹಾಗಾದ್ರೆ ಹೊರಡ್ತೀನಿ.. ನಿಮ್ಮ ಫೀಸು..ಎಷ್ಟು?" ಕೇಳಿದ.

"ಹತ್ತು ರೂಪಾಯಿ" ಎಂದಳು. ಜೇಬಿನಿಂದ ಪರ್ಸು ತೆಗೆದು ಹತ್ತರ ನೋಟೊಂದನ್ನು ಅವಳೆಡೆಗೆ ನೀಡಿದ. ಏಕೋ ಏನೋ ಅವನು ಪೆಚ್ಚಾಗಿದ್ದ ಒಂದು ದಿನಕ್ಕೆ ಈ ತರಹ ಎಷ್ಟು ಹತ್ತರ ನೋಟುಗಳನ್ನು ಸಂಪಾದಿಸುತ್ತಾಳೋ ಎಂದು ತನ್ನಲ್ಲೇ ಆಲೋಚಿಸಿದ.

ಅವನು ಹೊರಟೇ ಬಿಟ್ಟ ಎನ್ನುವಾಗ ಅವಳು ಜ್ಞಾಪಿಸಿಕೊಂಡವಳಂತೆ "ನಿಮ್ಮ ನೋಟ್ಸ್...?" ಎಂದು ಕೇಳಿದಳು.

"ಇಲ್ಲ...ನಾನು ಏನೂ ತಂದಿಲ್ಲ." ಎಂದ ಪೆದ್ದಾಗಿ.

ಅವಳು ನಕ್ಕು ಬಿಟ್ಟಳು. "ಅದಕ್ಕೇಕೆ ಗಾಭರಿ...?"

"ಗಾಭರಿ? ಗಾಭರಿ ಏನಿಲ್ಲ..ಇಲ್ಲಿ ಬಿಟ್ಟು ಹೋದರೆ ಏನಾಯ್ತು? ಸೇಫ್ ಆಗಿ ಇರುತ್ತೆ ಅಂತ ಗೊತ್ತಲ್ಲ..ಯಾವ ನೋಟ್ಸ್ ನೀವು ಕೇಳಿದ್ದು?" ತಾನೇ ಪ್ರಶ್ನಿಸಿದ..

"ಇನ್ನು ಯಾವುದಾದರೂ, ನೋಟ್ಸ್ ಇದ್ದರೆ ಕೊಡ್ತೀರಾ ಅಂತ ಕೇಳಿದೆ" ಸುಮ್ಮನೇ ಎಂಬಂತೆ ಹೇಳಿದಳು. ಅವನ ಆಸಕ್ತಿ ಕೆರಳಿತು.

"ಇನ್ನೊಂದು ಬರೆದಿದೀನಿ.. ಆದರೆ ಅದೇ ವಿಷಯ,, ಆದರೆ ನಿಮಗೆ ಓದುವ ಇಂಟರೆಸ್ಟ್ ಇದ್ದರೆ ಹೇಳಿ.. ಲೈಬ್ರರೀಲಿ ಬೇಕಾದಷ್ಟು ಒಳ್ಳೆಯ ಪುಸ್ತಕಗಳಿವೆ ತಂದು ಕೊಡ್ತೀನಿ."

ಈಗ ಅವಳು ಬೆಪ್ಪಾದಳು. "ಬೇಡ ಬೇಡ...ನನಗೆ ಲೈಬ್ರರಿ ಬುಕ್ಸ್ ಓದುಕ್ಕೆ ಟೈಂ ಎಲ್ಲಿದೆ? ನೀವು ಬರೆದಿದ್ದು ಇದ್ದರೆ ಓದೋಣ ಅಂತ ಕೇಳಿದೆ ಅಷ್ಟೇ.."

" ಓ..ಎಂದ ರಾಗವಾಗಿ. ಹಾಗಾದ್ರೆ ನಿಮಗೋಸ್ಕರ ಏನನ್ನಾದರೂ ಬರೆದು ತಂದು ಕೊಟ್ಟರೆ ಓದ್ತೀರಾ?" ಎಂದು ಕೇಳುವ ಮನಸ್ಸಾಯಿತು. ಆದರೂ ಏಕೋ ಏನೋ ಸುಮ್ಮನಾದ.

"ಓ..ಕೇ. ಬರ್ತೀನಿ" ಎನ್ನುತ್ತಾ ಅವನು ಮನಸ್ಸಿಲ್ಲದ ಮನಸ್ಸಿನಿಂದ ಅಲ್ಲಿಂದ ಹೊರಟ. ಸರಿ ಎಂದಳು. ಬೇಸರದಿಂದ. ಅವನು ಹೊರಟೇ ಬಿಟ್ಟ ಎನ್ನುವುದು ಅವಳಿಗೂ ಇಷ್ಟವಿಲ್ಲದ ವಿಷಯ. ಆದರೆ ಹೊರಗೆ ಬೇರೆ ಮತ್ತೊಬ್ಬ ಪೇಶೆಂಟ್ ಕಾಯುತ್ತಿರುವ ವಿಷಯ ಇಬ್ಬರಿಗೂ ಅರಿವಿಗೆ ಬಂದಿತ್ತು. ಕ್ಲಿನಿಕ್ ಮುಚ್ಚುವ ಸಮಯವಾಗಿದ್ದರೂ ದೀಪ ಉರಿಯುತ್ತಿದ್ದುದರಿಂದ ಮತ್ತೊಂದಿಬ್ಬರು ಮಕ್ಕಳೊಂದಿಗೆ ಬಂದಿದ್ದರು. ಮೊಟ್ಟ ಮೊದಲ ಬಾರಿಗೆ ಆ ಪೇಶೆಂಟ್ ಬಗ್ಗೆ ಅವಳಿಗೆ ರೇಗಿತ್ತು. ಇಲ್ಲಿಗೆ ಅವನ, ನನ್ನ ಸ್ನೇಹ ಮುಗಿದೇ ಹೋಯಿತೇನೋ ಎನ್ನಿಸಿತ್ತು. "ಮತ್ತೆ ಯಾವಾಗ ಸಿಕ್ತೀರಿ?" ಎಂದು ಹೇಗೆ ಕೇಳುವುದು ಎಂದುಕೊಂಡು ಸುಮ್ಮನಾದಳು. ಅವನು ಮನೋಜನನ್ನು ಎತ್ತಿಕೊಂಡು ಹೊರಟು ಹೋದ. ಇವಳು ಪೇಶೆಂಟ್ ಕಡೆ ಗಮನ ಹರಿಸಿದಳು.

ಮತ್ತೆ ಮುಂದಿನ ಕೆಲವು ದಿನಗಳು, ನಿರ್ಮಲ ರಂಗನಾಥನ ಬರವನ್ನು ಯಾವ ಕಾರಣವಿಲ್ಲದೆಯೆ ನಿರೀಕ್ಷಿಸಿದಳು. ಅವನೆ ಬರದಿದ್ದಾಗ ನಿರಾಸೆಯಾದರೂ ತನ್ನಲ್ಲೇ

ಸಮಾಧಾನ ಹೇಳಿಕೊಂಡಳು. ಹೋಗಲಿ.. ಬರದಿದ್ದರೇನು? ನಾನೇಕೆ ಅವನಿಗೆ ಕಾಯಬೇಕು.? ಬರಲಿಲ್ಲವೆಂದೇಕೆ ನಿರಾಸೆ ಹೊಂದಬೇಕು? ಇದುವರೆಗೂ ಹೇಗೆ ಇದ್ದೆನೋ ಹಾಗೇ ಇದ್ದರಾಯಿತು ಕ್ರಮೇಣ ಎಲ್ಲ ಸರಿ ಹೋಗುತ್ತದೆ ಎಂದೆನಿಸಿತು. ಆದರೂ ರಂಗನಾಥನ ನೆನಪು ದಿನಕ್ಕೆ ಒಂದು ಸಲವಾದರೂ ಬರದೇ ಇರುತ್ತಿರಲಿಲ್ಲ.

೦ ೦ ೦ ೦

ಒಂದು ದಿನ ಇದ್ದಕ್ಕಿದ್ದಂತೆ ರಂಗನಾಥ ಕ್ಲಿನಿಕ್‌ಗೆ ಬಂದ. ನಿರ್ಮಲ ತನ್ನ ಹರ್ಷವನ್ನು ತೋರಗೊಡದೇ ಮಾತಾಡಿದಳು.

"ಒಬ್ಬರೇ ಬಂದಿದೀರಿ.. ಮನೋಜ ಎಲ್ಲಿ?" ಕೇಳಿದಳು.

"ಇವತ್ತು ನನಗೋಸ್ಕರ ಬಂದಿದೀನಿ ನನಗೇ ಮೈಯಲ್ಲಿ ಸರಿ ಇಲ್ಲ" ಎನ್ನುತ್ತಾ ಅತ್ತಿತ್ತ ಕತ್ತು ತಿರುಗಿಸಿ ನೋಡಿದ.

"ಸರಿ... ಆದರೆ ಏನಾಗಿದೆ ಅಂತ ಕೇಳ್ತೀನಿ ಅಷ್ಟೇ.. ಟ್ರೀಟ್‌ಮೆಂಟ್ ಇಲ್ಲಿ ಸಿಕ್ಕಲ್ಲ. ನಾನು ಬರೀ ಮಕ್ಕಳ ಡಾಕ್ಟರು..ಗೊತ್ತಲ್ಲ.."

"ಡಾಕ್ಟರು ಯಾರಾದರೇನು? ಅವರಿಗೆ ಎಲ್ಲಾ ರೋಗಿಗಳೂ ಒಂದೇ ತರಹ ಅಲ್ವಾ?"

"ಅದು ತಪ್ಪು..ಇರಲಿ ಏನು ಪ್ರಾಬ್ಲಂ... ಅಂತ ಹೇಳಿ."

"ಏಕೋ ಏನೋ, ಈಚೆಗೆ ಸ್ವಲ್ಪ ದಿನದಿಂದ ಮೈಯಲ್ಲಿ ಏನೋ ಒಂದು ತರಹ.. ಯಾವುದರಲ್ಲೂ ಆಸಕ್ತಿ ಇಲ್ಲವಾಗಿದೆ.. ಒಂದು ತರಹ ಉದಾಸೀನ.. ಸದಾ ಏನೋ ಆಲೋಚನೆಗಳು.."ಅವಳನ್ನೇ ನೋಡುತ್ತಾ ಹೇಳಿದ. ಅವಳು ದೃಷ್ಟಿ ಬದಲಿಸಿದಳು.

"ಇದಕ್ಕೆ ನೀವು ಯಾರಾದರೂ ಸೈಕಿಯಾಟ್ರಿಸ್ಟ್ ಹತ್ತಿರ ಹೋಗುವುದು ಒಳ್ಳೆಯದು. " ಸಲಹೆ ನೀಡಿದಳು.

"ಇಲ್ಲ ಇದನ್ನ ನಿಮಗೇ ಹೇಳಬೇಕು.. ಆದರೆ ಇಲ್ಲಿ ಬೇಡ ಹೊರಗೆ ಎಲ್ಲಾದರೂ ಹೋಗೋಣ. "

ನಿರ್ಮಲ ಚಕಿತಳಾದಳು, ತಕ್ಷಣ ಅವನ ಇಂಗಿತವೇನೆಂದು ಅರ್ಥವಾಗಲಿಲ್ಲ.

"ಈಗ ಇವತ್ತು ಬರುಕ್ಕಾಗುಲ್ಲ..ಕ್ಲಿನಿಕ್ ತುಂಬಾ ಪೇಶೆಂಟ್ಸ್ ಕಾಯ್ತಾ ಇದಾರಲ್ಲ"

"ಇರಲಿ ನಾನೂ ಒಬ್ಬ ಪೇಶೆಂಟ್ ತಾನೇ..? ನನಗೆ ಹೆಲ್ಪ್ ಮಾಡುವುದೂ ನಿಮ್ಮ ಡ್ಯೂಟಿ ತಾನೇ..?"

"ಹಾಗಾದ್ರೆ ಒಂದು ಕೆಲಸ ಮಾಡಿ.. ಅವರನ್ನೆಲ್ಲಾ ಬೇಗ ಬೇಗ ಕಳಿಸಿ ಬಿಡ್ತೀನಿ. ಆಮೇಲೆ ನೀವು ನಿಮ್ಮ ಪ್ರಾಬ್ಲಂ ಹೇಳೋರಂತೆ.."

"ನನ್ನನ್ನ ಹೊರಕ್ಕೆ ಕಳಿಸೋಕೆ ನೋಡ್ತದೀರಾ ಮೇಡಂ.. ನೀವು."

"ಸಾರಿ. ಸಾರ್., ಈಗ ನಾನು ಡಾಕ್ಟರ್, ನಾನು ಹೇಳಿದ ಹಾಗೆ ಕೇಳಿದರೆ ನಿಮಗೇ ಒಳ್ಳೆಯದು.." ಅವಳು ಗಂಭೀರವಾಗಿ ನುಡಿದಾಗ,

"ಮನೋಜನ್ನ ಕರೆದುಕೊಂಡು ಬಂದಿದ್ರೆ ಚೆನ್ನಾಗಿತ್ತು ಅಂತ ಈಗ ಅನ್ನಿಸ್ತಿದೆ" ಅಂತ ನಕ್ಕ. ಅವನ ನಗುವಿನೊಂದಿಗೆ ತನ್ನ ನಗುವನ್ನು ಸೇರಿಸಿ ಅವಳೆಂದಳು.

"ಹೌದಾಲ್ವಾ?..ಕೆಲವು ಸಲ ನಮ್ಮ ಸ್ವಂತ ಮಾತುಗಳನ್ನು ಹೇಳಿಕೊಳ್ಳೋಕೆ ಕಷ್ಟವಾದಾಗ, ಇಬ್ಬರ ಮಧ್ಯೆ ಇನ್ನೂ ಒಬ್ಬರು ಇದ್ದರೆ ಸುಲಭ ಅಂತ ಅನ್ನಿಸುತ್ತೆ

ಅಲ್ವಾ?"

"ಹೌದು ನಿರ್ಮಲಾ.. ನಾನೀಗ ಅಂಥ ಪೇಚಿಗೆ ಸಿಕ್ಕಿಹಾಗಿಕೊಂಡಿದೀನಿ" ಅವಳನ್ನೇ ದಿಟ್ಟಿಸಿ ನೋಡಿದ. ಅವನಿಗೆ ಅರಿವಿಲ್ಲದಂತೆಯೇ ಅವನು ಅವಳ ಹೆಸರನ್ನು ಸಂಭೋಧಿಸಿ ಮಾತನಾಡಿದ್ದ. ಅವಳು ಅದನ್ನು ಗಮನಿಸಿ ಗಂಭೀರಳಾದಳು.

"ಹಾಗಾದ್ರೆ ತುಂಬಾ ಮಾತನಾಡಬೇಕಾಗಿದೆ ನೀವು.. ಪೇಶೆಂಟ್ಸ್‌ಗಳೆಲ್ಲಾ ಮೊದಲು ಹೋಗಲಿ.. ನಾವಿಬ್ಬರೇ ಕುಳಿತು ತುಂಬಾ ಮಾತನಾಡೋಣ.".

ಓ.ಕೇ. ಅನ್ನುತ್ತಾ ರಂಗನಾಥ ಹೊರ ಬಂದ. ಕಾಲು ಗಂಟೆಯಲ್ಲಿ ನಿರ್ಮಲ ಬಂದಿದ್ದ ಪೇಶೆಂಟ್ಸ್‌ಗಳನ್ನೂ ಅಟೆಂಡ್ ಮಾಡಿ ಕಳಿಸಿದಳು. ರಂಗನಾಥ ಮತ್ತೆ ಒಳಗಿನ ಕೋಣೆಗೆ ಬಂದ. ನಿರ್ಮಲಾ ಕಾಂಪೌಂಡರ್‌ನನ್ನೂ ಸಹ ಕಳಿಸಿದಳು. ರಂಗನಾಥ ಸುಮ್ಮನೇ ಇದ್ದುದನ್ನು ಗಮನಿಸಿ ತಾನೇ ಕೇಳಿದಳು.

"ಈಗ ಹೇಳಿ..ನಿಮ್ಮ ಪ್ರಾಬ್ಲಂ ಏನು ಅಂತ? ನನ್ನ ಕೈಲಾಗುವುದಾದರೆ ಸಾಲ್ವ್ ಮಾಡ್ತೀನಿ"

"ನೀವೇ ಸಾಲ್ವ್ ಮಾಡಬೇಕು. ಆದರೆ ಹೇಗೆ ಹೇಳೋದು ಅಂತಾನೇ ಗೊತ್ತಾಗ್ತಿಲ್ಲ." ನಿರ್ಮಲಳಿಗೆ ನಗು ಬಂತು.

"ನಿಮಗೆ ನೇರವಾಗಿ ಹೇಳುಕ್ಕೆ ಕಷ್ಟವಾಗ್ತಿದೆ ಅಲ್ವಾ?...ಹೋಗಲಿ ಬಿಡಿ.. ನಿಮ್ಮ ತಂಗಿಯ ಬಗ್ಗೆ ಏನಾದರೂ ಹೇಳುವುದಿದೆಯ?" ಬೇಕಂತಲೇ ಈ ಪ್ರಶ್ನೆ ಕೇಳಿದಳು.

ಸರಕ್ಕನೆ ಕತ್ತೆತ್ತಿ ದುರುದುರನೇ ಅವಳನ್ನೇ ನೋಡಿದ. "ಅದನ್ನು ತಿಳಿದುಕೊಳ್ಳಲೇ ಬೇಕು ಎನ್ನುವ ಹಠ ಅಲ್ವಾ ನಿಮಗೆ..?" ಗಡುಸಾಗಿ ಕೇಳಿದ.

ನಿರ್ಮಲಳಿಗೆ ಪೆಚ್ಚಾಯಿತು. ಆದರೂ ಕೇಳಿದಳು.

"ಹಠ ಏನಿಲ್ಲ.. ಕುತೂಹಲ ಅಷ್ಟೇ. ಅವರ ಮಾತು ಬಂದಾಗೆಲ್ಲಾ ನೀವ್ಯಾಕೆ ಅಪ್ಸೆಟ್ ಆಗ್ತೀರಿ? ಹೇಳಬಾರದು ಎನ್ನುವ ಹಠ ನಿಮಗ್ಯಾಕೆ?"

ಒಂದು ಗಳಿಗೆ ತಡೆದು, ನಿಧಾನವಾಗಿ ನುಡಿದ. "ಯಾಕೋ ಏನೋ, ಯಾರಿಗೂ ಹೇಳಬೇಕು ಅಂತ ಇದುವರೆಗೂ ನನಗೆ ಅನ್ನಿಸಿಯೇ ಇಲ್ಲ.. ಅಲ್ಲದೇ ಹೇಳಿಕೊಂಡು, ನಾನು ವ್ಯಥೆ ಪಡುವುದಲ್ಲದೇ ಬೇರೆ ಉಪಯೋಗ ಏನೂ ಇಲ್ಲ"

"ಹಾಗ್ಯಾಕೆ ಯೋಚಿಸ್ತೀರಿ? ನನಗೆ ಹೇಳೋಗೆ ಇಷ್ಟವಿಲ್ಲದಿದ್ದರೆ, ಬೇಡಬಿಡಿ. ಆದರೆ ನೀವೊಬ್ಬರೇ ಕೊರಗುವ ಬದಲು, ಇನ್ಯಾರಿಗಾದರೂ ಹೇಳಿದರೆ ಎಷ್ಟೋ ವಾಸಿ ಅಲ್ವಾ?"..

"ನಾನು ಅವಳ ಮಾತನ್ನು ಹೇಳೋಕೆ ಬಂದಿಲ್ಲ ಇವತ್ತು..."

"ಓ..ಹಾಗಾದ್ರೆ ಬೇರೆ ಏನೋ ಮಾತಿದೆ ಅಂತಾಯ್ತು.. ಅದೇನು ಅಂತ ನೀವಾಗಿಯೇ ಹೇಳದಿದ್ರೆ ನನಗೆ ಹೇಗೆ ತಿಳೀಬೇಕು?" ತಮಾಷೆಯಾಗಿ ಅವಳು ನುಡಿದಾಗ ಅವನಿಗೆ ರೇಗಿತು.

"ತಮಾಷೆ ಮಾಡಬೇಡಿ.. ನಿರ್ಮಲಾ "ಹುಬ್ಬು ಗಂಟಿಕ್ಕಿದ್ದ.

"ಸಾರಿ. ತಮಾಷೆ ಮಾಡುಲ್ಲ. ನಿಮ್ಮನ್ನ ಒಬ್ಬ ಸ್ನೇಹಿತ ಅಂತ ತಿಳಕೊಂಡಿ ದೀನಿ. ಅದೇನು ಹೇಳಬೇಕೋ ನಿಸ್ಸಂಕೋಚವಾಗಿ ಹೇಳಿ.."

"ನನ್ನನ್ನು ನಿಮ್ಮ ಸ್ನೇಹಿತ ಅಂತ ತಿಳಿದೀದೀರಲ್ಲ. ಈಗ ಅಷ್ಟು ಸಾಕು. ನಾಳೆ

ಬಂದು ಮತ್ತೆ ಬೇಟಿಯಾಗ್ತೀನಿ. ಆಗ ಹೇಳ್ತೀನಿ.."

"ನಾಳೆ..? ನಾಳೆ ಯಾಕೆ? ಈಗಲೇ ಯಾಕೆ ಹೇಳಬಾರದು?"

"ನಾನೊಂದು ಮಾತು ಕೇಳಲಾ?" ಮಾತು ಬದಲಾಯಿಸಿದ.

"ಓ..ಕೇಳಿ ಅದಕ್ಕೇನು?"

"ನಾಳೆ ಕ್ಲಿನಿಕ್‌ಗೆ ರಜಾ ಅಲ್ವಾ? ಫ್ರೀಯಾಗಿದ್ದರೆ, ನನ್ನ ಜೊತೆ ಬರ್ತೀರಾ? ಹೊರಗೆಲ್ಲಾದರೂ ತಿರುಗಾಡಿ ಬರೋಣ್ವಾ? ಎಲ್ಲಾ ಮಾತನ್ನಾಡಬಹುದು."

ಈ ಮಾತಿಗೆ ನಿರ್ಮಲಾ ತಕ್ಷಣ ಉತ್ತರಿಸಿಲಿಲ್ಲ. ಅವಳು ಅನುಮಾನಿಸಿದ್ದನ್ನು ಗಮನಿಸಿ ಕೇಳಿದ.

"ಯಾಕೆ ಅನುಮಾನ? ನನ್ನ ಜತೆ ಬರೋಕೆ ಇಷ್ಟವಿಲ್ಲವಾ? ಅಥವಾ ಹೆದರಿಕೇನಾ?"

"ಹಾಗೇನೂ ಇಲ್ಲ.ಆದರೆ.. ನನ್ನನು ಹೀಗೆ ಕರೀತಾ ಇದೀರಲ್ಲ. ಕಾರಣ? ಕಾರಣ ಏನೂಂತ ಕೇಳ ಬಹುದಾ?"

"ನನ್ನನ್ನ ಸ್ನೇಹಿತ ಅಂತ ಒಪ್ಕೊಂಡಿದೀರಿ. ಸ್ನೇಹಿತಕರೆದರೆ ಅನುಮಾನಾನಾ? ಕಾರಣ ಅಷ್ಟು ಸಾಲದಾ?"

"ಇದುವರೆಗೂ ನನ್ನನ್ಯಾರೂ ಎಂದೂ ಕರಿದಿರಲಿಲ್ಲ. ಅದಕ್ಕೇ ನನಗೆ ತಕ್ಷಣ ಒಂದು ತರಹ ಅನ್ನಿಸತು ಅಷ್ಟೇ.."

"ಹಾಗಾದ್ರೆ ಬರ್ತೀರಾ?" ಮತ್ತೆ ಪ್ರಶ್ನಿಸಿದ.

"ದಿಡೀರನೇ ಹೀಗೆ ಕೇಳಿದ್ರೆ ಹೇಗೆ? ನಾನು ಯೋಚಿಸ ಬೇಡವೆ? ನನಗೆ ಸ್ವಲ್ಪ ಟೈಂ ಬೇಕು"

"ಹಾಗಾದ್ರೆ ನನ್ನ ಮೇಲೆ ನಂಬಿಕೆ ಇಲ್ಲ ಅಂತಾಯ್ತು."

"ಇದು ನಂಬಿಕೆ ಪ್ರಶ್ನೇ ಅಲ್ಲ ಮಿಸ್ಟರ್, ಇನ್ನೆಂದಾದ್ರೂ ಹೋದರೆ ಆಗುಲ್ವ? ಅಂತ..."

"ಮತ್ತೆ ಇನ್ನೆಂದೂ ಆ ದಿನ ಬಾರದೇ ಹೋಗಬಹುದು. ಬರುವುದಾದರೇ ನಾಳೆ ಬನ್ನಿ.. ಇಲ್ಲದಿದ್ದರೆ ಬರುಲ್ಲ ಅಂತ ಹೇಳಿಬಿಡಿ." ಅವನು ಒಂದೇ ಉಸುರಿಗೆ ಸ್ವಲ್ಪ ದನಿ ಎತ್ತರಿಸಿ ನುಡಿದಾಗ ಅವಳು ಉತ್ತರಿಸಿದಳು.

"ಹ್ಞಾಂ....ಹ್ಞಾಂ,,ಕೂಲ್ ಡೌನ್..ಯಾಕೆ ಹೀಗೆ ಎಕ್ಸೈಟ್ ಆಗ್ತೀರಿ? ಓ.ಕೇ. ನಾಳೆ ಬರ್ತೀವಿ. ಎಷ್ಟು ಹೊತ್ತಿಗೆ ಹೋಗೋಣ..?

"ಹಾಗಾದರೆ ಖಂಡಿತಾ ಬರ್ತೀರಾ..ನಿರ್ಮಲಾ.."ಎನ್ನುತ್ತಾ ಎದ್ದು ನಿಂತ ಮುಖದಲ್ಲಿ ಸಂತೋಷ ಎದ್ದು ಕಾಣುತ್ತಿತ್ತು. ಆದರೂ ಮತ್ತೆ ನುಡಿದ.

"ನನ್ನ ಬಲವಂತಕ್ಕೆ ಬರಬೆಡಿ. ನಿಮ್ಮ ಇಷ್ಟದಿಂದ ಬರಬೇಕು."

"ಇದೊಳ್ಳೆ ಚೆನ್ನಾಗಿದೆ ಮಿಸ್ಟರ್..ಎಲ್ಲಾ ಮಾತನ್ನು ನೀವೇಆಡ್ತಿದೀರಲ್ಲ... ಅವಳು ಮಾದು ಮುಗಿಸುವ ಮುನ್ನವೇ ಹೇಳಿದ.

"ನನ್ನ ಮನಸ್ಸೇಕೋ ಸರಿಯಿಲ್ಲ ನಿರ್ಮಲಾ. ನಾಳೆ ಸಿಗ್ತೀವಲ್ವ.. ಆಗ ಮಾತಾಡೋಣ. ಗುಡ್‌ನೈಟ್" ಎಂದು ಹೇಳಿ ಹೊರಟೇ ಬಿಟ್ಟ. ಬೇಗ ಬೇಗ ಅವನ ಹಿಂದೆ ಬರಲಾಗದಿದ್ದರೂ, ನಿರ್ಮಲ ಹೊರಗೆ ಬರುವ ಹೊತ್ತಿಗೆ ರಂಗನಾಥ

ಸ್ಕೂಟರನ್ನೇರಿಯಾಗಿತ್ತು. ಅವನ ವರ್ತನೆ ಮತ್ತು ವಿಚಿತ್ರವಾಗಿ ತೋರಿತ್ತು ಅವಳಿಗೆ.

ಭಾನುವಾರ ಕ್ಲಿನಿಕ್‌ಗೆ ರಜವಾದುದರಿಂದ, ನಿತ್ಯಕ್ಕಿಂತ ನಿಧಾನವಾಗಿ ಏಳುವ ಅಭ್ಯಾಸ. ತಿಂಡಿ ಕಾಫಿ ಮುಗಿಸಿ, ತಲೆಗೆ ಸ್ನಾನಮಾಡಿ, ಬಿಸಿಲಿನಲ್ಲಿ ಕೈ ತೋಟದಲ್ಲಿ ಸ್ವಲ್ಪ ಹೊತ್ತು ತಿರುಗಾಡುವ ಹವ್ಯಾಸ.

ರಂಗನಾಥ ಎಷ್ಟು ಹೊತ್ತಿಗೆ ಬಂದುಬಿಡುವನೋ ಎಂಬ ಆತಂಕದಿಂದ ದಿನದಂತೆ ಬೇಗನೇ ಎದ್ದಳು. ರಾತ್ರಿ ನಿದ್ದೆ ಬರುವವರೆಗೂ ಅವನದೇ ಯೋಚನೆ. ಅವನಾಡಿದ ಮಾತುಗಳೇ ಮತ್ತೆ ಮತ್ತೇ ಕಿವಿಯಲ್ಲಿ. ಮುದದಿಂದ ಮೆಲಕು ಹಾಕುತ್ತಿದ್ದವಳನ್ನು ನಿದ್ರಾದೇವಿ ಯಾವಾಗ ತಟ್ಟಿ ಮಲಗಿಸಿದಳೋ.. ಬೆಳಿಗ್ಗೆ ಎಚ್ಚರವಾದಾಗ ಮೊದಲಿಗೆ ನೆನಪಿಗೆ ಬಂದವನು ರಂಗನಾಥನೇ.

ಕಾಫಿ ಮುಗಿಸಿ, ಶಾಂಪೂ ಹಾಕಿ, ತಲೆ ತೊಳೆದು, ಸ್ನಾನಮಾಡಿ, ಎಳೆ ಬಿಸಿಲಿನಲ್ಲಿ ತಿರುಗಾಡುತ್ತಾ ತಲೆ ಕೂದಲನ್ನೂ ಒಣಗಿಸಿಕೊಂಡಳು. ಅಳ್ಳಕವಾಗಿ ಜಡೆ ಹೆಣೆದು ಕೊಂಡು, ಬೇರೆ ಸೀರೆ ಉಟ್ಟುಕೊಳ್ಳುವಷ್ಟರಲ್ಲಿ ಗೇಟು ಸದ್ದಾಗಿತ್ತು. ಯಾರಿರಬಹು ದೆಂದು ಕಿಟಕಿಯಿಂದ ಇಣುಕಿ ನೋಡಿದಳು. ಅವನೇ..ನಿತ್ಯಕ್ಕಿಂತ ನೀಟಾಗಿ ಡ್ರೆಸ್ ಮಾಡಿಕೊಂಡು ಬಂದೇ ಬಿಟ್ಟಿದ್ದ. ಒಂದು ಗಳಿಗೆ ಹೃದಯ ನಿಂತಂತಾಯಿತು. ತನಗಾಗಿ ಅವನು ಬಂದಿದಾನೆಂಬ ಅನಿಸಿಕೆಯಿಂದ ಮತ್ತೆ ಮತ್ತೆ ಅವನನ್ನು ನೋಡುವ ಆಸೆ ಆಯಿತು. ಆಚೀಚೆ ನೋಡುತ್ತಾ ಅನುಮಾನದಿಂದ ಗೇಟು ತೆಗೆಯುತ್ತಿರುವನನ್ನು ಕಂಡು ಲವಳಿಗೆ ಮುಜುಗರ ವಾಯಿತು. ತಾನು ಅಲ್ಲಿಂದ ಅವನಿಗೆ ಜೋರಾಗಿ ಏನನ್ನೂ ಹೇಳವಂತಿಲ್ಲ. ಬೇಗ ಬೇಗ ತಾನೇ ಹೋಗಿ ಅವನನ್ನು ಮಾತಾಡಿಸು ವಂತೆಯೂ ಇಲ್ಲ. ಇಷ್ಟು ಬೇಗ ಹೀಗೆ ಬರ್ತಾನೆ ಅಂತ ತಿಳೀಲಿಲ್ಲವಲ್ಲ ಎಂದು ಪರಿತಪಿಸಿದಳು.

ಆದರೆ ಏಕೋ ಏನೋ, ಗೇಟನ್ನು ತೆಗೆದರೂ, ಒಳಗೆ ಬರುವ ಸಾಹಸ ಮಾಡಲಿಲ್ಲ ಅವನು. ಅಷ್ಟರಲ್ಲಿ ಕೆಲಸದವಳು, ಹೊರಗೆ ಬಂದಳು. ಅವಳೊಡನೆ ಏನನೋ ಕೇಳಿದ. ಅವಳು ಏನು ಹೇಳಿದಳೋ ತಿಳಿಯಲಿಲ್ಲ. ಅವಳು ಸೀದಾ ನಿರ್ಮಲಳ ಬಳಿಗೇ ಬಂದಳು.

"ಡಾಕ್ಟ್ರಮ್ಮಾ....ನಿಮ್ಮನ್ನ ಯಾರೋ ನೋಡಬೇಕಂತೆ.ಇವತ್ತು ರಜಾ ಅಲ್ವಾ..? ಏನಂತ ಹೇಳಲಿ ಅವರಿಗೆ?" ಕೇಳಿದಳು.

"ಯಾರೋ ಅರ್ಜೆಂಟಿರಬೇಕು, ಕ್ಲಿನಿಕ್ ಬಾಗಿಲನ್ನು ತೆಗೆದು ಒಳಗೆ ಕೂತಿರುವಂತೆ ಹೇಳು. ಈಗ ಬಂದುಬಿಡ್ತೀನಿ ಎನ್ನುತ್ತಾ ಬೀಗದ ಕೈ ಗೊಂಚಲನ್ನು ಕೆಲಸದವಳಿಗೆ ಕೊಟ್ಟಳು.

ಸೀರೆ ನೆರಿಗೆಗಳನ್ನು ಸರಿಮಾಡಿಕೊಂಡು, ನವಿರಾಗಿ ಪೌಡರನ್ನು ಹಚ್ಚಿಕೊಂಡು ಸಣ್ಣದಾಗಿ ಹಣೆಯಲ್ಲಿ ಬೊಟ್ಟಿಟ್ಟುಕೊಂಡು ಸರಳವಾಗಿ ಅಲಂಕರಿಸಿ ಕೊಂಡು ಕನ್ನಡಿಯಲ್ಲಿ ಮತ್ತೊಮ್ಮೆ ತನ್ನನ್ನು ನೋಡಿಕೊಂಡು ಆಚೆ ಬಂದಳು.

ಹೊರಗೆ ಡೈನಿಂಗ್ ಟೇಬಲ್ ಮೇಲೆ ತಿಂಡಿ ರೆಡಿಯಾಗಿತ್ತು. ಏಕೋ ಏನೋ ಅವಳಿಗೆ ತಿಂಡಿ ತಿನ್ನ ಬೇಕೆನಿಸಲಿಲ್ಲ. ನಿಧಾನವಾಗಿ ನಡೆದು ಬರುವಾಗ ತನ್ನ ಕುಂಟು ತನದ ಬಗ್ಗೆ ರಂಗನಾಥನಿಗೆ ಅರಿವಿಲ್ಲವೇ ಎಂಬ ಅನುಮಾನವೂ ಉಂಟಾಯಿತು. ಗೊತ್ತಿಲ್ಲದೇ ಉಂಟೆ?.. ಗೊತ್ತಿದ್ದರೆ ಮತ್ತೊಮ್ಮೆ ಗೊತ್ತಾಗಲಿ ಎಂದು ತನಗೆ ತಾನೆ

ಹೇಳಿಕೊಂಡು ಧೈರ್ಯದಿಂದ ನಡೆದು ಬಂದಳು. ಕ್ಲಿನಿಕ್‌ನ ಹೊರಬಾಗಿಲಿನಲ್ಲಿ ನಿಂತು, ಅವಳ ಬರವನ್ನೇ ನಿರೀಕ್ಷಿಸುತ್ತಾ ಇದ್ದವನು. ಕಾಲೆಳೆಯುತ್ತಾ ನಡೆದು ಬರುತ್ತಿದ್ದವಳನ್ನು ಕಂಡು ಒಂದು ಗಳಿಗೆ ಮನಸ್ಸಿಗೆ ಮುಜುಗರವಾಯಿತು. ಅಷ್ಟೇ. ಅವಳ ಕಾಲುಗಳನ್ನು ನೋಡುತ್ತಿದ್ದರೆ, ಮನಸ್ಸು ಕೆಟ್ಟು ಹೋಗುತ್ತೆ, ಅವಳ ರೂಪ, ವಿದ್ಯೆ, ಐಶ್ವರ್ಯಗಳನ್ನು ನೋಡಿದರೆ ಮನಸ್ಸು ಅರಳುತ್ತದೆ ಎಂದು ತನ್ನಲ್ಲಿಯೇ ಅಂದುಕೊಂಡು ಅವಳೆಡೆ ನೋಡಿ ಮುಗುಳ್ನಕ್ಕು "ಹಲೋ ಮೇಡಂ, ಗುಡ್ ಮಾರ್ನಿಂಗ್" ಎಂದ.

"ಹಲೋ, ಎಷ್ಟು ಬೇಗ ಬಂದು ಬಿಟ್ಟಿದೀರಿ?" ಎಂದಳು ನಗುತ್ತಾ.

"ಬೇಗ ಹೊರಟರೆ ಬೇಗ ವಾಪಸು ಬರಬಹುದು" ಅಂತ.

"ಹಾಗಾದ್ರೆ ಎಲ್ಲಿಗೆ ಪ್ರೋಗ್ರಾಂ.. ತುಂಬಾ ದೂರಾನಾ?"

"ಲಾಲ್ ಬಾಗ್, ಕಬ್ಬನ್ ಪಾರ್ಕ್ ನಂದಿ ಹಿಲ್ಸ್, ಬನ್ನೆರು ಘಟ್ಟ, ಹೆಸರು ಘಟ್ಟ. ನೀವಿ ಯಾವುದು ಹೇಳಿದರೆ ಅದು."

"ನಿಜ ಹೇಳಬೇಕು ಅಂತಂದ್ರೆ ನಾನು ಎಲ್ಲಿಯೂ ಹೋಗಿಲ್ಲ. ಯಾವುದಾದ್ರೂ ಸರಿ." ಅವಳು ಪೆದ್ದುಮುಖ ಮಾಡಿದಳು.

"ಮಾರ್ನಿಂಗ್ ಷೋ ಪಿಕ್ಚರಿಗೆ ಹೋಗೋಣ ಬರ್ತೀರಾ?"

"ಹೇಳಿದ್ನಲ್ಲ ಯಾವುದಾದ್ರೂ ಸರಿ ಅಂತ.."

"ಈಗಿನ್ನು ಒಂಭತ್ತುವರೆ.. ಮೊದಲು ಹೋಗಿ ಟಿಕೆಟ್ ತಗೋಬೇಕು. ನಿಮಗೆಂತಹ ಪಿಕ್ಚರ್ ಇಷ್ಟ? ಹಾರರ್, ಸ್ಟೋರಿ..ಆಕ್ಷನ್? ಯಾವುದು ಇಷ್ಟ..?" ನಿರ್ಮಲ ಮುಗ್ಧಳಂತೆ ನಕ್ಕಳು.

"ಅಷ್ಟೊಂದು ಬಗೆಯ ಪಿಕ್ಚರ್ರುಗಳಿರುತ್ತವೆ ಅಂತ ನನಗೀಗಲೇ ತಿಳಿದದ್ದು. ನಿಮಗೆ ಯಾವುದು ಇಷ್ಟವೋ ಅದಕ್ಕೇ ಹೋಗೋಣ.."

"ಪ್ಲಾಜಾದಲ್ಲಿ ಒಂದು ಡಿಟೆಕ್ಟಿವ್ ಮೂವಿ ನಡೀತಿದೆ. ಅದಕ್ಕೇ ಹೋಗೋಣ."

"ವಾಪಸ್ಸು ಬರುವುದು ಎಷ್ಟು ಹೊತ್ತಾಗಬಹುದು?"

"ಯಾಕೆ ?ಆತುರ ಏನು? ಇನ್ನೂ ಹೊರಟೇ ಇಲ್ಲ ನಾವು"

"ನನ್ನದು ತಿಂಡೀ ಸಹ ಆಗಿಲ್ಲ. ಅದಕ್ಕೇ ಕೇಳಿದೆ..."

"ನಂಗೂ ಆಗಿಲ್ಲ. ಹೊರಗೇ ಎಲ್ಲಾದ್ರೂ ಹೋಟೆಲ್ಲಿನಲ್ಲಿ ತಿಂದ್ರಾಯ್ತು. ಏನಂತೀರಿ?"

"ಮನೇಲಿ ರೆಡಿಯಾಗಿದೆ. ಇಲ್ಲಿಗೇ ತರಿಸ್ತೀನಿ. ತಿಂದ್ರಾಯ್ತು ಅಲ್ವಾ?"

"ಪರ್ವಾಗಿಲ್ಲ ಮೇಡಂ ಇವತ್ತು ನೀವು ನನ್ನ ಗೆಸ್ಟ್ ಟ್ರೀಟ್ ನಂದು"

"ಓ.ಕೇ. ಮನೇಲಿ ಹೇಳಿ ಬರ್ತೀನಿ" ಎಂದು ಅವಳು ಮನೆಯೊಳಕ್ಕೆ ಹೋದಾಗ, ಇವನೂ ಎದ್ದು ಹೊರಬಂದು, ಗೇಟಿನಾಚೆ ಬಂದು ನಿಂತಿದ್ದ. ಅವಳು ಹತ್ತಿರ ಬರುವವರೆಗೂ ಅವಳೆಡೆಗೆ ತಿರುಗಿ ನೋಡಲಿಲ್ಲ. ಅವಳು ಬಂದು ನಿಂತು ಹೊರಡೋಣ್ವಾ? ಎಂದು ಕೇಳಿದಾಗ, ಇವನು ಹೂಂ ಎಂದು ಸ್ಕೂಟರ್ ಸ್ಟಾರ್ಟ್ ಮಾಡಿದ. ನಿರ್ಮಲ ಅನುಮಾನಿಸುತ್ತಾ ಸ್ಕೂಟರನ್ನೇರಿದಳು.

ಕಬ್ಬನ್ ಪಾರ್ಕಿನ ಹತ್ತಿರ ಬರುವ ಹೊತ್ತಿಗೆ ಏನನ್ನಿಸಿತೋ ಏನೋ ಇದ್ದಕ್ಕಿದ್ದಂತೆ ಸ್ಕೂಟರನ್ನು ನಿಲ್ಲಿಸಿದ. ನಿರ್ಮಲ ಇಳಿದಳು.

"ಸಾರಿ ಮೇಡಂ, ಬೇಜಾರೇನಿಲ್ಲ ತಾನೇ..? ನನ್ನದೊಂದು ತರಹ ವಿಚಿತ್ರ ಸ್ವಭಾವ. ನಿಮಗದರ ಅರಿವಾಗಿರಬಹುದು."

"ಬೇಜಾರೇನಿಲ್ಲ. ಆದರೆ ನಿಮ್ಮ ನಡೆವಳಿಕೆ ನನಗರ್ಥವಾಗಲಿಲ್ಲ. ಅದ್ಸರಿ. ನನ್ನನ್ನ ಕರೆಯಬೇಕು ಅಂತ. ನಿಮಗೆ ಹೇಗೆ ಅನ್ನಿಸ್ತು.?"

"ಅದೇನೋ ನನಗೆ ಗೊತ್ತಿಲ್ಲ. ನನ್ನ ನೋಟ್ಸ್‌ನ್ನು ಓದಿ ಮೆಚ್ಚುಗೆಯಿಂದ ಅಭಿನಂದಿಸಿದವರು ನೀವೊಬ್ಬರೆ.. ನಿಮ್ಮ ಬಗ್ಗೆ ನನಗೆ ಆದರ ಉಂಟಾಯಿತು. ನಿಮ್ಮನ್ನು ನನ್ನ ಸ್ನೇಹಿತೆಯನ್ನಾಗಿ ಮಾಡ್ಕೊಳ್ಬೇಕು ಅಂತ ಅನ್ನಿಸ್ತು. ನನ್ನ ಬಗ್ಗೆ ನಿಮ್ಮ ಅಭಿಪ್ರಾಯವೇನು?"

"ಅದನ್ನ ಈಗ ಕೇಳ್ತಿದೀರಲ್ಲ. ನೆನ್ನೇನೇ ಕೇಳಬಹುದಾಗಿತ್ತಲ್ಲ."

"ನೆನ್ನೇನೇ ಕೇಳಿದ್ರೆ ... ನೀವು ನನ್ನ ಜೊತೆ ಬರುವ ಅವಕಾಶ ತಪ್ಪಿ ಹೋಗ್ತಿತ್ತಲ್ಲ..."

"ಸಪೋಸ್ ..ನಾನು ಬರುಕ್ಕಾಗುಲ್ಲ ಅಂದಿದ್ರೆ ಏನು ಮಾಡ್ತೀದ್ರಿ?"

"ನನ್ನ ಹಣೇಬರಹಾನಾ ತೆಗಳಿಕೊಂಡು ಸುಮ್ಮನಾಗ್ತಿದ್ದೆ."

"ಯಾಕೆ ಅಷ್ಟು ಉದಾಸೀನವಾಗಿ ಹೇಳ್ತಿದೀರ?"

"ಯಾಕೆ ಅಂದ್ರೆ .. ಲೈಫ್‌ನಲ್ಲಿ ಇದುವರೆಗೂ ನಾನು ಎಂದೂ ಖುಷಿಯಾಗಿ ಇಲ್ಲ ಮಿಸ್ ನಿರ್ಮಲಾ. ಅದರಲ್ಲೂ ನಮ್ಮ ಅನೂರಾಧ ಹೋದಾಗಿನಿಂದ ನಾನು ಒಂಟಿಯಾಗಿಬಿಟ್ಟ ನನಗೊಂದು ತರಹ ವೈರಾಗ್ಯ ಅಂಟಿಬಿಟ್ಟಿದೆ.

ಯಾಕೆ? ನಿಮಗ್ಯಾರೂ ಸ್ನೇಹಿತರಿಲ್ಲವೇ

ನನ್ನ ಕಲೀಗ್ಸ್ ಅಷ್ಟೇ ನನ್ನ ಪರಿಚಯಸ್ಥರು. ಒಬ್ಬ ಹಳೇ ಸ್ನೇಹಿತನಿದ್ದಾನೆ. ಆದರೆ ಅವನು ಸಂಸಾರಸ್ಥ. ಆದ್ದರಿಂದ ನಾನು ಒಂಟಿಯೇ. ಈಗ ನೀವು ಹೊಸ ಸ್ನೇಹಿತರು. ನಿಜ ಹೇಳ್ತಿದೀನಿ ನಿರ್ಮಲಾ.. ನಿಮ್ಮನ್ನು ಕಂಡಾಗಿನಿಂದ, ನನ್ನ ಮನಸ್ಸಿನಲ್ಲಿ ಏನೇನೋ ಭಾವನೆಗಳು.. ನಿಮ್ಮನ್ನು ನೋಡ್ತಾನೇ ಇರಬೇಕು, ನಿಮ್ಮ ಹತ್ತಿರ ಮಾತಾಡ್ತಾನೇ ಇರಬೇಕು ಅಂತ ಅನ್ನಿಸುತ್ತೆ. ನಿಮಗೂ ಹಾಗೆ ಅನ್ನಿಸುತ್ತಾ?"ನೇರವಾಗಿ ತನಗೆ ಅನಿಸಿದ್ದನ್ನು ಆಡಿದ್ದ. ನಿರ್ಮಲ ಉತ್ತರಿಸದೇ ಸುಮ್ಮನಿದ್ದಳು. ಮುಖ ರಂಗೇರಿತ್ತು.

"ನನ್ನ ಮಾತಿನಿಂದ ಬೇಜಾರಾಗಿದ್ರೆ ಕ್ಷಮಿಸಿಬಿಡಿ. ಆದರೆ ನನ್ನನ್ನು ಅಪಾರ್ಥ ಮಾಡಿಕೋ ಬೇಡಿ."

"ಬನ್ನಿ ಹೋಗೋಣ. ಸಿನಿಮಾಕ್ಕೆ ಹೊತ್ತಾಗುತ್ತೆ."

"ನನ್ನ ಮಾತಿಗೆ ಇದು ಉತ್ತರವಲ್ಲ."

"ಉತ್ತರ ಹೇಳೋಕೆ, ಕೇಳೋಕೆ ಬೇಕಾದಷ್ಟು ಸಮಯವಿದೆ. ಇವತ್ತು ನನಗೆ ಸಿನಿಮಾ ತೋರಿಸ್ತೀನಿ ಅಂತ ಕರಕೊಂಡು ಬಂದಿದೀರಿ ಅಲ್ವಾ? "ಅವಳು ಮೆಲುವಾಗಿ ನಗುತ್ತಾ ನುಡಿದಾಗ ಅವನಿಗೆ ನಿರಾಳವಾಯಿತು.

ಕಬ್ಬನ್ ಪಾರ್ಕಿನ್ ಸಮೀಪದ ಹೋಟೆಲ್ಲೊಂದರಲ್ಲಿ ತಿಂಡಿ ತಿಂದು ಕಾಫಿ ಕುಡಿದು ಮುಗಿಸಿ, ಇಬ್ಬರೂ ಥಿಯೇಟರ್ ಕಡೆ ತಿರುಗಿದರು. ಸಿನಿಮಾ ಯಾವುದೋ ಹಳೆಯದು. ರಂಗನಾಥ ಈ ಹಿಂದೆಯೇ ನೋಡಿದ್ದ. ನಿರ್ಮಲಾ ಮಾತ್ರ ಆಸಕ್ತಿಯಿಂದ ಸಿನಿಮಾ

ನೋಡಿದಳು. ಅವನಿಗೆ ಮತ್ತೆ ಮಾತಾಡುವ ಅವಕಾಶ ಸಿಗಲಿಲ್ಲ. ಆದರೆ ಅವಳ ಬಗ್ಗೆಯೇ ಯೋಚಿಸುತ್ತಿದ್ದ.

ನಮ್ಮಿಬ್ಬರ ಸ್ನೇಹ ಇನ್ನು ಹೊಸದು. ನಾವಿಬ್ಬರೂ ಬೇಕಾದಷ್ಟು ಮಾತನಾಡಿದೀವಿ. ಆದರೆ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡಿಲ್ಲ. ನನ್ನ ಜೊತೆ ಬರುಕ್ಕೆ ಮೊದಲು ಅನುಮಾನಿಸಿದರೂ ಫ್ರೀಯಾಗಿ ಬಂದಿದಾಳೆ. ಹಳೇ ಸಂಪ್ರದಾಯದವಳೇನಲ್ಲ ಅಂತನ್ನಿಸುತ್ತೆ ಆದರೂ ನಾನು ಕರೆದಂತೆ. ಅನ್ನು ಯಾರು ಕರೆದರೂ ಹೀಗೇ ಹೋಗುತ್ತಾಳೇನೋ.. ಕ್ಲಿನಿಕ್‌ಗೆ ಎಷ್ಟೋ ಜನ ಗಂಡಸರು ಬರುತ್ತಿರುತ್ತಾರೆ. ಎಷ್ಟು ಜನರ ಪರಿಚಯವಿದೆಯೋ, ಅದನ್ನು ತಿಳಿದು ಕೊಳ್ಳುವುದು ಹೇಗೆ ? ಚಿಂತಿಸುತ್ತಿದ್ದ.

ಸಿನಿಮಾ ಮುಗಿಯಿತು. ಇಬ್ಬರೂ ಆಚೆಗೆ ಬಂದರು. ಅವಳ ನಡಿಗೆಗೆ ತಕ್ಕಂತೆ ಹೆಜ್ಜೆ ಹಾಕಿದ ರಂಗನಾಥ ಕೇಳಿದ.

'' ಸಿನಿಮಾ ಹೇಗನ್ನಿಸ್ತು?"

"ಸರಿಯಾಗಿ ಅರ್ಥವಾಗಲಿಲ್ಲ. ಆದರೂ ಚೆನ್ನಾಗಿತ್ತು.."

"ನೀವು ಹೆಚ್ಚಿಗೆ ಸಿನಿಮಾ ನೋಡುಲ್ಲ ಅಂತ ಅನ್ನಿಸುತ್ತೆ ಅಲ್ವಾ?"

"ಹೆಚ್ಚಿಗೆ ಇಲ್ಲವೆ ಇಲ್ಲ ಎನ್ನಬಹುದು. ನಾನು ಯಾರ ಜೊತೆ ಹೊರಗೆ ಹೋಗಬೇಕು ನಾವಾಯಿತು ನಮ್ಮ ಕ್ಲಿನಿಕ್ ಆಯಿತು."

"ಅದ್ಯಾಕೆ ಹೀಗೆ"

"ಯಾಕೆಂದ್ರೆ ನಾನು ಬೆಳೆದಿರುವುದೇ ಹೀಗೆ. ನನ್ನನ್ನು ಬೆಳೆಸಿರುವುದೇ ಹೀಗಿರುವುದಕ್ಕಾಗಿ," ವ್ಯಂಗ್ಯದಿಂದ ಕೂಡಿತ್ತು ಮಾತು.

"ಯಾಕೆ? ನಿಮಗೆ ಯಾರ ಕಂಪೇನಿಯೂ ಇಷ್ಟವಾಗುಲ್ವಾ?"

"ನನಗೆ ಯಾರ ಕಂಪೆನಿಯೂ ಇಲ್ಲವಲ್ಲ.. ಈಗ ನೀವು ನಂಬ್ತೀರೋ ಇಲ್ಲವೋ..ನೀವೇ ನೀವೇ ನನ್ನ ಮೊದಲ ಸ್ನೇಹಿತರು. ಎಸ್.. ನಿಜವಾಗಿಯೂ ತಂದೆತಾಯಿ, ತಮ್ಮ ತಂಗಿ ಇದ್ದೂ ನಾನು ತುಂಬಾ ಒಂಟಿ. ಕ್ಲಿನಿಕ್‌ನಲ್ಲಿ ಅಷ್ಟು ಜನ ಬಂದರೂ ನಾನು ಒಬ್ಬಳೇ..."

"ನಿಮಗೆ ಬಿಡುವೇ ಆಗುಲ್ವಾ?"

"ಬಿಡುವು ಮಾಡಿಕೊಂಡು, ಸ್ನೇಹಿತರು, ಅವರೂ ಇವರೂ ಅಂತ, ಜೊತೆ ಜೊತೆ ತಿರುಗುವ ಪ್ರಮೇಯವೇ ಬಂದಿರಲಿಲ್ಲ ನನಗೆ, ಅಲ್ಲದೇ ನನ್ನ ಸ್ನೇಹ ಬಯಸಿಯಾರೂ ಬಂದಿರಲಿಲ್ಲ."

ರಂಗನಾಥ ಪ್ರಶ್ನಾರ್ಥಕವಾಗಿ ಅವಳೆಡೆ ನೋಡಿದ. ಅವಳು ಹೇಳುತ್ತಲೇ ಇದ್ದಳು.

"ನೀವೊಬ್ಬರೇ ನನ್ನ ಸ್ನೇಹಿತರು. ನಿಮ್ಮ ಸ್ನೇಹವನ್ನು ನಾನಾಗಿಯೇ ಬಯಸಿದೆ. ನಾನು. ನೀವು ಕರೆದದ್ದಕ್ಕೆ, ನಿಮ್ಮ ಜೊತೆ ಬಂದಾಗಲೇ ನಿಮಗದು ಅರ್ಥವಾಗಿರಬೇಕಲ್ಲ. ನನ್ನ ಒಂಟಿತನವನ್ನು ನೀಗಿಕೊಳ್ಳಲು ನಾನಾಗಿಯೇ ನಿಮ್ಮ ಸ್ನೇಹವನ್ನು ಬಯಸಿದೆ...ಬೆಳೆಸಿದೆ."

ರಂಗನಾಥನಿಗೆ ನಗುಬಂತು. ನನ್ನ ಕೇಸೇ... ನಾನು ಇವಳ ಸ್ನೇಹ ಬಯಸಿದೆ, ಇವಳು ನನ್ನ ಸ್ನೇಹ ಬಯಸಿದ್ದಾಳೆ. ಆದರೆ ಇದುವರೆಗೂ ತಾನು ಅದನ್ನು ತಿಳಿಸುವುದು ಹೇಗೆಂದು ಚಿಂತಿಸುತ್ತಿದ್ದೆ? ಈಗ ಅವಳೇ ಮೊದಲು ಹೇಳಿ ಸಲೀಸು ಮಾಡಿದ್ದಾಳೆ.

ಅವನಿಗೆ ಅವಳ ಬಗ್ಗೆ ಕನಿಕರವೆನಿಸಿತು, ಹೇಳಿದ.

"ಒಂದು ತಮಾಷೆ ಗೊತ್ತಾ ನಿರ್ಮಲಾ, ನಾನು ಇದೇ ವಿಚಾರಾನ ನಿಮ್ಮ ಹತ್ತಿರ ಮಾತಾಡಬೇಕು ಅಂತ ಅಂದ್ಕೊಂಡಿದ್ದೆ. ಆದರೆ ಏಕೋ ಏನೋ ಇದುವರೆಗೂ ಹೇಳಲು ಆಗಿರಲೇ ಇಲ್ಲ. ಕ್ಲಿನಿಕ್‌ನಲ್ಲಿ, ನಿಮ್ಮ ಮನೆಯಲ್ಲಿ ಮಾತಾಡುವುದು ಸುಲಭ ಅಂತ ಅನ್ನಿಸಲಿಲ್ಲ ಅದಕ್ಕೇ ಥಿಯೇಟರಿಗೆ ಕರೆತಂದೆ. ಆದರೆ ನೀವು ಆಸಕ್ತಿಯಿಂದ ಸಿನಿಮಾ ನೋಡುತ್ತಿದ್ದುದನ್ನು ಕಂಡು ಸುಮ್ಮನಾದೆ. ಎಷ್ಟಾಗಲಿ ನೀವು ಡಾಕ್ಟ್ರು ಧೈರ್ಯವಂತರು, ನೀವು ಸುಲಭವಾಗಿ ನಿಮ್ಮ ಮಾತುಗಳನ್ನಾಡಿದಿರಿ." ಅವಳನ್ನು ಹೊಗಳಿದ.

"ಹ್ಞಾಂ, ಹ್ಞಾಂ, ನನಗಿಂತ ಮಾತಿನಲ್ಲಿ ನೀವು ಜಾಣರು. ಪಾಠ ಹೇಳುವ ಮೇಷ್ಟರು, ನಿಮಗೇನು ಕಷ್ಟ ಮಾತಾಡುಕ್ಕೆ?"ನಕ್ಕಳು.

"ಕ್ಲಾಸಿನಲ್ಲಿ ಮಾಡುವ ಪಾಠ ಬೇರೆ, ನಿಮ್ಮ ಹತ್ತಿರ ಆಡುವ ಮಾತು ಬೇರೆ. ನಿಮಗೇ ಗೊತ್ತು ನನಗೆ ದುಡುಕು ಜಾಸ್ತಿ."

"ಹೌದು ಹೌದು, ಏನೋ ಹೇಳುಕ್ಕೆ ಹೋಗಿ, ಏನೂ ಹೇಳದೇ ದುಡುದುಡು ಎದ್ದು ಹೋಗ್ತಿದ್ರೆನೋ..?" ಇಬ್ಬರೂ ಸಶಬ್ದವಾಗಿ ನಕ್ಕರು.

"ಒಂದ್ಮಾತು. ನೀವು ಏನು ತಿಳಿದುಕೊಂಡಿರೋ ಏನೋ...? ಧೈರ್ಯವಂತ ಡಾಕ್ಟ್ರು ನಾನು, ಆದರೂ ಒಬ್ಬ ಹೆಣ್ಣೇ.. ಹೊಸದಾಗಿ ಪರಿಚಯದ ಸ್ನೇಹಿತರು ನೀವು. ನಿಮ್ಮ ಜೊತೆ ಬಂದಿದೀನಲ್ಲ."

"ತಕ್ಷಣ ಎಲ್ಲಿ ಒಪ್ಪಿದ್ರಿ? ಎಷ್ಟು ಅನುಮಾನಿಸಿದ್ರಿ? ನನಗೆ ರೇಗಿ ಹೋಗಿತ್ತು. ನನ್ನ ಮೇಲೆ ನಂಬಿಕೆ ಇಲ್ವಾ ಅಂತ..?"

"ನೋಡಿದ್ರಾ.. ಅದೇ.. ರೇಗಿ ಎಕ್ಸೈಟ್ ಆಗಿ ಹೊರಟುಹೋಗ್ತೀರಲ್ಲ ಅಂತ ಬರೋಕೆ ಒಪ್ಪಿಕೊಂಡೆ...."

"ನಿಜವಾಗಿಯೂ..?"

"ನಿಜವಾಗಿಯೂ.. ಯಾಕೋ ಏನೋ, ನೀವೊಬ್ಬರೇ ನನ್ನ ಆಪ್ತರು ಅಂತನ್ನಿಸ್ತು. ನಮ್ಮ ತಂದೆಯ ಹೊರತೂ, ಇನ್ಯಾರ ಜೊತೆಯೂ ನಾನೆಂದೂ ತಿರುಗಾಡಿರಲಿಲ್ಲ. ನನ್ನನ್ನ ಕ್ಲಿನಿಕ್‌ನಿಂದಾಚೆಗೆ ಕರೆತಂದುದಕ್ಕೆ ನಿಮಗೆ ಥ್ಯಾಂಕ್ಸ್ ಹೇಳಬೇಕು."

ಅವಳ ಮಾತಿನಿಂದ ರಂಗನಾಥ ಉಬ್ಬಿ ಹೋಗಿದ್ದ ಆದರೂ ಪೆಚ್ಚುನಗೆ ನಗುತ್ತಾ ಹೇಳಿದ.

ತುಂಬಾ ಸಂತೋಷ ನಿರ್ಮಲಾರವರೇ.,. ನನ್ನನ್ನು ನಿಮ್ಮ ಆಪ್ತ ಸ್ನೇಹಿತ ಅಂತ ಪರಿಗಣಿಸಿ, ನನ್ನ ವ್ಯಕ್ತಿತ್ವವನ್ನು ಹೆಚ್ಚಿಸಿದೀರಿ. ಆಗಲಿ ನನ್ನ ಬಿಡುವಿನ ಸಮಯದಲ್ಲಿ ಬಂದು, ನಿಮ್ಮನ್ನು ಕ್ಲಿನಿಕ್ ಎಂಬ ಕೂಪದಿಂದ ಹೊರ ಕರೆತಂದು, ಹೊರಗಿನ ಪ್ರಪಂಚವನ್ನು ತೋರಿಸ್ತೀನಿ."

ಅವನ ಮಾತಿಗೆ ಮುಗುಳ್ನಕ್ಕು ನುಡಿದಳು. ಈಗ ಕ್ಲಿನಿಕ್ ಬಳಿ ಇರುವ ನಮ್ಮ ಮನೆಗೆ ಕರೆದು ಕೊಂಡು ಹೋಗ್ತೀರಾ?"

ಇಬ್ಬರೂ ಹೊರಟರು. ಅವಳ ಮನೆಯ ಹತ್ತಿರ ಸ್ಕೂಟರ್ ನಿಲ್ಲಿಸಿ ಕೇಳಿದ ಮುಂದಿನ ಭಾನುವಾರ ನಂದಿ ಹಿಲ್ಸ್‌ಗೆ ಕರೆದು ಕೊಂಡು ಹೋಗ್ತೀನಿ ಬರ್ತೀರಾ?"

"ನೋಡೋಣ,ಇನ್ನೂ ಒಂದು ವಾರ ಟೈಂ ಇದೆಯಲ್ಲಾ.. ಈಗಲೇ ಹೇಗೆ

ಹೇಳೋದು?

"ನೋಡಿದ್ರಾ..ಮನೆಗೆ ಬಂದ ತಕ್ಷಣ ಮಾತು ಬದಲಾಯಿಸ್ತಿದೀರಲ್ಲ..?"

"ಇಲ್ಲಾ..ಮಿಸ್ಟರ್..ಸರಿ, ಅದಕ್ಕೆ ಮುಂಚೆ ಎಂದೂ ಬರುಲ್ವಾ ಹಾಗಾದ್ರೆ..?"

"ನಾನು ದಿನಾ ಬಂದ್ರೆ ನಿಮಗೆ ಬೇಜಾರೇನಿಲ್ಲ ತಾನೇ.. ನಾನು ದಿನಕ್ಕೆ ಎರಡು ಸಾರಿ ಬೇಕಾದ್ರೂ ಬರ್ತೀನಿ?" ನಗುತ್ತಾ ಹೇಳಿದ.

"ಓ. ಕೆ. ಬನ್ನಿ.. ಆಗ ನಮ್ಮ ಕಾಂಪೌಂಡರ್‌ಗೆ ಚೆಕ್" ಎಂದಳು. ಇಬ್ಬರೂ ಅರ್ಥವಿಲ್ಲದ ನಗೆ ನಕ್ಕರು. ಒಂದು ಗಳಿಗೆ ಸುಮ್ಮನೆ ನಿಂತಿದ್ದು ಅವನು, "ಇನ್ನು ಬರ್ತೀನಿ ನಮ್ಮ ತಾಯಿ ಕಾಯ್ತಿರ್‍ತಾರೆ," ಎಂದ.

ಅವಳು "ಹೂಂ" ಎಂದು ತಲೆ ಆಡಿಸಿದಳು. ಅವನು ಮನೆಕಡೆ ತಿರುಗಿದಾಗ ತನ್ನಲ್ಲೇ ಅಂದುಕೊಂಡ. ಮನೆಗೆ ಬನ್ನಿ... ಊಟ ಮಾಡ್ಕೊಂಡು ಹೋಗಿ ಅಂತ ಉಪಚಾರಕ್ಕೂ ಹೇಳಲಿಲ್ಲವಲ್ಲ ಎಂದುಕೊಂಡ.

ಬಟ್ಟೆ ಬದಲಾಯಿಸುವಾಗ, ಪರ್ಸು ತೆಗೆದು ನೋಡಿದ. ಇನ್ನು ಸಾಕಷ್ಟು ಹಣವಿತ್ತು. ಸಾಯಂಕಾಲ ತಾಯಿಗೆ ಒಂದಿಷ್ಟು ಹಣ್ಣುಗಳನ್ನು ಮನೋಜನಿಗೆ ಒಂದಿಷ್ಟು ಬಿಸ್ಕತ್ತು ತಂದುಕೊಡಬೇಕೆಂದುಕೊಂಡ.

"ಭಾನುವಾರ ಕೂಡಾ, ಇಷ್ಟು ಹೊತ್ತು ಎಲ್ಲಿ ಹೋಗಿದ್ಯೋ?" ತಾಯಿ ಕೇಳಿದಾಗ ನೀರಸವಾಗಿ ಹೇಳಿದ.

"ನಾನು ನನ್ನ ಫ್ರೆಂಡ್ ಪಿಕ್ಚರಿಗೆ ಹೋಗಿದ್ವವೆಮ್ಮಾ"

"ಊಟ ಮಾಡೂವಂತೆ ಏಳು ಮಧ್ಯಾಹ್ನ ಒಂದು ಗಳಿಗೆ ಇವತ್ತಾದರೂ ರೆಸ್ಟ್ ತಗೋ."

"ರೆಸ್ಟೂ ತಗೋಳ್ಳುವಷ್ಟು ಒಂದೇ ಸಮ ನನಗೇನು ಕೆಲಸ ಇರುತ್ತಮ್ಮ ದಿನಕ್ಕೆ ನಾಲ್ಕು ಪಿರಿಯಡ್ ಪಾಠ ಹೇಳ್ತೀನಿ. ಅಷ್ಟೇ. ಉಳಿದ ಸಮಯವೆಲ್ಲಾ ರೆಸ್ಟ್ ತಾನೇ..."

"ಮನೇಲಿ ನಿನಗೆ ಎಷ್ಟು ರೆಸ್ಟು ಸಿಗುತ್ತೆ ಅಂತ ನನಗೆ ತಿಳೀದೇ? ನೀನು ಇಷ್ಟಾದರೂ ಮಾಡದಿದ್ದರೆ ಮನೆ ಕೆಲಸ ಮನೋಜನ್ನ ನೋಡಿಕೊಳ್ಳುವುದು, ಇದೆಲ್ಲಾ ನನ್ನ ಒಬ್ಬಳ ಕೈಯಲ್ಲಿ ಆಗ್ತಿತ್ತೇನಪ್ಪಾ?"

"ಒಂದ್ವೇಳೆ ಆಗದಿದ್ದರೆ ಏನು ಮಾಡ್ತಿದ್ದೆ?"ತಮಾಷೆಯಾಗಿ ಕೇಳಿದ.

"ಏನೋಪ್ಪ ನಂಗೊತ್ತಿಲ್ಲ" ತಾಯಿ ಮಾತು ಮುಗಿಸಿದಳು. ಅವನಿಗೆ ನಿರಾಸೆಯಾಗಿತ್ತು. ತಾಯಿ ಎಂದೂ, ಮರೆತು ಕೂಡಾ ಕಾಣದ ಸೊಸೆಯ ಬಗ್ಗೆ ಮಾತಾಡುವುದಿಲ್ಲವೆನ್ನುವುನ್ನು ಗಮನಿಸಿದ್ದ. ವಿನಾಕಾರಣ ಅಮ್ಮನಿಗೆ ಹೆದರಿಕೆಯೇ? ಸೊಸೆ ಬಂದರೆ ಸರಿಹೋಗುವುದಿಲ್ಲವೆಂಬ ಅನುಮಾನವೇ? ಅವನಿಗೆ ಹೊಳೆಯಲಿಲ್ಲ.

ಮಂಚದಮೇಲೆ ಉರುಳಿಕೊಂಡ. ನಿದ್ದೆ ಬರುವಂತೆ ಕಾಣಲಿಲ್ಲ. ಈಚೀಚೆಗೆ ನಿರ್ಮಲೆಯ ಭೇಟಿಯಾದ ಮೊದಲದಿನದಿಂದ ಹಿಡಿದು,ಈ ದಿನ ಅವಳನ್ನು ಮನೆ ತಲುಪಿಸುವವರೆಗೂ, ಎಲ್ಲವನ್ನು ನೆನೆಪಿಸಿಕೊಂಡ.

ಮಧ್ಯೆ ಮಧ್ಯೆ ಅವನಿಗೇ ಅಚ್ಚರಿಯಾಗುತ್ತಿತ್ತು. ಇದುವರೆಗೂ ಯಾವ ಹೆಣ್ಣಿನ ಸ್ನೇಹವನ್ನೂ ಬಯಸದ ತಾನು ನಿರ್ಮಲೆಗೆ ಹೇಗೆ ಸೋತೆ? ಅವಳು ರೂಪವಂತೆ ಎಂದೇ? ವಿದ್ಯಾವಂತೆ ಎಂದೇ? ಅಥವಾ ಹಣವಂತೆ ಎಂದೇ.. ಆದರೆ .. ಅವಳು

ರೂಪವತಿ ಆದರೇನು? ತಾನು ಏನು ಕುರೂಪಿ ಅಲ್ಲವಲ್ಲ. ನಾನೂ ರೂಪವಂತನೇ..ನಾನೂ ವಿದ್ಯಾವಂತನೇ.. ಕಷ್ಟಪಟ್ಟು ಎಂ.ಎ. ಮಾಡಿ. ಕಾಲೇಜಿನಲ್ಲಿ ಲೆಕ್ಚರರ್ ಆಗಿಲ್ಲವೇ..? ನನಗಿಂತ ಹೆಚ್ಚಿನ ಹಣ ಅವಳು ಸಂಪಾದನೆ ಮಾಡಬಹುದು. ಆದರೆ ಹಣವಂತೆ ಎಂಬ ಜಂಭ ಇರುವಂತೆ ಅನ್ನಿಸುತ್ತಿಲ್ಲ. ಒಳ್ಳೆಯವಳಂತೆ ಕಾಣುತ್ತಾಳೆ. ನನ್ನ ಸ್ನೇಹ ಅವಳಿಗೆ ಇಷ್ಟವಾಗಿದೆ. ಆದರೆ ಬರೀ ಸ್ನೇಹಿತೆಯಾಗಿಯೇ ಇದ್ದರೆ ಏನು ಚೆನ್ನ? ಅವಳ ಮನಸ್ಸಿನಲ್ಲಿ ಏನಿದೆಯೋ ನಾನಾಗಿಯೇ ಕೇಳಬೇಕೇನೋ. ಈಗಲೇ ಕೇಳುವುದು ಬೇಡ. ನಮ್ಮಿಬ್ಬರ ಸ್ನೇಹ ಸದ್ಯಕ್ಕೆ ಹೀಗೇ ಇರಲಿ. ಆಗಾಗ್ಗೆ ಅವಳನ್ನೂ ಹೊರಗೆ ತಿರುಗಾಡಿಸುತ್ತಾ ಅವಳ ಒಲವನ್ನು ಸಂಪಾದಿಸಬೇಕು. ಪಾಪ.. ಅವಳೂ ನನ್ನ ಹಾಗೇ ಒಂಟಿ. ಎಲ್ಲೂ ಹೋಗಿಲ್ಲವಂತೆ ನಂದಿ ಬೆಟ್ಟಕ್ಕೆ ಅವಳನ್ನು ಕರೆದುಕೊಂಡು ಹೋಗಲೇಬೇಕು. ಊರಾಚೆಯ ಆ ಪಿಕ್‌ನಿಕ್ ಸ್ಥಳದಲ್ಲಿ ಅವಳು ಸಂತೋಷಪದಿಂದ ಮುಖ ಅರಳಿಸುವುದನ್ನು ನಾನು ನೋಡಬೇಕು.

ಈ ತರಹದ ಆಲೋಚನೆಗಳು ಈಚೀಚೆಗೆ ಜಾಸ್ತಿಯಾಗಿವೆ. ನಿರ್ಮಲಳನ್ನು ಕಾಣುವ ಮೊದಲು ನೆಮ್ಮದಿಯಿಂದಿದ್ದೆ ಅಂತ ಅನ್ನಿಸುತ್ತೆ. ಕಾಲೇಜಿನಲ್ಲಾಗಲೀ, ಹೊರಗೆಲ್ಲಿಯಾದರೂ ಒಂದು ದಿನವೂ ನನಗೆ ಯಾವ ಹೆಂಗಸರ ಬಗ್ಗೆ ಏನೂ ಅನ್ನಿಸಲಿಲ್ಲ. ಈಗೇಕೆ ಹೀಗೆ? ಅವಳು ಕುಂಟಿಯೆಂದು ನನಗೆ ಅನುಕಂಪವೇ? ರೂಪವತಿ ಎಂಬ ಮೆಚ್ಚುಗೆಯೇ? ಡಾಕ್ಟರೆಂಬ ಗೌರವವೇ ಅಥವಾ ಅವಳೂ ನನ್ನಂತೆ ಒಂಟಿ ಎಂಬ ಸಮಾನತೆಯ ಭಾವನೆಯೇ?

ಈಗನಾನೇನು ಚಿಕ್ಕವನಲ್ಲ. ಮದುವೆಯ ವಯಸ್ಸು ಮೀರಿ ಹೋಗಿರುವ ವರ ನಾನು. ಮದುವೆಯಾಗುವ ವಯಸ್ಸಿನಲ್ಲಿ ನನಗೆ ಆ ಆಸೆ ಬರಲಿಲ್ಲ. ಅಮ್ಮನೂ ಎಂದೂ ಕೇಳಲಿಲ್ಲ. ಈಗ ಈ ವಯಸ್ಸಿನಲ್ಲಿ, ನಿರ್ಮಲೆಯನ್ನು ಕಂಡಾಗಿನಿಂದ ನನಗೊಬ್ಬಳು ಸಂಗಾತಿ ಬೇಕೆಂಬ ಆಸೆ ಆಗ್ತಿದೆ. ಮದುವೆಯಾಗುವ ಬಯಕೆ ಮೂಡಿದೆ. ನಮ್ಮ ಮನೆಯ ಪರಿಸ್ಥಿತಿಗಳನ್ನು ತಿಳಿಸಿದರೆ ಅರ್ಥಮಾಡಿಕೊಳ್ಳ ಬಹುದೆಂಬ ನಂಬಿಕೆ ನನಗಿದೆ. ಅಡ್ರಸ್ಟ್ ಮಾಡಿಕೊಂಡು ಇರಬಹುದೆಂಬ ನಂಬಿಕೆ ಇದೆ. ಆದರೆ ಒಂದು ವೇಳೆ ಅವಳು ನನ್ನನ್ನು ಮದುವೆ ಯಾಗಲು ಒಪ್ಪದಿದ್ದರೇ ಅಥವಾ ಅಮ್ಮ ಅವಳನ್ನು ಸೊಸೆಯೆಂದು ಒಪ್ಪಿಕೊಳ್ಳ ದಿದ್ದರೇ.. ಆಗ ಏನು ಮಾಡುವುದು ಎಂಬ ಪ್ರಶ್ನೆಗೆ ಉತ್ತರ ಸಿಗದೇ ಹೊರಳಾಡಿದ.

ಶನಿವಾರ ಕಾಲೇಜಿಗೆ ಹೋಗುವ ಮೊದಲು, ಒಂದು ಅಂಗಡಿಯಿಂದ ಅವಳ ಕ್ಲಿನಿಕ್‌ಗೆ ಫೋನು ಮಾಡಿದ. ಫೋನ್ ರಿಸೀವ್ ಮಾಡಿದ ಕಾಂಪೌಂಡರ್‌ಗೆ ಡಾಕ್ಟರನ್ನು ಕರೆಯುವಂತೆ ಹೇಳಿದ. ಲೈನಿನಲ್ಲಿ ನಿರ್ಮಲಾ ಬಂದಾಗ, ಅವಳ ಧ್ವನಿಯನ್ನು ಕೇಳಿದೊಡನೆ ಅವಳ ಎದುರಿಗೇ ನಿಂತು ಮಾತನಾಡುವ ಆಸೆಯಾಯಿತು. "ಹಲೋ.. ನಿರ್ಮಲಾ ನಾನು ರಂಗನಾಥ, ನಾಳೆ ದಿನದ ಪ್ರೋಗ್ರಾಂ ಜ್ಞಾಪಕ ಇದೇ ತಾನೇ. ಎಂಟು ಗಂಟೆಯ ಹೊತ್ತಿಗೆ ಬರ್ತೀನಿ ರೆಡಿಯಾಗಿರಿ.."ಎಂದು ಹೇಳಿ ಅವಳ ಉತ್ತರಕ್ಕೆ ಕಾಯದೇ. ರಿಸೀವರ್ ಇಟ್ಟುಬಿಟ್ಟ. ಅಲ್ಲಿಗೆ ಎಲ್ಲಾ ತಾನೇ ಹೇಳಿಯಾಗಿತ್ತು.

ಆಮೇಲೆ ಅನ್ನಿಸಿತ್ತು. ಏನಂದುಕೊಂಡಳೋ ಏನೋ ಎದುರಿಗೇ ಕೂತು ಮಾತಾಡಿದ್ದರೆ ಚೆನ್ನಾಗಿತ್ತೇನೋ.. ಆದರೆ ಪದೇ ಪದೇ ಸುಮ್ಮನೇ ಕ್ಲಿನಿಕ್‌ಗೆ ಹೋಗಿ

ಕೂತು ಮಾತಾಡುವುದಕ್ಕೆ ಏನಿರುತ್ತೆ? ಅವಳೇ ಸಮಯ ಸಿಕ್ಕಾಗ ಬರುವಂತಿದ್ದರೇ ಬೆಳಿಗ್ಗೆ ಸಾಯಂಕಾಲ ಅವಳಿಗೆ ಕ್ಲಿನಿಕ್..ಮಧ್ಯಾಹ್ನ ನನಗೆ ಕಾಲೇಜು..ನಾನೇ ಹೋದರೆ, ಸಂತೋಷವಾಗುತ್ತೆ ಅವಳಿಗೆ ಅಂತೇನೋ ಅನ್ನಿಸುತ್ತೆ. ಆದರೆ.. ಈ ಎರಡು ತಿಂಗಳಿನಲ್ಲಿ ನಾನು ಅವಳ ಕ್ಲಿನಿಕ್‌ಗೆ ಹೋಗಿರುವುದೇ ಮೊದಮೊದಲು ಮನೋಜ ನಿಗಾಗಿ, ಆ ನೆಪದಲ್ಲಿ. ಇಷ್ಟಕ್ಕೆ ನಮ್ಮಿಬ್ಬರ ಸ್ನೇಹ ಬೆಳೆಯಿತು. ನಾನೇನೋ ಈ ಊರುಗೆ ಹೊಸಬ. ಅವಳು ಎಷ್ಟೋ ವರ್ಷದಿಂದ ಇಲ್ಲಿದ್ದಾಳೆ. ಅವಳಿಗೆ ಯಾರೂ ಸ್ನೇಹಿತರಿಲ್ಲ ಅಂತಂದರೇ ಮದುವೆಯೂ ಆಗಿಲ್ಲ. ಒಬ್ಬಳೇ ಹೇಗಿದಾಳೋ? ಚಿಕ್ಕವಳಂತೆ ಕಂಡು ಬಂದರೂ, ನನ್ನಷ್ಟೇ ವಯಸ್ಸಾಗಿರಬಹುದು ಅಂತನ್ನಿಸುತ್ತೆ ಹಾಗೆಂದ ಮಾತ್ರಕ್ಕೆ ಅವಳು ಹೆಚ್ಚು ಅಂತನ್ನಿಸುತ್ತೆ. ಆದರೆ ಒಂದೇ ಒಂದು ಊನ. ಆ ಊನ ಅವಳನ್ನು ಕಮ್ಮಿ ಮಾಡಿಬಿಟ್ಟಿದೆ. ಅದು ಸರಿ.. ನನ್ನಲ್ಲಿ ಏನು ಕಂಡು ನನ್ನ ಸ್ನೇಹ ಬಯಸಿದಳು? ನಾನು ಅವಳಿಂದ ಆಕರ್ಷಿತನಾದೆ, ಎನ್ನುವುದು ಅವಳಿಗೆ ತಿಳಿಯಿತೇ? ತಿಳಿದಿರಬಹುದೇನೋ..ಎಷ್ಟೇ ಆಗಲಿ ಡಾಕ್ಟರು ಮನಶ್ಶಾಸ್ತ್ರನೂ ಓದಿರ್ತಾರೆ. ಏನೇ ಆಗಲಿ, ನಾಳೆ ಎಲ್ಲಾ ಕೇಳಿ ಬಿಡಬೇಕು. ಬರೀ ಸ್ನೇಹಾನೋ.. ಪ್ರೀತಿಯೂ ಇದೆಯೋ. ಅಂತ ಪ್ರೀತಿಸುವುದಾದರೆ ಮದುವೇನೂ ಆಗ್ತೀಯ ಅಂತ ಕೇಳಿ ಬಿಡಬೇಕು.. ಕಾಲೇಜಿನ ಸ್ಟಾಫ್ ರೂಮಿನಲ್ಲೂ ಕುಳಿತು ಇದೇ ವಿಚಾರಗಳನ್ನೂ ಚಿಂತಿಸಿದ.

ಬೇಗನೇ ಕ್ಲಾಸುಗಳು ಮುಗಿದುದರಿಂದ ಮನೆಗೂ ಬೇಗ ಬಂದ. ತಾಯಿಗೆ ಮನೆ ಕೆಲಸದಲ್ಲಿ ಒಂದಿಷ್ಟು ಸಹಾಯ ಮಾಡಿದ. ಭಾನುವಾರ ಮಾಡಬೇಕಾಗಿದ್ದ ಒಂದಿಷ್ಟು ಕೆಲಸಗಳನ್ನೂ ಆಕಲೇ ಮುಂಚಿತವಾಗಿ ಮಾಡಿ ಮುಗಿಸಿದ. ಮನೋಜನನ್ನೂ ರೆಡಿ ಮಾಡಿ ಸಾಯಂಕಾಲ ಪಾರ್ಕಿಗೆ ಕರೆದುಕೊಡು ಹೋಗಿ ಸುತ್ತಾಡಿಸಿದ.

ಈಚೀಚೆಗೆ ಮಗ, ಹೆಚ್ಚು ಹೆಚ್ಚು ಅನ್ಯಮನಸ್ಕವಾಗುತ್ತಿರುವುದನ್ನು ಕಾವೇರಮ್ಮ ಗಮನಿಸಿದ್ದಳು. ಊಟಕ್ಕೆ ಬಡಿಸುವಾಗ ಕೇಳಿದಳು.

"ಯಾಕಪ್ಪಾ, ಒಂಥರಾ ಆಗಿದೀಯ? ಹುಶಾರಾಗೀದೀಯ ತಾನೇ? ಅಥವಾ ಕಾಲೇಜಿನಲ್ಲಿ ಏನಾದ್ರೂ, ಬೇಜಾರಾಯ್ತೇನು?"

"ಏನಿಲ್ಲಮ್ಮಾ ಸರಿಯಾಗಿಯೇ ಇದೀನಿ."ತಲೆ ಎತ್ತದೇ ನುಡಿದ.

"ಇಲ್ಲಪ್ಪಾ ಸರಿಯಾಗಿಲ್ಲ. ಏನೋ ಕೊರೀತಾ ಇದೆ ನಿನ್ನನ್ನ. ಏನೂಂತ ಹೇಳಿದ್ರೆ ನಂಗೂ ಅರ್ಥವಾಗುತ್ತೆ."

"ಹೇಳಿದ್ನಲ್ಲ ಏನೂ ಇಲ್ಲ ಅಂತ." ದಿಢಾರನೆ ರೇಗಿದ. ತಾಯಿ ಸುಮ್ಮನಾದಳು. ಏನೋ ಹಣಕಾಸಿನ ತೊಂದರೆ ಇರಬಹುದು. ಅದು ಸದಾ ಇದ್ದದ್ದೇ. ನಾನು ತಾನೇ ಏನು ಮಾಡುವ ಹಾಗಿದೀನಿ ಎಂದುಕೊಂಡು ಸುಮ್ಮನಾದಳು. ತಾಯಿ ಸುಮ್ಮನಾದುದನ್ನೂ ಕಂಡು ಅವನಿಗೆ ಪಿಚ್ಚೆನಿಸಿತು. ತಾನು ಹಾಗೆ ರೇಗ ಬಾರದಾಗಿತ್ತೆನಿಸಿ.

"ಅಮ್ಮಾ ನಿಂಗೆ ಸುಮ್ಮನೇ ಆತಂಕ. ನಾನು ಏನೋ ಯೋಚಿಸ್ತಿದ್ದೆ. ನಾಳೆ ನಾನು, ನನ್ನ ಸ್ನೇಹಿತ ಇಬ್ಬರೂ ನಂದಿ ಹಿಲ್ಸ್‌ಗೆ ಹೊಗ್ತಾ ಇದೀನಿ. ಬೆಳಿಗ್ಗೆ ಏನಾದ್ರೂ ಸ್ವಲ್ಪ ತಿಂಡಿ ಮಾಡಿಕಟ್ಟಿ ಕೊಡ್ತೀಯಾ?"

"ಹೂಂ. ರವೆ ಇಡ್ಲಿ ಮಾಡ್ಲಾ? ಮೊದಲೇ ಗೊತ್ತಾಗಿದ್ರೆ ಇಡ್ಲಿಗೆ ತಿರುವಿ

ಇಡ್ತೀದ್ವೆ." ಎನ್ನುತ್ತಾ ತಾಯಿ ಪಾತ್ರೆಗಳನ್ನು ಬಚ್ಚಲಿಗೆ ಜೋಡಿಸಿದಾಗ ಕೇಳಿದ

"ಯಾಕಮ್ಮಾ ನೀನು ಊಟ ಮಾಡುಲ್ವೇ?" ಈಚೆಗೆ ಎಷ್ಟೋ ದಿನಗಳಾಗಿ ಹೋಗಿದ್ದವು. ತಾಯಿಯನ್ನು ವಿಚಾರಿಸಿ.

"ಇಲ್ಲಪ್ಪಾ ಇವತ್ತು ಶನಿವಾರ ಅಲ್ವೇನೋ..ರಾತ್ರಿ ಹೊತ್ತು ನಾನೆಲ್ಲಿ ಊಟ ಮಾಡ್ತೀನಿ?"

ಫಲಾಹಾರಕ್ಕೇನಾದರೂ ಇದೆಯಾ ಅಂತ ಅವನೂ ಕೇಳಲಿಲ್ಲ. ಆಕೆಯೂ ಹೇಳಲಿಲ್ಲ. ಹಾಗೆಲ್ಲಾ ಹೇಳಿ ತರಿಸಿಕೊಂಡು ತಿನ್ನುವ ಅಭ್ಯಾಸವಲ್ಲ ಅವಳದು. ತನ್ನ ಪಾಡಿಗೆ ತಾನು ಹೊರಗೆ ಹೊರಟು ಹೋದಳು. ಮೊಮ್ಮಗುವಿನ ಮಗ್ಗುಲಲ್ಲಿ ಮಲಗಿದವಳಿಗೆ ನಿದ್ದೆ ಹತ್ತಲಿಲ್ಲ. ಏನೋ ಆತಂಕ, ಏನೋ ಕಳವಳ.

ರಂಗನಾಥ ಬೆಳಿಗ್ಗೆ, ನಿತ್ಯದಂತೆ ಬೇಗನೇ ಎದ್ದು ತಾನು ಮಾಡಬೇಕಾದ ಮನೆಯ ಕೆಲಸಗಳನ್ನು ಮಾಡಿ ಮುಗಿಸಿ ಎಂಟು ಗಂಟೆಯ ಹೊತ್ತಿಗೆ ಮನೆಯಿಂದ ಹೊರಟ. ತಾಯಿ ಒಂದು ಡಬ್ಬಿಯಲ್ಲಿ ಇಬ್ಬರಿಗಾಗುವಷ್ಟು ಇಡ್ಲಿ ಚಟ್ನಿ ಹಾಕಿ ಸಿದ್ಧ ಮಾಡಿದಳು.

ಬರ್ತೀನಿ ಎಂದಷ್ಟೇ ಹೇಳಿ ಮನೋಜನೆಡೆ ಕೈಯಾಡಿಸಿ, ಸ್ಕೂಟರ್ ಏರಿದ. ದಾರಿಯಲ್ಲಿ ಒಂದಿಷ್ಟು ಬಿಸ್ಕತ್ ಬಾಳೆ ಹಣ್ಣುಗಳನ್ನು ಕೊಂಡು ಕ್ಲಿನಿಕ್ ಬಳಿ ಬರುವ ಹೊತ್ತಿಗೆ ಗೇಟಿನ ಬಳಿ ನಿರ್ಮಲಾ ಕಾಯುತ್ತಿರುವುದನ್ನು ಕಂಡು ಕಿರುನಗೆ ಯೊಂದು ಮೂಡಿತು.

ತನಗಾಗಿ ಕಾಯುತ್ತಾನಿಂತವಳನ್ನು ಮೇಲಿನಿಂದ ಕೆಳಗಿನವರೆಗೆ ದಿಟ್ಟಿಸಿದ. ಆಸಕ್ತಿ ಯಿಂದ ಅಲಂಕರಿಸಿಕೊಂಡು, ಮೆಜೆಂತಾ ಕಲರಿನ ಕ್ರೇಪ್ ಸೀರೆಯುಟ್ಟು, ಅದೇ ಬಣ್ಣದ ಬ್ಲೌಸ್ ಧರಿಸಿದ್ದಳು ಅಳ್ಳಕವಾಗಿ ಹೆಣೆದುಕೊಂಡ ಜಡೆಗೆ ಕನಕಾಂಬರದ ಹೂ ಮುಡಿದಿದ್ದಳು. ಇವನೆಡೆ ನೋಡಿ ಮುಗುಳ್ನಕ್ಕಾಗ, ಇವನಿಗೆ ಅವಳನ್ನು ನೋಡು ತ್ತಲೇ ಇರಬೇಕು ಎನಿಸುವಂತಿದ್ದಳು. ಸಣ್ಣದಾಗಿ ಸಿಳ್ಳು ಹೊಡೆದು ಕಾಂಪ್ಲಿಮೆಂಟ್ಸ್ ಹೇಳೋಣವೆನಿಸಿದರೂ ತಪ್ಪು ತಿಳಿದರೇ.. ಎಂಬ ಅಂಜಿಕೆಯಿಂದ ಸುಮ್ಮನಾದ.

"ರೆಡಿಯಾಗಿದ್ದರೆ ಹೋಗೋಣ್ವಾ?" ಕೇಳಿದ.

ಅವಳು ಹೂಂ ಎಂದು ಬಂದು ಸ್ಕೂಟರನ್ನೇರಿದಳು. ಸ್ಕೂಟರ್ ನಂದಿ ಹಿಲ್ಸ್ ಕಡೆ ಓಡಿತು. ಸ್ಕೂಟರ್ ವೇಗವಾಗಿ ಓಡುತ್ತಿದ್ದಂತೆ ಇವನು ವೇಗವಾಗಿ ಸೀಟಿ ಊದಿದ್ದು ಕೇಳಿ ಅವಳಿಗೆ ಸಂತಸ. ತಾನು ಇವನು ಕರೆದನೆಂದು ಹೀಗೆ ಇವನ ಹಿಂದೆ ತಿರುಗುತ್ತಿರುವುದು ಸರಿಯೆ? ಯಾರಾದರೂ ನೋಡಿದರೆ ಏನು ಎಂಬ ಅಂಜಿಕೆ ಅವಳಿಗಿರಲಿಲ್ಲ. ಅವನ ಜತೆ ಬಂದುದು ಧೈರ್ಯದಿಂದಲೇ ಸಂತೋಷದಿಂದ ಲೇ.. ನಗುತ್ತಾ ಕೇಳಿದಳು.

"ಬಹಳ ಖುಷಿಯಾಗಿದೀರಿಲ್ಲ..ಏನ್ಸಮಾಚಾರ?"

"ನೀವೂ ಖುಷಿಯಾಗಿದೀರಿ ಅಲ್ವಾ? ಕಾರಣ ಏನು ಅಂತ ನಾನೂ ಕೇಳಬಹುದಾ?"

"ನೀಮಗ್ಹೇಗೆ ತಿಳೀತು?"

"ದಿನಾ ಕ್ಲಿನಿಕ್‌ನಲ್ಲಿರುವುದಕ್ಕಿಂತ ಬೇರೆ ತರಹ ಕಾಣ್ತೇದೀರಿ. ಈ ಅಲಂಕಾರ, ಈ ಸೊಬಗು ಅದನ್ನು ತಿಳಿಸ್ತಾ ಇದೆ."

ನಿರ್ಮಲಾ ನಾಚಿಕೆಯಿಂದ ರಂಗಾದಳು. ಬೆಟ್ಟ ಹತ್ತುವ ತಿರುವು ಬಂದಾಗ

ಆಯತಪ್ಪಿ ಬೀಳುವಂತಾದಾಗ, ಅವನಿಗೆ ಒರಗಿದಳು.

"ಬೀಳುವ ಹಾಗಾದ್ರೆ ನನ್ನನ್ನು ಹಿಡಿದುಕೊಳ್ಳಿ"

ಒಂದು ಗಳಿಗೆ ಅನುಮಾನಿಸಿದರೂ, ಮತ್ತೊಮ್ಮೆ ಹಾಗಾಗಬಾರದು ಅಂತನ್ನಿಸಿ, ಅವನ ಸೊಂಟವನ್ನು ಹಿಡಿದು ಸರಿಯಾಗಿ ಹಾರಿ ಹೋಗುತ್ತಿರುವ ಅನುಭವವಾದಾಗ ಅವಳ ಮೈ ಝುಂ ಎಂದಿತು. ಈ ರೀತಿ ಒಬ್ಬ ಸ್ನೇಹಿತನ ಜೊತೆ ಆನಂದವಾಗಿ ಹೋಗುತ್ತಿರುವುದು ಅವಳಿಗೆ ಅತ್ಯಂತ ಸಂಸದ ಸಂಗತಿ. ಸದಾ ಹೀಗೇ ಇರುವಂತಿದ್ದರೇ..

ಅವಳು ಸೊಂಟವನ್ನು ಬಳಸಿ ಹಿಡಿದು ಅವನಿಗೆ ಅತ್ಯಂತ ಸಮೀಪವಾಗಿ ಸರಿದಾಗ, ನವಿರಾದ ಸೆಂಟಿನ ವಾಸನೆ ಅವನ ಮೂಗಿಗೆ ಬಡಿಯಿತು. ಹಿತವೆನಿಸಿದ. ಸುಂದರಿಯಾದ ಹೆಂಗಸೊಬ್ಬಳು, ತನ್ನನ್ನು ಬಳಸಿ ಕುಳಿತು, ತಾನು ಕರೆದ .. ಹೋದ ಕಡೆ ಬರುವುದೆಂದರೆ, ಅವನ ಸಂತಸಕ್ಕೆ ಮಿತಿ ಇಲ್ಲ. ಬೆಟ್ಟ ಹತ್ತುವುದು ಪ್ರಯಾಸಕವೆನಿಸಿದರೂ, ಅದನ್ನು ತೋರಗೊಡದೇ ಮೇಲೆ ತಲುಪಿ ಸ್ಕೂಟರನ್ನು ಒಂದೆಡೆ ನಿಲ್ಲಿಸಿದ. ಅಲ್ಲಿಯೇ ಸಮೀಪದಲ್ಲಿದ್ದ ಬೆಂಚಿನ ಮೇಲೆ ಕುಳಿತ. ಅವಳು ಅವನನ್ನು ಪ್ರಶ್ನಾರ್ಥಕವಾಗಿ ನೋಡಿದಳು. ಆಯಾಸದಿಂದ ಬಳಲಿದ ಅವನ ಮುಖ ಕಂಡು ಕೇಳಿದಳು.

"ಯಾಕೆ ಪೆಚ್ಚಾಗಿದೀರಿ? ಯಾಕಾದ್ರೂ ಬಂದೆವೋ ಅಂತ ಅನ್ನಿಸ್ತಿದೆಯಾ ಈಗ..?"

"ಯಾಕೆ? ಇಲ್ಲವಲ್ಲಾ? ನಿಮಗೆ ಹಾಗೆ ಅನ್ನಿಸ್ತಿದೆಯಾ?"

"ಹಾಗೇನೂ ಇಲ್ಲ. ಆದರೆ ಸ್ಕೂಟರನ್ನ ಇಲ್ಲೇ ನಿಲ್ಲಿಸಿ ಬಿಟ್ಟಿರಲ್ಲ. ಎಲ್ಲಾ ಕಡೆ ನಡೆಯುವುದು ಹೇಗೆ ಅಂತ ಯೊಚಿಸ್ತಿದ್ದೆ?"

"ಅದಕ್ಯಾಕೆ ಯೋಚನೆ ನಡೆಯಕ್ಕಾಗದಿದ್ದರೆ ಹೇಳಿ, ನಾನಿದೀನಲ್ಲ,?" ಎದೆ ತಟ್ಟಿಕೊಂಡು ಹೇಳಿದ.

"ನನ್ನಂತಹ ಕುಂಟಿ ಜೊತೆ ನಡೆಯುವಾಗ ನಿಮಗೆ ಮುಜುಗರವಾಗಬಹುದು ಅಲ್ವಾ?" ಧ್ವನಿ ತಗ್ಗಿಸಿ ಹೇಳಿದಳು.

"ಛೆ..ಎಂಥಾ ಮಾತು ನಿಮ್ಮದು ನನಗೆಅಂತಹ ಅಲೋಚನೆ ಖಂಡಿತಾ ಇಲ್ಲ."

"ನಿಜವಾಗಿಯೂ..?"

"ನಿಜವಾಗಿಯೂ..ಅದೆಲ್ಲಾ ನನ್ನ ಮನಸ್ನಲ್ಲಿದ್ರೆ ನಾನು ನಿಮ್ಮ ಸ್ನೇಹ ಮಾಡ್ತಿದ್ನಾ? ನಿಮ್ಮನ್ನ ಇಲ್ಲಿಗೆ ಕರೆದುಕೊಂಡು ಬರ್ತಿದ್ನಾ?"ಅವನ ಧ್ವನಿಯಲ್ಲಿನ ಗಡಸನ್ನು ಗುರುತಿಸಿದಳು.

"ಸಾರಿ..ನಿಮ್ಮ ಮನಸ್ಸು ನೋಯಿಸಬೇಕು ಅಂತ ಹಾಗೆ ಹೆಳಲಿಲ್ಲ"

"ಹೋಗಲಿ ಬಿಡಿ. ಯಾರೂ ಒಬ್ಬರ ಮನಸ್ಸನ್ನು ನೋಯಿಸಬೇಕು ಅಂತ ಅಂದ್ಕೊಂಡಿರಲಿಲ್ಲ. ಮತಾಡ್ತಾ ಮಾತಾಡ್ತಾ ಏನೇನೋ ಮಾತುಗಳು ಬರುತ್ತವೆ. ನೀವೇನೂ ಯೋಚಿಸಬೇಡಿ. ನಾನೂ ನಿಮ್ಮ ಒಬ್ಬ ಸ್ನೇಹಿತ. ನಿಮಗೆ ಸಂದೇಹ, ಸಂಕೋಚ ಏನೂ ಬೇಡ."

"ನನ್ನನ್ನ ಅನುಕಂಪದಿಂದ ಮಾತ್ರ ನೋಡಬೇಡಿ. ನನಗದು ಖಂಡಿತಾ ಇಷ್ಟವಾಗುವುದಿಲ್ಲ."

"ಅನುಕಂಪಕ್ಕೂ ಪ್ರೀತಿಗೂ ವ್ಯತ್ಯಾಸ ಗೊತ್ತಾಗಲಿಲ್ವಾ ನಿರ್ಮಲಾ ನಿಮಗೆ?" ಅವಳಿಂದುತ್ತರವನ್ನು ನಿರೀಕ್ಷಿಸಿ ಕೇಳಿದ.

"ಅನುಕಂಪದ ಪ್ರೀತಿ ಸ್ನೇಹ ಏನೂ ಬೇಡ ಅಂದೆ."

"ಮತ್ತೆ ಮತ್ತೆ ಅದೇ ಹೇಳ್ತೀರಲ್ಲ. ನನ್ನ ಪ್ರೀತಿಯಲ್ಲಿ ಅನುಕಂಪದ ಛಾಯೆ ಕಂಡ್ರಾ? ಅಷ್ಟಕ್ಕೂ ನಾನೇಕೆ ನಿಮಗೆ ಅನುಕಂಪ ತೋರಿಸಬೇಕು ನಿಮಗೇನು ಕಮ್ಮಿ ಆಗಿದೆ? ಅಥವಾ ನನ್ನ ಬಗ್ಗೆ ಏನಾದ್ರೂ ಅನುಮಾನಾನಾ?"

"ಅನುಮಾನ, ಅಧೈರ್ಯ ಎಲ್ಲಾ ನನ್ನ ಬಗ್ಗೇನೇ..ನನ್ನ ಬಗ್ಗೆ ನನಗೇ ಧೈರ್ಯವಿಲ್ಲ. ನಾನು ಕುಂಟಿ ಎನ್ನುವುದನ್ನು ಮರೆಯಕ್ಕೆ ಆಗುತ್ತಾ? ಹೆಜ್ಜೆ ಹೆಜ್ಜೆಗೂ ನೆನಪಾಗ್ತಾನೇ ಇರುತ್ತಲ್ಲ.?"

"ನನ್ನ ಹೆಜ್ಜೆಗೆ ನಿಮ್ಮ ಹೆಜ್ಜೆ ಸೇರಿಸಿ ಒಟ್ಟಾಗಿ ನಡೆಯೋಣ"

"ಅದು ಅಷ್ಟು ಸುಲಿಭಾನಾ? ಅದು ಸಮ ಆಗುತ್ತಾ? ಅ ಸಮವಾಗಿಯೇ ಇರುತ್ತೆ ಅಲ್ವಾ?"

"ಅದನ್ನು ಸುಲಭ ಮಾಡಿಕೊಳ್ಳುವುದು, ಸಮ ಮಾಡಿಕೊಳ್ಳುವುದು. ನನ್ನ ನಿಮ್ಮ ಕೈಲಿದೆ. ನನ್ನ ನಿಮ್ಮ ಮನಸ್ನಲ್ಲಿದೆ. ನೀವು ಹೀಗೆಲ್ಲಾ ಮಾತಾಡಿದರೆ ನಮ್ಮ ಪ್ರೀತಿಯಲ್ಲಿ ದೋಷ ಕಂಡು ಬರುತ್ತೆ ಅಷ್ಟೇ."

"ನಾನು ಪ್ರೀತಿ ಪ್ರೇಮದ ಬಗ್ಗೆ ಏನೂ ಯೋಚಿಸಿಲ್ಲ ಮಿಸ್ಟರ್. ಅಲ್ಲದೇ ಅದರ ಬಗೆಗೆ ನನಗೆ ಏನೂ ತಿಳಿಯದು."

ರಂಗನಾಥ ಜೋರಾಗಿ ನಕ್ಕು ಬಿಟ್ಟ. "ಸುಳ್ಳು ನಾನು ನಂಬುಲ್ಲ. ನೀವೇನೂ ತಿಳುವಳಿಕೆಯಿಲ್ಲದ ಚಿಕ್ಕ ಹುಡುಗಿ ಅಲ್ಲ. ಅದರ ಅರಿವಿಲ್ಲದೇ ನನ್ನ ಜೊತೆ ಇಲ್ಲಿ ತನಕ ಬರುವ ಧೈರ್ಯ ಹೇಗೆ ಬಂತು ನಿಮಗೆ?"

ನಿರ್ಮಲಳಿಗೆ ಏನು ಹೇಳಬೇಕೆಂದು ತಿಳಿಯದೇ ಸುಮ್ಮನಾದಳು.

"ಹೇಳಿ..ನಿರ್ಮಲಾ" ಮತ್ತೆ ಕೇಳಿದ

"ಏನೋ ಬಿಡಿ ನನಗೆ ಇದೆಲ್ಲಾ ಹೊಸದು."

"ನನಗೂ ಹೊಸದೇ..ನಾನೂ ಇದುವರೆಗೂ ಯಾರನ್ನೂ ಪ್ರೀತೀಸಿರಲಿಲ್ಲ." ಅವನು ಎತ್ತರದ ಧ್ವನಿಯಲ್ಲಿ ಹೇಳಿದಾಗ ಅವಳು ಎಚ್ಚರಿಸಿದಳು.

"ಶ್"ಮೆಲ್ಲಗೆ ಮಾತಾಡಿ. ನಾವು ಇರುವುದು ಪಬ್ಲಿಕ್ ಪಾರ್ಕಿನಲ್ಲಿ ನಿಮ್ಮ ಮನೆಯಲ್ಲಲ್ಲ.

ಅವನಿಗೆ ನಗು ಬಂದರೂ, "ಪರವಾಗಿಲ್ಲ ಬಿಡಿ.ಇಲ್ಲಿ ನಮ್ಮ ಪರಿಚಯ ದವರ್‍ಯಾರೂ ಕಾಣ್ತಿಲ್ಲ. ಅಲ್ಲದೆ ಎತ್ತರವಾದ ಜಾಗದಲ್ಲಿ ಎತ್ತರದ ಧ್ವನಿಯಲ್ಲಿ ಮಾತಾಡಿದರೇನೀಗ?"

"ನಿಮ್ಮನ್ನ ಕನ್ವಿನ್ಸ್ ಮಾಡೋಕೆ ಆಗುಲ್ಲ ಬಿಡಿ. ಇಲ್ಲೇ ಕೂತಿರೋದೋ ಅಥವಾ ಸುತ್ತಾಡುಕ್ಕೆ ಹೋಗುವುದೋ .ಅಥವಾ ಮನೆಗೇ ವಾಪಸ್ಸು ಹೋಗೋಣವೋ..?"

"ಆಗ್ಲೇ ಬೇಜಾರಾಯ್ತ? ಮಾತಾಡಿ ಮಾತಾಡಿ ಆಯಾಸವಾಗಿದೆ. ಏನಾದರೂ ತಿಂದು ಕುಡಿದು ತಿರುಗಾಡುಕ್ಕೆ ಹೊರಡೋಣ" ಎನ್ನುತ್ತಾ ತಾನು ತಂದಿದ್ದ ತಿಂಡಿಯ ಡಬ್ಬಿ ತೆಗೆದ. ಇಬ್ಬರಿಗೂ ಹಸಿವು ಆಗಿತ್ತೂ. ಮಾತಿಲ್ಲದೇ ಅದರಲ್ಲಿದ್ದುದ್ದನ್ನು ತಿಂದು

ಮುಗಿಸಿ, ನೀರು ಕುಡಿದು ಎದ್ದರು.

" ಇಡ್ಲಿ ತುಂಬಾ ಚೆನ್ನಾಗಿತ್ತು. ಹೋಟೆಲ್ಲಿಂದ ತಂದ್ರಾ?" ಕೇಳಿದಳು.

"ಇಲ್ಲ, ನಮ್ಮ ತಾಯಿ ಮಾಡಿದ್ದು. ಅಡಿಗೆ ತಿಂಡಿ ಎಲ್ಲಾದರಲ್ಲೂ ನಮ್ಮಮ್ಮನದು ಎತ್ತಿದ ಕೈ?" ತನ್ನ ತಾಯಿಯನ್ನು ಹೊಗಳಿಕೊಂಡ.

"ಚೆನ್ನಾಗಿತ್ತು ಅಂತ ನಾನು ಹೇಳಿದೆ ಅಂತ ನಿಮ್ಮ ತಾಯಿಗೆ ಹೇಳಿ ಬಿಡಿ. ಹಾಗೇ ನಿಮ್ಮ ತಾಯಿಗೆ ನನ್ನ ಥ್ಯಾಂಕ್ಸ್ ತಿಳಿಸಿ ಬಿಡಿ."

"ಓ.ಕೇ. ಬನ್ನಿ ಹಾಗೇ ತಿರುಗಾಡುತ್ತಾ ಮಾತನಾಡೋಣ." ಇಬ್ಬರೂ ಎದ್ದು ಸುತ್ತಾಡಲು ಹೊರಟರು.

ಇಬ್ಬರೂ ಏನೇನೋ ವಿಚಾರಗಳನ್ನು ಮಾತನಾಡಿದರು. ನಿರ್ಮಲ ನಿಸ್ಸಂಕೋಚ ವಾಗಿ ಮಾತಾಡುತ್ತಿದ್ದುದನ್ನು ರಂಗನಾಥ ಗಮನಿಸಿದ. ಇಬ್ಬರೂ ಹಳೆಯ ಸ್ನೇಹಿತರಾಗಿದ್ದರು. ಹೊಸ ಪ್ರೇಮಿಗಳಾಗಿದ್ದರು. ತನಗೆ ತಿಳಿಯದ ಎಷ್ಟೋ ವಿಚಾರಗಳನ್ನು ಕೇಳಿ ತಿಳಿದುಕೊಂಡಳು. ಅವನೂ ಉತ್ಸಾಹದಿಂದ, ತನಗೆ ತಿಳಿದುದನ್ನು ತನ್ನ ಕೆಲವು ಅನುಭವಗಳನ್ನು ಹೇಳಿಕೊಂಡ. ತಿರುಗಾಡಿದ್ದಕ್ಕಿಂತ ಹೆಚ್ಚಾಗಿ ಇಬ್ಬರೂ ಮಾತನಾಡಿ ದಣಿದಿದ್ದರು.

ಕ್ಲಿನಿಕ್ ಬಿಟ್ಟು, ಹೊರಗಿನ ಪ್ರಪಂಚದಲ್ಲಿ ಏನೇನು ಆಕರ್ಷಣೆಗಳಿವೆ, ಎಷ್ಟೆಷ್ಟು ಸೊಗಸಿವೆ ಎಂದರಿತಳು. ಪ್ರಕೃತಿಯ ಚೆಲುವನ್ನು ಕಣ್ತುಂಬಾ ನೋಡಿ ಆನಂದಿಸಿದಳು. ಅವಳನ್ನೇ ನೋಡುತ್ತಾ, ಅವಳ ಅಂದ ಚಂದವನ್ನು ಕಣ್ಣಲ್ಲೇ ಹೀರುತ್ತಾ ರಂಗನಾಥ ಎಡೆ ಬಿಡದೇ ಮಾತನಾಡುತ್ತಿದ್ದ. ನಿತ್ಯ ಮೇಷ್ಟ್ರಂತೆ, ನಿರರ್ಗಳವಾಗಿ ಮಾತನಾಡುತ್ತಿದ್ದವನನ್ನು ಮನಸಾರೆ ಅಭಿನಂದಿಸಿದಳು.

ಎಲ್ಲಾ ಸಾಕಾಯ್ತು ಅಂತನ್ನಿಸಿದಾಗ, ಇಬ್ಬರೂ ಅಲ್ಲಿಂದ ವಾಪಸ್ಸು ಹೊರಟರು. ಸಿಟಿಗೆ ಬಂದು ಸೇರಿದಾಗ ಮನೆಯ ಕಡೆ ತಿರುಗುವ ಮೊದಲು, ಒಂದು ಹೆಸರಾಂತ ಹೋಟೆಲ್ಲನ್ನು ಹೊಕ್ಕರು. ತಿಂಡಿಗೆ, ಕಾಫಿಗೆ ಆರ್ಡರ್ ಕೊಟ್ಟು, ಮತ್ತೆ ಮಾತನಾಡುತ್ತಾ ಕುಳಿತರು.

ಬಿಸಿ ಬಿಸಿಯಾದ ಮಸಾಲೆ ದೋಸೆ, ಚಟ್ನಿಯೊಂದಿಗೆ ಬಂದಾಗ ಇಬ್ಬರ ಹಸಿವು ಹೆಚ್ಚಿತು. ದೋಸೆ ಚೆನ್ನಾಗಿತ್ತು. ತಿನ್ನುತ್ತಾ ಕೇಳಿದ.

"ನಿರ್ಮಲಾರವರೇ.. ನಿಮಗೆ ಅಡಿಗೆ, ತಿಂಡಿ ಮಾಡುಕ್ಕೆ ಬರುತ್ತಾ?"

"ಟೀಸ್ ಮಾಡಬೇಡಿ.. ತಿನ್ನಕ್ಕೆ ಬರುತ್ತೆ ಅಷ್ಟೇ.. ಹುಸಿಮುನಿಸಿನಿಂದ ಅವಳು ನುಡಿದಾಗ, ಸುಮ್ಮನೇ ಕೇಳಿದೆ ಅಷ್ಟೇ.."ಎಂದ.

"ಸುಮ್ಮನೇ ಕೇಳಿದರೂ ನಿಜ ಇಷ್ಟೇ..ನನಗೆ ಏನೂ ಮಾಡುಕ್ಕೆ ಬರುಲ್ಲ. ನಮ್ಮಮ್ಮನೂ ಮಾಡುಲ್ಲ." ನಮ್ಮ ಮನೇಲಿ ಅಡಿಗೆಯವರಿದ್ದಾರೆ.

"ಅಡಿಗೆಯವರು ಚೆನ್ನಾಗಿ ಮಾಡ್ತಾರಾ?"

"ಚೆನ್ನವೋ ಚೆನ್ನಿಲ್ಲವೋ..ನಮಗೆ ಅದೇ ಗತಿ. ಇಲ್ಲದಿದ್ದರೆ ಬರೀ ನೀರು ಕುಡಿದು ಮಲಗಬೇಕು."

"ಯಾಕೆ ನಿಮಗೆ ಕಲಿತು ಮಾಡುಕ್ಕೆ ಬೇಜಾರಾ?"

"ಓದು, ಕಾಲೇಜು, ಕ್ಲಿನಿಕ್ಕು ಅಂತ ಯಾವಾಗಲೂ ಬಿಡುವೇ ಆಗ್ಲಿಲ್ಲ ನನಗೆ."

"ನನಗೇನೋ ಹಾಗೆ ಎಂದೂ ಆಗಲಿಲ್ಲ..ಮೊದಲು ಅಡಿಗೆ..ಮನೆ ಕೆಲಸ ಇತ್ಯಾದಿ, ಆಮೇಲೆ ಓದು, ವಿಧ್ಯಾಬ್ಯಾಸ ಕಾಲೇಜು."

"ತಮಾಷೆ ಮಾಡ್ತಿದೀರಾ?" ನಿರ್ಮಲಾ ನಕ್ಕಳು

"ತಮಾಷೆ ಅಲ್ಲ. ನನ್ನ ಬಗ್ಗೆ ನಾನು ಹೇಳ್ತಿದೀನಿ. ತಾಯಿಗೆ ಸಹಾಯ ಮಡುವ ನೆವದಲ್ಲಿ ಎಲ್ಲಾ ಕಲಿತೆ.. ಮಕ್ಕಳನ್ನು ಸಾಕುವ ಕೆಲಸವೂ ಬರುತ್ತೆ ನನಗೆ" ಬಾಯ್ತುಂಬಾ ನಕ್ಕ.

ನಿರ್ಮಲಾ ನಾಚಿದಳು." ಇದನ್ನೆಲ್ಲ ನನಗೇಕೆ ಹೇಳ್ತಿದೀರಿ? ಅವಮಾನ ಮಾಡ್ತಿದೀರಾ? ನೀನೊಬ್ಬಳೇ ಚೈಲ್ಡ್ ಸ್ಪೆಷಲಿಸ್ಟ್ ಅಲ್ಲ ಅಂತ."

"ಛೆ. ಛೆ. ಅದನ್ನೆಲ್ಲಾ ಸೀರಿಯಸ್ಸಾಗಿ ತಗೋ ಬಾರದು. ಯಾರಿಗೋ ಒಬ್ಬರಿಗೆ ಅಡಿಗೆ ಮಾಡುಕ್ಕೆ ಬಂದ್ರೆ ಆಯ್ತು. ಇಲ್ಲದಿದ್ದರೆ ದಿನಾ ಹೋಟೆಲ್ಲಿಗೆ ದುಡ್ಡು ಯಾರು ಸುರಿತಾರೆ?"ತಕ್ಷಣಕ್ಕೆ ಅವನ ಮಾತಿನ ಜಾಡನ್ನು ಬದಲಾಯಿಸಿದಳು. ಇಬ್ಬರೂ ಅಲ್ಲಿಂದ ಹೊರಟರು" ಥ್ಯಾಂಕ್ಸ್ ಯೂ ಮಿಸ್ಟರ್" ಎಂದಳು ಇಳಿದಾಗ.

"ನಿಮಗೆ ಬಿಡುವಾದಾಗ ಹಾಗೇ ಎಲ್ಲಾದ್ರೂ ಹೊಗಿ ಬರೋಣ್ವಾ?" ಕೇಳಿದ.

"ಹೂಂ ಕರೆದುಕೊಂಡು ಹೋಗುವವರು ನೀವು ಇರುವಾಗ ನಾನು ರೆಡಿ" ಎಂದಳು.

"ಓ. ಕೇ.." ಎಂದು ಹೇಳಿ, ಮಲಸ್ಸಿಲ್ಲದ ಮನ್ಸಿನಿಂದ ಅಲ್ಲಿಂದ ಹೊರಟ. ಅವನು ಮಾತಾಡುವುದು ಅನ್ನೂ ಬಾಕಿ ಉಳಿದಿತ್ತು. ಮುಖ್ಯವಾದ ಪ್ರಶ್ನೆಗೆ ಅವಳಿಂದ ಉತ್ತರ ಪಡೆಯಬೇಕಿತ್ತು. ಮತ್ತೆ ಬಂದರಾಯ್ತು ಎಂದುಕೊಂಡು ತನ್ನ ಮನೆಗೆ ಬಂದ.

ಮಧ್ಯಾಹ್ನದ ಹೊತ್ತು ಮೀರಿ ಹೋಗಿತ್ತು. ಪ್ಲಾಸ್ಕಿನಲ್ಲಿದ್ದ ಕಾಫಿಯನ್ನು ಮತ್ತೊಮ್ಮೆ ಕುಡಿದು, ನಿರ್ಮಲ ತನ್ನ ರೂಮು ಸೇರಿದಳು ಮಂಚವನ್ನೂ ಕಂಡ ಕೂಡಲೇ ಅಯಾಸವೆನಿಸಿತು. ಹಾಗೇ ದಿಂಬಿಗೆ ಒರಗಿದಳು.

ತಾನು ಮಾಡುತ್ತಿರುವುದು ಸರಿಯೇ? ಇದುವರೆಗೂ ಇಲ್ಲದ ಆಸೆ ಈಗೇಕೆ ಬಂತು? ನನ್ನ ಬಗ್ಗೆ ಅವನ ಅನಿಸಿಕೆ ಏನು? ನನಗೂ ಅವನಿಗೂ ಸಮವೇ? ನೋಡಿದರೆ ಒಳ್ಳೆಯವನ ಹಾಗೆ ಕಾಣ್ತಾನೆ. ನನ್ನ ಬಗ್ಗೆ ಆದರವಿದೆ. ವಿಶ್ವಾಸವಿದೆ. ವಿಧ್ಯಾವಂತ, ರೂಪವಂತ, ..ಹಣವಂತನಲ್ಲದಿರಬಹುದು. ಆದರೆ ನಿರುದ್ಯೋಗಿ ಏನಲ್ಲ. ಮನೇಲೂ ಎಚ್ಚು ಜನರಿಲ್ಲ. ತಾಯಿ, ಆ ತಂಗಿಯ ಮಗು ಒಂದು ಅಷ್ಟೇ. ಆದರೆ..ಎಲ್ಲಾ ವಿಧದಲ್ಲೂ ಸರಿಯಾಗಿದಾನಲ್ಲ. ನನ್ನ ಹಾಗೆ ಊನವಿಲ್ಲ ವಲ್ಲ. ಹಾಗೆನ್ನಿಸಿದಾಗ ಅವಳಿಗೆ ಮುಳ್ಳು ಚುಚ್ಚಿದಂತಾಯಿತು. ಮುಂದೇನೂ ಯೋಚಿಸಲಾಗದೇ ಎದ್ದು ಮುಖತೊಳೆದು, ರೆಡಿಯಾಗಿ ಕ್ಲಿನಿಕ್‌ನ ಬಾಗಿಲು ತೆಗೆದು, ಒಳಗೆ ಹೋದಳು.

ನಗು ನಗುತ್ತಾ ಮನೆಗೆ ಬಂದ ಮಗನನ್ನು ಕಂಡು ಕಾವೇರಮ್ಮನಿಗೆ ಅಚ್ಚರಿ." ಏನಮ್ಮಾ ಹೇಗಿದೀಯ?" ಎಂದ, ಎಷ್ಟೋ ದಿನಗಳ ನಂತರ ಭೇಟಿಯಾದವ ನಂತೆ ಮನೋಜನ ಗಲ್ಲ ಸವರಿ ಎತ್ತಿಕೊಂಡ. ತಾಯಿ ತಂದು ಕೊಟ್ಟ, ಬಿಸಿಯಾದ ರುಚಿಯಾದ ಕಾಫಿಯನ್ನೂ ಉತ್ಸಾಹದಿಂದ ಹೀರಿದ.

ಛೆ.. ನಿರ್ಮಲೆಯ ಹತ್ತಿರ ಇವತ್ತು ಸರಿಯಾಗಿ ಮಾತನಾಡಕ್ಕಾಗಲಿಲ್ಲ. ಬೇಗ ಒಂದು ಡಿಸೈಡ್ ಮಾಡಿ ಬಿಡಬೇಕು. ಮೊದಲು, ಅಮ್ಮನನ್ನು ಒಂದು ಮಾತು ಕೇಳಿ ಬಿಡಬೇಕು ಎಂದು ನಿಶ್ಚಯಿಸಿದ.

ಅಮ್ಮ ಏನನ್ನಬಹುದು? ಒಂದು ವೇಳೆ ಒಪ್ಪದಿದ್ದರೆ..ಅಂತನ್ನಿಸಿದಾಗ ಸ್ವಲ್ಪ ಪೆಚ್ಚಾಯಿತು. ಅವಳನ್ನೇ ಮದುವೆಯಾಗ್ತೀನಿ ಅನ್ನುವ ಹಠದಿಂದ, ತಾಯಿಯನ್ನು ದೂರ ಮಾಡಿಕೊಳ್ಳುವವನಂತೂ ಅವನಲ್ಲ. ಆದರೆ ಅಮ್ಮ ಒಪ್ಪದಿದ್ದರೆ ನಿರ್ಮಲೆಯನ್ನು ಬಿಡುವ ಮನಸ್ಸೂ ಇಲ್ಲ. ಅಮ್ಮ ಒಪ್ಪಿ ನಿರ್ಮಲ ಒಪ್ಪದಿದ್ದರೇ.. ಅಥವಾ ನಿರ್ಮಲ ಒಪ್ಪಿ ಅಮ್ಮ ಒಪ್ಪದಿದ್ದರೇ ಥೂ ಹಾಳು ಮನಸ್ಸು ಏನೇನನ್ನೋ ಯೋಚಿರುತ್ತೆ. ಬರೀ ಕನಪ್ಯೂಶನ್ ಎಂದುಕೊಂಡು ಎದ್ದು ಬಟ್ಟೆ ಬದಲಾಯಿಸಿ, ಕೈ ಕಾಲು ಮುಕ ತೊಳೆದು. ಬಂದು, ಹಾಸಿಗೆಯ ಮೇಲೆ ಬಿದ್ದುಕೊಂಡ.

ಬೆಟ್ಟ ಹತ್ತಿದ ಆಯಾಸಕ್ಕೋ ಏನೋ, ಚೆನ್ನಾಗಿ ನಿದ್ದೆ ಬಂತು. ಎದ್ದಾಗ ಕತ್ತಲೆಯಾಗುತ್ತಾ ಬಂದಿತ್ತು.ಮನಸ್ಸು ಹಗುರವಾಗಿತ್ತು. ಮತ್ತೊಮ್ಮೆ ಒಂದು ಕಪ್ ಕಾಫಿ ಕುಡಿದು ಸಿದ್ದನಾಗಿ, ಮನೋಜನನ್ನು ಎತ್ತಿಕೊಂಡು ತಿರುಗಾಡಲೆಂದು ಹೊರಟ. ಕಾಲುಗಳು ಸೀದಾ, ಕ್ಲಿನಿಕ್‌ನ ದಾರಿಯನ್ನು ಹಿಡಿದವು.

ಕ್ಲಿನಿಕ್‌ನಲ್ಲಿ ದೀಪ ಉರಿಯುತ್ತಿದ್ದುದನ್ನು ಗಮನಿಸಿ, ಇಣುಕಿದ. ಒಳಗೆ ಯಾರೂ ಇದ್ದಂತಿರಲಿಲ್ಲ. ಭಾನುವಾರ, ಪೇಶೆಂಟ್ಸ್‌ಯಾರೂ ಬರುಲ್ಲ, ಆದರೂ ಕ್ಲಿನಿಕ್ ಬಾಗಿಲು ತೆಗೆದಿದೆ ಎಂದುಕೊಂಡು, ಸೀದಾ ಒಳಗಿನ ಕೋಣೆಗೆ ಬಂದ. ತನ್ನ ಛೇರಿನಲ್ಲಿ ಕುಳಿತು ಓಜುತ್ತಿರುವ ನಿರ್ಮಲೆಯನ್ನು ಕಂಡ. ಯಾರೋ ಬಂದ ಸಪ್ಪಳನಾದೆಂತೆನಿಸಿ, ಬೆಚ್ಚಿ ತಿರುಗಿದಳು. ಅವನು "ಹಲೋ.."ಎಂದಾಗ, "ಅರೆ ನೀವಾ?" ಎಂದಳು ಆಶ್ಚರ್ಯದಿಂದ.

"ನಾನೇ..ಮತ್ತೇಕೆ ಬಂದೆ ಅಂತ ಆಶ್ಚರ್ಯವಾಗ್ತಿದೆ ಅಲ್ವಾ? ನಾನು ಒಂದು ಮುಖ್ಯವಾದ ಮಾತನ್ನು ಕೇಳುವುದನ್ನು ಮರೆತಿದ್ದೆ" ಎಂದು ಹೇಳತ್ತಾ, ಅವಳ ಎದುರಿನ ಕುರ್ಚಿಯಲ್ಲಿ ಕುಳಿತ. ಅವಳು ಆಶ್ಚರ್ಯದಿಂದ ಹುಬ್ಬೇರಿಸಿದಳು. ನೇರವಾಗಿ ಅವಳನ್ನೇ ನೋಡುತ್ತಾ ಕೇಳಿದ

"ನನ್ನನ್ನು ಮದುವೆಯಾಗ್ತೀರಾ ನಿರ್ಮಲಾ?"

"ಆಂ?" ಎಂದಳು ಕಣ್ಣರಳಿಸಿ, ಅರ್ಥವಾಗದವಳಂತೆ.

ಮತ್ತೆ ಅದೇ ಮಾತನ್ನು ಹೇಳಿದ. "ನನ್ನನ್ನು ಮದುವೆ ಆಗ್ತೀರಾ ಅಂತ ಕೇಳಿದೆ."

"ಹಾಗೇ ದಿಡೀರನೇ ಕೇಳಿದರೆ ಹೇಗೆ ಉತ್ತರ ಹೇಳೋದು?"

"ಯಾಕೆ? ಏನು ಪ್ರಾಬ್ಲಂ?"

"ಪ್ರೀತಿ, ಪ್ರೇಮ,ಮದುವೆ ಬಗ್ಗೆ ಎಂದೂ ತಲೆ ಕೆಡಿಸಿಕೊಂಡವಳಲ್ಲ ನಾನು, ತಕ್ಷಣ ಹೇಗೆ ಹೇಳಲಿ?"

"ಹಾಗಾದ್ರೆ ಯಾವಾಗ ಹೇಳ್ತೀರಿ? ನಿಮ್ಮ ಪೇರೆಂಟ್ಸ್‌ನ ಕೇಳ್ಬೇಕಾ?" ಸ್ವಲ್ಪ ಅಸಹನೆಯಿಂದ ಕೇಳಿದ.

"ನಿಮಗೆ ಏಕೆ ಆತುರ? ಇದೆಲ್ಲಾ ದುಡುಕಿ ತೆಗೆದುಕೊಳ್ಳುವ ತೀರ್ಮಾನವಲ್ಲ"

"ಅಂದ್ರೇ..ನನಗೆ ದುಡುಕು ಅಂತ ಜ್ಞಾಪಿಸ್ತಿದೀರಿ ಅಲ್ವಾ? ಇರ್ಲಿ.. ಯಾಕೇಂದ್ರೆ ನಾನು ಚಿಕ್ಕವನಲ್ಲ. ಯೌವನ ಕಳೆದು ಹೋಗುತ್ತಿರುವವನು. ಇದುವರೆಗೂ ಮದುವೆ ಬಗ್ಗೆ ನಾನೂ ಕೂಡಾ ತಲೆ ಕೆಡಿಸಿಕೊಂಡಿರಲಿಲ್ಲ. ಆದರೆ ಈಗ ಅನಿಸಿಕೆ ಬಂದಿರುವಾಗ, ಬೇಗ ಮದುವೆ ಮಾಡಿಕೊಂಡು ಬಿಡಬೇಕು ಅಂತ ನನ್ನ ರಿಕ್ವೆಸ್ಟ್..ಅಷ್ಟೇ.."

ನಿರ್ಮಲ ತಲೆ ಆಡಿಸುತ್ತಾ ನಕ್ಕಳು. "ಹೀಗೆ ಎದುರಿಗೆ ಕೂತುಕೊಂಡು ಪ್ರಶ್ನೆ ಕೇಳಿ. ತಕ್ಷಣ ಉತ್ತರ ತಿಳಿದುಕೊಳ್ಳುವುದಕ್ಕೆ ಇದು ನಿಮ್ಮ ಸ್ಟೂಡೆಂಟ್ ಅಲ್ಲ. ನನಗೆ ಸ್ವಲ್ಪ ಕಾಲಾವಕಾಶ ಬೇಕು. ತಕ್ಷಣ ಹೇಳುಕ್ಕೆ ಖಂಡಿತಾ ಆಗುಲ್ಲ."

"ಹಾಗಾದ್ರೆ ನಾನು ಇನ್ನೂ ಹತ್ತು ಹದಿನೈದು ನಿಮಿಷ ಬಿಟ್ಟು ಬರ್ತೀನಿ. ಅಷ್ಟು ಹೊತ್ತಿಗೆ ಉತ್ತರ ರೆಡಿಯಾಗಿರಬೇಕು. ಹಾಗೇ ಒಂದ್ಮಾತು..ನನಗೆ ನಿರಾಸೆ ಯನ್ನುಂಟು ಮಾಡುವ ಉತ್ತರ ಹೇಳುಲ್ಲ ಅಂತ ನಂಬ್ತೀನಿ" ಎನ್ನುತ್ತಾ ಅಲ್ಲಿಂದ ಹೊರಟ.

ನಿರ್ಮಲ ಪೇಚಿಗೆ ಸಿಕ್ಕಿ ಬಿದ್ದಳು. ಬೇಜಾರು ಅಂತ ಮನೆಯಿಂದ ಆಚೆ ಇಲ್ಲಿ ಬಂದು ಕುಳಿತರೆ, ತಕ್ಷಣ ಹೀಗೆ ಬಂದು ಪೀಡಿಸ್ತಾನಲ್ಲ ಅಂತ ಅಂದುಕೊಂಡರೂ, ಆಳವಾಗಿ ಯೋಚಿಸತೊಡಗಿದಳು.

ನನ್ನನ್ನು ಮದುವೆಯಾಗ್ತೀನಿ ಅಂತ ಮುಂದೆ ಬಂದಿರುವವನು ಇವನೊಬ್ಬನೇ. ಇವನ ಧೈರ್ಯಕ್ಕೆ ಮೆಚ್ಚಬೇಕು. ಎಲ್ಲಾ ರೀತಿಯಿಂದಲೂ ನನಗೂ ಅವನಿಗೂ ಅಸಮ ಅಂತ ಗೊತ್ತಿದ್ದರೂ, ಸ್ನೇಹವನ್ನೂ ಮುಂದಿಟ್ಟುಕೊಂಡು ಪ್ರೀತಿಯ ಮಾತುಗಳನ್ನಾಡಿ. ನನ್ನನ್ನು ಮದುವೆಯಾಗುನ ಬಯಕೆಯನ್ನು ಹೊತ್ತಿದ್ದಾನೆ. ಒಂದುವೇಳೆ ನಾನೀಗ ಒಪ್ಪದಿದ್ದರೇ..ಏನಾಗಬಹುದು? ಅವನು ಬೇರೆ ಯಾರನ್ನಾದರೂ ಮದುವೆ ಯಾಗಬಹುದು. ಅಥವಾ ಹಾಗೇ ಇರಬಹುದು. ಆದರೆ ಆದರಿಂದ ನನಗಾಗುವ ಲಾಭ ಅಥವಾ ನಷ್ಟ? ನನ್ನ  ಅವನ ಸ್ನೇಹ ಮುಂದುವರೆಯದೇ ಇರಬಹುದು. ನನ್ನನ್ನು ಮದುವೆಯಾಗಲು ಮತ್ತೆ ಯಾರೂ ಕೇಳಿಕೊಂಡು ಬರಲಾರರು. ನಾನು ಹೀಗೇ ಇರಬೇಕಾಗಬಹುದೇನೋ ಆದರೆ.. ನನಗೆ ಈ ತರಹದ ಲೈಫ್ ಬೇಜಾರಾಗಿ ಬಿಟ್ಟಿದೆ. ನನಗೂ ನನ್ನ ಗಂಡ, ನನ್ನ ಸಂಸಾರ ಎನ್ನುವ ಆಸೆ ಬರುತ್ತಿದೆ. ನನ್ನನ್ನು ಯಾರೋ ಒಬ್ಬ ಡಾಕ್ಟರಾಗಲೀ, ಇಂಜನಿಯರ್ ಆಗಲಿ, ಈಗ ತಾನಾಗಿಯೇ ಬಂದು ಮದುವೆ ಆಗ್ತಾನ್ಯೆ? ಇಷ್ಟು ದಿನಗಳು ಕಾಡದ ಆಸೆಯನ್ನು ಈಗ ಹೇಗೆ ತಡೆದುಕೊಳ್ಳಲಿ? ನಮ್ಮ ತಂದೆ ತಾಯಿ, ಈ ವಿಚಾರದ ಬಗ್ಗೆ ಯಾವ ಚಿಂತೆಯನ್ನೂ ಇಟ್ಟುಕೊಳ್ಳದವರು.. ಈಗ ನಾನೇ ಯೋಚಿಸಬೇಕು. ನಾನೇ ತೀರ್ಮಾನಿಸಬೇಕು..ಈಗ ಒಂದೇ ಇವನನ್ನು ಒಪ್ಪಬೇಕು, ಇಲ್ಲದಿದ್ದರೆ ಲೈಫ್ ಲಾಂಗ್ ಹೀಗೇ ಇರಬೇಕು. ಮತ್ತೆ ಮತ್ತೆ ಸ್ನೇಹಿತರನ್ನೂ ಹುಡುಕಿ ಆರಿಸುವ ಸ್ವಾಭಾವ ನನ್ನದಂತೂ ಅಲ್ಲ. ಈಗ ಇವನ ಸ್ನೇಹ ಕೂಡಾ ಕಳೆದುಕೊಳ್ಳುವ ಸಮಯ ಬರುತ್ತಿದೆ. ಈ ಅವಕಾಶ ಕಳೆದುಕೊಂಡರೆ ನಾನು ಮೂರ್ಖಳಾಗಬಹುದು. ಆಗ ನನಗೆ ನಾನೇ ಅನ್ಯಾಯ ಮಾಡಿಕೊಂಡಂತಾಗುತ್ತದೆ.

ಹೀಗೆ ಅವಳು ಯೋಚಿಸುತ್ತಿರುವಂತೆಯೇ, ರಂಗನಾಥ ಮತ್ತೆ ಬಂದ. ಕೈಯಲ್ಲಿ ಏನೋ ಪ್ಯಾಕೆಟ್ ಹಿಡಿದಿದ್ದ.

"ಏನು ಯೋಚಿಸ್ತಿದಿರಿ ಮೇಡಂ ನಾನು ಬಂದಾಯ್ತು"ಹೇಳಿದ.

"ಅದೇನು ಪ್ಯಾಕ್ ಕೈನಲ್ಲಿ....?" ಕೇಳಿದಳು ಅದನ್ನೇ ನೋಡುತ್ತಾ.

"ನಿಮಗೆ ಇಷ್ಟ ಅಂತ, ಸ್ವೀಟ್ಸ್ ತಂದಿದೀನಿ."

"ಹಾಗಾದ್ರೆ ಕೊಡಿ. ತಿಂದುಬಿಟ್ಟೇ ನಿಮಗೆ ಬೇಕಾದ ನ್ಯೂಸ್ ತಿಳಿಸ್ತೀನಿ." ಎಂದಳು ಮುಗುಳ್ನಗುತ್ತಾ,

ತನಗೆ ಬೇಕಾದುತ್ತರ ತಿಳಿದಂತಾಯಿತು ಎಂದುಕೊಂಡು ಸ್ವೀಟ್ಸ್ ಪ್ಯಾಕೆಟ್ಟ ನ್ನು

ಅವಳ ಕೈಗಿತ್ತ. ಅವಳು ಅದನ್ನು ಒಪನ್ ಮಾಡಿ, ಒಂದು ಪೀಸನ್ನು ಅವನ ಕೈಗಿತ್ತು.

"ತಿನ್ನಿ ಪ್ಲೀಸ್.."ಎಂದಳು

"ಥ್ಯಾಂಕ್ ಯೂ ನಿರ್ಮಲಾ." ಎಂದ ಅರ್ಥಮಾಡಿಕೊಂಡವನಂತೆ.

"ಎಲ್ಲಾ ಸರಿ. ಬರೀ ನನ್ನ ಒಪ್ಪಿಗೆ ಮುಖ್ಯವಲ್ಲ. ನಿಮ್ಮ ತಾಯಿ ಒಪ್ತಾರಾ? ನನಗೇನೋ ಅನುಮಾನ?"

"ನಿಮಗ್ಯಾಕೆ ಅನುಮಾನ? ನಮ್ಮಮ್ಮನ್ನ ಒಪ್ಪಿಸುವ ಜವಾಬ್ದಾರಿ ನನ್ನದು, ಎದೆ ಮೇಲೆ ಕೈ ಇಟ್ಟುಕೊಂಡು ಹೇಳಿದ. ನನ್ನಂತಹ ಕುಂಟಿಯನ್ನು ಸೊಸೆಯನ್ನಾಗಿ ಮಾಡ್ಕೋತಾರಾ? ಆ ಬಗಗೆ ಎಂದಾದ್ರೂ ಯೋಚಿಸಿದ್ದೀರಾ?"

"ಹಾಗೆಲ್ಲಾ ಏನಿಲ್ಲ. ಅಮ್ಮ ಸ್ವಲ್ಪ ಹಳೇ ಕಾಲದವಳು. ಆದರೆ ಅವಳ ಒಬ್ಬನೇ ಮಗ ಮದುವೆ ಆಗ್ತಿದಾನೆ ಅಂದ್ರೆ. ಅದಕ್ಕೆ ಖಂಡಿತಾ ಅಡ್ಡಿ ಬರುಲ್ಲ. ಹಾಗೇ ನಿಮ್ಮ ಮದುವೆ ಆಗ್ತಿದಾನೆ ಅಂದ್ರೆ ಅದಕ್ಕೆ ಖಂಡಿತಾ ಅಡ್ಡಿ ಬರುಲ್ಲ. ಹಾಗೇ ನಿಮ್ಮ ಪೇರೆಂಟ್ಸ್‌ದೂ ಏನೂ ಅಬ್ಜೆಕ್ಷನ್ ಇರುಲ್ಲ ಅಂತ ಅಂದೊಂಡಿದೀನಿ."

"ನಮ್ಮ ಪೇರೆಂಟ್ಸ್‌ಗೂ ಇನ್ನೂ ಏನೂ ಗೊತ್ತಿಲ್ಲ. ಅವರಿಗೆ ನಾನು ಹೇಳ್ತೀನಿ.. ಆಮೇಲೆ ನಿಮ್ಮ ಪರಿಚಯ ಮಾಡಿಸ್ತೀನಿ."

"ಹಾಗಾದ್ರೆ.. ಈಗ ನಮ್ಮ ಮನೆಗೆ ಕರೆದುಕೊಂಡು ಹೋಗ್ತೀನಿ ಬರ್ತೀರಾ?"

"ಈಗ ಬೇಡ, ನನ್ನನ್ನು ನೋಡಿದಾರಲ್ಲ.."

ಈ ಮಾತಿಗೆ ರಂಗನಾಥ ಪೆಚ್ಚಾದ. ಅಮ್ಮನಿಗೆ ಮತ್ತೊಮ್ಮೆ ಅವಳನ್ನು ತೊರಿಸಿ, ಆಮೇಲೆ ಒಪ್ಪಿಗೆ ಕೇಳುವ ಆಸೆ ಆಗಿತ್ತು. ಆದರೆ ಅವಳನ್ನು ಬಲವಂತ ಮಾಡುವ ಇಚ್ಛೆ ಆಗಲಿಲ್ಲ. ಸ್ವಲ್ಪ ಹೊತ್ತು ಸುಮ್ಮನಿದ್ದ ನಿರ್ಮಲ ಹೇಳಿದಳು.

"ನೀವು ದುಡುಕಿ, ನಿರ್ಧಾರಕ್ಕೆ ಬರಬೇಡಿ..ನಿಧಾನವಾಗಿ ಯೋಚಿಸಿ.. ಆಮೇಲೆ ಪಶ್ಚಾತ್ತಾಪ ಪಡಬಾರದು."

"ಹಾಗಾದ್ರೆ ನನ ಮೇಲೆ ನಿಮಗೆ ವಿಶ್ವಾಸವಿದೆ. ಪ್ರೀತಿ ಇದೆ. ಆದರೆ ಮಾತು ಇದೆಲ್ಲಕ್ಕಿಂತ ಬೇರೆ ಅಲ್ವಾ? ಪ್ರೀತಿ ಪ್ರೇಮ ನಮ್ಮಿಬ್ಬರಿಗೆ ಸೇರಿದ್ದು. ಆದರೆ ಮದುವೆ ಮಾತು, ನಮ್ಮಿಬ್ಬರ ಪೇರೆಂಟ್‌ಗೂ ಸೇರಿರುತ್ತೆ ಅಲ್ವಾ? ಅದ್ದರಿಂದ ನಿಮ್ಮ ತಾಯೀನೂ ಒಪ್ಪಿದ ಮೇಲೆ ತಿಳಿಸಿ, ಒಂದು ವೇಳೆ ಒಪ್ಪದಿದ್ದರೆ, ನಿಮಗೆ ನಿರಾಸೆಯಾಗುತ್ತೆ"

"ಮತ್ತೆ ಹೊಸರಾಗದ ಜಾಡಿನಲ್ಲಿ, ಅದೇ ಹಳೇರಾಗ ಹಾಡ್ತದೀರಲ್ಲ. ಆಗ್ಲೇ ಹೇಳಿದ್ನಲ್ಲ. ನಮ್ಮ ತಾಯೀನ ನಾನು ಒಪ್ಪಿಸ್ತೀನಿ." ಇನ್ನೂ ಅಲ್ಲೇ ಇದ್ದರೆ ಅವಳು ಮತ್ತೆ ಮತ್ತೆ ಅದೇ ಮಾತನಾಡಿ, ತನ್ನ ನಿರ್ಧಾರವನ್ನು ಸಡಲಿಸಿಯಾಳು ಎಂಬ ಭಯದಿಂದ ಎದ್ದ.

"ಸಾರಿ ನಿರ್ಮಲಾ.. ನಿಮಗೆ ಹೊತ್ತಲ್ಲದ ಹೊತ್ತಿನಲ್ಲಿ ಬಂದು ಬೇಜಾರು ಮಾಡಿದೆ ಅಂತ ಅನ್ನಿಸುತ್ತೆ"

"ಅಬ್ಬಾ.. ಒಳ್ಳೋ ಮನುಷ್ಯರಪ್ಪಾ ನೀವು. ಏನೇನೋ ಕಲ್ಪಿಸಿಕೊಂಡು ಮಾತಾಡ್ತೀರಿ. ನಾನೆಲ್ಲಿ ಹಾಗೆ ಹೇಳಿದೆ ಈಗ?"

"ಯಾಕೋ ಹಾಗನ್ನಿಸ್ತು. ನಾನು ನಾಳೆ ಮತ್ತೆ ಬರ್ತೀನಿ. ಅದೇನು ಯೋಚಿಸ್ತೀರೋ ಎಲ್ಲಾ ಯೋಚಿಸಿ ತೀರ್ಮಾನಕ್ಕೆ ಬನ್ನಿ, ನನ್ನ ಬಗ್ಗೆ ಏನೇನು ಕೇಳಿ ತಿಳಿದುಕೊಳ್ಳಬೇಕೋ

ಅದನ್ನೆಲ್ಲ ಕೇಳಿಬಿಡಿ."

"ಆಯ್ತು ಹಾಗೇ ಮಾಡ್ತೀನಿ. ಈಗ ಟೈಂ ಎಷ್ಟಾಯ್ತು ಗೊತ್ತಾ?"

"ಹೂಂ ಗೊತ್ತು. ನಾನೇನು ನಿಮ್ಮ ಪೇಶೆಂಟ್ ಅಲ್ಲವಲ್ಲಾ? ಅಪಾಯಿಂಟ್ ಮೆಂಟ್ ಪ್ರಕಾರ, ಟೈಂಗೆ ಸರಿಯಾಗಿ ಬಂದು, ಟೈಂಗೆ ಸರಿಯಾಗಿ ಹೋಗುಕ್ಕೆ."

"ನನ್ನ ಪೇಶೆಂಟ್ಸ್ ಎಷ್ಟೋ ವಾಸಿ ನಾನ ಹೇಳಿದಂತೆ ಕೇಳ್ತಾರೆ."

"ನಾನು ನಿಮ್ಮ ಪೇಶೆಂಟ್ ಅಲ್ಲ.. ಪ್ರಿಯತಮ.." ಅವಳೆಡೆ ಬಗ್ಗಿ ಹೇಳಿದಾಗ ನಿರ್ಮಲ ಹಿಂದಕ್ಕೆ ಸರಿದಳು. ಅವನು ಮತ್ತೇನೂ ಹೇಳದೇ ಅಲ್ಲಿಂದ ನಡೆದ. ಅವನು ಹೋದ ಕೂಡಲೇ, ಕ್ಲಿನಿಕ್‌ನಲ್ಲಿಆವರಿಸಿದ ಮೌನ ಅವಳನ್ನು ಮಂಕು ಮಾಡಿತು. ಈ ಮಂಕುತನ, ಈ ಒಂಟಿತನ ಹೊಗಿಸುಕ್ಕೆ ಅವನು ಬೇಕೇ ಬೇಕು, ಎಂದುಕೊಂಡು ಕ್ಲಿನಿಕ್‌ನ ಬಾಗಿಲನ್ನು ಮುಚ್ಚಿ,ಮನೆಗೆ ಹಿಂದಿರುಗಿದಳು.

ಸಾಯಂಕಾಲದ ಹೊತ್ತು, ಚಿಕ್ಕ ಮಗುವನ್ನು ಕರೆದುಕೊಂಡು, ಇಷ್ಟೇ ಹೊತ್ನಲ್ಲಿ ಎಲ್ಲಿ ಹೋದ್ನಪ್ಪಾ. ಇಷ್ಟು ಹೊತ್ತಾದರೂ ಬರಲಿಲ್ಲವಲ್ಲ ಎಂದು ಯೋಚಿಸುತ್ತಾ ಕಾವೇರಮ್ಮ ತಲೆಬಾಗಿಲಲ್ಲಿ ನಿಂತಿದ್ದಳು. ಸಂತಸದ ಕಳೆಯನ್ನು ಮುಖದಲ್ಲಿ ಹೊತ್ತು ಬಂದ ಮಗನನ್ನು ನೋಡಿ, ಅವಳ ಆತಂಕ ಮರೆಯಾಯಿತು ಮನೋಜನನ್ನು ಅವನ ಕೈನಿಂದ ಎತ್ತುಕೊಂಡು.

"ಎಷ್ಟು ಹೊತ್ತಾಗಿದೆ. ಬೇಗ ಬಾ..ಊಟಕ್ಕೆ ಬಡಿಸ್ತೀನಿ" ಎನ್ನುತ್ತಾ ಒಳ ನಡೆದಳು. ಮನೋಜನಿಗೆ ಬಿಸಿ ಬಿಸಿ. ಅನ್ನವನ್ನು ತಿಳಿಸಾರು ತುಪ್ಪ ಹಾಕಿ ಕಲೆಸಿ ತಿನ್ನಿಸಿದಳು. ಮಗನಿಗೆ ತಟ್ಟೆಹಾಕಿ, ನೀರನ್ನಿಟ್ಟು ಅನ್ನ ಬಡಿಸಿದಳು. ಮಗ ಮೌನವಾಗಿ ಊಟವನ್ನು ಬೇಗ ಮುಗಿಸಿ ಎದ್ದಾಗ ಆಶ್ಚರ್ಯವಾಗಿತ್ತು. ಈಚೀಚೆಗೆ ಏನಾಗಿದೆ ಇವನಿಗೆ ಎಂಬ ಚಿಂತೆ ಬಂದು ಮರೆಯಾಯಿತು. ಮನೋಜ ಹಾಗೇ ತೊಡೆಯ ಮೇಲೇ ನಿದ್ದೆಹೋಗಿದ್ದ. ಅವನನ್ನು ಎತ್ತಿ ಹಾಸಿಗೆಯ ಮೇಲೆ ಮಲಗಿಸಿದಳು.

ತಾಯಿ, ಉಳಿದ ಕೆಲಸ ಮುಗಿಸಿ, ಅಡಿಗೆಮನೆ ದೀಪ ಆರಿಸಿ. ಬಾಗಿಲು ಹಾಕಿ ಮನೋಜನ ಪಕ್ಕದಲ್ಲಿ ಬಂದು ಮಲಗಿದಾಗ ಅಲ್ಲಿಯೇ ಸುತ್ತಾಡುತ್ತಿದ್ದ ರಂಗನಾಥ ಬಂದು, ತಾಯಿಯ ಬಳಿ ಕುಳಿತ. ತಾಯಿ ಏನು ಅಂಬಂತೆ, ಅವನನ್ನೇ ನೋಡಿದಾಗ ಅನುಮಾನದೊಂದಿಗೆ ಮಾತು ಪ್ರಾರಂಭಿಸಿದ.

"ಅಮ್ಮಾ...ನಾನು ಮದುವೆಯಾಗ್ಬೇಕು ಅಂತ ಅಂದ್ಕೊಂಡಿದೀನಿ"

ಕಾವೇರಮ್ಮ ಜಗ್ಗನೆ ಎದ್ದು ಕುಳಿತು, ಆಶ್ಚರ್ಯದಿಂದ ನೋಡಿದಾಗ ಅವನು ಮರುನುಡಿದ.

"ಯಾಕಮ್ಮಾ ಆಷ್ಚರ್ಯಾನಾ? ನನ್ನ ಮಾತುಕೇಳಿ.."

"ನಂಗೆ ನಂಬಿಕೇನೇ ಆಗ್ತಿಲ್ಲವೋ..ಇನ್ನ ಮದುವೆ ಮಾತನ್ನೇ ಎತ್ತಿರಲಿಲ್ಲ. ನಾವ್ಯಾರೂ.. ಅದಕ್ಕೆ ನೀನೇ ಆಡ್ತದೀಯಾ ಅಂತ."

"ಹೌದಮ್ಮಾ.. ಇದುವರೆಗೂ ಆ ಮಾತೇ ಬಂದಿರಲಿಲ್ಲ. ನಿಜ ಆದ್ದರಿಂದ ಈ ದಿನ ನಾನಾಗೇ ಆಡ್ತಿದೀನಿ. ನಿನಗೆ ಬೇಜಾರಾಯ್ತಾ?"

"ಬೇಜಾರು ಯಾಕಪ್ಪಾ? ನಿನಗೂ ಮದುವೆ ಆಗಬೇಕಾದ್ದು ನ್ಯಾಯ ತಾನೇ ಮದುವೆಯಾಗುವ ವಯಸ್ನಲ್ಲಿ ಮದುವೆ ಆಗಿದ್ದರೆ ಚೆನ್ನಾಗಿತ್ತು. ಈಚೆಗೆ ಮದುವೆಯ

ವಯಸ್ಸು ಮೀರಿ ಹೋಗಿತ್ತು. ನನಗೆ ನಿನ್ನ ಹತ್ತಿರ ಮಾತನಾಡುವ ಧೈರ್ಯವೇ ಇರುತ್ತಿರಲಿಲ್ಲ" ಈ ಮಾತನ್ನು ಸುಮ್ಮನೇ ಎಂಬಂತೆ ಆಡಿದ್ದಳು.

"ವಯಸ್ಸು ಎಲ್ಲಮ್ಮಾ ಮೀರಿದೆ? ಎರಡನೇ ಮದುವೆಯಾಗುವ ವಯಸ್ಸು ಅನ್ನು" ತನ್ನ ಜೋಕಿಗೆತಾನೇ ನಕ್ಕ.

"ವಯಸ್ಸು ಮೀರಿದ್ರೆ ಮದುವೆ ಆಗ್ಬಾರ್ದು ಅಂತೇನೂ ಇಲ್ಲ. ನೀನಾಗೇ ಹೇಳಿದ್ದಕ್ಕೇ ಈ ಮಾತು ಬಂತು. ಅದ್ಸರಿ ಇದ್ದಕ್ಕಿದ್ದಂತೆ ನೀನು ಈ ಮಾತನಾಡಲು ಏನೋ ಕಾರಣ ಇರಬೇಕು."

"ಯಾಕಮ್ಮಾ ನಿನಗೆ ಸಂತೋಷವಾಗ್ತಿಲ್ವಾ ಅಥವಾ ಗಾಭರೀನಾ?"

"ಸಂತೋಷವಾಗದೇ ಇರುತ್ತೇನೋ? ಗಾಭರಿ ಪಡುವಂತಹದು ಏನು ನಿನಗ್ಯಾಕೆ ಹಾಗನ್ನಿಸ್ತು?"

"ನಾನು ಮದುವೆ ಆದರೆ, ಬರುವಳು ಮನೋಜನ್ನ ಚೆನ್ನಾಗಿ ನೋಡ್ಕೋ ತಾಳೋ ಇಲ್ಲವೋ ಅಂತ, ಆತಂಕ ಇಲ್ಲದೆ ಇರುತ್ತಾ ನಿನಗೆ. ಆದರೆ ಆ ಆತಂಕ ಬೇಡ ನಿನಗೆ. ಅವನನ್ನು ಚೆನ್ನಾಗಿ ನೋಡಿಕೊಳ್ಳುವ ಪೂರ್ಣ ಜವಾಬ್ದಾರಿ ನನ್ನದು. ನನ್ನ ಮದುವೆ ಆಗಲಿ, ಬಿಡಲಿ, ಅವನನ್ನು ನನ್ನ ಮಗನಂತೆ ಸಾಕ್ತೀನಿ. ಅನೂರಾಧಂಗೆ ಕೊಟ್ಟ ಭಾಷೆಯನ್ನು ಯಾವ ಕಾರಣಕ್ಕೂ ಅಳಿಸಿ ಹಾಕುವುದಿಲ್ಲ.

ತಾಯಿಗೆ ಕಣ್ಣೀರು ತುಂಬಿ ಬಂತು. "ನನಗೆ ಆ ಚಿಂತೆ ಇಲ್ಲಪ್ಪಾ. ಅನೂರಾಧಳ ನೆನಪಾಯ್ತು. ಅವಳು ಬದುಕಿದಿದ್ದರೆ, ಅಣ್ಣನ ಮದುವೆ ಅಂತ ಎಷ್ಟು ಸಂಭ್ರಮ ಪಡುತ್ತಿದ್ದಳೋ."

"ನನಗೆ ಸಂಭ್ರಮದ ಮದುವೆ ಬೇಡಮ್ಮ. ಒಂದು ವೇಳೆ ಅವಳು ಬದುಕಿದ್ದಿದ್ದರೆ, ನನ್ನ ಮದುವೆಗೆ ಅವಳ ಮನೆಯವರು, ಅವಳನ್ನ ಕಳಿಸ್ತಿದ್ರು ಅಂತ ಹೇಗೆ ಗೊತ್ತು ನಾನು ಸಿಂಪಲ್ಲಾಗಿ ರಿಜಿಸ್ಟರ್ಡ್ ಮ್ಯಾರೇಜ್ ಆಗ್ತಿದೀನಿ. ಯಾರಿಗೂ ತಿಳಿಸಬೇಕಾಗಿಲ್ಲ."

"ಅಂದ್ರೇ..ನೀನೇ ಎಲ್ಲಾ ತೀರ್ಮಾನಿಸಿದೀಯ ಅನ್ನು ಹಾಗಾದ್ರೆ.."

"ಹೂನಮ್ಮ.. ನೀನು ಏನಾದ್ರೂ ತಿಳಕೋ.. ನನ್ನ ಹೆಂಡತಿಯಾಗುವವಳನ್ನು ಸಹ ನಾನೇ ಸೆಲೆಕ್ಟ್ ಮಾಡಿಕೊಂಡಿದೀನಿ."

"ಅಂ ಏನು, ನೀನೇ ಹುಡುಕಿಕೊಂಡಿದೀಯಾ ಹಾಗಾದ್ರೆ ಲವ್ ಮ್ಯಾರೇಜ್ ಅನ್ನೂ"

"ಹೂಂ ಮತ್ತೆ, ನನ್ನಂತಹವನಿಗೆ ಲವ್ ಮ್ಯಾರೇಜ್ ತಾನೇ ಗತಿ?"

ಆ ಮಾತು ಆಕೆಗೆ ರುಚಿಸಲಿಲ್ಲ. ಅಸಹನೆಯಿಂದ ಹೇಳಿದಳು.

"ಸರಿ ಬಿಡು.ಮದುವೆ ಆದ್ಮೇಲೆ ನನನಗೆ ತಿಳಿಸಿದ್ದರೂ ಆಗ್ತಿತ್ತು?"

"ಯಾಕಮ್ಮಾ ಹೀಗಂತೀಯ? ನಿನಗೆ ತಿಳಿಸದೇ ಮದುವೆ ಆಗ್ತೀನಾ? ನಿನ್ನ ಸೊಸೆ ಆಗುವವಳು ಯಾರು ಅಂತ ಕೇಳಲೇ ಇಲ್ಲ ನೀನು?"

" ಕೇಳುವುದಕ್ಕೆ ಏನುಳಿದಿದೆ ಹೇಳು.. ಅದನ್ನು ನೀನೇ ಹೇಳಿಬಿಡು"

"ನೋಡಿದ್ಯಾ ನಿನಗೆ ಸಿಟ್ಟು ಬಂದಿದೆ.."

"ನನ್ನ ಸಿಟ್ಟಿಗೆ ಯಾರು ಕೇರ್ ಮಾಡ್ತಾರೆ? ಏನು ಹೇಳತೀಯೋ ಅದನ್ನು ಹೇಳಿದರೆ ತಾನೇ ಅರ್ಥವಾಗುವುದು? ಯಾರು ಆ ಹುಡುಗಿ?"

" ನಿರ್ಮಲಾ ಅಂತ ಕಣಮ್ಮಾ ... ಅದೇ ಡಾಕ್ಟರು. ಅವತ್ತು ಮನೋಜನ್ನ ನೋಡೋಕೆ ಅಂತ ಕರಕೊಂಡು ಬಂದಿದ್ನಲ್ಲ..... ಅವಳು."

ತಾಯಿ ಜೋರಾಗಿ ನಕ್ಕು ಬಿಟ್ಟಳು. "ಸುಮ್ಮನೇ ತಮಾಷೆ ಮಾಡಬೇಡ. ನಿದ್ದೆ ಬರ್ತಿದ್ರೆ ಎದ್ದು ಹೋಗಿ ಮಲಕ್ಕೋ.."

"ನನ್ನ ಮಾತು ತಮಾಷೆಯಾಗಿ ಕಾಣುತ್ತೇನಮ್ಮ ನಿನಗೆ? ನಾನು ಎಂದು ಹೀಗೆಲ್ಲಾ ತಮಾಷೆ ಮಾಡಿದೀನಿ ಹೇಳು?"

"ಮತ್ತಿನ್ನೇನು? ಮಗೂನ ನೋಡೋಕೆ ಅಂತ ಬಂದ ಡಾಕ್ಟರು. ಅದರ ಮಾವನ್ನ ಮದುವೆ ಆಗ್ತಾಳೆ ಅಂತ ಅಂದ್ರೆ.. ನಗು ಬರದೇ ಏನು? ಹಾಗಾದ್ರೆ ಮೊದಲ್ನಿಂದ ಪರಿಚಯಾನಾ ನಿನಗೆ ಅವಳು?"

"ಏನಮ್ಮಾ ಹೀಗೆ ಕೇಳ್ತೀಯಾ? ಈ ಊರಿಗೆ ಬಂದು ಐದಾರು ತಿಂಗಳಾಗಿರ ಬಹುದು ಅಷ್ಟೇ? ಅವತ್ತೇ ಮೊದಲು, ನಾನು ಅವಳನ್ನು ನೋಡಿದ್ದು ಆದರೆ ಆಮೇಲೆ, ಮತ್ತೆ ಕ್ಲಿನಿಕ್‌ಗೆ ಒಂದೆರಡು ಸಲ ಹೋದ ಮೇಲೆ ನಮ್ಮ ಪರಿಚಯ ಸ್ನೇಹಕ್ಕೆ ತಿರುಗಿದ್ದು"

"ಅವಳೆಂತಹ ಡಾಕ್ಟರ್ರೋ.. ಕ್ಲಿನಿಕ್‌ಗೆ ಹೋದವರನ್ನೆಲ್ಲಾ ಹೀಗೇ ಪರಿಚಯ ಮಾಡ್ಕೋತಾಳಂತಾ? ಅವಳು ಹೋಗಲಿ.... ನೀನು ಅವಳನ್ನು ಏನೂಂತ ಒಪ್ಪಿದ್ಯೋ?"

"ಯಾಕಮ್ಮಾ, ಏನಾಗಿದ್ದಾಳೆ ಅವಳು? ರೂಪ ವಿದ್ಯೆ ಹಣ ಗುಣ ಯಾವುದು ಅವಳಲ್ಲಿ ಇಲ್ಲ ಹೇಳು...?"

"ಅದೆಲ್ಲಾ ಸರಿ.. ನನ್ನ ಬಾಯಿಂದಲೇ ಹೇಳಿಸಬೇಕೂಂತ ಅಂದುಕೊಂಡಿ ದಿಯೇನೋ.. ಅವಳಲ್ಲಿರುವ ಕುಂದು ನಿನಗೆ ಕಾಣಲಿಲ್ಲವೇನೋ?"

"ಅವಳ ಕಾಲಿನ ಬಗ್ಗೆ ಹೇಳ್ತಿದೀಯೇನಮ್ಮಾ.. ಅದರಿಂದ ತೊಂದರೆ ಏನು? ಅವಳ ಕೆಲಸ ಕಾರ್ಯ ಎಲ್ಲಾ ಅವಳೇ ಸ್ವತಂತ್ರವಾಗಿ ಮಾಡಿಕೋತಾಳಲ್ಲ.. ಇನ್ನೇನು ಕಷ್ಟ?"

"ಸರಿಯಪ್ಪಾ, ಅವಳು ಎಲ್ಲಾ ವಿಧದಲ್ಲೂ ನಿನಗೆ ಸರಿ ಅಂತ ಅನ್ನಿಸಿದ್ದಾಳೆ. ಎಲ್ಲಾಸರಿ. ಅವಳಿಗೆ ನಾವು ಯಾವ ವಿಷಯದಲ್ಲಿ ಸಮನಾಗಿದೀವಿ ಹೇಳು. ಅವಳು ಖಂಡಿತವಾಗಿಯೂ ನಿನ್ನನ್ನು ಒಪ್ಪಿದಾಳಾ..?"

"ಛೆ. ಏನಮ್ಮ ಹೀಗೆ ಕೇಳ್ತೀಯ? ಅವಳು ಒಪ್ಪದಿರುವಂತಹ ಕುಂದು ನಿನ್ನ ಮಗನಲ್ಲಿ ಏನಿದೆ ನೀನೇ ಹೇಳು....?"

"ಹಣ, ಅಂತಸ್ತು, ಅವರಿಗಿಲ್ಲ, ಅವಳೇ ಡಾಕ್ಟರು, ಸಂಪಾದನೆ ಮಾಡ್ತಾಳೆ. ಆ ಅಹಂಕಾರ ಅವಳಲ್ಲಿರುಲ್ವೇ..? ಹಾಗಿರುವಾಗ ಅಂತಹ ಕುಂಟೀನ ನೀನು ಮದವೆಯಾಗಬೇಕು ಅನ್ನವುದಾದರೂ ಯಾಕೆ?"

"ನೀನೂ ಇಂತಹ ಮಾತನಾಡ್ತಿಯಲ್ಲಮ್ಮಾ.. ಅವಳು ಅಷ್ಟು ಕೆಟ್ಟವಳು ಅಂತ ಅನ್ನಿಸಲ್ಲಮ್ಮ. ಅವಳ ಪಾಡಿಗೆ ಅವಳು ಇರ್ತಾಳೆ. ನಾವು ಅವಳಿಗೆ ಏನೂ ಮಾಡಬೇಕಾಗಿಲ್ಲ."

"ನಿನ್ನ ಮಾತು ಕೇಳಿದ್ರೆ ಸರಿ ಹೋಯ್ತು. ನಾವೂ ಅವಳಿಗೆ ಏನೂ ಮಾಡ

ಬೇಕಾಗಿಲ್ಲ. ಅವಳೂ ನಮಗೆ ಏನೂ ಮಾಡುವುದಿಲ್ಲ. ಹಾಗಾದ್ರೆ ಮದುವೆ ಯಾತಕ್ಕೆ? ನನಗ್ಯಾಕೋ ಇದು ಸರಿಹೋಗಲ್ಲ ಅಂತನ್ನಿಸುತ್ತೆ. ನಿಧಾನವಾಗಿ ಯೋಚಿಸಿ ನೋಡು. ಇಷ್ಟರ ಮೇಲೆ ನಿನ್ನಿಷ್ಟ"

"ಎಲ್ಲಾ ಯೋಚಿಸಿಯೇ ಈ ತೀರ್ಮಾನಕ್ಕೆ ಬಂದಿದೀನಿ. ನಾನು ನಿನ್ನ ಒಪ್ಪಿಗೆ ಕೇಳಿದೆ ಅಷ್ಟೇ ನಿನಗಿಷ್ಟವಿಲ್ಲದಿದ್ದರೆ ಹೇಳಿಬಿಡು. ನಾನು ಹೀಗೇ ಬ್ರಹ್ಮಚಾರಿಯಾಗಿದ್ದು ಬಿಡ್ತೀನಿ. ಕಡೆಯ ಬಾಣ ಎಸೆದ?" ತಾಯಿಗೆ ವ್ಯಥೆ ಯಾಯಿತು.

ನೀನು ಹೀಗೇ ಒಂಟಿಯಾಗಿರಲಿ ಅಂತ ನನಗೇನೂ ಆಸೆ ಇಲ್ಲ ಕಣೋ. ನನಗೆ ತೋಚಿದ್ದನ್ನ ನಾನು ಹೇಳಿದೆ. ಅವಳ ರೂಪಿಗೆ, ಅಂತಸ್ತಿಗೆ, ಹಣಕ್ಕೆ ಬೆರಗಾಗಬೇಡ ನೀನು. ಅವಳಿಗೆ ಇಲ್ಲಿ ನಮ್ಮ ಮನೆಯಲ್ಲಿ ಸರಿ ಹೋಗುತ್ತಾ ಅಂತ ಮೊದಲು ಯೋಚಿಸು. ಅಥವಾ.."

"ಅವಳು ಎರಡು ಹೊತ್ತೂ ಕ್ಲಿನಿಕ್‌ಗೆ ಹೋಗಿ ಬರುವುದರಲ್ಲೇ ಅವಳ ಸಮಯ ಕಳೆದು ಹೋಗುತ್ತದೆ. ಬೇರೆ ಎಲ್ಲಾ ಚಿಂತಿಸುಕ್ಕೆ ಅವಳಿಗೆ ಬಿಡುವು ಎಲ್ಲಿರುತ್ತದೆ?"

"ಅಂದ್ರೆ.. ಅವಳ ಪಾಡಿಗೆ ಅವಳು ಇಲ್ಲಿದ್ದು. ನಮ್ಮ ಬಗ್ಗೆ ನಮ್ಮ ಮನೆಯ ಬಗ್ಗೆ ಚಿಂತಿಸದಿದ್ದರೂ ಪರವಾಗಿಲ್ಲ. ನಾವು ಅವಳಿಗೆ ಹೊಂದಿಕೊಂಡು ಹೋಗಬೇಕು ಅಂತಲೋ ನಿನ್ನ ಮಾತಿನ ಅರ್ಥ"

"ಹಾಗೆಲ್ಲಾ ಏನೂ ಆಗುಲ್ಲ. ಅವಳೂ ವಿದ್ಯಾವಂತೆ. ಈಗಿನ ಕಾಲದವಳು. ಅಲ್ಲದೇ, ನೀನು ಹೇಳಿದ ಹಾಗೆ ಕೇಳಿಕೊಂಡು, ತಗ್ಗಿ ಬಗ್ಗಿ ನಡೆಯೋಕ್ಕೆ ಅವಳೇನು ಹಿಂದಿನ ಕಾಲದವಳೇ..?"

"ಚೆನ್ನಾಗಿದೆ ಕಣೋ ನಿನ್ನ ಮಾತು. ಅವಳು ಈಗಿನ ಕಾಲದವಳು ಅಂತ, ನಾನೂ ನೀನೂ ಅವಳಿಗೆ ತಗ್ಗಿ ಬಗ್ಗಿ ನಡೆಯಬೇಕು ಅಂತಲೇ ನಿನ್ನ ವರಸೆ? ಅವಳ ಪರವಹಿಸಿ ಮಾತನಾಡ್ತೀಯ ಆಗಲೇ.."

"ಎಲ್ಲಾದ್ಕೂ ಏನೇನೋ ಅರ್ಥ ಕಟ್ತೀಯ. ನಿನಗಿಷ್ಟವಿಲ್ಲದಿದ್ದರೆ ಖಡಾಖಂಡಿತ ವಾಗಿ ಹೇಳಿಬಿಡು. ನಿನಗೋಸ್ಕರ, ಮನೂಗೋಸ್ಕರ, ಹೀಗೇ ಇದ್ದು ಬಿಡ್ತೀನಿ. ನಾನೇನು ದ್ರೋಹಿಯಲ್ಲ. ಅಥವಾ ಸ್ವಾರ್ಥಿಯೂ ಅಲ್ಲ. ಎಲ್ಲಿಂದೆಲ್ಲಿಗೋ ಹೋಗ್ತಿದೆ ಮಾತು.." ಹುಬ್ಬು ಗಂಟಿಕ್ಕಿದ.

"ನಿನ್ನ ಹಣೇಲಿ ಏನೇನು ಬರೆದಿದೆಯೋ ಹಾಗೇ ಆಗುತ್ತೆ ಬಿಡು. ಅವಳೇ ನಿನ್ನ ಹೆಂಡತಿ ಅಂತ ಬ್ರಹ್ಮ ಬರೆದಿದ್ದರೆ, ಅದನ್ನೂ ಯಾರಿಂದಲೂ ತಪ್ಪಿಸಲು ಸಾಧ್ಯವಿಲ್ಲ. ನಿನ್ನ ಆಸೆಗೆ ನಾನೇಕೆ ಅಡ್ಡಿಯಾಗಲಿ?"

"ಅಂದ್ರೇ...ನೀನೂ ಒಪ್ಪಿದೀಯ ಅನ್ನೂ. ಆದರೆ ಅದೆಷ್ಟು ಸತಾಯಿಸಿ ಮಾತಾಡ್ತೀಯಮ್ಮ. ಸುತ್ತಿ ಬಳಸಿ ಮಾತನಾಡಿ, ನನ್ನನ್ನು ಹೆದರಿಸಿಬಿಟ್ಟೆ ನೀನು." ಈಗವನ ಮಾತು ಮೃದುವಾಗಿತ್ತು.

"ಹೌದೋ.. ನಾನು ಹಾಗೇನೇ..ನನ್ನ ಚಿಂತೆ ನಿನಗೆ ಹೇಗೆ ಅರ್ಥವಾಗುತ್ತೆ ಹೇಳು.. ರಿಜಿಸ್ಟರ್ ಮದುವೆ ಬೇಡ, ಯಾವುದಾದರೂ ದೇವಸ್ಥಾನದಲ್ಲಿ ತಾಳಿ ಕಟ್ಟಿ ಕರೆದುಕೊಂಡು ಬಾ.. ಬರೀ ನಿಮ್ಮಿಬ್ಬರ ಮಾತೋ ಅಥವಾ ಅವರ ಅಪ್ಪ ಅಮ್ಮನ ಮಾತೂ ಇದೆಯೋ..?"

"ಅದು ಅವಳಿಗೆ ಸೇರಿದ್ದು, ನಾನು ಅವರ ಅಪ್ಪ ಅಮ್ಮನ್ನ ಇದುವರೆಗೂ ನೋಡಿಯೇ ಇಲ್ಲ."

"ಚೆನ್ನಾಗಿದೆ. ಮೊದಲು ಅವರ ಹತ್ತಿರವೂ ಮಾತನಾಡಿ, ಆಮೇಲೆ ಮದುವೆಯಾಗುವುದೇ ಸರಿ. ಆ ಮೇಲೆ.. ಅವಳ ಜಾತಿ ಯಾವುದು? ಅವಳ ವಯಸ್ಸು ಎಷ್ಟಿರಬಹುದು?"

"ನನಗಿಂತ ಒಂದೆರಡು ವರ್ಷಕ್ಕೆ ದೊಡ್ಡವಳಿರಬಹುದು. ಅದರಲ್ಲೇನೀಗ? ಇನ್ನು ಜಾತಿ..ನಮ್ಮ ಮನೆಗೆ ಬಂದ ಮೇಲೆ ನಮ್ಮ ಜಾತೀನೇ.."

"ಇರಬಹುದು.. ಖಂಡಿತಾ ನಿನಗಿಂತ ದೊಡ್ಡವಳೇ ಇರಬಹುದು. ಆದ್ದರಿಂದಲೇ ಅವಳು ಹೇಳಿದ ಹಾಗೆ ಕೇಳ್ತಿದೀಯ ನೀನು.."

"ತಮಾಷೆಗೆ ಹೇಳಿದ್ರೆ .ನೀನಂತೂ ಹೇಗೆ ಆಡ್ತದೀಯ ? ನಾಳೆ ಅವಳನ್ನು ಕರಕೊಂಡು ಬರ್ತೀನಿ. ನೀನೇ ಎಲ್ಲಾ ಕೇಳಿ ತಿಳಕೋ.."

"ಈಗೇನು ಪ್ರಯೋಜನ ಎಲ್ಲಾ ನೀನೇ ಮುಗಿಸಿದ್ಮೇಲೆ.. ಇನ್ನೇನಾದರೂ ಹೇಳುವುದು ಬಾಕಿ ಉಳಿದಿದ್ರೆ ಬೇಗ ಹೇಳಿ ಮುಗಿಸಿ, ಮಲಕ್ಕೋ ಹೋಗು" ಆಜ್ಞೆಯ ಧ್ವನಿಯಲ್ಲಿ ತಾಯಿ ಹೇಳಿದಾಗ ಅವನಿಗೆ ನಗುಬಂತು. ತಾಯಿಯ ಬಗ್ಗೆ ಮರುಕವೂ ಉಂಟಾಯಿತು. ತಾಯಿಗೆ ಖಂಡಿತಾ ಬೇಜಾರಾಗಿದೆ ಅಂತ ಅನ್ನಿಸಿದರೂ, ಒಪ್ಪಿಗೆ ಸಿಕ್ಕಿತ್ತಲ್ಲ. ಎಂದು ನೆಮ್ಮದಿಯಾಗಿತ್ತು. ಅಲ್ಲಿಂದ ಎದ್ದ.

ದಿಂಬಿಗೆ ತಲೆ ಊರಿ, ಸೂರನ್ನು ದಿಟ್ಟಿಸುವಾಗ, ನಿರ್ಮಲೆಯ ಮನೆಯಲ್ಲಿ ಏನೇನು ಮಾತು ಕತೆಗಳು ನಡೆದಿರಬಹುದು ಎಂದು ಊಹಿಸಲು ಪ್ರಯತ್ನಿಸಿ ವಿಫಲನಾದ. ಅವಳ ಪರಿಚಯ ಆಗದೇ ಇದ್ದಿದ್ದರೆ ಚೆನ್ನಾಗಿತ್ತೇನೋ ಅಂತ ಒಂದು ಗಳಿಗೆ ಅನ್ನಿಸಿತು.

ಅವಳ ಪರಿಚಯಕ್ಕೆ ಈ ಮನೋಜನೇ ಕಾರಣ ಎಂದುಕೊಂಡಾಗ ಅವನ ಹಿಂದೆಯೇ ಅನೂರಾಧಳ ನೆನಪು ಆಯಿತು. ಈಗ ಅವಳು ಇದ್ದಿದ್ದರೇ.. ನನ್ನ ಮದುವೆ ಅಂತ ತಿಳಿದು ಎಷ್ಟು ಸಂತೋಷ ಪಡುತ್ತಿದ್ದಳೋ.. ಏನೋ ಪಾಪ ತುಂಬಾ ವರ್ಷಗಳು ಬದುಕುವ ಭಾಗ್ಯ ಪಡೆದಿರಲಿಲ್ಲವೇನೋ.. ಹೋಗಲಿ, ಬದುಕಿದ್ದಷ್ಟು ದಿನ ಸುಖಪಡುವ ಭಾಗ್ಯ ಕೂಡಾ ಅವಳಿಗಿರಲಿಲ್ಲ ಅಂತ ಅನ್ನಿಸಿದಾಗ ಮನಸ್ಸು ಕಲಕಿ ಹೋಯಿತು...

ಹಿಂದೆ, ಆಗ ಅವರುಗಳು ಹುಬ್ಬಳ್ಳಿಯಲ್ಲಿದ್ದ ಸಮಯ.

ರಂಗನಾಥನಿಗಿಂತ ಹತ್ತು ವರ್ಷ ಚಿಕ್ಕವಳಾದ ಅನೂರಾಧ ಅಣ್ಣನ ಕಣ್ಮನಗಳನ್ನು ತುಂಬಿ ಅವನ ಹಿಂದೆ ಮುಂದೆ ಸುತ್ತುತ್ತಿದ್ದುದು ಅವನಿಗಿನ್ನು ಚೆನ್ನಾಗಿ ನೆನಪಿನಲ್ಲಿದೆ. ಅವಳು ಹೈಸ್ಕೂಲಿನಲ್ಲಿ ಓದುತ್ತಿದ್ದಾಗ, ಅವನು ಬಿ ಎಸ್ಸಿ. ಮುಗಿಸಿ. ಕೆಲಸ ಹುಡುಕುತ್ತಿದ್ದ. ಅದೇ ಸಮಯದಲ್ಲಿ ಒಂದು ದಿನ ತಂದೆ, ಇದ್ದಕ್ಕಿದ್ದಂತೆ ತೀರಿಕೊಂಡಾಗ ಎಲ್ಲರೂ ಅನಾಥರಾದರು. ಬಹಳ ಕಷ್ಟ ಪಟ್ಟು ಒಂದು ಅಂಗಡಿಯಲ್ಲಿ ಗುಮಾಸ್ತೆಯ ಕೆಲಸವನ್ನು ಗಿಟ್ಟಿಸಿದ್ದ. ಬರುವ ಸಂಪಾದನೆ, ಮೂರು ಜನರ ಖರ್ಚಿಗೆ ಯಾತಕ್ಕೂ ಸಾಲದು. ತಂದೆ ಯಾವ ಆಸ್ತಿಯನ್ನು ಮಾಡದಿದ್ದರೂ, ತಾತನ ಆಸ್ತಿಯಾಗಿದ್ದ ತೆಂಗಿನ ತೋಟವನ್ನು ಅಡವಿಟ್ಟು ಸಾಲ ಮಾಡಿದ್ದರು. ಆ ಹಣ ಏನಾಯಿತು ಎಂದು ಯಾರಿಗೂ ತಿಳಿಯದ ವಿಷಯ. ಸಾಲದ ಹಣವನ್ನು ಸಮಯಕ್ಕೆ ಸರಿಯಾಗಿ ತೀರಿಸಲಾಗದೇ,

ಬಡ್ಡಿಯೂ ಜೊತೆ ಜೊತೆಗೆ ಬೆಳೆದು, ದೊಡ್ಡ ಮೊತ್ತವಾಗಿತ್ತು. ಒಂದಲ್ಲ ಒಂದು ದಿನ ಆ ತೋಟವನ್ನು ಹಿಂದಕ್ಕೆ ಪಡೆದು ಮತ್ತೆ ತಮ್ಮದನ್ನಾದಗಿ ಮಾಡಿಕೊಳ್ಳುವ ಆಸೆ ಇವನದು.

ಮನೆಯ ಖರ್ಚನ್ನು ಸರಿ ತೂಗಿಸಲು, ತಾಯಿ ಸ್ವಾಭಿಮಾನವನ್ನೂ ಬದಿಗೊತ್ತಿ ಅವರಿವರಿಗೆ, ಚಟ್ನಿಪುಡಿ, ಮೆಣಸಿನ ಪುಡಿ, ಇತ್ಯಾದಿ ಪುಡಿಗಳನ್ನು ಮಾಡಿಕೊಟ್ಟು ಪುಡಿಗಾಸು ಸಂಪಾದಿಸಲು ಆರಂಭಿಸಿದಳು.

ಹೈಸ್ಕೂಲಿನ ಓದು ಮುಗಿಸಿದ ಅನೂರಾಧಳಿಗೆ ಕಾಲೇಜು ಸೇರಬೇಕೆಂಬ ಆಸೆ. ಆದರೆ ತಾಯಿ, ಬಡತನದ ಕಾರಣ ಹೇಳಿ, ಅವಳು ವಿಧ್ಯಾಭ್ಯಾಸವನ್ನು ಮುಂದವರೆಸಲು ಬಿಡಲಿಲ್ಲ. ಅನೂರಾಧಳಿಗೆ ಮನೆ ಕೆಲಸವೆಲ್ಲಾ ಬರುತ್ತಿತ್ತು. ಕಸೂತಿ, ಹೊಲಿಗೆ ಕೆಲಸ ಕೂಡಾ ಬರುತ್ತಿತ್ತು. ತಾಯಿಯ ಜತೆ ಕೆಲವರ ಮನೆಗೆ ತಾನೂ ಹೋಗಿ ಬರುತ್ತಿದ್ದಳು. ಕೆಲವು ಸಣ್ಣ ಮಕ್ಕಳಿಗೆ, ಮನೆಯಲ್ಲಿ ಪಾಠಹೇಳಿ ಕೊಡುತ್ತಿದ್ದಳು. ಅವಳ ಬಳಿ ಪಾಠ ಹೇಳಿಸಿಕೊಳ್ಳಲು ಬರುತ್ತಿದ್ದವರಲ್ಲಿ ಸಾಹುಕಾರ ದಿನಕರ ದೇಸಾಯಿ ಯವರ ಮಕ್ಕಳೂ ಇಬ್ಬರು ಇದ್ದರು ತಂದೆ, ದೇಸಾಯಿ, ಪ್ರತಿದಿನ ಹುಡುಗರನ್ನು ಕಾರಿನಲ್ಲಿ ಕರೆತಂದುಬಿಟ್ಟು ಹೋಗುತ್ತಿದ್ದರು. ಅನೂರಾಧಳ ಚೆಲುವು ಅವರನ್ನು ಆಕರ್ಷಿಸಿತ್ತು. ಏನಾದರೂ ನೆಪಮಾಡಿ ಕೊಂಡು, ಅವಳನ್ನು ಮಾತನಾಡಿಸಿಯೇ ಹೋಗುವುದು ದಿನದ ವಾಡಿಕೆ.

ಒಂದು ದಿನ ಅವರು ರಂಗನಾಥನನ್ನು ಕರೆಸಿ, ಅವನೊಡನೆ ಮಾತಾಡಿದರು ನಾನು ಸಾಹುಕಾರ ಶಂಕರ ದೇಸಾಯಿಯವರ ಹಿರಿಯ ಮಗ, ದಿನಕರ ದೇಸಾಯಿ. ನನಗಿಂತ ಹತ್ತು ವರ್ಷಕ್ಕೆ ಚಿಕ್ಕವನು, ನನ್ನ ತಮ್ಮ ಅರವಿಂದ ದೇಸಾಯಿ. ಅವನಿಗೆ ಲಗ್ನವಾಗಬೇಕಾಗಿದೆ. ನಿಮಗೇನೂ ಅಡ್ಡಿ ಇಲ್ಲದಿದ್ರೆ ನಿಮ್ಮ ತಂಗಿ ಅನೂರಾಧಳನ್ನೂ ನನ್ನ ತಮ್ಮನಿಗೆ ತಂದುಕೊಂಡು ಮನೆ ತುಂಬಿಸಿಕೊಳ್ತೀವಿ. ನಿಮ್ಮ ಮರ್ಜಿ ಏನು ಅಂತ ತಿಳಿಸ್ರಿ..."

"ಸಧ್ಯಕ್ಕೆ ಅವಳ ಮದುವೆಯ ಯೋಚನೆ ಮಾಡಿಲ್ಲ ನಾವು. ಅವಳಿನ್ನು ಚಿಕ್ಕವಳು. ನನಗೊಂದು ಒಳ್ಳೆಯ ಕೆಲಸ ಸಿಗುವವರೆಗೂ ಅವಳ ಮದುವೆ ಮಾಡುಲ್ಲ" ರಂಗನಾಥ ನುಡಿದ.

"ಖರ್ಚು ವೆಚ್ಚದ ಖಾಳಜಿ ನಿಮಗೆ ಬ್ಯಾಡ್ರೀ. ನಾವೇ ಎರಡೂ ಖರ್ಚು ಹಾಕಿ, ಆಕಿನ್ನ ನಮ್ಮ ಮನೆ ತುಂಬಿಸಿಕೊಳ್ತೀವಿ. ನಮಗೆ ಧನ, ದೌಲತ್ತಿಗೆ ಎಂದೂ ಕಮ್ಮೀ ಇಲ್ರೀ. ವರದಕ್ಷಿಣೆ, ಪರೋಪಚಾರದ ಆಸಿ ನಮಗಿಲ್ರೀ. ನನ್ನ ತಮ್ಮ ನೋಡೋಕೆ ಚೆಲುವ. ಆದರೆ ವಿದ್ಯೆ ನೇವೇದ್ಯ. ಕಾಲೇಜಿನ ಮೆಟ್ಟಿಲ ಹತ್ತಲಿಲ್ಲ. ನಿಮ್ಮ ತಂಗಿ, ನಿಮ್ಮ ತಾಯಿ ಒಪ್ಪಿದ್ರೆ ಆದು ನಮ್ಮ ಸೌಭಾಗ್ಯ ಎಂದು ಕೊಳ್ತೀನ್ರಿ.. " ಎಂದು ಕೈ ಮುಗಿದಿದ್ದರು.

ರಂಗನಾಥ ಅವರ ನಯವಾದ ಮಾತಿಗೆ ಮರುಳಾಗಲಿಲ್ಲ. ಆದರೂ ಸಜ್ಜನಿಕೆಯಿಂದ, "ಆಗಲಿ, ನಮಗೆ ಸ್ವಲ್ಪ ದಿನ ವಾಯಿದೆ ಕೊಡಿ. ಎಲ್ಲಾ ಸೇರಿ ಯೋಚಿಸಿ, ನಿರ್ಧಾರ ತಗೊಂಡು ನಿಮಗೆ ತಿಳಿಸ್ತೀವಿ" ಎಂದು ಕೈ ಜೋಡಿಸಿದ.

ರಂಗನಾಥ ತಾಯಿಗೆ ಎಲ್ಲವನ್ನು ವಿಶದವಾಗಿ ತಿಳಿಸಿ, ನಂತರ ಹೇಳಿದ.

ನನಗೇನೋ ಇದು ಸರಿ ಇಲ್ಲ ಅಂತ ಅನ್ನಿಸುತ್ತೆ. ಈಗಲೇ ಮದುವೆ ಮಾಡುಲ್ಲ ಅಂತ ಖಂಡಿತವಾಗಿ ಹೇಳಿ ಬಿಡೋಣ ಎಂದಾಗ ತಾಯಿ.

ಅಷ್ಟು ಅನುಕೂಲವಂತರು, ಅವರಾಗಿಯೇ ಕೇಳಿಕೊಂಡು ಬಂದಿರುವಾಗ ಬಾಳುವ ಅದೃಷ್ಟ ನಮ್ಮ ಅನೂರಾಧಂಗೆ ಒದಗಿ ಬಂದಿದೆ. ಆಗುವುದಾದರೆ ಆಗಲಿ. ನಾವೇ ನಿರಾಕರಿಸುವುದು ಬೇಡ" ಎಂದಿದ್ದಳು.

ಅನೂರಾಧ ತಾಯಿಯ ಮಾತಿಗೆ ಒಪ್ಪಿಗೆ ನೀಡಿದ್ದಳು. ಅವಳು ಅರವಿಂದನನ್ನು ನೋಡಿದ್ದಳು. ಸ್ಪುರದ್ರೂಪಿ ಯುವಕನ ಸಂಗಡ ಕುಳಿತು, ಕಾರಿನಲ್ಲಿ ತಿರುಗಾಡುವ ಕನಸು ಕಂಡಿರಬೇಕು ಅವಳು. ತಾಯಿ, ತಂಗಿ, ಒಪ್ಪಿಗೆ ನೀಡಿದ ಮೇಲೆ, ರಂಗನಾಥ ಮದುವೆಯ ಸಿದ್ಧತೆಗಳನ್ನು ಪ್ರಾರಂಭಿಸಿದ.

ಒಂದು ದಿನ ಎಲ್ಲರೂ ದೇಸಾಯಿಗಳ ಮನೆಗೆ ಹೋಗಿ, ನಿಶ್ಚಿತಾರ್ಥ ಕಾರ್ಯವನ್ನು ಮುಗಿಸಿಕೊಂಡು ಬಂದರು. ಅರವಿಂದ ದೇಸಾಯಿ ನೋಡಲು ತುಂಬಾ ಲಕ್ಷಣ ವಾಗಿದ್ದ. ಒಳ್ಳೆಯ ಪರ್ಸನಾಲಿಟಿ. ಆದರೆ ಚಿಕ್ಕವನಂತೆ, ಯಾವ ಜವಾಬ್ದಾರಿಯ ಅರಿವಿಲ್ಲದವನಂತೆ ತಿರುಗಾಡಿಕೊಂಡಿದ್ದ. ಅವನದೇ ವಯಸ್ಸಿವನಾದ ರಂಗನಾಥನಿಗೆ ಎಲ್ಲಿಲ್ಲದ ಜವಾಬ್ದಾರಿ, ಮನೆಯ ಸಮಸ್ತ ವಹಿವಾಟು ಹಿರಿಯ ದೇಸಾಯಿಯವರದೇ ಎನ್ನುವುದನ್ನು ರಂಗನಾಥ ಗಮನಿಸಿದ್ದ.

ಅವರ ಇಚ್ಛೆಯಂತೆಯೇ ಮದುವೆ ನಡೆಯಿತು. ಖರ್ಚನ್ನೆಲ್ಲಾ ತಾವೇ ವಹಿಸಿ ಕೊಂಡು ಮದುವೆ ಕಾರ್ಯ ನೆರವೇರಿಸಿದ್ದರು. ರಂಗನಾಥ ತಂಗಿಗೆ ಇಷ್ಟವಾದ ಸೀರೆ ಒಡವೆಗಳನ್ನು ಕೊಡಿಸಿದ್ದ. ಗಂಡನ ಮನೆಗೆ ಹೊರಟು ಹೋದ ಅನುರಾದ, ತವರು ಮನೆಗೆ ದೂರವಾದಳು.

೦ ೦ ೦ ೦

ಮದುವೆ ಮುಗಿದ, ಕೆಲವು ತಿಂಗಳುಗಳ ನಂತರ, ಮಂಗಳೂರಿನ ಒಂದು ಕಾಲೇಜಿನಲ್ಲಿ ಟೈಪಿಸ್ಟ್ ಕೆಲಸ ಸಿಕ್ಕಿತ್ತು. ಗವರ್ನಮೆಂಟ್ ಕಾಲೇಜು ಕೆಲಸ ಎಂದು ಒಪ್ಪಿಕೊಂಡಿದ್ದ. ಹುಬ್ಬಳ್ಳಿಯಿಂದ ಮಂಗಳೂರಿಗೆ ಬಂದು ನೆಲೆಸಿದ. ಹೊಸ ಊರು, ಹೊಸ ಜಾಗ, ಹೇಗೋ ಸರಿ ಹೋಗಿಸಿಕೊಂಡರು. ಅಲ್ಲಿ ಕೆಲಸದಲ್ಲಿದ್ದುಕೊಂಡೇ, ಕಾಲೇಜಿನವರ ಸಹಕಾರದಿಂದ ಪ್ರೈವೇಟ್‌ನಲ್ಲಿ ಎಂ.ಎ. ಪರೀಕ್ಷೆಯನ್ನು ಪಾಸು ಮಾಡಿಕೊಂಡ. ಕಾಲೇಜಿನ ಪ್ರಿನ್ಸಿಪಾಲರಿಗೆ, ಇವನ ಬಗ್ಗೆ ಆದರವಿದ್ದುದರಿಂದ, ಅದೇ ಕಾಲೇಜಿನಲ್ಲಿ ಪಾರ್ಟ್‌ಟೈಂ ಲೆಕ್ಚರರ್ ಕೆಲಸ ಕೊಡಿಸಿದರು.

ಬರುತ್ತಿದ್ದ ಸಂಪಾದನೆ ಕಡಿಮೆ. ಮಂಗಳೂರಿನಲ್ಲಿ ಖರ್ಚು ಹೆಚ್ಚು ಎನಿಸುತ್ತಿತ್ತು. ಹಣ ಉಳಿತಾಯಮಾಡಿ, ತೋಟವನ್ನು ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದ. ಆದರೆ ಅದು ಮುಂದು ಮುಂದಕ್ಕೆ ಹೋಗುತ್ತಿತ್ತು.

ಬಿಡುವಾದಾಗ, ವರ್ಷದಲ್ಲಿ ಒಂದೆರಡು ಸಾರಿ, ಹುಬ್ಬಳ್ಳಿಗೆ ಹೋಗಿ ಅನೂರಾಧ ಳನ್ನೂ ನೋಡಿಕೊಂಡು ಬರುತ್ತಿದ್ದ. ಅವಳನ್ನು ಕಂಡಗೆಲ್ಲಾ ಅವಳು ಸುಖವಾಗಿಲ್ಲ ಎಂದೇ ಅನ್ನಿಸುತಿತ್ತು. ಅವಳು ಏನು ಹೇಳಿಕೊಳ್ಳದಿದ್ದರೂ, ಇವನಿಗೂ ಬಾಯಿ ಬಿಚ್ಚಿ ಏನನ್ನು ಕೇಳಲಾಗುತ್ತಿರಲಿಲ್ಲ. ಕೆಲವು ದಿನಗಳ ಮಟ್ಟಿಗೆ ಅವಳನ್ನು ಊರಿಗೆ ಕರೆದುಕೊಂಡು ಹೋಗೋಣ ಎಂದುಕೊಂಡು ಕೇಳಿದಾಗ, ಹಿರಿಯ ದೇಸಾಯಿಗಳು

ಉಪಾಯವಾಗಿ ನಿರಾಕರಿಸಿದ್ದರು. ಮದುವೆಯಾಗಿ ಮೂರು ವರ್ಷ ಕಳೆದಿದ್ದರೂ, ಅವಳಿಗೆ ಮಕ್ಕಳಾಗಿರಲಿಲ್ಲ. ಅದಕ್ಕೆ ರಂಗನಾಥ ಏನೂ ಹೇಳುವಂತಿರಲಿಲ್ಲ.

ತನ್ನ ಸ್ಥಿತಿಗತಿ ಅನುಕೂಲವಾಗಿಲ್ಲದಿದ್ದರಿಂದಲೋ, ಮದುವೆಯಾಗಿ ಸುಖವಾಗಿಲ್ಲದ ತಂಗಿಯನ್ನು ಕಂಡೋ, ಅಂತೂ ಅವನೆಂದೂ ತನ್ನ ಮದುವೆಯ ಬಗ್ಗೆ ಚಿಂತಿಸಲಿಲ್ಲ. ಯಾರೋ ಹೆಣ್ಣಿನ ಕಡೆಯವರು ಬಂದು ವಿಚಾರಿಸುತ್ತಿದ್ದರೆಂದು ತಾಯಿ ಹೇಳಿದಾಗ, ತನಗೆ ಮದುವೆಯಾಗುವ ಇಚ್ಛೆ ಇಲ್ಲ ಎಂದಿದ್ದ. ತಾಯಿ ಬಲವಂತ ಮಾಡಿರಲಿಲ್ಲ. ತನಗಿರುವವನು ಒಬ್ಬನೇ ಮಗ, ಸೊಸೆ ಬಂದು, ಮಗನನ್ನೂ ದೂರ ಮಾಡಿಯಾನೆಂಬ ಭಯ ಅವಳನ್ನು ಕಾಡಿರಬಹುದು. ಅಂತೂ ಹಾಗೇ ಬ್ರಹ್ಮಚಾರಿ ಯಾಗಿಯೇ ಉಳಿದಿದ್ದ.

ಹೀಗೇ ಇನ್ನೂ ಏಳೆಂಟು ವರ್ಷಗಳು ಕಳೆದವು. ತಾಯಿಯ ಆರೋಗ್ಯ ಆಗಾಗ್ಗೆ ಕೆಟ್ಟು, ನರಳುತ್ತಿದ್ದುದರಿಂದ, ಇವನೇ ಮನೆಯ ಎಲ್ಲಾ ಕೆಲಸಗಳನ್ನು ಮಾಡಿ, ಆಕೆಯ ಶುಶ್ರೂಷೆಯನ್ನು ಮಾಡುತ್ತಿದ್ದ. ಎಷ್ಟೋ ಸಲ ಬಂದ ಸಂಬಳವೆಲ್ಲಾ ಖರ್ಚಾಗಿ, ಸ್ನೇಹಿತನ ಹತ್ತಿರ ಹಣವನ್ನು ಕೇಳಿ ಪಡೆಯುತ್ತಿದ್ದ.

ಎಷ್ಟೋ ತಿಂಗಳುಗಳಿಂದ ಹುಬ್ಬಳ್ಳಿಗೆ ಹೋಗಿ ತಂಗಿಯನ್ನು ನೋಡಲು ಆಗಿರಲಿಲ್ಲ. ಬಿಡುವು ಮಾಡಿಕೊಂಡು ಹೋಗಿ, ಹೇಗಾದರೂ ಸರಿ, ತಂಗಿಯನ್ನು ಕೆಲವು ದಿನಗಳ ಮಟ್ಟಿಗೆ ತಮ್ಮ ಮನೆಗೆ ಕರೆತಂದಿಟ್ಟುಕೊಂಡು ಮತ್ತೆ ಕಳಿಸ ಬೇಕೆಂದು ಕೊಂಡಿದ್ದ.

ಆದರೆ, ಒಂದು ದಿನ ಇದ್ದಕ್ಕಿದ್ದಂತೆಯೇ, ಅನೂರಾಧ ಬಂದಿಳಿದಳು. ತುಂಬಿದ ಬಸಿರಿ, ಅವಳನ್ನು ಕಾರಿನಲ್ಲಿ ಕರೆತಂದು ಬಿಟ್ಟು, ಯಾರು ಎಷ್ಟೆ ಕೇಳಿಕೊಂಡರೂ, ನಿಲ್ಲದೇ ಅಲ್ಲಿಂದ ಹೊರಟು ಹೋಗಿದ್ದ, ಅವಳ ಗಂಡ ಅರವಿಂದ. ಯಾರೊಡನೆಯೂ ಸರಿಯಾಗಿ ಮಾತೂ ಸಹ ಆಡಲಿಲ್ಲ. ಅನೂರಾಧ ಮಂಕಾಗಿರುವಂತೆ ಅನ್ನಿಸಿತ್ತು. ಗಂಡ ಆ ಕಡೆ ಹೋದ ಕೂಡಲೇ ಏನೂ ಹೇಳುವುದಕ್ಕಾಗದಷ್ಟು ಅತ್ತೂ ಅತ್ತೂ ಸುಸ್ತಾಗಿದ್ದಳು.

ಅವಳ ಸ್ಥಿತಿಗೆ ಕಾವೇರಮ್ಮ ತಾನೂ ಅತ್ತಿದ್ದಳು. ಯಾರಿಗೂ ಕಾಣದಂತೆ, ರಂಗನಾಥ ಕಣ್ಣೀರೊರೆಸಿಕೊಂಡಿದ್ದ. ಬಸಿರಿ ಹುಡುಗಿ, ಕಂಗೊಳಿಸುವ ಬದಲು, ಕಂಗೆಟ್ಟು ಹೋಗಿದ್ದಳು. ತಾಯಿಯ ಆರೈಕೆಯಿಂದ ಕೂಡಾ ಅವಳು ಸುಧಾರಿಸಿಕೊಳ್ಳಲಿಲ್ಲ. ಅವಳನ್ನು ಏನಾದರೂ, ಕೇಳುವುದು ಹೇಗೆ ಎಂದು ತಾಯಿ ಮಗ ಸುಮ್ಮನಾಗಿದ್ದರು.

ಹೆರಿಗೆಯ ದಿನಗಳು ಸಮೀಪಿಸಿದಾಗ, ಒಂದು, ದಿನ ತಾಯಿ ಮನೆಯಲ್ಲಿ ಇಲ್ಲದ ಸಮಯದಲ್ಲಿ ಅನೂರಾಧ ತನ್ನೆಲ್ಲ ಕಷ್ಟವನ್ನು ಅಣ್ಣನೊಡನೆ ಹೇಳಿ ಕೊಂಡಿದ್ದಳು. ಅವಳು ಅಳುತ್ತಾ ಅಳುತ್ತಾ ಹೇಳಿದ ವಿಷಯಗಳನ್ನೆಲ್ಲ ಕೇಳಿ. ಅವನು ನಖಶಿಖಾಂತ ಉರಿದು ಹೋಗಿದ್ದ. ಈ ಮುಂಚೆಯೇ ತನಗೇಕೆ ಏನನ್ನೂ ತಿಳಿಸಲಿಲ್ಲವೆಂದು ತಂಗಿಯ ಮೇಲೆ ಎಗರಾಡಿದ. ಅನೂರಾಧ ಹೋಗಿ ಗಲಾಟೆ ಮಾಡಬಾರದೆಂದು ಅರ್ಥಳಾಗಿ ಬೇಡಿಕೊಂಡಳು. ಇಲ್ಲದಿದ್ದರೆ, ಆಕ್ಷಣದಲ್ಲಿ, ದೇಸಾಯಿಯವರ ಮೇಲೆ ಕೇಸು ಹಾಕಿ, ಕೋರ್ಟಿಗೆಳೆದು ಅವರುಗಳಿಗೆ ಶಿಕ್ಷೆ ಕೊಡಿಸಬೇಕೆಂದು ಛಲ ಅವನಲ್ಲಿ ಹುಟ್ಟಿತು.

ತಾಯಿಗೆ ಯಾವ ವಿಚಾರವನ್ನು ತಿಳಿಸಬಾರದೆಂದೂ ತಿಳಿದರೆ ಅವಳು ಬಹಳ ನೊಂದುಕೊಳ್ಳುವಳೆಂದು, ಕೇಳಿ ಕೊಂಡಿದ್ದರಿಂದ, ಅವನು ಯಾರಿಗೂ ಏನನ್ನೂ ತಿಳಿಸದೇ, ತನ್ನಲ್ಲೇ ಹತ್ತಿಕ್ಕಿ ಕೊಂಡಿದ್ದ. ಆಸ್ಪತ್ರೆಗೆ ಸೇರುವ ಮುನ್ನ ಮತ್ತೊಮ್ಮೆ ಕೈಮುಗಿದು ಕೇಳಿ ಕೊಂಡಿದ್ದಳು.

"ಹೆಣ್ಣು ಮಗು ಹುಟ್ಟಿದರೆ, ಅವರಿಗೆ ತಿಳಿಸಬೇಡ. ಗಂಡು ಮಗು ಹುಟ್ಟಿದರೆ ತಿಳಿಸು. ಬೇಕಾದರೆ ಅವರುಗಳು ಬಂದು ನೋಡಿಕೊಂಡು ಹೋಗಲಿ. ಆದರೆ ನಾನು ಮಾತ್ರ ಮತ್ತೆ ಆ ನರಕಕ್ಕೆ ಹೋಗುವುದಿಲ್ಲ. ನನಗೆ ಯಾರೂ ಬಲವಂತ ಮಾಡಬೇಡಿ."

ಆಗ ಅವಳಾಡಿದ ಮಾತು ನಿಜವಾಯಿತು. ಆ ನರಕಕ್ಕೆ ಹೋಗುವ ಅವಕಾಶ ಅವಳಿಗೆ ಬರಲೇ ಇಲ್ಲ. ಸತ್ತು ಸ್ವರ್ಗ ಸೇರಿದ್ದಳು.

ಎಲ್ಲರ ಆಸೆಯಂತೆ, ಅವಳಿಗೆ ಹುಟ್ಟಿದ್ದು ಗಂಡು ಮಗುವೇ. ಕೊರಗಿ ಕೊರಗಿ ಕೃಶವಾಗಿದ್ದ ಅನುರಾಧ, ಆಯಾಸದಲ್ಲೂ, ಪ್ರಯಾಸದಿಂದ ಸಮಾಧಾನದ ಮುಗುಳ್ನಗೆ ಸೂಸಿದ್ದಳು. ಅದೇ ಅವಳ ಕಡೇ ನಗು. ಬಹುಶಃ ಮದುವೆಯ ನಂತರದ ಮೊದಲ ನಗು ಇದ್ದರೂ ಇರಬಹುದು!

ಮದುವೆಯಾಗಿ ಹತ್ತು ವರ್ಷಗಳು ಕಳೆದದ್ದು ಸರಿಯಷ್ಟೇ? ಗಂಡನಿಗೇ ಮನೆಯಲ್ಲಿ ಸ್ವಾತಂತ್ರ್ಯವಿಲ್ಲದ ಮೇಲೆ, ಅವನ ಹೆಂಡತಿ, ಇವಳಿಗೆಷ್ಟು ಕಷ್ಟವಿರ ಬೇಡ. ಮನೆ ಕೆಲಸ ಕಾರ್ಯಗಳಲ್ಲಿ ಗಂಡನ ಹಿಸೆಯಲ್ಲಿ ಉಂಡು ತಿಂದುದು, ಮೈಗೆ ಹತ್ತುತ್ತಿರಲಿಲ್ಲ. ಎರಡು ವರ್ಷ ಕಳೆದ ನಂತರ ಚೊಚ್ಚಲು ಬಸಿರಿಯಾಗಿ ದ್ದಾಗ ಅವಳ ಪಾಡು ಯಾರಿಗೂ ಬೇಡ. ಬಸಿರಿಹುಡುಗಿಯಾದರೂ, ಯಾವ ರೀತಿಯಿಂದಲೂ ಅವಳಿಗೆ ಆರಾಮವಿರಲಿಲ್ಲ. ಹಿರಿಯ ದೇಸಾಯಿಯ ಹೆಂಡತಿ ಶಶಿಕಲಾ ಕೂಡಾ ಈ ವಿಷಯದಲ್ಲಿ ಅಸಹಾಯಕಳು.

ಹೆರಿಗೆಗೆಂದು ಅವಳನ್ನು ಆಸ್ಪತ್ರೆಗೆ ಸೇರಿಸಿರಲಿಲ್ಲ. ಮನೇಗೇ ಮಿಡ್ ವೈಫ್ ಬಂದಿದ್ದಳು. ಮತ್ತು ಬರುವಂತಹ ಔಷದಿಯನ್ನು ಅವಳಿಗೆ ಕುಡಿಸಿದ್ದರು. ಹುಟ್ಟಿದ್ದು ಹೆಣ್ಣುಮಗು. ಅವಳಿಗೆ ಸರಿಯಾಗಿ ಜ್ಞಾನ ಬಂದಾಗ, ಸತ್ತಿದ್ದ ಹೆಣ್ಣು ಮಗುವನ್ನು ತೋರಿಸಿ., ಅವಳಿಗೆ ಆಘಾತವನ್ನುಂಟುಮಾಡಿದ್ದರು.

ಹೀಗೇ ಅನೂರಾಧ ಮತ್ತೆರಡು ಹೆಣ್ಣು ಮಕ್ಕಳನ್ನು ಮುಂದಿನ ನಾಲ್ಕು ವರ್ಷಗಳಲ್ಲಿ ಹೆತ್ತಿದ್ದಳು. ಅವುಗಳೂ ಹುಟ್ಟುತ್ತಲೇ ಸತ್ತವು ಎಂದು ತಿಳಿದಾಗ ಅವಳಿಗಾದ ನಿರಾಸೆ ಅಷ್ಟಿಷ್ಟಲ್ಲ. ಗಂಡನೊಡನೆ ತನ್ನ ದುಃಖ ಹೇಳಿಕೊಂಡಾಗ, ಅವನು ಕಟುವಾಗಿ ನುಡಿದಿದ್ದ. "ಹೋದದ್ದೇ ಒಳ್ಳೆಯದಾಯ್ತು ಬಿಡು. ಯಾರಿಗೆ ಬೇಕಾಗಿದೆ ಈ ಹೆಣ್ಣು ಮಕ್ಕಳು?" ಅನೂರಾಧಳಿಗೆ ಅವನ ಮಾತಿನಿಂದ ಶಕ್ತಿಯೇ ಬತ್ತಿ ಹೋದಂತಾಗಿತ್ತು.

ಮತ್ತೆ ಮುಂದಿನ ವರ್ಷ ಕಳೆದನಂತರ ಅವಳಿಗೆ ತಾನು ಮತ್ತೆ ಬಸಿರಿಯಾಗಿ ದ್ದೇನೆ ಎಂದು ತಿಳಿದಾಗ, ಅನೂರಾಧ ಧೈರ್ಯ ಮಾಡಿ, ಹಿರಿಯ ದೇಸಾಯಿಯವರ ಪತ್ನಿ, ತನ್ನ ಓರಗಿತ್ತಿ ಶಶಿಕಲಾರವರನ್ನು ಕೇಳಿದ್ದಳು.

"ಅಕ್ಕಾ, ನಿಮಗೆ ಹುಟ್ಟಿದ ಹೆಣ್ಣು ಮಕ್ಕಳು ಚೆನ್ನಾಗಿ ಬೆಳೆದಿಲ್ಲವೆ, ನನಗ್ಯಾಕೆ ಹೀಗಾಗುತ್ತೆ, ಈ ಸಲವೂ ಒಂದು ವೇಳೆ ಹೆಣ್ಣುಮಗು ಹುಟ್ಟಿ ಸತ್ತುಹೋದರೆ, ನಾನೂ

ಹೇಗೆ ಸಹಿಸಲಿ? ಮಗು ಸಾಯದೇ ಉಳಿಯುವಂತೆ ಏನಾದರೂ ಔಷಧಿ ಕೊಡಿಸಿ" ಎಂದು ಕೇಳಿಕೊಂಡು ಅತ್ತಾಗ, ಆಕೆಯ ಹೃದಯ ಕರಗಿರಬೇಕು. ಅವಳನ್ನು ಸಮಾಧಾನಗೊಳಿಸುತ್ತಾ ಹೇಳಿದ್ದಳು.

ಈ ಸಲ ಹೇಗಾದರೂ ಸರಿ, ನೀನು ನಿನ್ನ ತವರ ಮನೆಗೆ ಹೊರಟುಹೋಗು. ಇದುವರೆಗೂ, ನಿನಗೆ ಮಕ್ಕಳಾದ ವಿಚಾರವನ್ನು ಅವರಿಗೆ ಯಾರೂ ತಿಳಿಸಿಲ್ಲ. ಇಲ್ಲಿ ನಡೆಯುತ್ತಿರುವ ಅನ್ಯಾಯ ನಿನಗೆ ತಿಳಿದಿಲ್ಲ. ಈಗ ನಿನಗೆ ಹುಟ್ಟಿದ ಮಗು, ಚೆನ್ನಾಗಿದ್ದರೂ, ಅದು ಹೆಣ್ಣಾಗಿದ್ದರೆ, ಹುಟ್ಟಿದ ಕೂಡಲೇ ಅದರ ಆಯಸ್ಸು ಮುಗಿದಂತೆ ಎಂದಿದ್ದಳು.

ಅಂದರೇ,.. ಅರ್ಥವಾಗದವಳಂತೆ, ನಂಬದವಳಂತೆ, ಅನೂರಾಧ ಕೇಳಿದಾಗ, ಆಕೆ ವಿವರಿಸಿ ಹೇಳಿದ್ದಳು.

ನನಗೂ ಬರೀ ಹೆಣ್ಣು ಮಕ್ಕಳು ಹುಟ್ಟಿದವು. ನಾಲ್ಕು ಹೆಣ್ಣು ಮಕ್ಕಳ ನಂತರ ನಾನು ಮತ್ತೆ ಗರ್ಭಿಣಿಯಾಗಲೇ ಇಲ್ಲ. ಆದರೆ ದೋಷ ನನ್ನಲ್ಲಿರಲಿಲ್ಲ. ಅದರಿಂದಲೋ ಏನೋ ಅವರು ಮತ್ತೆ ಮರುಮದುವೆಯಾಗಲಿಲ್ಲ. ಇಲ್ಲದಿದ್ದರೆ, ಗಂಡು ಮಗು ಬೇಕೆಂಬ ಆಸೆ ಅವರನ್ನು ಎಷ್ಟು ಮದುವೆಗೆ ಬೇಕಾದರೂ ಸಿದ್ಧ ಮಾಡಿರುತ್ತಿತ್ತು. ಆದರಿಂದಲೇ ಅರವಿಂದನಿಗೆ ಮದುವೆ ಮಾಡಿದರು. ಓದು, ವಿದ್ಯೆ, ಉದ್ಯೋಗವಿಲ್ಲದ, ಜವಾಬ್ದಾರಿ ಇಲ್ಲದ ನಿನ್ನ ಗಂಡನಿಗೆ ಮದುವೆ ಮಾಡುವ ಯೋಚನೆಯೇ ನಿನ್ನ ಭಾವನಿಗಿರಲಿಲ್ಲ. ತಾವೇ ಪ್ಲಾನ್ ಮಾಡಿ, ನಿನ್ನಂತಹ ಅಮಾಯಕ ಹೆಣ್ಣನ್ನು ಈ ಮನೆಗೆ ಸೊಸೆಯನ್ನಾಗಿ ಮಾಡಿದರು. ಅರವಿಂದನಿಗೆ ಎರಡು ವರ್ಷಗಳಾದರೂ, ಮಕ್ಕಳಾಗದಿದ್ದಾಗ ಅವನಿಗೆ ಮತ್ತೆ ಮದುವೆ ಮಾಡುವ ಯೋಚನೆ ಸಹಮಾಡಿದ್ದರು. ಆದರೆ ಅಷ್ಟರಲ್ಲಿ ನೀನು ಗರ್ಭಿಣೀ ಅಂತ ತಿಳಿದಾಗ ಸುಮ್ಮನಾಗಿದ್ದರು. ಮೊದಲಿನಿಂದಲೂ ಮನೆಗೇ ಮಿಡ್‌ವೈಫ್ ಬರುವ ಪದ್ಧತಿ. ಅವಳು ನನ್ನ ಹೆರಿಗೆ ಸಮಯದಲ್ಲೂ ಬಂದವಳು. ನನ್ನ ಗಂಡ ಅವಳೊಡನೆ ದೇಹ ಸಂಬಂಧವಿಟ್ಟುಕೊಂಡಿದ್ದರು ಎಂದರೆ ನೀನು ನಂಬುತ್ತೀಯೋ ಇಲ್ಲವೋ..ಅವಳು ಅಷ್ಟು ಖಾಸಾ ಅವರಿಗೆ.

ಈಗ ನಿನಗೆ ತಿಳಿಯುವುದು ಕಷ್ಟವೇನಲ್ಲ. ಅವರಿಬ್ಬರ ಯೋಚನೆಯಂತೆ, ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಹೆಣ್ಣು ಮಗು, ಈ ಪ್ರಪಂಚಕ್ಕೆ ಬಂದ ಕೆಲವೇ ಕ್ಷಣಗಳಲ್ಲಿ ಅವಳ ಕೈಗೆ ಸಿಕ್ಕಿ ಸತ್ತಿದೆ. ಅನೂರಾಧ ಬೆಚ್ಚಿದಳು.

ಅಕ್ಕಾ ಈ ವಿಚಾರಾನಾ, ಮೊದಲೇ ನನಗೇಕೆ ತಿಳಿಸಲಿಲ್ಲ, ನೀವೂ ಹೆಣ್ಣಲ್ಲವೇ ನಿಮಗಾದರೂ ಸುಮ್ಮನಿರಲು ಹೇಗೆ ಮನಸ್ಸು ಬಂತು ಅವಳು ಅತ್ತೂ ಗೋಳಾಡಿದಾಗ ಸಮಾಧಾನ ಹೇಳಿದ್ದಳು.

ನನಗೂ ತಿಳಿದದ್ದು ಈಚೆಗೇನೇ.. ಅದೂ ನಿನ್ನ ಮೂರನೆಯ ಮಗುವಿನ ಹೆರಿಗೆಯ ನಂತರ. ನಾನು ಆ ಮಿಡ್ ವೈಫ್ ಗದರಿಸಿದ್ದೆ.

ನಮ್ಮ ಮನೆಗೆ ನೀನು ಹೆರಿಗೆ ಮಾಡಿಸಲು ಬಂದರೆ, ಬರೀ ಹೆಣ್ಣು ಮಕ್ಕಳು ಹುಟ್ಟುತ್ತವೆ. ಮುಂದೆ ನೀನು ಬರಬೇಡ ಎಂದಿದ್ದೆ. ಅವಳಿಗೇಟು ಧಿಮಾಕು ಗೊತ್ತಾ? ನಿಮಗೇಕೆ ಅದೆಲ್ಲಾ..? ಅದು ನನ್ನ, ದೇಸಾಯಿಯವರ ವಿಚಾರ ಎಂದಿದ್ದಳು ನನಗೇ..

ನಾನು ಹೆದರಿದ್ದಂತೆ ನಟಿಸಿ, ನಿನಗೇನು ಗೊತ್ತು ಆ ಹುಡುಗಿಯ ಕಷ್ಟ, ಒಂಭತ್ತು ತಿಂಗಳು ಹೊತ್ತ ಮಗು .. ಹತ್ತು ನಿಮಿಷದಲ್ಲಿ ಇಲ್ಲ ಎನಿಸಿದರೆ, ಎಷ್ಟು ದುಃಖವಾಗಿರಬೇಡ, ಹೋಗಲಿ ಆ ಹುಡುಗಿಯಲ್ಲಿ ಏನು ತೊಂದರೆ ನಿನಗೇನಾದರೂ ತಿಳಿಯುವ ವಿಚಾರವಿದ್ದರೆ ಹೇಳು, ಸರಿಪಡಿಸೋಣ. ಮುಂದೆ ಹುಟ್ಟುವ ಮಗು ಆದರೂ ಸರಿಯಾಗಿರಲಿ, ಎಂದಾಗ ಅವಳಿಗೇನನ್ನಿಸಿತೋ ಏನೋ, ನನ್ನ ಕೈ ಹಿಡಿದು ಕ್ಷಮಾಪಣೆ ಕೇಳಿಕೊಂಡಿದ್ದಳು.

ನನ್ನ ತಪ್ಪನ್ನು ಹೊಟ್ಟೆಗೆ ಹಾಕಿಕೊಳ್ಳಿ ಅವ್ವಾ, ದೇಸಾಯಿಯವರ ಸಂಗದಲ್ಲಿ, ನಾನೂ ಹೆಣ್ಣು ಅನ್ನುವುದನ್ನೇ ಮರೆತಿದ್ದೆ. ಅವರು ಕೊಡುವ ದುಡ್ಡಿನ ಆಸೆಗೆ ಬಲಿಬಿದ್ದು. ಕಟುಕಿಯಾಗಿ ಬಿಟ್ಟೆ.. ಹುಟ್ಟಿದ ಮಕ್ಕಳನ್ನು ಇಲ್ಲ ಅನ್ನಸಿದವಳು ನಾನೇ.. ಅವು ಹೆಣ್ಣಾಗಿ ಹುಟ್ಟಿದ್ದೇ ಅದಕ್ಕೆ ಕಾರಣ ಎಂದು ಮನಸಾರೆ ಅತ್ತಿದ್ದಳು.

ಏನಾದ್ರೂ ಸರಿ, ಮುಂದಿನ ಹೆರಿಗೆ ನಾನು ಮಾಡಿಸುವುದಿಲ್ಲ. ಇಲ್ಲೇ ಇದ್ದರೆ, ಹುಟ್ಟೋಬು ಹೆಣ್ಣು ಮಗುವೇ ಅಂತ ನಾನು ದೇಸಾಯಿಯವರ ಸಂಗಡ ಹೇಳ್ತೀನ್ರೀ ಅವ್ವಾ. ಚಿಕ್ಕಮ್ಮಾವ್ರನ್ನ ಅವರ ತವರಿಗೆ ಕಳಿಸಿಕೊಡಿ. ಹೆಣ್ಣೋ ಗಂಡೋ, ಸುಖವಾಗಿ ಹೆರಿಗೆ ಆಗಿ, ತಾಯಿ ಮಗು ಚೆನ್ನಾಗಿರಲಿ.. ಆಮೇಲೇನು ನಡೆದೀತು ದೇಸಾಯಿಯವರ ಆಟ ಎಂದಿದ್ದಳು.

ಅದೇ ಮಾತನ್ನು ನಾನೀಗ ನಿನಗೆ ಹೇಳ್ತೀದೀನಿ. ನೀನು ನಿನ್ನ ತವರಿಗೆ ಹೋರಟು ಹೋಗು. ಅವಳ ಮಾತನ್ನು ದೇಸಾಯಿಗಳು ನಂಬ್ತಾರೆ."

ಈ ಮಾತುಗಳನ್ನು ಕೇಳಿ, ಥರಥರನೆ ನಡುಗಿ, ಜ್ಞಾನ ತಪ್ಪಿ ಬಿದ್ದಿದ್ದಳು ಅನೂರಾಧ. ಡಾಕ್ಟ್ರನ್ನು ಕರೆಸಿದರು. ಔಷಧೋಪಚಾರಗಳು ನಡೆದವು. ಅವಳು ಮತ್ತೆ ಗರ್ಭಿಣಿ ಎನ್ನುವ ವಿಚಾರ ಎಲ್ಲರಿಗೂ ತಿಳಿಯಿತು. ಆ ಮಿಡ್‌ವೈಫ್, ತಾನು ಹೇಳಿದ್ದಂತೆ. ಎಲ್ಲರೆದುರಿಗೆ, ದೇಸಾಯಿಯವರಿಗೆ ಹೇಳಿದಳು.

"ಈ ಸಲ ಈಕೀನ, ಅವಳ ತವರಿಗೆ ಕಳಿಸಿ, ಖಂಡಿತಾ ಗಂಡು ಮಗುವಾಗು ತ್ತದೆ" ದೇಸಾಯಿ ಅವಳ ಮಾತಿಗೆ ಒಪ್ಪಿ, ಅನೂರಾಧಳನ್ನು ತವರಿಗೆ ಕಳಿಸುವ ಏರ್ಪಾಟು ಮಾಡಿದ್ದರುಃ. ಜವಾಬ್ದಾರಿ ಇಲ್ಲದೇ ಉಂಡಾಡಿಯಂತೆ, ತಿರುಗಾಡಿ ಕೊಂಡಿದ್ದ ಅರವಿಂದನಿಗೆ, ಈ ವಿಚಾರಗಳು ತಿಳಿದಿದ್ದವೋ, ಹೆಂಡತಿಯ ಮೇಲೆ, ಮಮತೆ, ಪ್ರೀತಿ, ಏನಿರಲಿಲ್ಲ. ಇವಳಾಗಿಯೇ ಅವನಿಗೆ ತಿಳಿಸಲಿಲ್ಲ. ಹೇಗಾದರೂ ಸರಿ, ಆ ನರಕದಿಂದ ಹೊರಗೆ ಬಂದರೆ ಸಾಕು ಎಂಬಂತೆ, ತವರಿಗೆ ಹೊರಡುವ ದಿನದವರಿಗೂ ಸಹನೆಯಿಂದ ಎಲ್ಲವನ್ನು ಸಹಿಸಿಕೊಂಡಿದ್ದಳು.

ಅಣ್ಣಾನ ಆಜ್ಞೆಯಂತೆ, ಅರವಿಂದ ಅವಳನ್ನು ತವರು ಮನೆಗೆ ಕರೆ ತಂದು ಬಿಟ್ಟಿದ್ದ. ಇಳಿಸುವ ಮುಂಚೆ ನಿಷ್ಕರಣೆಯಿಂದ ಹೇಳಿದ್ದ. ಹೆಣ್ಣು ಮಗು ಹುಟ್ಟಿದರೆ, ಮತ್ತೆ ಆ ಮನೆಗೆ ಬರಬೇಡ. ನನಗೆ ಬೇರೆ ಮದುವೆ ಮಾಡ್ತಾರೆ ಅಣ್ಣಾ. ಈ ಮಾತಿನಿಂದ ಅವಳಿಗೆ ಗಂಡನ ಮೇಲಿನ ತಿರಸ್ಕಾರ ಇನ್ನೂ ಹೆಚ್ಚಾಯಿತು.

ಈ ವಿಚಾರಗಳನ್ನು ಅಣ್ಣನಿಗೆ ತಿಳಿಸಿ ಅನೂರಾಧ ಹೇಳಿದ್ದಳು.

ಈ ಮನೆಗೆ ಬಂದು ಬಿದ್ದಿದ್ದೇನೆ. ಇನ್ನು ನೀನೇ ನನಗೆ ದಿಕ್ಕು. ಹೆಣ್ಣು ಮಗು ಹುಟ್ಟಿದರೆ, ಅವರಿಗೆ ತಿಳಿಸಬೇಡ. ಗಂಡು ಹುಟ್ಟಿದರೆ ತಿಳಿಸು. ಇವಳಿಗೆ ಮಗುವನ್ನು

ಹೆರುವ ಯೋಗ್ಯತೆ ಎಲ್ಲಿದೆ ಅಂತ ಹೀಯಾಳಿಸಿ ಅಂದಿದ್ದರು. ಆದರ ಯಾವುದೇ ಆ ಕಾರಣಕ್ಕೂ ಈ ಮಗು ಅವರ ಮನೆ ಸೇರಬಾರದು. ಆ ಮನೆಯ ವಾತಾವರಣದಲ್ಲಿ ಬೆಳೆದರೆ, ಅವನು ಮುಂದೆ ಹಿರಿಯ ದೇಸಾಯಿ ಯವರಂತೆ ದುಷ್ಕರ್ಮಿಯಾಗ ಬಹುದು. ಅಥವಾ ಕಿರಿಯ ದೇಸಾಯಿಯಂತೆ ಹೇಡಿಯಾಗಬಹುದು. ಹಾಗಾಗಲು ಖಂಡಿತಾ ಬಿಡುವುದಿಲ್ಲ ನಾನು. ನಾನು ಸತ್ತರೂ ಸರಿ, ಮಗು ಆ ಮನೆ ಸೇರಬಾರದು."

"ಹಾಗೆಲ್ಲಾ ಆಡಬಾರದು" ಎಂದು ತಾಯಿ ಹಠದಿಂದ ರೋಧಿಸುತ್ತಿದ್ದ ಮಗಳಿಗೆ ಸಮಾಧಾನ ಹೇಳಲು ನೋಡಿದ್ದರು. ತನಗೆ ಗಂಡು ಮಗು ಹುಟ್ಟಿತು ಎಂಬ ಸುದ್ಧಿ, ನೆಮ್ಮದಿಯೊಂದಿಗೆ ಅವಳ ಹಠವನ್ನು ಹೆಚ್ಚಿಸಿತ್ತು. ಅದು ರಂಗನಾಥನಿಗೆ ಮಾತ್ರ ಅರ್ಥವಾಗಿತ್ತು. ತಾಯಿಗೆ ಅರ್ಥವಾಗಿರಲಿಲ್ಲ. ಸಂಭ್ರಮ ದಿಂದ ಬೀಗರ ಮನೆಗೆ ಟೆಲಿಗ್ರಾಂ ಕಳಿಸಿದ್ದಳು.

ವಿಷಯ ತಿಳಿದು ಸಂತೋಷದಿಂದ ಪ್ರಯಾಣ ಹೊರಟ ಅರವಿಂದ ಈ ಊರನ್ನು ತಲುಪಲೇ ಇಲ್ಲ. ವಿಧಿ ಅವನನ್ನು ದಾರಿಯಲ್ಲೇ ಎಳೆದುಕೊಂಡಿತ್ತು. ಕಾರು ಆಕ್ಸಿಡೆಂಟ್‌ನಲ್ಲಿ ಅವನು ತೀರಿಹೋಗಿದ್ದ. ವಿಷಯ ತಿಳಿದ ಅನೂರಾಧ ಕಲ್ಲಾಗಿದ್ದಳು., ಒಂದು ಮಾತನ್ನು ಸಹ ಆಡಲಿಲ್ಲ.

ನಂತರ, ಹಿರಿಯ ದೇಸಾಯಿ, ಯಾರೊಡನೆಯೋ ಹೇಳಿ ಕಳಿಸಿದ್ದರು.

ಹುಟ್ಟುತ್ತಲೇ ಅಪ್ಪನನ್ನು ಕಳೆದುಕೊಂಡ ನಿರ್ಭಾಗ್ಯ ಮಗು, ಅಲ್ಲೇ ಬೆಳೆಯಲಿ. ಇಲ್ಲಿಗೆ ಬರುವ ಪ್ರಮೇಯವಿಲ್ಲ. ಅಂತ,

ವಿಷಯ ಕೇಳಿ ರಂಗನಾಥ ಅವಡು ಕಚ್ಚಿದ. ಎಂತಹ ಕಟುಕ ಜನರಿವರು. ಬಯಸಿ ಬಯಸಿ ಹುಟ್ಟಿದ ಗಂಡು ಮಗುವನ್ನು, ಈಗ ಹಾಗೆ ಹೀನಾಯವಾಗಿ ಕಾಣ್ತಿದಾರಲ್ಲ ಅಂತನ್ನಿಸಿತ್ತು. ಅನೂರಾಧ ನೆಮ್ಮದಿಯಿಂದ ನುಡಿದಿದ್ದಳು." ಒಳ್ಳೇದೇ ಆಯ್ತು. ನನ ಗಂಡ ಅನ್ನಿಸಿಕೊಂಡವನು ಬದುಕಿದ್ದಾಗಲೇ ನನಗೆ ಅಲ್ಲಿಗೆ ಹೋಗಲು ಮನಸ್ಸಿರಲಿಲ್ಲ. ಈಗ ನೀನು ನನಗೆ ಒಂದು ಉಪಕಾರ ಮಾಡಬೇಕು, ನನ್ನ ಮಗನ್ನ ನೀನು ಸಾಕಬೇಕು. ಅದು ನನ್ನ ಆಸೆ.. ನನಗೆ ಭಾಷೆ ಕೊಡು."

ರಂಗನಾಥ ಅವಳ ಸಮಾಧಾನಕ್ಕೆ ಅವಳಿಗೆ ಭಾಷೆ ನೀಡಿದ್ದ.

"ನಿನಗ್ಯಾವ ಚಿಂತೆಯೂ ಬೇಡಮ್ಮ.. ನಿನಗೆ ಹೇಗೆ ಇಷ್ಟವೋ ಹಾಗೇ ಎಲ್ಲಾ ಆಗುತ್ತೆ." ಅವಳು ಸಮಾಧಾನದ ಉಸಿರುಬಿಟ್ಟಿದ್ದಳು. ಆದರೂ ಅನೂರಾಧ ಚೇತರಿಸಿಕೊಳ್ಳಲಿಲ್ಲ. ದಿವ ದಿನಕ್ಕೂ ಕೃಶವಾದಳು. ತಾಯಿಯ ಆರೈಕೆ, ಡಾಕ್ಟರ್ ಟ್ರೀಟ್‌ಮೆಂಟ್ ಅವಳ ಮೇಲೆ ಪರಿಣಾಮ ಬೀರಲಿಲ್ಲ. ಅವಳು ಮನೋರೋಗಿ ಯಾಗಿಬಿಟ್ಟಿದ್ದಳು.

ಬರ್ತ್‌ಸರ್ಟಿಫಿಕೇಟ್ ಮಾಡಿಸುವಾಗ, ಮನೋಜ ಎಂದು ಹೆಸರನ್ನು ಬರೆಸಿದ್ದ. ಅದು ಆ ಕ್ಷಣದಲ್ಲಿ ಮನಸ್ಸಿನಲ್ಲಿ ಹುಟ್ಟಿದ ಹೆಸರು.

ಅನೂರಾಧ, ನಿಶ್ಯಕ್ತಿಯಿಂದ ಬಳಲುತ್ತಿದ್ದುದರಿಂದ ಕಾವೇರಮ್ಮ ಮಗುವನ್ನು ಸಾಕಿದರು. ಎಲ್ಲರ ಆಕರ್ಷಣೆಯ ಕೇಂದ್ರವಾಗಿ ಮನೋಜ ಬೆಳೆದರೂ ಎಲ್ಲರಿಗೂ ಏನೋ ಚಿಂತೆ. ಒಂದು ದಿನ ಅನೂರಾಧ  ಹೊಟ್ಟೆ ನೋವೆಂದು ಮಲಗಿದವಳು. ನರಳಿ ನರಳಿ ಸುಸ್ತಾದಳು. ತೀವ್ರವಾದ ನೋವನ್ನು ಅನುಭವಿಸುವುದನ್ನು

ನೋಡಲಾರದೇ, ಆಸ್ಪತ್ರೆಗೆ ಸೇರಿಸಿದರು. ಡಾಕ್ಟರು ಅವಳ ಸ್ಥಿತಿ ಗಂಭೀರವೆಂದು ತಿಳಿಸಿದಾಗ, ರಂಗನಾಥ ಅಧೀರನಾದ. ಮಂಕಾಗಿ ಕುಳಿತ ತಾಯಿಗೆ ಸಮಾಧಾನ ಹೇಳುವ ಸ್ಥಿತಿಯಲ್ಲಿ ಅವನಿರಲಿಲ್ಲ. ಡಾಕ್ಟರು, ಸೀರಿಯಸ್ ಎಂದು ಪರಿಗಣಿಸಿದ್ದ ರಿಂದ ಆಪರೇಷನ್‌ಗೆಂದು ಅವಳನ್ನು ಕರೆದೊಯ್ಯುವ ಮಾತು ಬಂದಾಗ, ಅವಳು ಅಣ್ಣನೊಡನೆ ಹೇಳಿದ್ದಳು.

"ನಾನು ಬದುಕಿ ಉಳಿಯುತ್ತೀನಿ ಎನ್ನುವ ನಂಬಿಕೆ ನನಗಿಲ್ಲ. ಮನೋಜ ನಿನ್ನ ಮಗ. ಅವನನ್ನು ಸಾಕಿ ಬೆಳೆಸಿ, ಓದಿಸಿ ಒಬ್ಬ ಸತ್ಪ್ರಜೆಯನ್ನಾಗಿ ಮಾಡುವ ಭಾರ ನಿನ್ನದು. ಈ ಜವಾಬ್ದಾರಿಯನ್ನು ನಿನಗೆ ವಹಿಸುತ್ತಿದೇನೆ. ನಿನ್ನನ್ನೇ ನಂಬಿ ದೇನೆ. ಕಡೇ ಗಳಿಗೆಯಲ್ಲಾದರೂ ನಾನು ನೆಮ್ಮದಿಯಿಂದ ಉಸಿರುಬಿಡಬೇಕೆಂದು ನನ್ನ ಆಸೆ." ಎಂದು ಹೇಳಿ ಅಣ್ಣನ ಎರಡೂ ಕೈಗಳನ್ನು ತನ್ನ ಕಣ್ಣಿಗೊತ್ತಿಕೊಂಡಿ ದ್ದಳು.

ಏಯ್ ಹುಚ್ಚಿ ನಿನಗೇನೂ ಆಗುಲ್ಲ. ನಾನು ನಿನ್ನನ್ನು ಉಳಿಸಿ ಕೊಳ್ತಿನಿ. ನಿನ್ನ ಮಗನ್ನ ನೀನೇ ಬೆಳೆಸ್ತೀಯ ನೋಡ್ತಿರು. ವಿಷಾದದ ನಗೆಯೊಂದಿಗೆ ಹೇಳಿದ್ದ. ಅವನಿಗೂ ಕಣ್ಣೀರು ಒತ್ತಿ ಬಂದಿತ್ತು. ಆ ಕಡೆಗೆ ತಿರುಗಿ, ಕಣ್ಣೊರೆಸಿಕೊಳ್ಳುವಷ್ಟ ರಲ್ಲಿ ಅವಳನ್ನು ಆಪರೇಷನ್ ಥಿಯೇಟರ್ ಒಳಕ್ಕೆ ಕರೆದೊಯ್ದರು.

ಗರ್ಭಕೋಶದಲ್ಲಾಗಿದ್ದ ಏರುಪೇರುಗಳಿಂದ, ಅತೀವ ರಕ್ತಸ್ರಾವವಾಗಿ ನಿಶ್ಯಕ್ತಿಯಿಂದ ಹೋದ ಜ್ಞಾನ ಮತ್ತೆ ಬಂದಿರಲೇ ಇಲ್ಲ. ಅವಳು ತೀರಿಕೊಂಡಿದ್ದಳು. ರಂಗನಾಥ ತನ್ನ ದುಃಖವನ್ನು ತಡೆದುಕೊಂಡು, ಅತ್ತು ಗೋಳಾಡುತ್ತಿದ್ದ ತಾಯಿಗೆ ಸಮಾಧಾನ ಹೇಳಿದ್ದ. ಅನೂರಾಧಳ ಸಾವನ್ನೂ ಅವಳ ಗಂಡನ ಮನೆಯವರಿಗೆ ತಿಳಿಸಲಿಲ್ಲ. ಅದರಲ್ಲಿ ಏನೂ ಅರ್ಥವಿಲ್ಲವೆಂದೆನಿಸಿತ್ತು.

○ ○ ○ ○

ಅಂದಿನಿಂದ ಮನೋಜ, ರಂಗನಾಥನ ಪೋಷಣೆಯಲ್ಲಿ ಬೆಳೆದ. ತಾಯಿಗೆ ಕಷ್ಟವಾಗಬಾರದೆಂದು, ಮಗುವಿನ ಎಷ್ಟೋ ಕೆಲಸಗಳನ್ನೂ ತಾನೇ ಮಾಡುತ್ತಿದ್ದ. ಮನೋಜ ಬೆಳೆದಂತೆಲ್ಲಾ ದುಗುಡ ಕಡಿಮೆಯಾದರೂ, ಅನೂರಾಧಳ ನೆನಪು ಆಗಾಗ್ಗೆ ಬರುತ್ತಲೇ ಇತ್ತು. ಒಮ್ಮೊಮ್ಮೆ ಮನೋಜನನ್ನೂ ತಬ್ಬಿಕೊಂಡು ಅಳುತ್ತಿದ್ದುದೂ ಉಂಟು. ಇದೇ ಮನೆಯಲ್ಲಿ, ಇದೇ ಊರಿನಲ್ಲಿದ್ದರೆ, ನೆಮ್ಮದಿ ಸಿಗುವುದಿಲ್ಲ. ಇದನ್ನೆಲ್ಲಾ ಮರೆತು ಬೇರೆ ಎಲ್ಲಾದರೂ ಇರುವುದೇ ಸರಿ ಅಂತನ್ನಿಸಿದಾಗ, ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟು. ಬೆಂಗಳೂರನ್ನು ಬಂದು ಸೇರಿಕೊಂಡಿದ್ದ. ಅನೂರಾದ ಇಲ್ಲದೇ ಆರೇಳು ತಿಂಗಳು ಕಳೆದರೂ, ತಮ್ಮ ದುಃಖ ಕಮ್ಮಿಯಾಗಿಲ್ಲವೆನ್ನುವುದನ್ನು ಅರಿತ ಕಾವೇರಮ್ಮ, ಮಗ ಮಾಡಿದ್ದು ಸರಿಯೆಂದೇ ತಿಳಿದಳು.

ಹುಬ್ಬಳ್ಳಿಯಲ್ಲಿ ಅವನ ಜೊತೆ ಕಾಲೇಜಿನಲ್ಲಿ ಓದುತ್ತಿದ್ದ ಸತ್ಯಮೂರ್ತಿ ಬೆಂಗಳೂರಿನ ಕಾಲೇಜೊಂದರಲ್ಲಿ ಲೆಕ್ಚರರ್ ಆಗಿದ್ದ. ಅವನ ಸಹಾಯದಿಂದ ಒಂದು ಮನೆಯನ್ನು ಬಾಡಿಗೆಗೆ ಹಿಡಿದು, ಸ್ನೇಹಿತನ ಜತೆ ತಿರುಗಾಡಿ, ಅಲ್ಲಿ ಇಲ್ಲಿ ವಿಚಾರಿಸಿ, ಅಲ್ಲಿಯ ಪ್ರೈವೇಟ್ ಕಾಲೇಜೊಂದರಲ್ಲಿ ಪಾರ್ಟ್‌ಟೈಂ ಲೆಕ್ಚರರ್ ಕೆಲಸವನ್ನು ಗಿಟ್ಟಿಸಿದ್ದ. ಆನಂತರ, ಕೆಲವು ತಿಂಗಳು ಕಳೆದ ಮೇಲೆ ಈಗ ವಾಸವಾಗಿರುವ ಮನೆಗೆ ಬಂದು ಇರತೊಡಗಿದರು.

ಸಾಲದ ವಜಕ್ಕಾಗಿ, ಕೂಡಿಟ್ಟ ಅಲ್ಪ ಸ್ವಲ್ಪ ಹಣ, ಖರ್ಚಾಗಿಹೋಗಿತ್ತು. ಸ್ನೇಹಿತನ ಬಳಿ ಮತ್ತೆ ಸ್ವಲ್ಪ ಸಾಲ ಮಾಡಿದ್ದ. ಪಿತ್ರಾರ್ಜಿತ ಆಸ್ತಿ, ತೋಟವನ್ನು ಹಿಂದಕ್ಕೆ ಮತ್ತೆ ಪಡೆಯುವ ಆಸೆಯನ್ನು ಕೈ ಬಿಟ್ಟು, ಗಿರವಿ ಇಟ್ಟವನಿಗೇ ಮಾರಿ, ಸಾಲವನ್ನು ತೀರಿಸಿ ಕೈ ತೊಳೆದುಕೊಂಡು, ಅವನು ಕೊಟ್ಟ ಇಪ್ಪತ್ತು ಸಾವಿರ ರೂಪಾಯಿಗಳಲ್ಲಿ, ತನಗಾಗಿ ಒಂದು ಸ್ಕೂಟರನ್ನು ಕೊಂಡ. ಸ್ನೇಹಿತನ ಹಣವನ್ನು ವಾಪಸ್ಸು ಮಾಡಿದ್ದ. ಮನೆಯ ಬಾಡಿಗೆ ಅಡ್ವಾನ್ಸ್‌ಗೆಂದು ಒಂದಿಷ್ಟು ಖರ್ಚಾ ಗಿತ್ತು. ತಾಯಿಗೆ ಒಂದೆರಡು ಸೀರೆಗಳನ್ನು ಮನೋಜನಿಗೆ ಹೊಸ ಬಟ್ಟೆಗಳನ್ನು ತಂದುಕೊಟ್ಟ. ಅಷ್ಟಾದರೂ, ಪಾರ್ಟ್ ಟೈಂ ಕೆಲಸಕ್ಕೆಂದು ಕೊಡುವ ಸಂಬಳ ಸಾಕಾಗುತ್ತಿರಲಿಲ್ಲ. ಮನೆಯಲ್ಲಿ ಕೆಲವು ಹುಡುಗರಿಗೆ ಪಾಠ ಹೇಳಿ ಕೊಡಬೇಕೆಂದು ಆಲೋಚಿಸಿದ್ದ. ಮಗನ ಸಂಬಳದಲ್ಲಿ ಒಪ್ಪವಾಗಿ ಮನೆಯ ಖರ್ಚನ್ನು ನಿಭಾಯಿಸಿ, ಪುಡಿಗಾಸು ಉಳಿಸಲು ಪ್ರಯತ್ನಿಸಿದಳು ಕಾವೇರಮ್ಮ.

ಹೀಗೇ ಐದಾರು ತಿಂಗಳುಗಳು ಕಳೆದಿದ್ದವು. ಈಗ ನಿರ್ಮಲೆಯ ಸ್ನೇಹವೂ ಆಗಿದೆ. ಮದುವೆಯನ್ನು ಮಾಡಿಕೊಳ್ಳುವ ಆಸೆ ಆಗಿದೆ. ಈಗ ಹಣದ ಚಿಂತೆ ಅಷ್ಟಾಗಿ ಇರಲಿಲ್ಲ ಅವನಿಗೆ. ಮದುವೆಯಾದರೆ ನನಗೇನು ಖರ್ಚಿರುತ್ತೆ. ಹೇಗೂ ಅವಳ ಸಂಪಾದನೆ ನನ್ನ ಸಂಬಳಕ್ಕಿಂತ ಜಾಸ್ತಿಯಾಗಿದೆ. ನಮ್ಮಿಬ್ಬರಿಗೆ ಯಾವ ತೊಂದರೆಯೂ ಇರುವುದಿಲ್ಲ ಎಂದೇ ಭಾವಿಸಿದ. ಲಕ್ಷುರಿಯಾಗಿ ಇರಬೇಕೆಂಬ ಆಸೆ ಅವನಿಗಿಲ್ಲ ದಿದ್ದರೂ, ಹಣದ ಜಂಜಾಟವಿಲ್ಲದೇ ಹಾಯಾಗಿರಬೇಕೆಂಬ ಆಸೆ ಸಹಜವಾಗಿತ್ತು. ಇವತ್ತಲ್ಲ ನಾಳೆ ನನಗೆಲ್ಲಾದರೂ ಪುಲ್‌ಟೈಂ ಲೆಕ್ಚರರ್ ಕೆಲಸ ಸಿಗಬಹುದು. ಆಗೇನೂ ತೊಂದರೆ ಇರುವುದಿಲ್ಲವೆಂದುಕೊಂಡ. ನನ್ನ ಬದುಕಿನಲ್ಲಿ ಏನೇನೋ ಆಗಿ ಹೋಯಿತು. ಇನ್ನು ಮುಂದಾದರೂ ಎಲ್ಲಾ ಸೆಟ್ಲ್ ಆಗಬಹುದು ಎಂದು ಭಾವಿಸಿದ. ರಾತ್ರಿ ಕಳೆದು, ಬೆಳಗಾಗಿ ತಾನು ನಿರ್ಮಲೆಯನ್ನು ಬೇಟಿಯಾಗಿ, ತನ್ನ ತಾಯಿಯ ಒಪ್ಪಿಗೆಯನ್ನು ತಿಳಿಸಿ, ಆದಷ್ಟು ಬೇಗ ಮದುವೆಯಾಗುವುದಾದರೆ,,, ಎಂದು ಯೋಚಿಸುತ್ತಾ ಕಣ್ಣು ರೆಪ್ಪೆಗಳನ್ನು ಮುಚ್ಚಿ ಮಧುರ ಕನಸುಗಳನ್ನು ಕಾಣುತ್ತಾ ನಿದ್ರಿಸಲು ಪ್ರಯತ್ನಿಸಿದ.

ೊ ೊ ೊ ೊ

ಅಲ್ಲಿ ನಿರ್ಮಲೆಯ ಮನೆಯಲ್ಲಿ ನಡೆದದ್ದು ಮತ್ತೊಂದು ರಂಪ. ಆ ರಾತ್ರಿ ತಂದೆಯೊಡನೆ ಮಾತನಾಡಬೇಕೆಂದು, ಅವರ ರೂಮಿಗೇ ಹೊದಳು. ತಂದೆ, ಬಾ ಎಂದು ಆತ್ಮೀಯವಾಗಿ ಕರೆದು ತಮ್ಮ ಮಂಚದ ಮೇಲೆ ಕೂರಿಸಿ ಕೊಂಡರು. ನಿರ್ಮಲ ಅನುಮಾನಿಸದೇ ಹೇಳಬೇಕಾದುದನ್ನು ನೇರವಾಗಿ ಹೇಳಿದ್ದಳು.

"ಅಪ್ಪಾ.. ನಾನು ಮದುವೆಯಾಗ್ಬೇಕು ಅಂತ ಅಂದ್ಕೊಂಡಿದೀನಿ."

ತಂದೆಗೆ ತಕ್ಷಣಕ್ಕೆ ಏನೆಂದು ಅರ್ಥವಾಗಲಿಲ್ಲ. "ಆಂ...?" ಎಂದರು ಪಿಳಿ ಪಿಳಿ ಅವಳನ್ನು ನೋಡುತ್ತಾ.

"ಅಪ್ಪಾ.. ನಾನು ಒಬ್ಬರನ್ನು ಮೆಚ್ಚಿಕೊಂಡಿದೀನಿ, ಪ್ರೀತಿಸ್ತೀದೀನಿ. ಅವರನ್ನೇ ಮದುವೆ ಮಾಡ್ಕೋಬೇಕು ಅಂತ ತೀರ್ಮಾನಿಸಿದೀನಿ." ತಂದೆ ಏನಾದರೂ ಹೇಳುವ ಮುಂಚೆ. ಅಲ್ಲಿಯೇ ಇದ್ದ ತಾಯಿ ಗದರಿಸುವಂತೆ ಕೇಳಿದ್ದಳು.

"ಏನಂದೆ? ಇಷ್ಟು ದಿನಗಳ ಮೇಲೆ ಈ ಆಸೆ ಯಾಕೆ ನಿನಗೆ?"

"ಯಾಕೆ ಆಸೆಯಾಗಬಾರದು? ನಾನೇನು ಮುದುಕೀನಾ?" ಮರು ಸವಾಲೆಸೆದಳು.

"ತಮಾಷೆ ಮಾಡಬೇಡ. ಮದುವೆ ವಯಸ್ಸು ಮೀರಿ ಹೋಗಿದೆ ನಿನಗೆ"

"ಆ ವಯಸ್ನಲ್ಲಿ ನನಗೆ ಮದುವೆ ಮಾಡಲಿಲ್ಲ. ಅದಕ್ಕೆ ಮೀರಿ ಹೋಯ್ತು. ಈಗ ಮದುವೆ ಆದ್ರೆ ತಪ್ಪೇನಿಲ್ಲ."

"ಹೌದೇ...ತಪ್ಪೇನಿಲ್ಲ..ನಿನಗೆ ಮದುವೆ ಆಗುವ ಹಾಗಿದ್ದರೆ, ನಿನ್ನನ್ನು ಇಷ್ಟೊಂದು ಖರ್ಚು ಮಾಡಿ, ಡಾಕ್ಟರನ್ನಾಗಿ ಯಾಕೆ ಮಾಡ್ತಿದ್ವು?"

"ಅದಕ್ಕೂ ಮದುವೆಗೂ ಏನು ಸಂಬಂದ? ನನ್ನನ್ನು ಡಾಕ್ಟರನನಾಗಿ ಮಾಡಿದ್ದು ನಿಮ್ಮ ಆಸೆ, ಮದುವೆ ನನ್ನ ಆಸೆ."

"ಆಸೆ ಅಂತ, ನಿನ್ನ ಮದುವೇನ ಡಿಸೈಡ್ ಮಾಡಿಕೊಳ್ಳುವ ಹಕ್ಕು ನಿನಗಿಲ್ಲ."

"ಯಾಕೆ ಇಲ್ಲ? ನಾನು ಮದುವೆಯಾಗಬಾರದು ಅಂತ ರೂಲ್ ಏನಾದರೂ ಇದೆಯ?"

"ತಲೆ ಹರಟೆ ಮಾತು ಸಾಕು. ನಿನ್ನ ಸ್ಥಿತಿ ತಿಳಿದುಕೊಂಡು ಮಾತಾಡ್ತಿದೀ ತಾನೇ? ಎಲ್ಲರಂತೆ ನಿನಗೂ ಮದುವೆ ಆಗುವ ಹಾಗಿದ್ದಿದ್ರೆ ನಾನೇ ಮಾಡುತ್ತಿರಲಿಲ್ವೇ?"

"ನಿಮಗೆ ಆ ಕಷ್ಟ. ಬೇಡ ಅಂತ, ಈಗ ನಾನೇ ಸೆಟ್ಲ್ ಮಾಡಿ ಕೊಂಡಿದೀನಿ. ನಿನಗೆ ಸುಮ್ಮನೇ ತಿಳಿಸಿದೆ ಅಷ್ಟೇ. ನಿನ್ನ ಒಪ್ಪಿಗೆಯನ್ನೇನೂ ಕೇಳಲಿಲ್ಲವಲ್ಲ?"

"ಎಷ್ಟು ದುರಹಂಕಾರ ನಿನಗೆ? ಯಾಕೆ ಈ ದುರ್ಬುದ್ಧಿ? ಆ ನಿನ್ನ ಲವರ್ ಹೇಳಿ ಕೊಟ್ನಾ? ಈ ಮಾತುಗಳನ್ನ..?"

"ನನಗೇನೂ ತಿಳಿಯದ ವಯಸ್ಸಲ್ಲ. ಯಾರೂ ಹೇಳಿ ಕೊಡಬೇಕಾಗಿಲ್ಲ. ಅಹಂಕಾರ, ದುರ್ಬುದ್ಧಿ ನನಗಲ್ಲ. ನಿನಗೆ. ತಾಯಿ ಅಂತ ಎಂದಾದರೂ ಒಂದು ದಿನ, ನನ್ನ ಕಷ್ಟ ಸುಖ., ಆಸೆ ಏನು ಅಂತ ವಿಚಾರಿಸಿದೀಯ..?"

"ನಿನಗೇನು ಕಮ್ಮಿ? ಇನ್ನೆಂತಹ ಆಸೆ?" ತಾಯಿ, ಕೈ ಬಾಯಿ ತಿರುಗಿಸಿ ಮಾತನಾಡಿದಾಗ, ಅವಳಿಗೆ ರೇಗಿ ಹೋಯಿತು.

"ಏನಪ್ಪಾ ..ನೀವೂ,..... ಅವಳು ಅಷ್ಟು ಅನ್ತಿದ್ರೂ ನೀವೂ ಸುಮ್ಮನಿದೀರಲ್ಲ?"

ತಂದೆ ಸಮಾಧಾನದಿಂದ ನುಡಿದರು. "ಅವಳು ಆಡುವುದನ್ನೆಲ್ಲ ಆಡಿ ಮುಗಿಸಲಿ ಅಂತ ಸುಮ್ಮನಿದ್ದೆ. ಅವಳು ಮಾತಾಡುವಾಗ, ನನಗೆಲ್ಲಿಯ ಅವಕಾಶ?" ಪೆದ್ದು ಮುಖ ಮಾಡಿದರು. ತಂದೆಯ ನಿಧಾನಕ್ಕೆ ಅವಳಿಗೆ ಮತ್ತೆ ರೇಗಿತ್ತು.

"ಇಬ್ಬರೂ, ನಿಮಗೆ ಹೇಗೆ ಬೇಕೊ ಹಾಗೆ ನನ್ನನ್ನು ಬೆಳೆಸಿದಿರಿ. ಆದರೂ, ನನ್ನದು ಅನ್ನುವ ಆಸೆ ಒಂದಿದೆ ಅಂತ ನಿಮಗೇಕೆ ಅನ್ನಿಸಲಿಲ್ಲ? ಕುಂಟಾದ ಮಾತ್ರಕ್ಕೆ ಮದುವೆ ಆಗ್ಬಾರ್ದು ಅಂತ ಏನೂ ಇಲ್ಲ. ವರದಕ್ಷಿಣೆ ಕೊಟ್ಟಿದ್ದಿದ್ರೆ ಯಾರಾದ್ರೂ ಮದುವೆ ಆಗ್ತಿದ್ರೇನೋ...?"

"ಈ ಮಾತನ್ನೂ ನೀನು ಆಡ ಬಾರದಮ್ಮಾ.." ತಂದೆ ವ್ಯಥೆಯಿಂದ ತಂದೆ ಹೇಳುವಷ್ಟರಲ್ಲಿ, ತಾಯಿ ಮತ್ತೇ ಏರು ಧ್ವನಿಯಲ್ಲಿ ನುಡಿದಳು.

"ಹುಂ ಆಗ್ತಿದ್ದ... ಯಾರೋ ಒಬ್ಬ ಭಿಕಾರಿ. ವರದಕ್ಷಿಣೆಗಿಂತ ಹೆಚ್ಚಿಗೆ ನಿನ್ನ ಓದಿಗೆ ಕ್ಲಿನಿಕ್‌ಗೆ ಖರ್ಚು ಮಾಡಿದೀವಿ. ಈಗ ನೀನು, ಒಂದು ಗೌರವವಾಗಿ ಬಾಳುತ್ತಿರುವುದು ನಮ್ಮಿಂದಲೇ.."

"ಏನಪ್ಪಾ... ಅಮ್ಮ ಹೀಗೆಲ್ಲಾ ಮಾತಾಡ್ತಿದಾಳೆ..?" ಅವಳ ಗಂಟಲುಬ್ಬಿ

ಬಂದಿತ್ತು.

"ಅವರೇನು ಹೇಳ್ತಾರೆ? ಈ ಆಸ್ತಿ ಎಲ್ಲಾ ನಿಮ್ಮ ತಾತಂದೇನಲ್ಲ. ನನಗೆ ನಮ್ಮಪ್ಪನ ಮನೆಯಿಂದ ಬಂದದ್ದು"

"ಸಾಕು ಮಾಡು ಸುಮ್ಮನಿದೀನಿ ಅಂತ ಎಷ್ಟು ಮಾತಾಡ್ತಾನೇ ಇದೀಯಲ್ಲ." ತಂದೆ ತಾಯಿಯನ್ನು ಗದರಿಸಿದರು. ಇದೆಲ್ಲಾ ನಾಟಕದಂತೆ ತೋರಿತು ಅವಳಿಗೆ. ಅಲ್ಲಿಂದ ಓಡಿ ಹೋಗಿ ಬಿಡಬೇಕು ಅಂತ ಅನ್ನಿಸ್ತು. ಹೇಗೂ ಈ ಮನೆಯಿಂದ ಸಧ್ಯದಲ್ಲೇ ಹೊರಡ್ತೀವಿ.. ನನಗೋಸ್ಕರ ಖರ್ಚು ಮಾಡಿರುವುದಂತೂ ನಿಜ. ಆದರೆ ಅದನ್ನು ಎತ್ತಿ ಆಡಿ ಹೀಯಾಳಿಸ್ತಿದಾಳೆ. ಈ ಮುಲಾಜು ಒಂದನ್ನು ಮಾತ್ರ ಇಟ್ಟುಕೋ ಬಾರದು. ಈ ಹಣ. ಈ ಅಂತಸ್ತು ಒಂದೂ ಬೇಡ ನನಗೆ. ಎಲ್ಲಾ ಕಿತ್ತೆಸೆದು ಹೊರಟುಹೋಗಿಬಿಡಬೇಕು ಎಂದುಕೊಂಡಳು. ತಾಯಿ ಆಡುತ್ತಲೇ ಇದ್ದಳು.

"ಅವನ್ಯಾವನೋ ಜಾಣ ನಿನ್ನ ಸಂಪಾದನೆಗೆ ಬೆರಗಾಗಿ ಬಾಯಿಬಿಟ್ಟುಕೊಂಡು ನಿನ್ನನ್ನು ಮದುವೆಯಾಗಲು ಮುಂದೆ ಬಂದಿದಾನೆ. ಇಲ್ಲದಿಲ್ಲರೆ ಅವನಿಗೇನು ಕೇಡುಗಾಲ? ನಿನ್ನಂತಹ ಕುಂಟಿಯನ್ನು ಮದುವೆಯಾಗುವುದಕ್ಕೆ?"

ತಾಯಿಯಾದವಳು ಮಗಳೊಡನೆ, ಹೀಗೆ ಚುಚ್ಚಿ ಮಾತನಾಡುವುದೆಂದರೆ.. ಅವಳಿಗೆ ತಾಯಿಯ ಮಾತು ಅಸಹ್ಯವಾಗಿ ತೋರಿತ್ತು.

"ಅಷ್ಟೆಲ್ಲಾ ಏನೂ ಹೇಳಬೇಕಾಗಿಲ್ಲ. ಅವನು ಅಂತಹವನೇನಲ್ಲ. ಕಾಲೇಜು ಲೆಕ್ಚರರ್ ಆಗಿದಾನೆ. ಅವನಿಗೂ ತಿಂಗಳಿಗೆ ಸಂಬಳ ಬರುತ್ತೆ"

"ಹೂಂ. ಬರುತ್ತೆ. ಬರುತ್ತೆ ಈ ಕಡೆ ಎಳೆದರೆ ಆ ಕಡೆ ಇಲ್ಲ. ಆ ಕಡೆ ಎಳೆದರೆ ಈ ಕಡೆ ಇಲ್ಲ ಎನ್ನೋ ತರಹ."

"ಅಥವಾ ನನ್ನ ಮನೆಗೆ, ನನ್ನ ಸಂಸಾರಕ್ಕೆ, ನನ್ನ ಹಣ ಖರ್ಚು ಮಾಡ್ಕೋ ತೀನಿ.. ಏನೀಗ?"

"ಹೂಂ. ಅದೇ.. ಅದನ್ನೇ ಅವನು ಕಾಯುತ್ತಿರುವುದು. ನಿನಗೆ ಪ್ರಪಂಚ ಜ್ಞಾನ ತಿಳಿಯದು. ನಿನ್ನನ್ನು ಯಾರೇ ಮದುವೆ ಆದರೂ, ಅದು ನಿನ್ನ ಸಂಪಾದನೆ ನೋಡಿ.. ಅಂತ ನನಗೆ ಗೊತ್ತು."

"ನೀನೆಲ್ಲೋ ನನ್ನ ಮಲತಾಯಿ ಇರಬೇಕು. ಇಲ್ಲದಿದ್ರೆ ಖಂಡಿತಾ ಹೀಗೆ ಅನ್ತಿರಲಿಲ್ಲ. ನನ್ನ ಸಂತೋಷಕ್ಕೆ ಕಲ್ಲು ಹಾಕುವ ಮಾತುಗಳನ್ನು ಆಡುತ್ತಿರಲಿಲ್ಲ."

"ಹೌದೇ.. ಹೌದು. ನಾನು ನಿನ್ನ ಮಲತಾಯೀನೇ.. ನಿನಗೆ ನಮ್ಮ ತಿಳುವಳಿಕೆಯ ಮಾತಿಗಿಂತ ಆ ಸಂತೋಷವೇ ಹೆಚ್ಚು ಅಂತ ಅನ್ನಿಸುವಾಗ ಎಲ್ಲಾ ಹಾಗೇ.. ಆದರೆ ನಮ್ಮ ಮನೆಯಿಂದ ಆಚೆ ಹೋಗುವ ಆಗ, ನಮ್ಮಿಂದ ನಿನ್ನ ಓದಿಗಾಗಿ, ಕ್ಲಿನಿಕ್‌ಗಾಗಿ ಖರ್ಚು ಮಾಡಿರುವುದನ್ನೆಲ್ಲ ತೀರಿಸಿಬಿಟ್ಟು ಹೋಗು"

ಈ ಮಾತು ನಿರ್ಮಲೆಯನ್ನು ನೋಯಿಸಿತು. ಇವಳಿಗೆ ನನ್ನ ಸುಖ ಸಂತೋಷಕ್ಕಿಂತ, ಹಣದ ಹಂಬಲವೇ ಜಾಸ್ತಿಯಾಗಿದೆ. ಇಂತಹ ಸ್ವಾರ್ಥಿಯನ್ನೊ ತಾಯಿ ಅಂತ ಹೇಳಿಕೊಳ್ಳುವುದಕ್ಕೂ ನಾಚಿಕೆ ಆಗುತ್ತೆ. ಇರಲಿ, ಇವಳ ಹಣವನ್ನು ಇವಳ ಮುಖದ ಮೇಲೆ ಎಸೆದು ಹೋಗ್ತೇವೆ ಎನ್ನುವಷ್ಟು ರೋಷ ಉಕ್ಕಿತು. ತಂದೆಯ ಮೇಲೂ ತಿರಸ್ಕಾರ ಮೂಡಿತು.

"ಅಪ್ಪಾ ನೀವಾದರೂ ನನ್ನ ಕಡೆಗೆ ಇದೀರಿ ಅಂತ ಅಂದುಕೊಂಡಿದ್ದೆ. ಆದರೆ ನೀವೂ ಇವತ್ತು ನನಗೆ ದೂರವಾಗಿಬಿಟ್ಟರಿ. ನನ್ನನ್ನು ಗಂಡು ಹುಡುಗನಂತೆ ಬೆಳೆಸಿ, ನನ್ನಿಂದ ಮರು ಅಪೇಕ್ಷೆ ಪಡ್ತೀರಿ ಅಂತ ನಾನೆಂದೂ ಯೋಚಿಸಿಯೇ ಇರಲಿಲ್ಲ. ಗಂಡು ಮಗ, ರವಿ ನಿಮ್ಮನ್ನೆಲ್ಲಾ ಬಿಟ್ಟು ತನ್ನ ಪಾಡಿಗೆ ತಾನು ಹೊರಟುಹೋದಾಗ ನಿಮಗೆ ಹೆಚ್ಚು ದುಃಖವಾಗಿರಲಾರದು. ಯಾವ ಗಂಡಸಿಗಿಂತ ಹೆಚ್ಚಾಗಿ, ದುಡಿದು ಸುರಿಸುವ ಹಣದ ಮೂಲ ನಾನಾಗಿದ್ದೆ. ಆದರೆ ನನಗೆ ಎಂದೂ ಇದರ ಅರಿವಾಗಿರ ಲಿಲ್ಲ. ಇದೆಲ್ಲಾ ತಿಳಿದ ಮೇಲೆ ನನಗೆ ನಿಮ್ಮ ಹಂಗು ಬೇಡವೇ ಬೇಡ. ನನ್ನಿಂದ ನಿಮಗೆ ಯಾವುದೇ ನಷ್ಟವಾಗುವುದಿಲ್ಲ. ನಿಶ್ಚಿಂತೆಯಾಗಿರಿ. ನನಗೆ ಇದುವರೆಗೆ ಆಶ್ರಯ ಕೊಟ್ಟಿದ್ದಕ್ಕೆ ಕೃತಜ್ಞತೆಗಳು ಸಧ್ಯದಲ್ಲೇ ಈ ಮನೆಯಿಂದ ನಾನು ಹೊರಟು ಹೋಗ್ತೀನಿ. ಅದುವರೆಗೂ ನಾನು ಇಲ್ಲಿರಲೇ ಬೇಕಾಗುತ್ತದೆ. ಇಲ್ಲದಿದ್ದರೆ ನಿಮಗೇ ಅವಮಾನ." ಎಂದು ವ್ಯಂಗ್ಯಭರಿತ ರೋಷದಿಂದ ಕೈ ಮುಗಿದು ಹೊರಟಾಗ, ತಾಯಿ ಮತ್ತೊಮ್ಮೆ ಜೋರು ಧ್ವನಿಯಲ್ಲಿ ಹೇಳಿದಳು.

"ಸಾಕೇ.. ನಿನ್ನ ಅಬ್ಬರ. ನಿನಗೆ ಕೊಬ್ಬು ಜಾಸ್ತಿ. ನಿನ್ನಿಂದ ಲಾಭ ಪಡೆದು, ಅವನು ನಿನ್ನನ್ನು ಮೂಲೆ ಗುಂಪು ಮಾಡಿದ ದಿನ, ನಿನಗೆ ನಮ್ಮ ಮಾತಿನ ಅರ್ಥ ತಿಳಿಯುತ್ತೆ. ನಮ್ಮಿಂದಲೇ ನಿನಗೆ ಈ ಪ್ರೆಸ್ಟೀಜ್, ಈ ಪೊಸಿಷನ್ .. ಆಮೇಲೆ ನಿನಗೇನು ಸಿಗುತ್ತೆ ನಾನು ನೋಡ್ತೀನಿ."

"ಅರ್ಥವಿಲ್ಲದ ಈ ಪ್ರೆಸ್ಟೀಜ್.. ಈ ಪೊಸಿಷನ್ ನನಗೆ ಬೇಡ. ಪ್ರೀತಿ ಇಲ್ಲದ ವಾತ್ಸಲ್ಯವಿಲ್ಲದ ಈ ಬಾಂಧವ್ಯ ನನಗೆ ಬೇಡ. ಇದುವರೆಗೆ ನಾನು ಮಾನಸಿಕವಾಗಿ ಒಂಟಿಯಾಗಿದ್ದೆ. ಇನ್ನು ಮೇಲೆ ನಾನು ಅನಾಥೆ ಕೂಡಾ" ಎನ್ನುತ್ತಾ ಅಲ್ಲಿಂದ ತನ್ನ ರೂಮಿಗೆ ಹೊರಟುಹೋದಳು.

ರಾತ್ರಿಯೆಲ್ಲಾ ಹಾಸಿಗೆಯಲ್ಲಿ ಹೊರಳಾಡಿ ಕಳೆದಳು. ತಾಯಿಯ ಮಾತುಗಳು ತಿವಿತದಂತೆ ಅನ್ನಿಸುತ್ತಿತ್ತು. ತಂದೆ ಕೂಡಾ ತನ್ನ ಬೆಂಬಲಕ್ಕೆ ಬರಲಿಲ್ಲವಲ್ಲ ಅಂತ ಅನಿಸಿದಾಗ, ತಾನು ಎಂತಹ ನಿರ್ಭಾಗ್ಯೆ ಎನಿಸಿತ್ತು. ಅಳು ಬರುವಂತಾಯ್ತು. ಹುಂ,, ಹುಂ,, ಅಳಬಾರದು. ಅತ್ತು ಸಾಧಿಸುವುದೇನು? ಛಲದಿಂದ, ಹಠದಿಂದ ಸಾಧಿಸಬೇಕು. ಸೋಲಬಾರದು ಎಂದು ತೀರ್ಮಾನಿಸಿದಳು.

ನಿದ್ದೆಯಿಲ್ಲದೇ ಹೊರಳಾಡಿ, ಸುಸ್ತಾಗಿದ್ದಳು. ಜ್ವರ ಬಂದವಳಂತೆ ಮಲಗೇ ಇದ್ದಳು. ಎಷ್ಟು ಹೊತ್ತಾದ್ರೂ ಮಲಗೇ ಇದ್ದ ಮಗಳನ್ನು ಎಬ್ಬಿಸಲೆಂದು ತಂದೆ ಬಂದಾಗ ಅವಳಿಗೆ ಅವರ ಕೂಡಾ ಮಾತಾಡಬೇಕೆನಿಸಲಿಲ್ಲ. ಅವರೇ ಅವಳ ಹತ್ತಿರ ಕೂತು ತಲೆ ಸವರಿ ನುಡಿದರು.

"ಸಾರಿ ನಿರ್ಮಲಾ, ನಾನು ನಿನಗೆ ತುಂಬಾ ನಿರಾಸೆಯನ್ನುಂಟುಮಾಡಿಬಿಟ್ಟೆ. ನಿನಗೆ ಕೋಪ ಬಂದಿದೆ ಅಂತ ನನಗೆ ಗೊತ್ತು. ಆದರೇನು ಮಾಡಲಿ? ಈ ಆಸ್ತಿ, ಅಂತಸ್ತು, ಹಣ ವ್ಯವಹಾರ ಎಲ್ಲಾ ಅವಳದೇ.. ಅವಳ ಅಪ್ಪನ ಮನೆಯಿಂದ ಬಂದ ಬಳುವಳಿ. ಇದರಲ್ಲಿ ನನಗೆ ಯಾವ ಹಕ್ಕೂ ಇಲ್ಲ. ಆದಕ್ಕೇ ಅವಳ ಪೊಗರು ಜಾಸ್ತಿ. ನಾನೂ ಹೆಚ್ಚಿಗೆ ಮಾತನಾಡುವುದಿಲ್ಲ. ಮಾತಾಡಿದರೆ ಹೀಗೇ ಹಗರಣ. ನೀನೂ ಅಷ್ಟೇ.. ಹೀಗಿದೆ ವಿಚಾರ ಅಂತ ನನಗೆ ಈ ಮೊದಲೇ ತಿಳಿಸಿದ್ದರೆ, ನಾನೇ ಏನಾದ್ರೂ ಉಪಾಯ

ಹುಡುಕುತ್ತಿದ್ದೆ. ಸುಮ್ಮನೇ ಮಾತನಾಡಿ, ಒಬ್ಬರನ್ನೊಬ್ಬರು ದೂಷಿಸಿದ್ದಷ್ಟೇ ಆದದ್ದು, ನನಗೇನು ಆಸೆ ಇಲ್ಲವೇ, ನನ್ನ ಮಗಳು ನಾಲ್ಕು ಜನರಂತೆ ಮದುವೆಯಾಗಿ ಗಂಡನ ಮನೆಯಲ್ಲಿ ಸುಖವಾಗಿರಲಿ ಅಂತ? ನನ್ನ ಹೃದಯ ಬಯಸುವುದು ಅದನ್ನೇ...... ಯಾರು ಆ ಹುಡುಗ? ಹೇಗಿದಾನೆ? ಏನು ಮಾಡ್ತಿದಾನೆ? ನನಗೆ ಅವನ ಪರಿಚಯ ಮಾಡಿಸುಲ್ವಾ? ತಂದೆಯ ಅನುನಯದ ಮಾತುಗಳು ಈಗ ಅವಳಿಗೆ ಬೇಡವಾದವು.

"ಹೋಗಲಿ ಬಿಡಿ ಅಪ್ಪಾ.... ನನ್ನ ಮನಸ್ಸೇ ಕೆಟ್ಟು ಹೋಗಿದೆ. ಯಾರಿಗೇನು ಅನ್ಯಾಯ ಮಾಡಿದ್ದೆ ನಾನು? ಯಾಕೆ ಅಂತ ನನಗೆ ಈ ಶಿಕ್ಷೆ? ನಾನು ಕುಂಟಿಯಾಗಿ ಹುಟ್ಟುವ ಬದಲು, ಹುಟ್ಟದೇನೆ ಇದ್ದಿದ್ರೆ ಚೆನ್ನಾಗಿತ್ತು."

ತಂದೆಗೆ ಈ ಮಾತು ತಟ್ಟಿತು. ತಲೆ ತಗ್ಗಿಸಿದರು.

"ಅಮ್ಮಂಗ್ಯಾಕೆ ನನ್ನ ಮೇಲೆ ಇಷ್ಟು ದ್ವೇಷ? ಒಂಟಿಯಾಗಿರುವುದು ನನ್ನ ತಪ್ಪೇ? ವಿಮಲನಂತೆ ನಾನೂ ನಿಮ್ಮ ಮಗಳಲ್ಲವೇ? ರವಿಗಿಂತ ಹೆಚ್ಚಾಗಿ ನಾನು ದುಡಿದು ಸಂಪಾದಿಸಿ ಕೊಡ್ತಿಲ್ಲವೇ? ಆದರೂ ಅವಳಿಗೇಕೆ ನನ್ನ ಮೇಲೆ ಪ್ರೀತಿ ಇಲ್ಲ. ಅವಳು ಆಡುವ ಮಾತುಗಳನ್ನೂ ಕೇಳಿದರೆ, ನಾನು ಅವಳ ಮಲಮಗಳೆನೋ ಅಂತಲೇ ಅನ್ನಿಸುತ್ತೆ. ನಂಗ್ಯಾಕೋ ಅನುಮಾನ?"

ತಂದೆ ನಿರ್ಮಲೆಯ ಕೈ ಹಿಡಿದು ಹೇಳಿದರು.

"ಇದುವರೆಗೂ ನಿನಗೆ ತಿಳಿಸದೇ ಇದ್ದ ವಿಚಾರ ಇದು..ಈಗ ಹೇಳ್ತಿದೀ ನಮ್ಮ.. ನೀನು ನನ್ನ ಮಗಳು.. ಅವಳ ಮಗಳಲ್ಲ. ನಿಮ್ಮಮ್ಮ ತೀರಿ ಹೋಗಿದಾಳಮ್ಮ."

ಈ ಮಾತುಗಳನ್ನು ಕೇಳಿ, ನಿರ್ಮಲೆಗೆ ಹೃದಯಾಘಾತವಾದಂತಾಯಿತು. ಒಂದು ಗಳಿಗೆ ಜಡವಸ್ತುವಿನಂತೆ ಕುಳಿತಿದ್ದಳು... ನಂತರ ನಿಧಾನವಾಗಿ,

"ನನಗೆಂತಹ ಅನ್ಯಾಯ ಮಾಡಿದಿರಿ ನೀವು? ನನಗ್ಯಾಕೆ ಹೇಳಲಿಲ್ಲ. ಇದುವರೆಗೂ... ನನ್ನನ್ನು ಮಲತಾಯಿಯ ಕೈಗೆ ಹಾಕುವ ಬದಲು, ಕತ್ತು ಹಿಚುಕಿ ಸಾಯಿಸಿದ್ದರೆ ಎಷ್ಟೋ ಚೆನ್ನಾಗಿತ್ತು."

"ಅವೆಲ್ಲಾ ಕಳೆದುಹೋದ ಮಾತುಗಳು, ಹೋಗಲಿ ಬಿಡು. ನಿನಗೆ ಯಾವುದಕ್ಕೂ ಕಡಿಮೆಯಾಗದ ಹಾಗೆ ನಾನೇ ಎಲ್ಲಾ ನೋಡಿಕೊಳ್ಳುತ್ತಿದ್ದೆ. ಆದರೆ ನಿನ್ನ ಮದುವೆಯ ಬಗ್ಗೆ ನಾನೂ ಯೋಚಿಸಲಿಲ್ಲ. ಅದು ನಿಜ.. ಆದರೆ, ಅದು ಯಾಕೇಂದ್ರೆ..... ನನ್ನ ಮಗಳು ಎಲ್ಲರಿಗಿಂತ ಚೆನ್ನಾಗಿ ಭಿನ್ನವಾಗಿ ಬಾಳಬೇಕು ಅಂತ ನನಗೆ ಅನ್ನಿಸಿತ್ತು. ಗೃಹಿಣಿಯಾಗಿ, ಬರೀ ಮನೆ ಕೆಲಸ ಕಾರ್ಯಗಳನ್ನು ಮಾಡಿಕೊಂಡಿರುವುದಕ್ಕಿಂತ, ಡಾಕ್ಟರಾಗಿ, ನಾಲ್ಕು ಜವರಿಗೆ ಉಪಕಾರ ಮಾಡಿ ಹೆಸರು ಗಳಿಸಲಿ ಅಂತ ನನ್ನ ಆಸೆ ಇತ್ತು. ನೀನು ನನ್ನುನ್ನು ಅಪಾರ್ಥ ಮಾಡಿಕೊಂಡು ಬಿಟ್ಟೆ."

ತಂದೆಯ ಈ ಮಾತುಗಳು ಅವಳಿಗೆ ರುಚಿಸಲಿಲ್ಲ. ನಂಬಿಕೆಯೂ ಬರಲಿಲ್ಲ.

"ಏನೇ ಆದ್ರೂ... ನೀವೂ ಈ ವಿಚಾರಗಳನ್ನು ನನಗೆ ಈ ಮುಂಚೆಯೇ ತಿಳಿಸದೇ ತಪ್ಪು ಮಾಡಿದೀರಿ. ಇಷ್ಟೆಲ್ಲಾ ಆದಮೇಲೆ, ಈಗ ಮತ್ತೆ ಎಲ್ಲಾ ಸರಿ ಹೋಗುವುದಂತೂ ಸಾಧ್ಯವಿಲ್ಲ."

"ನನ್ನ ಬಗ್ಗೆ ಏನಾದ್ರೂ ಅಂದ್ಕೋ.. ನೀನು ಮದುವೆಯಾಗ್ತೀದೀಯ ಅಂತ ನನಗೆ ದುಃಖವಿಲ್ಲ. ಎಲ್ಲಾದ್ರೂ ಸರಿ. ನೀನು ಸುಖವಾಗಿರು. ಬಾಳಿನುದ್ದಕ್ಕು ನಿನ್ನನ್ನು

ಕಾಪಾಡಬಲ್ಲ ವೃತ್ತಿ ನಿನಗಿದೆ. ನಿನ್ನನ್ನು ಸುಖವಾಗಿಟ್ಟುಕೊಳ್ಳುವಂತಹ ಗಂಡನನ್ನೂ ನೀನೇ ಆರಿಸಿಕೊಂಡಿದೀಯ.... ನನ್ನ ಆಶೀರ್ವಾದ ನಿನ್ನನ್ನು ಸದಾ ಕಾಪಾಡಲಿ.. ಇದೇ ನನ್ನ ಹಾರೈಕೆ" ಎಂದು ಅವಳ ತಲೆಯ ಮೇಲೆ ಕೈ ಇಟ್ಟು ಹರಿಸಿ, ಅಲ್ಲಿ ನಿಲ್ಲಲಾರದೇ ಹೊರಟುಹೋದರು.

ನಿರ್ಮಲಳ ಮನಸ್ಸಿಗೆ ಮಂಕು ಕವಿದಂತಾಗಿತ್ತು. ಇದುವರೆಗೂ ಇದ್ದ ಜೀವನ ಒಂದು ತರಹ ... ಅದರಲ್ಲಿ ಒಂದು ಬದಲಾವಣೆ ಕಾಣುವುದಕ್ಕೆ ಮುಂಚೆಯೇ ಏನು ಕೋಲಾಹಲ ಮನಸ್ಸು ಕಲಕಿದ ಕೊಳಾಯಿ.

ಅವಳೇನೂ ನನ್ನ ಸ್ವಂತ ಅಮ್ಮನಲ್ಲ. ಅವಳಿಗೇಕೆ ಹೆದರಬೇಕು ಅಂತನ್ನಿಸಿ ದರೂ, ಅವಳು ಹಂಗಿಸಿ ಆಡಿದ ಮಾತುಗಳನ್ನು ಮರೆಯುವಂತಿರಲಿಲ್ಲ. ಅವಳ ಒಂದು ಚಿಕ್ಕಾಸೂ ನನಗೆ ಬೇಡ..ಇದುವರೆಗೆ ನನಗಾಗಿ ಖರ್ಚು ಮಾಡಿದ್ದನ್ನು ಬಡ್ಡಿ ಸಮೇತ ತೀರಿಸಿ ಬಿಡಬೇಕು.. ಅವಳ ಯಾವ ಋಣವೂ ನನಗೆ ಬೇಡ ಎಂದುಕೊಂಡು ಎದ್ದಳು.

ನಿತ್ಯದಂತೆ ಎದ್ದು ತನ್ನ ಪಾಡಿಗೆ ತಾನು, ತನ್ನ ಕೆಲಸಗಳನ್ನು ಮಾಡಿಕೊಂಡಳು. ಅಡಿಗೆಯವರು ತಂದಿರಿಸಿದ ತಿಂಡಿ ಕಾಫಿಯನ್ನು ಮುಗಿಸಿ, ಎಂದಿಗಿಂತ ಮುಂಚಿತ ವಾಗಿ ಕ್ಲಿನಿಕ್‌ಗೆ ಬಂದಳು. ಒಂದು ಅಂಬಾಜಿನಲ್ಲಿ, ತನ್ನ ಮೆಡಿಕಲ್ ಕೋರ್ಸ್‌ಗೆ ಆಗಿರುವ ಖರ್ಚನ್ನೂ, ಕ್ಲಿನಿಕ್‌ಗೆ, ಅಲ್ಲಿಯ ಉಪಕರಣಗಳಿಗೆ ಎಷ್ಟು ಖರ್ಚು ಮಾಡಿರಬಹುದೆಂದು ಲೆಖ್ಖ ಹಾಕಿದಳು. ತಾನು ತೀರಿಸಬೇಕಾದುದು ಇನ್ನು ತುಂಬಾ ಇದೆ ಅಂತ ಅನ್ನಿಸಿದಾಗ, ದುಗುಡ ತುಂಬಿಕೊಂಡಿತು. ಅವಳು ತಗೊಳ್ಳುತ್ತಿದ್ದ ಫೀಸು ಕಡಿಮೆ. ಅಲ್ಲದೇ ಕೆಲವರು ಕೊಡದೇ ಹಾಗೇ ಹೊರಟುಹೋಗುತ್ತಿದ್ದರು. ಅಂತಹ ಸಮಯದಲ್ಲಿ ಸುಮ್ಮನಾಗಿ ಬಿಡುತ್ತಿದ್ದಳು. ಇನ್ನು ಮೇಲೆ ಅದನ್ನೆಲ್ಲ ಬಿಟ್ಟುಬಿಡಬೇಕೆಂದುಕೊಂಡಳು.

ಅವಳು ಮಲತಾಯಿಯೆ ಆದರೂ, ಎಂದೂ ಕ್ಲಿನಿಕ್‌ಗೆ ಬಂದು ಎಷ್ಟು ಜನ ಪೇಶೆಂಟ್ಸ್ ಇದಾರೆ, ಎಷ್ಟು ಫೀಸು ತಗೋತಾಳೆ ಎಂದು ಪರೀಕ್ಷಿಸಿದವಳಲ್ಲ. ಹೇಗೂ ಸಂಪಾದಿಸಿದ್ದನ್ನೆಲ್ಲಾ ತಂದೆಯ ಕೈಗೆ ಕೊಡುತ್ತಿದ್ದುದರಿಂದ ಅವಳ ಬಗ್ಗೆ ಅಪನಂಬಿಕೆ ಬಂದಿರಲಿಲ್ಲ. ಆದರೆ ಇನ್ನು ಮೇಲೆ ಹೇಗೋ.. ಹೋಗಲಿ ನನಗೇನು? ಬಂದ ದುಡ್ಡನೆಲ್ಲ ಪ್ರತಿಸಲದಂತೆ ಅಪ್ಪನ ಕೈಗೆ ಕೊಟ್ಟರಾಯ್ತು. ರಂಗನಾಥ ನನ್ನನ್ನೇಕೆ ಕೇಳ್ತಾನೆ? ನಾನು ಅವನ ಹೆಂಡತಿಯಾದ ಮೇಲೆ ನನ್ನ ಖರ್ಚು ಅವನದೇ.." ಎಂದು ಯೋಚಿಸುತ್ತಾ ಕುಳಿತವಳ ಮನಸ್ಸು ಕ್ಷುಬ್ಧಗೊಂಡಿತ್ತು.

ಬಂದ ಒಂದಿಬ್ಬರು ಪೇಶೆಂಟ್ಸ್ ಹೋದಮೇಲೆ ಬಂದವನು ರಂಗನಾಥ. ಅವನನ್ನು ನೋಡಿದ ಕೂಡಲೇ ಅವಳಿಗೆ ಹೇಗೆ ಹೇಗೋ ಅಯಿತು. ಒಂದು ಗಳಿಗೆ ಹರ್ಷವಾದರೂ, ಇವನಿಂದಾಗಿ, ನೆನ್ನೆ ರಾತ್ರಿ ಎಷ್ಟು ಹಗರಣ ಎಂಬ ನೆನಪಾದೊಡನೆ ಮುಖದ ರಂಗು ಬದಲಾಯಿಸಿತು.

"ಯಾಕೆ ನಿರ್ಮಲಾ ಹುಶಾರಿಲ್ವಾ? ಒಂದು ತರಹ ಇದೀರಲ್ವಾ?" ಎಂದು ಅವನು ಕೇಳಿದಾಗ ಸುಳ್ಳು ಹೇಳಿದ್ದಳು.

"ನೆನ್ನೆ ಎಲ್ಲಾ ತಿರುಗಾಡಿ ಬಂದದ್ದು, ಯಾಕೋ ಆಯಾಸ, ರಾತ್ರಿ ನಿದ್ದೆ ಬರಲಿಲ್ಲ."

"ಬರೀ ಆಯಾಸಕ್ಕೆ ನಿದ್ದೆ ಬರಲಿಲ್ವೋ ಅಥವಾ...?" ಎಂದು ಅವನು ಕಣ್ಣು

ಮಿಟುಕಿಸಿ ನಗುತ್ತಾ ಕೇಳಿದಾಗ, ಅವಳಿಗೆ ಆ ತಮಾಶೆ ಬೇಡವಾಗಿತ್ತು.

"ಹಾಗೇನಿಲ್ಲಪ್ಪಾ.. "ಎಂದಳು ಮೊಟಕಾಗಿ.

" ಹಾಗಾದ್ರೆ ಏನು? ನಿಮ್ಮ ಪೇರೆಂಟ್ಸ್ ಏನಾದ್ರೂ ಅಂದ್ರಾ?" ಏನು ಹೇಳುವುದು ಎಂದುಕೊಂಡರೂ, ತಾನೇ ಕೇಳಿದಳು.

"ನಿಮ್ಮ ತಾಯೀನ ಕೇಳಿದ್ರಾ? ಏನಂದ್ರೂ?"

"ಅಮ್ಮನ ಒಪ್ಪಿಸ್ತೀನಿ. ಅಂತ ನಾನು ಹೇಳಿರಲಿಲ್ವಾ? ನನ್ನ ಕಡೆಯಿಂದ ಗ್ರೀನ್ ಸಿಗ್ನಲ್.. ತಮ್ಮದು?" ತಮಾಷೆಯಾಗಿ ಮತ್ತೆ ಕೇಳಿದ. ತಿಳಿಸುತ್ತಿರುವಾಗ, ತಾನು ತನ್ನ ಮನೆಯಲ್ಲಿ ನಡೆದ ಹಗರಣ ಹೇಳಿದರೆ, ಚೆನ್ನಲ್ಲವೆಂದುಕೊಂಡು,

"ನಮ್ಮ ಪೇರೆಂಟ್ಸ್‌ದೂ ಅಬ್ಜೆಕ್ಷನ್ ಏನಿಲ್ಲ. ನಮ್ಮ ತಂದೆ ನಿಮ್ಮ ಹತ್ತಿರ ಮಾತಾಡಬೇಕು ಅಂತಂದ್ರು, ಇವತ್ತು ಮನೇಲೇ ಇದಾರೆ.. ಮನೇಗೆ ಬರ್ತೀರೋ, ಕ್ಲಿನಿಕ್‌ಗೇ ಅವರನ್ನು ಬರಹೇಳಲೋ..?"

"ನಿಮ್ಮ ಇಷ್ಟ. ನನಗೆ ಹೇಗಾದ್ರೂ ಸರಿ" ಎಂದ.

ನಿರ್ಮಲ ಕಾಂಪೌಂಡರ್ ಮೂಲಕ ತನ ತಂದೆಗೆ ಹೇಳಿ ಕಳಿಸಿದಳು. "ನಿಮ್ಮ ತಂದೆ ಏನು?" ಸಮಯ ಕಳೆಯಲು ಪ್ರಶ್ನಿಸಿದ.

"ಅವರು ಬಿಸಿನೆಸ್ ಮಾಡ್ತಿದಾರೆ." ಎಂದಳು.

ಎಂತಹ ಬಿಸಿನೆಸ್ ಎಂದು ಇವನು ಕೇಳಲಿಲ್ಲ. ಅವಳು ಹೇಳಲಿಲ್ಲ. ಅಷ್ಟರಲ್ಲಿ ಅವರು ಬಂದರು. ಓರೆಗಣ್ಣಿನಿಂದ ಅವನನ್ನೊಮ್ಮೆ ನೋಡಿದರು.

"ಇವರು ರಂಗನಾಥ್ ಅಂತ. ನೆನ್ನೆ ಹೇಳಿದ್ನಲ್ಲ." ಎಂದಳು ಯಾವ ಭಾವೋದ್ವೇಗವೂ ಇಲ್ಲದೇ.. "ಇವರು ನಮ್ಮ ತಂದೆ ಶಂಕರಯ್ಯ" ಎಂದು ಪರಿಚಯಿಸಿದಳು.

ಶಂಕರಯ್ಯ ಅವನ ಕಡೆ ನೋಡಿದರು. ಅವನು ನಮಸ್ಕಾರವೆಂದ. ಅವರು ಅವನ ಕೈ ಕುಲುಕಿದರು. ಕೂತ್ಕೊಳ್ಳಿ ಎಂದು ಹೇಳಿ ತಾವು ಅಲ್ಲಿದ್ದ ಬೆಂಚಿನ ಮೇಲೆ ಕುಳಿತಾಗ, ಇವನೂ ಕುಳಿತ. ರಂಗನಾಥ ತನ್ನ ವಿಚಾರವನ್ನು ಸಂಕ್ಷಿಪ್ತವಾಗಿ ಹೇಳಿಕೊಂಡ. ನಂತರ, "ನಿರ್ಮಲ ಹೇಳಿರಬಹುದು.. ನಾವಿಬ್ಬರೂ ಮದುವೆ ಯಾಗ ಬೇಕು ಅಂತ ತೀರ್ಮಾನಿಸಿಕೊಂಡಿದೀವಿ" ಎಂದ.

ನಿರ್ಮಲ ಒಳಗಿನ ಕೋಣೇಯಲ್ಲಿದ್ದುದನ್ನು ಗಮನಿಸಿ, ಅವರು,

"ನೀವಾಗಿಯೇ ಮುಂದೆ ಬಂದು ಅವಳನ್ನು ಮದುವೆ ಆಗ್ತಿದೀರಿ, ತುಂಬಾ ಸಂತೋಷ. ಆದರೆ ಮದುವೆ ಅಂತ ಖರ್ಚು ವೆಚ್ಚ ಮಾಡಿ, ವೇಸ್ಟ್ ಮಾಡುವುದು ಸರಿಯಲ್ಲ. ಅಲ್ಲದೇ ಆ ಆಸೆ ಅವಳಿಗಿಲ್ಲ. ಅದರಿಂದ, ರಿಡಿಸ್ಟರ್ಡ್ ಮ್ಯಾರೇಜ್ ಒಳ್ಳೆಯದು ಅಂತ ನನಗನ್ನಿಸುತ್ತೆ.. ಏನಂತೀರಿ,,,? ಅವರು ಇವನ್ನನ್ನೆ ಪ್ರಶ್ನಿಸಿದರು.

ರಂಗನಾಥ ಬೆರಗಾದ. "ಪರವಾಗಿಲ್ವೇ..ಬಿಸಿನೆಸ್‌ನಂತೆ ಮಾತಾಡ್ತಿದಾರಲ್ಲ ಎಂದುಕೊಂಡ. ನನಗೂ ಅದೆಲ್ಲಾ ಇಷ್ಟವಿಲ್ಲ ಬಿಡಿ." ತಾನೂ ಹೇಳಿದ.

"ಒಳ್ಳೆಯದೇ ಬಿಡಿ. ಈ ಕಾಲದಲ್ಲಿ ಸುಮ್ಮನೇ ಎಲ್ಲಾ ದಂಡ. ಹೇಗೂ ಎಲ್ಲರ ಒಪ್ಪಿಗೆ ಇದೆ. ಆದಷ್ಟು ಬೇಗ ಮದುವೆ ಆಗಿ ಬಿಡಿ. ಸಬ್‌ರಿಜಿಸ್ಟ್ರಾರ್ ಆಫೀಸಿನಲ್ಲಿ ನನ್ನ ಪರಿಚಯದವರೊಬ್ಬರಿದ್ದಾರೆ. ಬೇಕಾದ್ರೆ, ನಾಳೆಗೇ ಎಲ್ಲಾ ಅರೇಂಜ್

ಮಾಡಿಬಿಡತೀನಿ."

ಅವರ ಆತುರ ಕಂಡು ಅವನಿಗೆ ನಗು ಬಂತು. ಅನುಮಾನವೂ ಉಂಟಾಯಿತು. ಮಗಳಿಗೆ ಮದುವೆಮಾಡಿ ಕಳಿಸುವ ಆತುರ, ...ಈ ಮುಂಚೆ ಏಕೆ ಬಂದಿರಲಿಲ್ಲವೋ ಎಂದೂ ಸಹ ಅನ್ನಿಸಿತು.

"ಹೌದು. ಎಲ್ಲಾ ಬೇಗ ಆದರೆ ಒಳ್ಳೆಯದೇ" ಎಂದ ಸುಮ್ಮನೇ.

"ಹಾಗಾದ್ರೆ ಶುಕ್ರವಾರಕ್ಕೆ ಎಲ್ಲಾ ಫಿಕ್ಸ್ ಮಾಡಿಸ್ತೀನಿ. ನಿಮಗೇನೂ ತೊಂದ್ರೆ ಇಲ್ಲ ತಾನೇ,...ಇವತ್ತು ಸೋಮವಾರ, ಇನ್ನು ಮೂರು ದಿನ ಬಾಕಿ ಇದೆ." ಎನ್ನುತ್ತಾ ಎದ್ದರು. ಇವನೂ ಎದ್ದು ನಿಂತ.

"ಹಾಗಾದರೆ ನಾನಿನ್ನು ಬರ್ತೀನಿ. ಇವತ್ತೇ ಆಫೀಸಿಗೆ ಹೋಗಿ ವಿಚಾರಿಸ್ತೀನಿ. ನಿರ್ಮಲಂಗೆ ಹೇಳಿಬಿಡಿ ಎನ್ನುತ್ತಾ ಹೊರಟೇ ಹೋದರು. ಆತನ ವರ್ತನೆ ಇವನಿಗೆ ವಿಚಿತ್ರನಾಗಿ ಕಂಡಿತು. ಮಗಳು ನನ್ನನ್ನು ಮದುವೆಯಾಗುತ್ತಿರುವುದು ಇಷ್ಟವಿಲ್ಲವೋ ಅಥವಾ ಬೇಗ ಹೇಗೋ ಎಲ್ಲಾ ಮುಗಿಯಲಿ ಎನ್ನುವ ಉದಾಸೀನವೋ.. ಇವನಿಗೆ ಅರ್ಥವಾಗಲಿಲ್ಲ. ತನ್ನ ಬಗ್ಗೆ ವಿಚಾರಿಸಲಿಲ್ಲವೆನ್ನು ವುದನ್ನೂ ಗಮನಿಸಿ, ಪೆಚ್ಚಾಗಿದ್ದ.

ತಂದೆಯ ಎದುರಿಗೆ ನಿಲ್ಲುವ ಆಸೆ ಇಲ್ಲದ್ದರಿಂದ ನಿರ್ಮಲ ಒಳಗಿದ್ದಳು. ಅವರು ಹೊರಟುಹೋದಮೇಲೆ, ಆಚೆಗೆ ಬಂದಳು. ತನ್ನ ತಂದೆ ಏನಂದರು? ಎಂದು ಅವಳು ಕೇಳಲಿಲ್ಲ. ಇವನೇ ಹೇಳಿದ.

" ಬರುವ ಶುಕ್ರವಾರವೇ ನಮ್ಮ ಮ್ಯಾರೇಜ್ ರಿಜಿಸ್ಟ್ರೇಷನ್ ಆಗಲಿ ಅಂತ ನಿಮ್ಮ ತಂದೆ ಫಿಕ್ಸ್ ಮಾಡಿಸ್ತೀನಿ ಅಂತ ಸಬ್ ರಿಜಿಸ್ಟರ್ ಆಫೀಸ್‌ಗೆ ಅಂತ ಹೋದರು. ಆದಷ್ಟು ಬೇಗ ಆಗ್ತಿರುವುದು ಒಳ್ಳೆಯದೇ ..ನಿಮಗೇನನ್ನಿಸುತ್ತೆ?"

" ರಿಜಿಸ್ಟರ್ಡ್ ಮದುವೆ, ಯಾವಾಗ ಆದರೇನು? ಎಲ್ಲಾ ಒಂದೇ ಅಲ್ಲವೆ? ಯಾರಿಗೂ ಯಾವ ತೊಂದರೆ, ಶ್ರಮ ಇರುವುದಿಲ್ಲ."

"ನಮ್ಮ ತಾಯಿ ಹಳೇ ಕಾಲದವಳು, ದೇವಸ್ಥಾನದಲ್ಲಿ ಮದುವೆ ನೆರವೇರಲಿ ಅಂತ ಆಸೆಪಟ್ಟಳು." ಎಂದು ಹೇಳಬೇಕೆಂದುಕೊಂಡವನು ಅವಳ ಮುಖದಲ್ಲಿನ ನಿರುತ್ಸಾಹವನ್ನು ಕಂಡು ಸುಮ್ಮನಾದ. ಏನೇನೋ ಊಹಿಸಿ ತಲೆ ಕೆಡಿಸಿಕೊಂಡ. ಅಷ್ಟರಲ್ಲಿ ಯಾರೋ ಪೇಶೆಂಟ್ ಬಂದುದರಿಂದ ಅವನು ಎದ್ದು ಅಲ್ಲಿಂದ ಹೊರಟ.

"ಯಾಕೋ ಈಗ ನಿಮ್ಮ ಮೂಡ್ ಚೆನ್ನಾಗಿಲ್ಲ ಅಂತನ್ನಿಸುತ್ತೆ. ಸಾಯಂಕಾಲ ಮತ್ತೆ ಬರ್ತೀನಿ. ಕ್ಲಿನಿಕ್‌ಗೆ ರಜ ಕೊಟ್ಬಿಡಿ" ಎಂದ.

"ನಾನೂ ಅದನ್ನೇ ಯೋಚಿಸ್ತಿದ್ದೆ. ಯಾಕೋ ತಲೆ ನೋವು. ಈಗ ಇವರನ್ನು ಕಳಿಸಿ, ನಾನು ಮನೆಗೆ ಹೋಗಿ, ಪಿಲ್ಸ್ ನುಂಗಿ ಮಲಗ್ತೀನಿ"

"ಹಾಗೇ ಮಾಡಿ.. ಸಾಯಂಕಾಲದ ಹೊತ್ತಿಗೆ ಯೂ ಷುಡ್ ಬೀ ಆಲ್ ರೈಟ್" ಎಂದು ನಗುತ್ತಾ ಹೇಳಿದಾಗ ಅವಳು ಬಲವಂತದ ನಗೆ ನಕ್ಕಳು.

"ಏನಾಗಿದೆ ಇವಳಿಗೆ? ಇದುವರೆಗೂ ಇಲ್ಲದ ಉದಾಸೀನ ಈಗೇಕೆ?" ಎಂದು ಚಿಂತಿಸುತ್ತಾ ಅಲ್ಲಿಂದ ಹೊರಟ. ಅವರ ಮನೆಯಲ್ಲಿ ಏನೇನು ಮಾತುಕತೆ ಗಳು ನಡೆದಿರಬಹುದು ಎನ್ನುವ ಕಲ್ಪನೆ ಸಹ ಅವನಿಗಾಗಲಿಲ್ಲ. ಸೀದಾ ತನ್ನ ಸ್ನೇಹಿತ ಸತ್ಯಮೂರ್ತಿಯ ಮನೆಗೆ ಬಂದ. ಕಾಲೇಜಿಗೆ ಹೊರಟಿದ್ದವನು ತನ್ನ ಸ್ನೇಹಿತನನ್ನು

ಕಂಡು ನಿಂತ.

"ನಿನ್ನನ್ನೇ ನೋಡಲೆಂದು ಬಂದೆ. ಸ್ವಲ್ಪ ಮಾತನಾಡಬೇಕಾಗಿತ್ತು ಎಂದ" ಮನೆಗೆ ಹಾಕಿದ್ದ ಬೀಗವನ್ನು ಅವನು ತೆಗೆದಾಗ, ಅವನು ಆಶ್ಚರ್ಯದಿಂದ ಕೇಳಿದ, "ಎಲ್ಲಯ್ಯಾ ಮನೆಯವರು ಯಾರೂ ಇಲ್ಲವೇ?"

" ಇಲ್ಲಪ್ಪಾ.. ನನ್ನ ಹೆಂಡತಿ ತವರು ಮನೆಗೆ ಹೋಗಿದ್ದಾಳೆ" ಎಂದಷ್ಟೆ ಹೇಳಿದ. ಇಬ್ಬರೂ ಒಳಬಂದು ಕುಳಿತರು. ರಂಗನಾಥ, ಸಂಕ್ಷಿಪ್ತವಾಗಿ ತನ್ನ ಪ್ರೇಮ ಪ್ರಕರಣವನ್ನು ತಿಳಿಸಿದ. "ಈಗ ನಿನ್ನಿಂದ ಸಹಾಯವಾಗಬೇಕಾಗಿದೆ. ಶುಕ್ರವಾರವೇ ಮದುವೆ. ನನಗೆ ಏನೇನೂ ತಿಳೀದು. ಏನೇನು ತರಬೇಕು ಅಂತ ನೀನೇ ಹೇಳ್ಬೇಕು"

"ರಿಜಿಸ್ಟರ್ಡ್ ಮದುವೆ ಅಂತೀಯ, ಏನು ತರುವುದು ಇರುತ್ತೆ? ಹೆಣ್ಣಿನ ಕಡೆಯವರು, ಅವರೇ ಏನೂ ತರದಿದ್ದ ಮೇಲೆ, ನೀನು ಏನೂ ತರದಿದ್ದರೂ ಆಯಿತು. ಆದರೆ, ಮುಖ್ಯವಾಗಿ ಒಂದು ಮಾಂಗಲ್ಯದ ಸರ ಬೇಕಾಗುತ್ತೆ. ನಿನಗೆ ಕೊಡಬೇಕೆನಿಸಿದರೆ, ಒಂದೋ ಎರಡೋ ಸೀರೆಗಳನ್ನು ನಿನ್ನ ಭಾವೀ ಹೆಂಡತಿಗಾಗಿ ತಂದರಾಯ್ತು."

"ನನಗೂ, ಸೀರೆ ತರಬೇಕು ಅಂತ ಅನ್ನಿಸಿತ್ತು. ಎಲ್ಲಾ ಬೇಗ ಬೇಗ ಸೆಟ್ಲ್ ಆಗಿ ಹೋಯ್ತು. ಏನು ಮಾಡಬೇಕೋ ತಿಳಿಯುತ್ತಿಲ್ಲ."

" ಯಾಕೋ ಅನುಮಾನದಿಂದ ಮಾತಾಡ್ತೀಯ? ಹಣ ಬೇಕಾಗಿದ್ದರೆ ನೇರವಾಗಿ ಕೇಳು. ಸಮಯ ಅಂದರೆ ಒಬ್ಬರಿಗೊಬ್ಬರು ಸಹಾಯಮಾಡದಿದ್ದರೆ ಹೇಗೆ?"

"ಸಮಯ ಅಂದರೆ, ಸಹಾಯಕ್ಕೆ ನಿನ್ನ ಹತ್ತಿರವೇ ನಾನು ಓಡಿಬರುವುದು. ನನಗೆ ಇನ್ಯಾರಿದಾರೆ ಹೇಳು....?"

"ಸರಿ. ಸರಿ. ಬೆಪ್ಪು ಮುಖ ಮಾಡಬೇಡ. ಮದುಮಗ ಅಂದ್ರೆ ಹೇಗಿರಬೇಕು ನಗು ನಗುತ್ತಾ... ಅಂದ್ಹಾಗೇ ಮರತೇ ಬಿಟ್ಟಿದ್ದೆ, ಕಂಗ್ರಾಟ್ಸ್ ಕಣಯ್ಯಾ ,,,," ಎನ್ನುತ್ತಾ ಹಾರ್ದಿಕವಾಗಿ ಕೈ ಕುಲುಕಿದ.

ರಂಗನಾಥ ಅಳುವುದೊಂದು ಬಾಕಿ. ಅಷ್ಟು ಭಾವೋದ್ವೇಗಗೊಂಡಿದ್ದ.

"ಅಮ್ಮ ನನ್ನ ಮೇಲಿನ ಪ್ರೀತಿಯಿಂದ ಈ ಮದುವೆಗೆ ಒಪ್ಪಿದಾಳೆ. ಅಂತನ್ನಿಸುತ್ತೆ ಯಾವುದಾದರೂ ದೇವಸ್ಥಾನದಲ್ಲಿ ಮದುವೆ ನಡೆಯಲಿ ಅಂದಳು. ಆದರೆ.. ನಿರ್ಮಲನ ಮನೆಯವರು, ಸಬ್ ರಿಜಿಸ್ಟ್ರಾರರ ಆಫೀಸಿನಲ್ಲಿ ಮಾತನಾಡುವುದಕ್ಕೆ ಹೋಗಿದ್ದಾರೆ."

"ಯಾವುದಾದರೇನಯ್ಯ ಮದುವೆ ಆಗುವುದು ಮುಖ್ಯ. ನಿಮ್ಮ ತಾಯಿಗೇಕೆ ಬೇಜಾರಾಗಬೇಕು? ಅಲ್ಲಿಂದ ಸೀದಾ ಒಂದು ದೇವಸ್ಥಾನಕ್ಕೆ ಹೋಗಿ ದೇವರಿಗೆ ನಮಸ್ಕಾರ ಮಾಡಿ ಬಂದರಾಯ್ತು."

ಈಗ ಎಷ್ಟೋ ಸಮಾಧಾನವಾಯ್ತು ನೋಡು,

"ಈಗ ನನ್ನ ಹತ್ತಿರ ಇರುವುದು ಮೂರು ಸಾವಿರ. ಆ ಮೇಲೆ ಬೇಕಾದರೆ ಮತ್ತೆ ಅಡ್ಜಸ್ಟ್ ಮಾಡ್ತೀನಿ. ನೀನು ಒಂದಿಷ್ಟು ಹೊಸಬಟ್ಟೆ ಹೊಲಿಸಿಕೋ. ನಿಮ್ಮ ತಾಯಿಗೆ ಒಂದು ಒಳ್ಳೆ ಸೀರೆ ತಗೋ... ಮನೋಜನಿಗೆ ಒಳ್ಳೆ ಬಟ್ಟೆ ಕೊಡಿಸು. ಇದೆಲ್ಲಾ ಸಂಪ್ರದಾಯ ಮಾಡಬೇಕಾಗುತ್ತದೆ."

"ಏನು ಸಂಪ್ರದಾಯವೋ, ಏನು ಮಾಡಬೇಕೋ, ಬಿಡಬೇಕೋ ನನಗೆ ತಿಳೀದು.

ನಮಗೆ ಸಲಹೆಕೊಡುವ ಯಾವ ನೆಂಟರಿಷ್ಟರಿಲ್ಲ. ಈಗ ನೀನೇ ಎಲ್ಲಾ. ನೀನು ಹೇಗೆ ಹೇಳಿದರೆ ಹಾಗೆ."

"ಹಾಗಾದ್ರೆ ನಡಿ. ನಾನೂ ಕಾಲೇಜಿಗೆ ರಜ ಹಾಕ್ತೀನಿ. ಈಗಲೇ ಶಾಪಿಂಗ್ ಶುರು ಮಾಡೋಣ." ಎಂದು ಎದ್ದ. ರಂಗನಾಥನೂ ಎದ್ದ.

ಮೊದಲು ಬ್ಯಾಂಕಿಗೆ ಹೋಗಿ, ಅಗತ್ಯವೆನಿಸುವಷ್ಟು ದುಡ್ಡನ್ನೂ ಡ್ರಾ ಮಾಡಿ ಕೊಂಡು, ಅವೆನ್ಯೂ ರೋಡಿಗೆ ಬಂದರು. ಒಂದು ಪ್ರಸಿದ್ಧ ಚಿನ್ನ ಬೆಳ್ಳಿಯ ಅಂಗಡಿ ಯಲ್ಲಿ, ಮಾಂಗಲ್ಯದ ಜೊತೆ, ಸುತ್ತಿಸಿದ್ದ ಕರಿಮಣಿ ಸರವನ್ನು ಕೊಂಡರು. ನಂತರ ಜವುಳಿ ಅಂಗಡಿಗೆ ಹೋಗಿ, ನಿರ್ಮಲೆಗೊಂದು ತನ್ನ ತಾಯಿಗೆ ಒಂದು ರೇಶಿಮೆ ಸೀರೆಯನ್ನು ಖರೀದಿಸಿದ. ನಿರ್ಮಲೆಯ ಮೈ ಬಣ್ಣಕ್ಕೊಪ್ಪುವ ಮೆರೂನ್ ಬಣ್ಣದ ಜರತಾರಿ ಸೀರೆಯನ್ನು ರಂಗನಾಥ ಆಯ್ಕೆ ಮಾಡಿದರೆ, ಹಸಿರು ಬಣ್ಣದ ಕೆಂಪಂಚಿನ ರೇಶಿಮೆ ಸೀರೆಯನ್ನೂ ಸತ್ಯ ಆರಿಸಿದ. ಅಲ್ಲಿಂದ ಮಹಾತ್ಮಗಾಂಧಿ ರಸ್ತೆಗೆ ಬಂದು, ರೆಡಿಮೇಡ್ ಬಟ್ಟೆಯ ಅಂಗಡಿಯಲ್ಲಿ ಎರಡು ಜೊತೆ ಪ್ಯಾಂಟ್, ಷರ್ಟುಗಳನ್ನೂ ಖರೀದಿಸಿದ. ಇನ್ನೊಂದು ಜೊತೆ ಪ್ಯಾಂಟ್ ಷರ್ಟನ್ನು. ಸತ್ಯ ಬೇಡ ಬೇಡ ಎಂದರೂ ಬಲವಂತವಾಗಿ ಕೊಡಿಸಿದ.

"ಸುಮ್ಮನೇ ತಗೋ.. ನೀನು ನನ್ನ ಸೋದರ ಇದ್ದ ಹಾಗೆ ನಿನ್ನ ಬಿಟ್ಟರೆ ಬೇರೆ ಅನ್ಯರು ನನಗಿಲ್ಲಯ್ಯ" ಎಂದ ಮುಗುಳ್ನಗುತ್ತಾ.

"ತಮಾಷೆ ಮಾಡಬೇಡ.... ಅಂಥಾದ್ದೇನೂ ಮಾಡಿಲ್ಲ ನಾನು. ಮೊದಲೇ ಖರ್ಚು ಬೇಕಾದಷ್ಟಿದೆ"

"ಇರಲಿ ಬಿಡಯ್ಯ. ನಿನ್ನದೇ ದುಡ್ಡು ನಾನು ಕೊಡಿಸಿದ್ದೀನಿ ಅಷ್ಟೇ.." ಎನ್ನುತ್ತಾ ಸ್ನೇಹಿತನ ಭುಜದ ಮೇಲೆ ಕೈ ಇಟ್ಟಾಗ ಅವನು ಮೂಕನಾದ.

ಇಬ್ಬರೂ ಅಲ್ಲಿಂದ ಸೀದಾ ರಂಗನಾಥನ ಮನೆಗೆ ಬಂದರು. ತಾಯಿಯ ಕೈಗೆ ಸೀರೆ, ಒಡವೆಗಳನ್ನಿತ್ತು ಹೇಳಿದ, "ನೋಡಮ್ಮಾ ಎಲ್ಲಾ ಚೆನ್ನಾಗಿದೆಯಾ ಅಂತ."

"ದುಡ್ಡುಕೊಟ್ಟರೆ ಎಲ್ಲಾ ಚೆನ್ನಾಗಿರುತ್ತೆ" ಎನ್ನುತ್ತಾ ಕಾವೇರಮ್ಮ ಒಂದೊಂದಾಗಿ ಎಲ್ಲಾ ತೆಗೆದು ನೋಡಿದಳು. ಇದು ನಿನಗೆ ಎಂದು ತಾಯಿಗಾಗಿ ತಂದಿದ್ದ ಸೀರೆಯನ್ನು ತೋರಿಸಿದಾಗ,

"ನನಗ್ಯಾಕಪ್ಪಾ, ಈಗ ಸುಮ್ಮನೇ...?" ಎಂದಳು ಉದಾಸೀನವಾಗಿ.

ಸತ್ಯ ಹೇಳಿದ್ದ, "ಇರಲಿ ಬಿಡಿ ಅಮ್ಮಾ.. ಈಗಲ್ಲದೆಯೆ ಇನ್ಯಾವಾಗ ತರ್ತಾನೆ. ನೋಡಿ ನನಗೂ ಒಂದುಸೆಟ್ ಬಟ್ಟೆ ಕೊಡಿಸಿದ್ದಾನೆ." ತನ್ನ ಬಟ್ಟೆಗಳನ್ನು ತೋರಿಸಿದ.

"ಸಂತೋಷ ಕಣಪ್ಪಾ,,,, ನೀವೆಲ್ಲಾ ಚಿಕ್ಕೋರು. ಹೊಸ ಬಟ್ಟೆ ನಿಮ್ಮಗಳಿಗೆ. ನಮ್ಮಂಥೋರಿಗೆ ಎಂತಾದಾದ್ರೂ ನಡೆಯುತ್ತೆ.?"

"ಹಾಗಂದ್ರೆ ಹೇಗೆ? ಆಗ್ತಿರೋದು ನಿಮ್ಮ ಮಗನ ಮದುವೆ. ಅವನು ನಿಮಗೆ ಉಡುಗೊರೆ ಕೊಡ್ತೀದಾನೆ. ಸಂತೋಷವಾಗಿ ಉಟ್ಕೊಳ್ಳಿ."

"ಅಯ್ತಪ್ಪಾ. ಹಾಗೇ ಆಗಲಿ. ನಿನಗೆ ನಮ್ಮ ಮನೆ ಸ್ಥಿತಿ ಗೊತ್ತೇ ಇದೆ. ಅವ್ನು ಎಲ್ಲಾ ಹೇಳಿರಬೇಕು. ಮದುವೆ ಅಂತ ಸಡಗರಪಡುಕ್ಕೆ ಯಾರಿದ್ದಾರೆ? ನೀನೇ ಹೇಳು."

"ನಾನಿದೀನಿ, ನೀವಿದೀರಿ., ನಮ್ಮ ಸ್ನೇಹಿತರು ಒಂದಿಷ್ಟು ಜನ ಬರ್ತಾರೆ. ನಿಮಗೇಕೆ

ಕೊರತೆ?

"ನಿನ್ನ ಹೆಂಡತಿ ಮಗುವನ್ನು ಕರಕೊಂಡು ಬಾಪ್ಪಾ..ಖಂಡಿತಾ"

"ಅವಳು ಊರಿನಲ್ಲಿಲ್ಲ ಅಮ್ಮ.. ತವರಿಗೆ ಹೋಗಿದಾಳೆ. ಎರಡನೆಯ ಬಾಣಂತನಕ್ಕೆ" ಹೇಳುತ್ತಾ ಸ್ನೇಹಿತನ ಮುಖ ನೋಡಿದ.

ರಂಗನಾಥ ಕಣ್ಣರಳಿಸಿ ನಕ್ಕ.

"ಓ..ಹಾಗಾ..? ತಡೀ ಊಟಕ್ಕೆ ಬಡಿಸ್ತೀನಿ. ಮೂರು ಗಂಟೆ ಆಗಿ ಹೋಗಿದೆ ಆಗಲೇ.." ಅನ್ನುತ್ತಾ ಸೀರೆ ಒಡವೆಗಳನ್ನು ಅತ್ತ ತೆಗೆದಿಟ್ಟು ಅಡಿಗೆ ಮನೆಯ ಕಡೆ ನಡೆದಳು.

ಸ್ನೇಹಿತರಿಬ್ಬರೂ, ಒಟ್ಟಿಗೇ ಕೂತು ಊಟ ಮಾಡಿದರು. ಮತ್ತೆ ಕೂತು ಸ್ವಲ್ಪ ಹೊತ್ತು ಮಾತನಾಡಿದರು. ಐದು ಗಂಟೆಯ ಹೊತ್ತಿಗೆ ಕಾವೇರಮ್ಮ ಬೆರೆಸಿಕೊಟ್ಟ ಬಿಸಿ ಕಾಫಿಯನ್ನು ಕುಡಿದರು. ಸತ್ಯ ಮನೆಗೆ ಹೊರಡ್ತೀನಿ ಅಂತ ಅಂದಾಗ ರಂಗನಾಥ ನುಡಿದಿದ್ದ.

"ಈಗ ನಾನು ಕ್ಲಿನಿಕ್ ಕಡೆ ಹೋಗ್ತಿದೀನಿ. ನೀನೂ ಬಾ.. ನಿರ್ಮಲೆಯ ಪರಿಚಯ ಮಾಡಿಸಿ ಕೊಡ್ತಿನಿ."

ನಿರ್ಮಲೆಯನ್ನು ನೋಡುವ ಕುತೂಹಲವಿದ್ದುದರಿಂದ ಸತ್ಯ ಒಪ್ಪಿ ಹೊರಟ. ನೆನಪಿಸಿಕೊಂಡವನಂತೆ, "ಒಂದು ಕೆಲಸ ಮಾಡು, ಈ ಸೀರೆ, ಈ ಮಾಂಗಲ್ಯದ ಸರವನ್ನು ಅವರಿಗೆ ಈಗಲೇ ಕೊಟ್ಟುಬಿಡು. ರಿಜಿಸ್ಟ್ರಾರರ ಆಫೀಸಿಗೆ ಬರುವಾಗ ಮಾಂಗಲ್ಯದಸರವನ್ನು ಹಾಕಿಕೊಂಡು ಬರಲಿ. ಅಲ್ಲಿಂದ ಸೀದಾ ಮನೆಗೆ ಬಂದರಾಯ್ತು."

"ಅದೂ ಸರಿ" ಎನ್ನುತ್ತಾ, ರಂಗನಾಥ ಸೀರೆ, ಸರವನ್ನು ಎತ್ತಿಟ್ಟುಕೊಂಡ. ತಾಯಿಗೆ ಆ ಮೇಲೆ ತಿಳಿಸದರಾಯ್ತು ಎಂದು ಕೊಂಡ.

"ಅಮ್ಮ ಇವನನ್ನು ಮನೆಗೆ ಬಿಟ್ಟು ಬರ್ತೀನಿ." ಎಂದು ಹೇಳಿದಾಗ "ಬರ್ತೀವಮ್ಮ" ಎಂದು ಸತ್ಯ ಕೈ ಮುಗಿದ. "ಒಳ್ಳೇದು" ಎಂದು ಹೇಳಿ ಕಾವೇರಮ್ಮ ಅವರಿಬ್ಬರನ್ನು ಬೀಳ್ಕೊಟ್ಟಳು. ಇಬ್ಬರೂ ಸ್ಕೂಟರನ್ನು ಏರಿದಾಗ ಆಕೆಯ ಮನ ಏನೇನ್ನೋ ಯೋಚಿಸುತ್ತಿತ್ತು.

ಕ್ಲಿನಿಕ್‌ಗೆ ಹೋಗುವುದೋ, ಮನೆಗೆ ಹೋಗುವುದೋ ಅಂತ ಯೋಚಿಸು ತ್ತಿದ್ದಾಗ ಕಾಂಪೌಂಡರ್ ಬಂದು ಕರೆದಳು. ನಿರ್ಮಲ ಅವರು ಬಂದಿದ್ದನ್ನು ಕಂಡು ಹೇಳಿ ಕಳಿಸಿದ್ದಳು.

"ಡಾಕ್ಟ್ರು ಇಲ್ಲೇ ಇದ್ದಾರೆ. ಬನ್ನಿ ಕರೀತಿದಾರೆ"

"ಸಲೀಸಾಯಿತು." ಎಂದುಕೊಂಡು ಕಾಂಪೌಂಡರ್ ಹಿಂದೆ ನಡೆದರು. "ಹಲೋ" ಎಂದು ನಿರ್ಮಲಳ ಕಡೆ ತಿರುಗಿ ಮುಗುಳ್ನಕ್ಕು ಸ್ನೇಹಿತನನ್ನು ಅವಳಿಗೆ ಪರಿಚಯಿಸಿದ, "ಇವನು ಸತ್ಯಮೂರ್ತಿ ಅಂತ, ನನಗೆ ಗಾಡ್, ಗೈಡ್, ಗಾರ್ಡಿಯನ್ ಎಲ್ಲಾ." ಎಂದ ಜೋರಾಗಿ ನಗುತ್ತಾ. ಸತ್ಯಮೂರ್ತಿ ನಮಸ್ಕಾರ ಎಂದ ಕೈಮುಗಿದ. ನಿರ್ಮಲ ಹೆಚ್ಚಿನ ಆಸಕ್ತಿ ತೋರದೇ ನಮಸ್ಕಾರ ಎಂದಳು.

"ಇವರು, ನಿರ್ಮಲಾ,.. ಡಾಕ್ಟ್ರು. ನನ್ನ ವುಡ್ ಬೀ.." ಎಂದು ಹೇಳಿದ. ಸತ್ಯ

ಆಸಕ್ತಿಯಿಂದ ಅವಳನ್ನೇ ನೋಡಿದ. ಇಂತಹ ಚೆಲುವೆ, ಡಾಕ್ಟರು, ಏನು ಆಕರ್ಷಣೆ ಕಂಡಳು ಇವನಲ್ಲಿ. ಬರೀ ಇವನ ರೂಪಕ್ಕೆ ಮರುಳು ಹೋಗಿರಬೇಕು. ಅವಳಿಗೇ ಬೇಕಾದಷ್ಟು ಸಂಪಾದನೆ ಇದೆ. ಹಣದ ಕೊರತೆ ಏನಿರುತ್ತೆ. ಆದರೆ ಇಷ್ಟು ವಯಸ್ಸಾದರೂ ಮದುವೆ ಏಕೆ ಆಗಿರಲಿಲ್ಲ. ಇವನ ಪರ್ಸನಾಲಿಟಿಗೆ ಅವಳು ಕುಳ್ಳು ಅಂತನ್ನಿಸುತ್ತೆ. ಆದರೆ ರೂಪದಲ್ಲಿ ಇವನಿಗೆ ತಕ್ಕವಳಾಗಿದ್ದಾಳೆ." ಎಂದು ತನ್ನಲ್ಲೇ ತರ್ಕಿಸುತ್ತಿದ್ದ.

ರಂಗನಾಥ ತನ ಕೈಲಿದ್ದ ಕವರನ್ನೂ ಅವಳ ಕೈಗಿತ್ತ.

"ಇದು ಸೀರೆ, ಇದು ಕರಿಮಣಿಸರ, ಶುಕ್ರವಾರ ಇದನ್ನೇ ಉಟ್ಟು ತೊಟ್ಟು ಬನ್ನಿ. ಕರಿಮಣಿ ಸರವನ್ನು ಹಾಕಿಕೊಂಡು ಬರುವಂತೆ ಅಮ್ಮ ಹೇಳಿದಾಳೆ" ಎಂದು ಇನ್ನೂ ಒಂದುಮಾತು ಸೇರಿಸಿದ. ಸತ್ಯ ಬೆರಗಾಗಿದ್ದ.

"ಆಗ್ಲಿ" ಎಂದಳು ಮುಖದಲ್ಲಿ ಹರ್ಷವನ್ನು ತೋರಿಸದೇ, ಆಸಕ್ತಿಯಿಂದ ವಸ್ತುಗಳನ್ನು ನೋಡದೇ, ಉದಾಸೀನವಾಗಿರುವುದನ್ನು ಕಂಡು ರಂಗನಾಥ ಪೆಚ್ಚಾದ. ಅಹಂಕಾರ ಜಾಸ್ತಿ ಎಂದುಕೊಂಡ ಸತ್ಯ, ತನ್ನಲ್ಲೇ ಚಿಂತಿಸುತ್ತಿದ್ದ, ಇವರಿಬ್ಬರಿಗೆ ಹೇಗೆ ಸ್ನೇಹ ಬೇಳೆಯಿತು, ಅಂತ.,

ಅವಳು ಕುತ್ಕೊಳ್ಳಿ ಎಂದೇನೂ ಹೇಳಲಿಲ್ಲ. ಇಬ್ಬರೂ ಬರ್ತಿನಿ ಎಂದು ಹೇಳಿ ಹೊರಟಾಗ, ರಂಗನಾಥನಿಗೆ ಮುಜುಗರವೆನಿಸಿತು. ಫ್ರೆಂಡ್ಲೀ ನೇಚರ್ ಅಲ್ಲ ಎಂದುಕೊಂಡ ಸತ್ಯ.

ನಿರ್ಮಲೆಗೆ ಇದ್ದಕ್ಕಿದ್ದಂತೆ ಚಿಂತೆ ಜಾಸ್ತಿಯಾಗಿತ್ತು. ಮದುವೆ ಬಗ್ಗೆ ಚಿಂತಿಸಲೇ ಬಾರದಾಗಿತ್ತೆನಿಸಿತು. ಆದರೆ ಮನೆಯಲ್ಲಿ ಅಷ್ಟು ರಾದ್ಧಾಂತ ನಡೆದ ಮೇಲೆ ಇನ್ನು ಆ ಮನೆಯಲ್ಲಿ ಇರುವುದೂ ಅಸಾಧ್ಯ ಎನಿಸಿತು. ಒಂದು ತರಹದ ತೊಳಲಾಟದಿಂದ ಒದ್ದಾಡಿದಳು. ರಂಗನಾಥ ಒಬ್ಬನೇ ಬಂದಿದ್ದರೆ. ಅವನ ಜೊತೆ ಎಲ್ಲಾದ್ರೂ ತಿರುಗಾಡಿ ಬಂದಿದ್ರೆ ಮನಸ್ಸು ಫ್ರೆಷ್ ಆಗ್ತಿತ್ತೇನೋ ಎನ್ನಿಸಿತ್ತು.

ಎರಡು ದಿನಗಳೂ ಕಳೆದವು. ರಂಗನಾಥ ಆತಂಕಗೊಂಡು ಕ್ಲಿನಿಕ್‌ಗೆ ಬಂದ. ಅವಳು ಪರೀಕ್ಷಿಸುತ್ತಿದ್ದ ಪೇಶೆಂಟ್‌ನನ್ನೂ ಕಳಿಸುವವರೆಗೂ ಕಾದಿದ್ದು.

"ನಿಮ್ಮ ತಂದೆ ಏನು ಹೇಳಿದ್ರೂ? ನಾಳೆಗೆ ರಿಜಿಸ್ಟ್ರಾರ್ ಆಫೀಸ್ನಲ್ಲಿ ಡೇಟ್ ಫಿಕ್ಸ್ ಮಾಡಿಸ್ತೀನಿ ಅಂತ ಅಂದಿದ್ರು, ಆಯ್ತು?"

"ಏನೋ ನಂಗೆ ಗೊತ್ತಿಲ್ಲ, ಈಗ ನಮ್ಮ ತಂದೆ ಮನೇಲಿಲ್ಲ. ಮಧ್ಯಾಹ್ನ ಎರಡು ಗಂಟೆಗೆ ಬರಬಹುದು. ಫೋನ್‌ಮಾಡಿ ತಿಳಿದುಕೊಳ್ಳಿ.."ಎನ್ನುತ್ತಾ ಫೋನ್ ನಂಬರನ್ನು ಗುರುತುಹಾಕಿಕೊಟ್ಟಳು. ರಂಗನಾಥನಿಗೆ ಉತ್ಸಾಹ ಇಳಿದುಹೋಯಿತು.

"ಏನು ನಿರ್ಮಲಾ ಹೀಗೆ ಹೇಳ್ತೀರಿ? ನಿಮ್ಮ ಮದುವೆ ವಿಚಾರ, ನಿಮಗೆ ಆಸಕ್ತಿ ಇಲ್ಲವಾ? ಯಾಕೆ ಉದಾಸೀನವಾಗಿದೀರಲ್ಲ ಹೀಗೇ...?"

"ಏನಿಲ್ಲ ನನ್ನ ಮೂಡ್ ಕೆಟ್ಟುಹೋಗಿದೆ. ಎರಡು ದಿನದಿಂದ ನಮ್ಮ ತಂದೆ ಊರಿನಲ್ಲಿರಲಿಲ್ಲ. ಇವತ್ತು ಆಫೀಸಿಗೆ ಹೋಗಿದಾರೆ."

"ಓ..." ಎಂದ ನಂಬಿದವನಂತೆ, "ಇವತ್ತು ಕಾಲೇಜಿಗೆ ರಜ ಹಾಕಿದೀನಿ. ಹೊರಗೆಲ್ಲಾದರೂ ಹೋಗಿ ಬರೋಣ ಬರ್ತಿರಾ?" ಕೇಳಿದ.

"ಸಾರಿ. ಇವತ್ತಾಗುಲ್ಲ. ನಾಳೆಯಿಂದ ಒಂದಿಷ್ಟು ದಿನ ಕ್ಲಿನಿಕ್‌ಗೆ ರಜ ಕೊಡ್ತಿದೀನಿ. ಇವತ್ತು ಪೇಶೆಂಟ್‌ಗಳನ್ನು ಅಟೆಂಡ್ ಮಾಡದಿದ್ದರೆ, ಚೆನ್ನಾಗಿರುಲ್ಲ."

ನನಗಿಂತ ಕ್ಲಿನಿಕ್ ಹೆಚ್ಚಾ? ಎಂದು ಕೇಳಬೇಕೆನಿಸಿತ್ತು. ಆದರೂ, ಓ.ಕೇ. ಹಾಗಾದ್ರೆ ಎರಡು ಗಂಟೆಯ ಹೊತ್ತಿಗೆ ಫೋನು ಮಾಡ್ತೀವಿ ಎನ್ನುತ್ತಾ ಎದ್ದ. ಮದುವೆ ಜವಾಬ್ದಾರಿ ತನಗೆ ಮಾತ್ರಾನಾ? ಅಂತೆನಿಸಿತ್ತು. ಸೀದಾ ಸತ್ಯನನ್ನು ನೋಡಲೆಂದು ಅವನ ಕಾಲೇಜಿಗೆ ಬಂದ. ಅವನಿಗೆ ತಾನು ಬಂದುದರ ಕಾರಣ ತಿಳಿಸಿದ. ಸತ್ಯ ಗಾಭರಿಯಿಂದ ಬಂದ. ಅವನಿಗೆ ತಾನು ಬಂದುದರ ಕಾರಣ ತಿಳಿಸಿದ. ಸತ್ಯ ನುಡಿದ.

"ರಿಜಿಸ್ಟ್ರಾರ ಆಫೀಸು ಇರುವುದೇ ಗವರ್ನಮೆಂಟ್ ಕಾಲೇಜಿನ ಹತ್ತಿರ ಬಾ. ನಾವಿಬ್ಬರೂ ಅಲ್ಲಿಗೆ ಹೋಗಿ ವಿಚಾರಿಸೋಣ. ಹೆಸರನ್ನು ರಿಜಿಸ್ಟರ್ ಮಾಡಿಸಿದರೋ ಇಲ್ಲವೋ ತಿಳಿಯುತ್ತೆ. ಎಷ್ಟು ಹೊತ್ತಿಗೆ ಏನು ಅಂತ ಸಹ ಗೊತ್ತಾಗುತ್ತೆ, ತಡಿ ಕ್ಲಾಸಿನಲ್ಲಿ ಹೇಳಿ ಬಂದ್ಬಿಡ್ತೀನಿ." ಎಂದ

ಇಬ್ಬರೂ ರಿಜಿಸ್ಟ್ರಾರ್ ಆಫೀಸಿಗೆ ಬಂದು ವಿಚಾರಿಸಿದಾಗ ಅಲ್ಲಿದ್ದ ಕ್ಲರ್ಕ್ ನೋಟಿಸ್ನಲ್ಲಿ ಬರೆದಿದ್ದ ಹೆಸರಿನ ಲಿಸ್ಟನ್ನು ತೋರಿಸಿದ., ಅದರಲ್ಲಿ ಇವರಿಬ್ಬರ ಹೆಸರೂ ಇದ್ದುದನ್ನು ಕಂಡು ಅಬ್ಬಾ ಎಂದು ನೆಮ್ಮದಿಯ ಉಸಿರುಗರೆದ. ಟೈಂ ಹನ್ನೆರಡು ಗಂಟೆಗೆ ಎಂದು ಸೂಚಿಸಿತ್ತು ಓ.. ಪರವಾಗಿಲ್ಲ ಎಲ್ಲಾ ಸರಿಯಾಗಿ ಮಾಡಿದಾರೆ. ಎಂದ ಸ್ನೇಹಿತನೊಂದಿಗೆ.

"ಇನ್ನೇನಾಗ್ಬೇಕು? ಲಕ್ಕೀ ಕಣಯ್ಯಾ ನೀನು. ವಯಸ್ಸಾದ ಮೇಲೆ ತಡವಾಗಿ ಮದುವೆಯಾದ್ರೆ ಏನೇನು ಲಾಭ ಅಂತ ನನಗೀಗ ಅರ್ಥವಾಗ್ತಿದೆ. ಲವ್ಲೀ ವೈಫ್.... ಅದೂ ಡಾಕ್ಟರ್. ನನಗೆ ಅಸೂಯೆಯಾಗ್ತಿದೆ."

"ಹ್ಹ.. ಹ್ಹ... ಹ್ಹಾ......" ಎಂದು ನಕ್ಕ ರಂಗನಾಥ ಸ್ನೇಹಿತನ ಮಾತಿಗೆ.

"ಹಾಗಾದ್ರೆ ಅವರಿಗೆ ಎರಡುಗಂಟೆಗೆ ಫೋನು ಮಡಲೋ ಬೇಡವೋ ಆಮೇಲೆ..ದೇವಸ್ತಾನಕ್ಕೆ ಯಾವಾಗ ಹೋಗೋಣ?"

"ಇವತ್ತೇ ದೇವಸ್ತಾನಕ್ಕೆ ಹೋಗಿ, ನಾಳೆಗೆ ಅಭಿಷೇಕಕ್ಕೆ ಕೊಟ್ಟುಬಿಡೋಣ. ನಾಳೆ ಹತ್ತೂವರೆಗಂಟೆ ಹೊತ್ತಿಗೆ ದೇವಸ್ಥಾನದಲ್ಲಿರೋಣ. ಆ ಮೇಲೆ ಅಲ್ಲಿಂದ ಇಲ್ಲಿಗೆ ಬಂದರಾಯ್ತು."

''ಹಾಗಾದ್ರೆ ಅದನ್ನೆಲ್ಲ ನಿರ್ಮಲಂಗೆ ತಿಳಿಸಬೇಕಲ್ಲ."

"ತಿಳಿಸಿದರೆ ಆಯ್ತು. ಇವತ್ತು ಇನ್ನೊಂದು ವಿಸಿಟ್ ಕೊಟ್ಟುಬಿಡು ಕ್ಲಿನಿಕ್‌ಗೆ. ನಾಳೆಯಿಂದ ಆ ಕೆಲಸ ಇಲ್ಲವಲ್ಲ.?" ಮತ್ತೊಮ್ಮೆ ಜೋರಾಗಿ ನಕ್ಕ.

"ಹಾಗಾದ್ರೆ ಸಾಯಂಕಾಲ ನಮ್ಮ ಮನೆಗೆ ಬಂದು ಬಿಡು. ಇಬ್ಬರೂ ದೇವಸ್ಥಾನಕ್ಕೆ ಹೋಗಿ, ಹಾಗೇ ಕ್ಲಿನಿಕ್‌ಗೆ ಹೋಗಿ ಬರೋಣ"

"ಈಗ ನೀನು ಎಲ್ಲಿಗೆ ಹೋಗ್ತೀದೀಯ? ನನ್ನ ಜತೆ ನಮ್ಮ ಮನೆಗೆ ಬಾ. ಒಟ್ಟಿಗೇ ಊಟ ಮಾಡಿದ್ರಾಯ್ತು. ಅಮ್ಮಂಗೂ ಸಂತೋಷವಾಗುತ್ತೆ. ಹಾಗೇ ಅಮ್ಮನ ಹತ್ತಿರ ನೀನೇ ಎಲ್ಲಾ ಹೇಳಿದ್ರೆ ನಾನು ಹ್ಯಾಪಿ.

"ರೈಟ್ ನಡೀ.." ಎಂದ ಇಬ್ಬರೂ ಮನೆಗೆ ಬಂದರು.

"ಅಮ್ಮಾ ನಿಮ್ಮ ಕೈನ ಅಡಿಗೆಗೆ ತುಂಬಾ ರುಚಿ ಅಂತ ದಿನಾ ಬರ್ತಿದೀನಿ ನೋಡಿ"

ಎಂದ ನಗೆಯಾಡುತ್ತಾ.

"ಅಯ್ಯೋ ಅದರಲ್ಲೇನು ದಿನಾ ಬಾಪ್ಪಾ. ನಿನ್ನ ಹೆಂಡತಿ ಬಾಣಂತನ ಮುಗಿಸಿ ಕೊಂಡು ವಾಪಾಸ್ಸು ಬರುವವರೆಗೂ ಬಾ. ನನಗೆ ನೀನೊಬ್ಬ ಹೆಚ್ಚಲ್ಲ. ಆದರೆ ಅಡಿಗೆ ರುಚೀನ ನೀನೇ ಹೊಗಳಬೇಕು" ಎಂದಳು.

ಸಾಯಂಕಾಲದವರಿಗೂ ಅದೂ ಇದು ಮಾತಾನಾಡುತ್ತಾ ಕುಳುತಿದ್ದರು. ಮನೋಜನನ್ನು ರೆಡಿ ಮಾಡಿಕೊಂಡು ಸ್ನೇಹಿತನ ಜೊತೆ ಹೊರಟ. ಕ್ಲಿನಿಕ್ ತನಕ ನಡದೇ ಬಂದರು.

"ನೀನು ಹೋಗಿ ಹೇಳಿ ಬಾ.. ನಾನು ಮನೋಜ ಇಲ್ಲೇ ಇರ್ತೀವಿ"ಸತ್ಯ ಹೇಳಿದ.

ಯಾಕಯ್ಯಾ.. ಸರಿ ಹಾಗಾದ್ರೆ ಬೇಗ ಬಂದುಬಿಡ್ತಿವಿ. ಎಂದ ತಾನು ಬಂದಿರುವ ವಿಚಾರವನ್ನು ಕಾಂಪೌಂಡರ್ ಮುಖಾಂತರ ಹೇಳಿ ಕಳಿಸಿದ. ಆವರು ಕರೀತೀದಾರೆ ಬನ್ನಿ ಎಂದು ಕಾಂಪೌಂಡರ್ ಹೇಳಿದ ನಂತರ ಒಳಗೆ ಹೋದ.

"ನಾಳೆ ದಿನ ಹತ್ತು ಗಂಟೆಯ ಹೊತ್ತಿಗೆ ಟ್ಯಾಕ್ಸಿ ಕಳಿಸ್ತೀವಿ. ನೀವೂ ನಿಮ್ಮ ಪೇರೆಂಟ್ಸ್ ಬಂದು ಬಿಡಿ. ಮೊದಲು ಗಣೇಶನ ದೇವಸ್ತಾನದಲ್ಲಿ ಪೂಜೆ ಮಾಡಿಸಬೇಕು ಅಂತ ಅಮ್ಮ ಹೇಳಿದಳು. ಅದೇ ನನ್ನ ಆಸೆ. ಆಮೇಲೆ ಅಲ್ಲಿಂದ ರಿಜಿಸ್ಟರ್ ಆಫೀಸಿಗೆ ಹೋಗೋಣ. ಅಲ್ಲಿ ಹನ್ನೆರಡು ಗಂಟೆಗೆ ಟೈಂ ಫಿಕ್ಸ್ ಮಾಡಿದಾರೆ. ಇದಿಷ್ಟನ್ನು ಹೇಳಿ ಹೋಗೋಣ ಅಂತ ಬಂದೆ. ನಾಳೆ ಮತ್ತೆ ಭೇಟಿ ಯಾಗೋಣ. ಗುಡ್‌ನೈಟ್" ಎಂದ.

ಆತುರಾತುರವಾಗಿ ಅವನು ಅದಷ್ಟನ್ನು ಹೇಳಿದ್ದನ್ನು ಕೇಳಿ, ನಕ್ಕು, "ಓ..ಕೆ.. ಗುಟ್‌ನೈಟ್" ಎಂದಳು, ಅವನನ್ನೆ ದಿಟ್ಟಿಸುತ್ತಾ.

" ನನ್ನ ಸ್ನೇಹಿತ ಕಾಯ್ತಿದ್ದಾನೆ. ನಾನೀಗ ಬರ್‍ತೀನಿ." ಎಂದು ಹೊರಟು ಹೋದಾಗ ತನ್ನಲ್ಲೇ ನಕ್ಕಳು. ಒಂಥರಾ ನರ್ವಸ್ ಆಗಿದಾನೆ ಎನಿಸಿತು.

ದಿನಕ್ಕಿಂತ ಮುಂಚಿತವಾಗಿ ಮನೆಗೆ ಬಂದಳು. ಈ ಮನೆಯಲ್ಲಿ ಇದೇ ಕಡೆ ರಾತ್ರಿ ಅಂತನಿಸಿದಾಗ, ದುಃಖವೂ ಆಗಲಿಲ್ಲ, ಸಂತೋಷವೂ ಆಗಲಿಲ್ಲ. ತನ್ನ ಸೀರೆ ಬಟ್ಟೆಗಳನ್ನು ಪ್ಯಾಕ್ ಮಾಡಿದಳು. ತನಗೆ ಬೇಕಾದ ಪುಸ್ತಕಗಳನ್ನು ತೆಗೆದಿಟ್ಟುಕೊಂಡಳು. ಅವಳ ಬಳಿ ಹೆಚ್ಚಿಗೆ ಒಡವೆಗಳಿರಲಿಲ್ಲ. ನಾನೂ ಈ ಮನೆಯ ಮಗಳು. ಇದುವರೆಗೂ ನನ್ನದೆನಿಸಿದ ವಸ್ತುಗಳೆಲ್ಲ ನನ್ನ ಬಳಿಯೇ ಇರಲಿ. ಯಾವುದನ್ನೂ ಬಿಟ್ಟು ಹೊಗುವುದಿಲ್ಲ ಎಂದು ಬೇಕಾದುದನ್ನು  ತೆಗೆದಿಟ್ಟುಕೊಂಡಳು.

ಊಟ ಮುಗಿಸಿ, ಮಲಗುವ ಸಮಯದಲ್ಲಿ, ತಂದೆಯ ರೂಮಿಗೇ ಹೊಗಿ, ತನ್ನಲ್ಲಿದ್ದ ಹಣವನ್ನೆಲ್ಲ ಕೈಗಿತ್ತಳು. "ನನ್ನ ಆಕೌಂಟ್ ಯಾವುದೇ ಬ್ಯಾಂಕಿನಲಿಲ್ಲ. ದಿನ ದಿನದ ಹಣವನ್ನು ತಂದು ನಿಮ್ಮ ಕೈಗೇ ಕೊಡ್ತಿದ್ದೆ. ಇನ್ನು ಮುಂದೆಯೂ ಹಾಗೇ ನಡೆಯುತ್ತೆ. ನನ್ನನು ಓದಿಸಿ, ಬರೆಸಿ ಒಂದು ನೆಲೆಗೆ ತಂದಿರುವುದಕ್ಕೆ. ಇದಕ್ಕಿಂತ ಹೆಚ್ಚಿನ ಉಪಕಾರ ನಾನೇನೂ ಮಾಡಲಾರೆ. ನನ್ನನ್ನು ಗಂಡು ಮಗನಂತೆ ಸಾಕಿ ಬೆಳೆಸಿದಿರಿ. ಅದೇ ಕರ್ತವ್ಯವನ್ನು ನಾನು ನಿಭಾಯಿಸ್ತೀನಿ. ಈ ರಾತ್ರಿ ಈ ಮನೆಯಲ್ಲಿ ಕಡೆಯ ರಾತ್ರಿ. ನಾಳೆ ಬೆಳಿಗ್ಗೆ ಹತ್ತು ಗಂಟೆಯ ಹೊತ್ತಿಗೆ ಟ್ಯಾಕ್ಸಿ ಕಳಿಸ್ತಾರೆ. ನಾನು ಹೊರಡ್ತಿದೀನಿ. ನಿಮಗ್ಯಾರಿಗಾದರೂ ನನ್ನ ಜೊತೆ ಬರುವ ಇಷ್ಟವಿದ್ದರೆ ಬರಬಹುದು." ಈ ಮಾತು ತಾಯಿಯನ್ನು ಕುರಿತು ಹೇಳಿದ್ದೆಂದು ಸುಲಭವಾಗಿ ಗುರುತಿಸಬಹುದಾಗಿತ್ತು.

"ಅಂತೂ ನಿನ್ನದೇ ಹಠ, ಬೆಳೆಸಿ ಸಾಕುವವರೆಗೆ ನಾವು, ಅವನ್ಯಾವನೋ ಕರೆದ ಅಂತ ಅವನ ಹಿಂದೆ ಓಡಿ ಹೋಗ್ತಿದೀಯಲ್ಲ. ನಿನಗೆ ಹೀನಾಯ ವಾಗ್ತಿಲ್ವಾ?" ತಾಯಿ ನುಡಿದಾಗ, ಸಹನೆ ತಗೊಂಡು ತಂದೆಯ ಕಡೆ ತಿರುಗಿ ನುಡಿದಳು, "ಅಪ್ಪಾ ಅಮ್ಮನಿಗೆ ನೀವೇ ಹೇಳಿ. ಇವತ್ತು ಮತ್ತೆ ಮತ್ತೆ ಅದೇ ಮಾತುಗಳನ್ನು ಕೇಳಲು ನನಗಿಷ್ಟವಿಲ್ಲ. ನಾನೆಲ್ಲಾ ನಿರ್ಧರಿಸಿ ಆಗಿದೆ. ಮತ್ತೆ ನನ್ನ ಮನಸ್ಸನ್ನು ಬದಲಾಯಿಸುವುದಿಲ್ಲ. ಕಷ್ಟವೋ, ಸುಖವೋ, ನಾನೇ ಎಲ್ಲಾ ನೋಡಿ ಕೊಳ್ತೀನಿ. ನನಗೋಸ್ಕರ ಯಾರೂ ಚಿಂತಿಸಬೇಕಾಗಿಲ್ಲ."

"ಅಂತೂ ನಿನಗೆ ದುರಹಂಕಾರ. ಅವನ ಮನೆಯಲ್ಲಿ ನಿನಗೇನು ಸುಖ ಸಿಗುತ್ತೇ?"

"ಸರಿ ಇಲ್ಲ ಅಂತ ಅನ್ನಿಸಿದಾಗ, ಮತ್ತೆ ಇಲ್ಲಿಗೇ ಮತ್ತೆ ಬರುಲ್ಲ. ಮಮಕಾರ ವಿಲ್ಲದ ಈ ಮನೆಯ ಬಗ್ಗೆ ನನಗ್ಯಾವ ಹಂಬಲ್ಲವೂ ಇಲ್ಲ." ಅಲ್ಲಿ ನಿಲ್ಲದೇ ತನ್ನ ರೂಮಿಗೆ ನಡೆದಿದ್ದಳು.

"ನೋಡಿದ್ರಾ? ನಿಮ್ಮ ಮಗಳನ್ನು ಹೇಗೆ ಮಾತನಾಡ್ತಾಳೆ? ಅವನು ಸಿಗುವವರೆಗೂ ಸರಿಯಾಗಿದ್ದಳು. ಈಗ ನಾವು ಯಾರೂ ಬೇಕಿಲ್ಲ"

"ಹೋಗಲಿ, ಇವತ್ತಾದರೂ ಸುಮ್ಮನಿರ್ತೀಯ. ಮಗಳಾಗಿ ಹುಟ್ಟಿದವಳು ಒಂದಲ್ಲ ಒಂದು ದಿನ ಗಂಡನ ಮನೆಗೆ ಹೋಗಲೇ ಬೇಕು. ಹತ್ತು ಹನ್ನೆರಡು ವರ್ಷದ ಕೆಳಗೇ ಆಗಬೇಕಾಗಿದ್ದುದು, ಈಗ ಆಗುತ್ತಿದೆ ಅಷ್ಟೇ. ಇನ್ನು ಅವಳ ಪಾಡಿಗೆ ಅವಳನ್ನು ಬಿಡು. ಮತ್ತೆ ಮತ್ತೆ ಅನ್ನಬೇಡ."

"ಹುಂ. ನಾನು ಅಂತೀನಿ ಅಂತ ಮಾತ್ರ ಗೊತ್ತಾಗುತ್ತೆ. ಯಾಕೆ ಅಂತಿದೀನಿ ಅಂತ ಮಾತ್ರ ಗೊತ್ತಾಗುಲ್ಲ. ಮುಂದೆ ಪಶ್ಚಾತ್ತಾಪ ಪಡ್ತೀರಿ... ನೋಡ್ತಿರಿ"

"ಏನು ಮಾತನಾಡ್ತಿಯ ನೀನು? ಅಂಥ ದಿನ ಬರದಿರಲಿ. ಅಂತ ಹಾರೈಸಬೇಕಾದವಳು ನೀನು. ನಿನಗೆ ಸಮಯ ಸಂದರ್ಭ ಒಂದೂ ಗೊತ್ತಿಲ್ಲ." ಅಪರೂಪಕ್ಕೆ ಹೆಂಡತಿಯ ಮಾತನ್ನು ಖಂಡಿಸಿದರು.

"ನನಗೆ ಎಲ್ಲಾ ಗೊತ್ತೂ. ನಾನು ಏನು ಹೇಳಿದೆ ಅನ್ನುವ ಮಾತು ಜ್ಞಾಪಕವಿರಲಿ."ಎಂದು ಮುಸುಕೆಳೆದು ಮಲಗಿದಳು.

ಹೆಂಡತಿಯ ಅಜ್ಞಾನಕ್ಕೆ, ಅಸಡ್ಡೆಗೆ ಮರುಗಿದರು. ಮೊದಲಿನಿಂದಲೂ ಅವಳು ಜೋರು. ಆದರೆ ಮಗಳು ಡಾಕ್ಟರು ಎನ್ನುವ ಹೆಮ್ಮೆ ಅವಳ ಜಂಭವನ್ನು ಹೆಚ್ಚು ಮಾಡಿತ್ತು. ತಾನು ಸಾಕಿ ಬೆಳೆಸಿದ ತನ್ನ ಮಗಳು, ತನಗೆ ಚಿನ್ನದ ಗಣಿ ಎಂದೇ ಅವಳ ಭಾವನೆ. ಗಂಡನ ಬಿಸಿನೆಸ್‌ನಲ್ಲಿ ಏರುಪೇರಾದರೂ, ಮಗಳ ಸಂಪಾದನೆ ಯಿಂದ, ಅವಳ ನಡೆವಳಿಕೆಯಲ್ಲಿ ಎಲ್ಲಾ ಏರು ಪೇರುಗಳು ಸರಿ ಹೋಗುತ್ತಿದ್ದವು. ತನ್ನ ಒಡವೆ ವಸ್ತು ಓಡಾಟ, ತಿರುಗಾಟ ಇವುಗಳಿಗೆಲ್ಲ ಮಗಳ ಹಣವನ್ನು ಧಾರಾಳವಾಗಿ ಖರ್ಚು ಮಾಡುತ್ತಿದ್ದಳು. ನಿರ್ಮಲ ತಂದೆಯ ಕೈಗೆ ಕೊಡುತ್ತಿದ್ದ ಹಣ, ತಾಯಿಯ ಪರ್ಸನ್ನು ಸೇರುತ್ತಿತ್ತು. ನಿರ್ಮಲ ಎಂದೂ ಅದರ ಬಗ್ಗೆ ವಿಚಾರಿಸಿ ದವಳಲ್ಲ. ಅದರ ಅಗತ್ಯವೂ ಇರಲಿಲ್ಲ. ಸೀರೆ ಬಟ್ಟೆ, ಬೇಕಾದಾಗ, ತಂದೆಯಿಂದ ಹಣವನ್ನು ಪಡೆಯುತ್ತಿದ್ದಳು. ತನಗೆ ಬೇಕಾದ ಅಗತ್ಯವಾದ ವಸ್ತುಗಳಿಗೆ ತಂದೆಯೇ ಹಣ ಕೊಡುತ್ತಿದ್ದರು. ಉಳಿದ ಹಣವನ್ನು ಮತ್ತೆ ಫೀಸಿನ ಹಣದ ಜೊತೆ ಸೇರಿಸಿ, ಕೊಟ್ಟು ಬಿಡುತ್ತಿದ್ದಳು. ತನಗಾಗಿ

ಹಣವನ್ನು ಕೂಡಿಡಬೇಕೆಂಬ ಭಾವನೆಯೇ ಅವಳಿಗೆ ಬಂದಿರಲಿಲ್ಲ. ಈ ವಿಚಾರವೆಲ್ಲಾ ಅವರಿಗೆ ತಿಳಿದದ್ದೇ. ನಿರ್ಮಲ ಮಾಡಿದ್ದು ತಪ್ಪು. ಅವಳು ತನಗೇ ಅಂತ ಹಣ ಕೂಡಿಡದೇ ಇದ್ದುದು ಖಂಡಿತಾ ತಪ್ಪು. ನಾಳೆಯೆ ನಾನು ಅವಳಿಗೇ ಅಂತ ಅವಳ ಹೆಸರಿನಲ್ಲಿ ಒಂದಿಷ್ಟು ಹಣವನ್ನು ಬ್ಯಾಂಕಿನಲ್ಲಿಡು ತ್ತೇನೆ. ಇಂದಲ್ಲ ನಾಳೆ ಅವಳಿಗೆ ಉಪಯೋಗಕ್ಕೆ ಬರುತ್ತೆ. ಅವಳಿಗೆ ಅದ್ದೂರಿಯಾಗಿ ಮದುವೆ ಮಾಡಲಿಲ್ಲ. ಒಡವೆ ವಸ್ತು ತೆಗೆಸಿ ಕೊಟ್ಟಿಲ್ಲ. ನನ್ನ ಮಗಳು ನಮ್ಮ ಜೊತೆಯೇ ಸದಾ ಕಾಲಕ್ಕೂ ಇರುತ್ತಾಳೆ ಎಂಬ ಅಂಧ ವಿಶ್ವಾಸದಿಂದ ಸುಮ್ಮನಾಗಿ ಬಿಟ್ಟಿದ್ದೆ. ಇವಳಂತೂ ಸ್ವಂತ ತಾಯಿಯಲ್ಲ. ನಾನು ಸ್ವಂತ ತಂದೆ, ಇಷ್ಟು ಸ್ವಾರ್ಥಿ ಯಾಗ ಬಾರದು, ಇಬ್ಬರಿಗೂ ತಿಳಿಯದಂತೆ ನಿರ್ಮಲೆಯ ಹೆಸರಿನಲ್ಲಿ ದುಡ್ಡು ಕಟ್ಟಬೇಕು ಎಂಬ ಭಾವನೆ ಬಲವಾಯಿತು. ಮಹತ್ಕಾರ್ಯ ಸಾಧಿಸಿದವರಂತೆ ನೆಮ್ಮದಿಯಿಂದ ಮಲಗಿದರು.

ಶುಕ್ರವಾರ, ಬೆಳಿಗ್ಗೆ, ನಿತ್ಯಕ್ಕಿಂತ ಬೇಗನೇ ಎದ್ದ ರಂಗನಾಥ, ತಾಯಿಯ ಮಾತಿನಂತೆ ಎಣ್ಣೆ ನೀರನ್ನು ಹಾಕಿಕೊಂಡ. ಒಂಭತ್ತು ಗಂಟೆಯ ಹೊತ್ತಿಗೆ ಸತ್ಯ ಮೂರ್ತಿ ಬಂದ. ರಂಗನಾಥ ಹೊಸ ಪಂಚೆ ಉಟ್ಟು, ಹೊಸ ಷರಟನ್ನು ತೊಟ್ಟಮೇಲೆ ಒಂದು ಶಲ್ಯವನ್ನು ಹೊದೆದಿದ್ದ. ಹುಬ್ಬುಗಳ ನಡುವೆ ಇಟ್ಟಿದ್ದ ಕುಂಕುಮದ ರಂಗು, ಅವನ ಮುಖದ ಕಳೆಯನ್ನು ಹೆಚ್ಚಿಸಿದ್ದವು. ಸತ್ಯ ಕಣ್ಣಗಲಿಸಿ, ತನ್ನ ಸಂತಸವನ್ನು ಸೂಚಿಸಿದ್ದ.

" ಊಟಕ್ಕೆ ಏನು ಏರ್ಪಾಡು?" ಸತ್ಯಮೂರ್ತಿಯನ್ನು ಕುರಿತು ಕೇಳಿದಳು ಕಾವೇರಮ್ಮ.

"ಎಲ್ಲರೂ ಹೋಟೆಲ್ಲಿಗೆ ಹೋಗಿ ಊಟ ಮಾಡಿದರಾಯ್ತು," ನಿರಾತಂಕ ವಾಗಿ ಹೇಳಿದ.

"ನಾನು ಹೋಟೆಲ್ಲಿನಲ್ಲಿ ಊಟ ಮಾಡಲ್ಲಪ್ಪಾ. ನನಗೇನೂ ಕಷ್ಟವಿಲ್ಲ ಎಲ್ಲರಿಗೂ ಇಲ್ಲೇ ಮಾಡ್ತೀನಿ. ಸೀದಾ ಎಲ್ಲರೂ ಇಲ್ಲಿಗೇ ಬಂದು ಬಿಡಿ."

"ಬೇಡಮ್ಮ ನಿನಗೇಕೆ ಕಷ್ಟ. ಮನೋಜನನ್ನು ನೋಡಿಕೊಂಡು ಹೇಗೆ ಮಾಡ್ತೀಯ. ನಾವೆಲ್ಲಾ ಹೋಟೆಲ್ಲಿನಲ್ಲಿ ತಿಂದು ಬರ್ತೀವಿ. ನೀನು.. ನಿನಗೇನು ಬೇಕೋ ಅದನ್ನು ಮಾಡಿಕೋ" ತಾಯಿಗೆ ರೇಗಿ ಹೋಯಿತು.

"ಇದೆಂತಹ ಮದುವೇನೋ.." ಬೀಗರು ಅನ್ನಿಸಿಕೊಂಡವರು. ಒಂದು ಮುಖ ಕೂಡಾ ತೋರಿಸಿಲ್ಲ. ಬರೀ ಹುಡುಗು ಹುಡುಗು ವ್ಯವಹಾರ. ಮದುವೆ ಅಂತ ಒಂದು ಚಪ್ಪರವಿಲ್ಲ ಓಲಗವಿಲ್ಲ. ಹೋಗಲಿ ಅಂದರೆ, ಒಂದು ಊಟದ ವ್ಯವಸ್ಥೆ ಇಲ್ಲ. ಎಲ್ಲಾದಕ್ಕೂ ನೀನೇ ಒದ್ದಾಡ್ತೀಯ. ಅವರೆಂತಹ ಜನ.?" ಹೀಯಾಳಿಸುವ ಧ್ವನಿಯಲ್ಲಿ ವಟಗುಟ್ಟಿದಳು. ರಂಗನಾಥ ಸಿಡುಕಿದ.

"ನೋಡೋ ಸತ್ಯ. ಈಗ ಹೀಗೆ ಮಾತಾಡ್ತಿದಾಳೆ.. ನಾನು ಅವತ್ತೇ ಹೇಳಿದ್ದೆ. ಸಿಂಪಲ್ ಮದುವೆ ಅಂತ. ನಮಗೆ ಹತ್ತಿರದ ನೆಂಟರಿಷ್ಟರು ಯಾರೂ ಇಲ್ಲ... ಇದ್ದರೂ, ಯಾರನ್ನೂ ಕರೆಯಬೇಕು ಅಂತ ಕೂಡಾ ಅನ್ನಿಸಿಲ್ಲ. ಅವರ ಮನೆಯಲ್ಲೂ ಅಷ್ಟೆ... ಇನ್ನು ಯಾರ್‍ಯಾರಿದಾರೆ ಅಂತ ನಾನೆಂದೂ ಕೇಳಿಲ್ಲ. ಅವಳೂ ಹೇಳಿಲ್ಲ. ಅವರೇ ರಿಜಿಸ್ಟರ್ಡ್ ಮದುವೆಗೆ ಒಪ್ಪಿರುವಾಗ, ಅವರ ನೆಂಟರಿಷ್ಟರು ಯಾರು ಬರ್ತಾರೆ? ಅದಕ್ಕೇ ಚಪ್ಪರವೂ ಇಲ್ಲ. ಓಲಗವೂ ಇಲ್ಲ. ಅಲ್ಲ ನಿನಗಷ್ಟು ಇಷ್ಟವಿದ್ದರೆ, ಮುಂಚೇನೆ

ಹೇಳಿದ್ದಿದ್ರೆ ಮನೆ ಮುಂದೆ ಚಪ್ಪರ ಹಾಕಿಸ್ತಿದ್ದೆ. ಆಗ ಅಕ್ಕಪಕ್ಕದವರು ಬಂದು ಮದುವೆಗೆ ಏಕೆ ಕರಿಯಲಿಲ್ಲ ಎಂದು ಆಕ್ಷೇಪಣೆ ಮಾಡಿದ್ರೆ ಏನು ಹೇಳ್ತಿದ್ದೆ?"

"ಸರಿ ನನ್ನನ್ನೂ ಅನ್ನುವುದು ಎಂದರೆ ಎಷ್ಟು ಇಷ್ಟ ನಿನಗೆ, ಮದುವೆ ಅಂದ್ರೆ ಹೇಗಿರಬೇಕು, ಅಂತ ಹೇಳಿದೆ ಅಷ್ಟೇ.. ಅದು ಸಂಪ್ರದಾಯ. ನಿನ್ನ ಹಣೇಲಿ ಇದೇ ಬರಿದಿರುವಾಗ, ನಾನು ಅಂದು ತಾನೇ ಏನು ಪ್ರಯೋಜನ?"

"ಹೋಗಲಿ ಬಿಡಿ ಅಮ್ಮ. ಇವತ್ತಿನ ದಿನ ನೀವೂ ಬೇಜಾರು ಮಾಡಿಕೊಂಡು ಅವನಿಗೂ ಬೇಜಾರು ಮಾಡ್ತೀರಿ... ಯಾವ ರೀತಿ ಆದರೇನು, ಮದುವೆ ಆಗುವುದು ಮುಖ್ಯ. ಎಲ್ಲಾ ಅಡ್ಜಸ್ಟ್ ಆದರೆ ಸರಿ"

"ಸರಿಯಪ್ಪಾ ಸರಿ. ನೀನೂ ಹೀಗೆ ಹೇಳಿದ ಮೇಲೆ, ನೀವೆಲ್ಲಾ ಒಂದೇ. ನಾನು ತಾನೇ ಹಳೇ ಕಾಲದವಳು. ನಾನೇ ಸುಮ್ಮನಿದ್ದರಾಯ್ತು."

"ಹೊರಡುವ ಹೊತ್ತಾಯ್ತು. ನೀನೂ ಬೇಗ ರೆಡಿಯಾಗು. ಟ್ಯಾಕ್ಸಿ ಬರುತ್ತೆ. ಮನೋಜನಿಗೆ ನಾನು ರೆಡಿ ಮಾಡ್ತೀನಿ"

"ಬೇಡಪ್ಪಾ ನಾನು ಬಂದು ಅಲ್ಲಿ ಮಾಡುವುದೇನಿದೆ? ನೀವಿಬ್ಬರು ಇದೀರಲ್ಲ.. ಮನೋಜನ ಜೊತೆ ನಾನು ಮನೇಲಿರ್ತೀನಿ.. ಎಷ್ಟು ಹೊತ್ತಾಗ ಬಹುದು?"

"ಒಂದೂವರೆ, ಎರಡು ಗಂಟೆಯ ಹೊತ್ತಿಗೆ ಬರಬಹುದು."

"ಸರಿ ಎಲ್ಲಾ ಹೋಗ್ಬನ್ನಿ.. ಒಳ್ಳೇದಾಗಲಿ." ತಾಯಿ ಹರಸಿದಳು. ರಂಗನಾಥ, ದೇವರಿಗೆ ನಮಸ್ಕಾರ ಮಾಡಿ, ತಾಯಿಗೂ ನಮಸ್ಕರಿಸಿದ. ಅಷ್ಟು ಹೊತ್ತಿಗೆ ಮನೆ ಮುಂದೆ ಟ್ಯಾಕ್ಸಿ ಬಂದು ನಿಂತಿತು.

"ಸತ್ಯ, ನೀನು ಅವರ ಮನೆಗೆ ಹೋಗಿ ಅವರನ್ನೂ ಕರೆದುಕೊಂಡು ಬಾ... ನಾನು ಸ್ಕೂಟರ್ ಮೇಲೆ ಹೋಗ್ತೀನಿ.. ಜಾಗ ಸಾಕಾಗದೇ ಹೋಗಬಹುದು."

"ಯಾಕೆ ನೀನೇ ಹೊಗಬಾರದು? ನಾನೇ ಸ್ಕೂಟರ್ನಲ್ಲಿ ಬರ್ತೀನಿ"

" ಇವತ್ತು ನಾನೇ ಹೋಗಿ ಅವರ ಮನೆ ಮುಂದೆ ನಿಲ್ಲಬೇಕಾ?"

"ಸರಿ ಬೇಡ ಬಿಡು. ನಾನು ಹೋಗಿ ಕರಕೊಂಡು ಬರ್ತೀನಿ" ಎನ್ನುತ್ತಾ ಟ್ಯಾಕ್ಸಿಯಲ್ಲಿ ಕುಳಿತ. ತಾಯಿ ಕೊಟ್ಟ ಹೂವು ಹಣ್ಣುಗಳ ಬುಟ್ಟಿಯನ್ನು ಹಿಡಿದು ರಂಗನಾಥ ಹೊರಟ.

ಟ್ಯಾಕ್ಸಿ ನಿರ್ಮಲೆಯ ಮನೆಯ ಮುಂದೆ ನಿಂತಿತು. ಸತ್ಯ ಅತ್ತಿತ್ತ ನೋಡುತ್ತಾ ಇಳಿದು, ನಿರ್ಮಲೆಯ ಮನೆಯ ಬಾಗಿಲು ಬಳಿ ಬಂದ. ಮುಂಬಾಗಿಲು ತೆಗೆದಿತ್ತು. ಅವರ ಮನೆಯ ಮುಂದೂ, ಹಸಿರು ಚಪ್ಪರವಾಗಲೀ, ತೋರಣವಾಗಲೀ ಇರಲಿಲ್ಲ. ಕಾಲಿಂಗ್ ಬೆಲ್ ಒತ್ತಿದ. ಹೊರಬಂದವರು ನಿರ್ಮಲೆಯ ತಂದೆ. ಇವನು ತಾನಾಗಿಯೇ ತನ್ನ ಪರಿಚಯ ಹೇಳಿಕೊಂಡ.

"ಹತ್ತು ನಿಮಿಷ.. ಬಂದು ಬಿಡ್ತೀವಿ ಎಂದರು. ಒಳಗೆ ಬನ್ನಿ ಎಂದೇನೂ ಕರೆಯಲಿಲ್ಲ. ಇವನು ಮತ್ತೆ ಬಂದು ಟ್ಯಾಕ್ಸಿಯನ್ನು ಒರಗಿ ನಿಂತ. ಹತ್ತು ನಿಮಿಷಕ್ಕೆ ಮುಂಚೆಯೇ ನಿರ್ಮಲೆಯ ತಂದೆ ಮನೆಯಿಂದ ಆಚೆಗೆ ಮೊದಲು ಹೊರ ಬಂದರು. ಅವರ ಹಿಂದೆ ನಿಧಾನವಾಗಿ ಕಾಲೆಳೆಯುತ್ತಾ ಬಂದವಳನ್ನು ನಿಟ್ಟಿಸಿದ. ನೀಟಾಗಿ ಡ್ರೆಸ್ ಮಾಡಿಕೊಂಡಿರುವವಳು, ಅವಳೇ ನಿರ್ಮಲ ಎಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ಕಾಲಿಗೇನಾಗಿದೆ ಏಕೆ ಕುಂಟುತ್ತಿದಾಳೆ? ಅರ್ಥವಾಗಲಿಲ್ಲ. ನಿಧಾನವಾಗಿ ನಡೆದ ಬಂದು

ಅವಳು ಸತ್ಯನನ್ನೂ ನೋಡಿ ಮುಗುಳ್ನಕ್ಕು ಹಲೋ ಎಂದಳು. ಹತ್ತಿರದಿಂದ ಮತ್ತೊಮ್ಮೆ ನೋಡಿದ. ರಂಗನಾಥ ಕೊಟ್ಟ ಮೆರೂನ್ ಕಲರ್ ಸೀರೆ ಯುಟ್ಟು. ಅದೇ ಬಣ್ಣದ ರವಿಕೆ ಧರಿಸಿದ್ದಳು. ಕರಿಮಣಿ ಸರವನ್ನು ಹಾಕಿಕೊಂಡಿ ದ್ದಳು ಅಳ್ಳಕವಾಗಿ ಹೆಣೆದುಕೊಂಡ ಜಡೆಗೆ ಸುಂದರವಾಗಿ ಕನಕಾಂಬರದ ಹೂವನ್ನೂ ಮುಡಿದಿದ್ದಳು. ರಂಗನಾಥ ಎಂತಹ ಲಕ್ಕೀ. ಎಂದು ಮತ್ತೊಮ್ಮೆ ಅಂದುಕೊಂಡ ತನ್ನಲ್ಲಿಯೇ. ಆದರೂ ಏನೋ ಒಂದು ಅನುಮಾನ. ಮನೆಯ ಆಳು ಒಂದು ಸೂಟ್‌ಕೇಸನ್ನೂ ತಂದು ಡಿಕ್ಕಿಯಲ್ಲಿಟ್ಟ. ಟ್ಯಾಕ್ಸಿಯ ಹಿಂದಿನ ಬಾಗಿಲನ್ನು ತೆಗೆದ. ಅವಳು ಹತ್ತುವಾಗ ಅವಳ ಕಾಲುಗಳನ್ನು ಗಮನಿಸಿದ. ಅವನಿಗೆ ಎಲ್ಲಾ ತಿಳಿದು ಹೋಯಿತು. ಏನೋ ಒಂದು ತರಹ ವ್ಯಥೆಯೂ ಉಂಟಾಯಿತು. ಬಹುಶಃ ಇದೇ ಕಾರಣ.. ಇದುವರೆಗೆ ಇವಳಿಗೆ ಮದುವೆ ಆಗದೇ ಇರುವುದಕ್ಕೆ.. ಇದೇ ಕಾರಣ..ರಂಗನಾಥನಂತಹ ಸಾಮಾನ್ಯನನ್ನು ಆರಿಸಿಕೊಂಡಿರು ವುದಕ್ಕೆ ಎಂದು ಎಲ್ಲಾ ಅರ್ಥವಾಗಿ ಹೋಗಿತ್ತು. ಮನಸ್ಸಿನ ಆಲೋಚನೆಗಳು ಒಂದರ ಹಿಂದೆ ಒಂದು ಹಣಿಕಿ, ಅವನನ್ನು ಮೌನಿಯನ್ನಾಗಿ ಮಾಡಿದವು.

ನಿರ್ಮಲೆಯೂ ತಂದೆಯೂ ಹತ್ತಿ ಕುಳಿತು, ಹೊರಡೋಣ್ವಾ? ಎಂದು ಅವಳು ಕೇಳಿದಾಗ ಹುಂ ಎಂದು ತಲೆ ಆಡಿಸಿದ್ದ. ತಾಯಿ ಬರಲಿಲ್ಲವೆನ್ನುವುದು ಅವನ ಗಮನಕ್ಕೆ ಬರಲಿಲ್ಲ.

ಮೊದಲು ದೇವಸ್ಥಾನದ ಬಳಿ ಟ್ಯಾಕ್ಸಿ ನಿಲ್ಲಿಸಿದ ಅವರನ್ನೇ ಕಾಯುತ್ತಾ ನಿಂತಿದ್ದ ರಂಗನಾಥ ನಿರ್ಮಲೆಯ ತಂದೆಗೆ ಕೈ ಮುಗಿದು ನಮಸ್ಕಾರ ಹೇಳಿದ. ಅವಳ ಕಡೆ ತಿರುಗಿ ಹಲೋ ಎಂದು ಹೇಳಿ ಅತ್ತಿತ್ತ ನೋಡಿದವನು, "ನಿಮ್ಮ ತಾಯಿ ಬರಲಿಲ್ವಾ ಅಂತ ಕೇಳಿದ. ಇಲ್ಲ ಅವಳಿಗೆ ಮೈ ಹುಷಾರಿಲ್ಲ"ಎಂದು ತಂದೆ ಹೇಳಿದಾಗ, ಓ.. ಎಂದಷ್ಟೇ ಅಂದ. ಎಲ್ಲರೂ ಇಳಿದಾಗ, ಸತ್ಯ ರಂಗನಾಥನ ಕಣ್ಣು ತಪ್ಪಿಸಿದ. ರಂಗನಾಥ ಏನೂ ತಿಳಿಯದವನಂತೆ ಸುಮ್ಮನಿದ್ದ.

ದೇವಸ್ಥಾನದಲ್ಲಿ ಮತ್ತೊಮ್ಮೆ ಅರ್ಚನೆ ಮಾಡಿಸಿ, ತೀರ್ಥಪ್ರಸಾದವನ್ನು ಹಣ್ಣುಕಾಯಿಗಳು ಸ್ವೀಕರಿಸಿ, ಅಲ್ಲಿಂದ ಹೊರಟರು. ಹನ್ನೆರಡು ಗಂಟೆಗೆ ಮುಂಚೆಯೇ ಆಫೀಸನ್ನು ತಲುಪಿದರು. ನಿರ್ಮಲೆಯ ತಂದೆ ತಮ್ಮ ಪರಿಚಯದ ವರನ್ನು ಹುಡುಕಿ ಮಾತನಾಡಿದರು.

"ಸ್ವಲ್ಪ ಮುಂಚೇನೇ ಬಂದು ಬಿಟ್ಟಿದೇವೆ. ಫ್ರೀಯಾಗಿದ್ದರೆ ಎಲ್ಲಾ ಆಗಿ ಹೋಗಲಿ"

"ನಿಮ್ಮ ಯಾರದ್ದೂ ಆಬ್ಜಕ್ಷನ್ ಇಲ್ಲ ಎಂದರೆ ಆಗಲಿ.. ಎಲ್ಲಾ ಸಿದ್ದವಾಗಿದೆ"ಎಂದರು..

"ಏನಿಲ್ಲ ಏನಿಲ್ಲ. ನಾವೂ ಎಲ್ಲಾ ಸಿದ್ಧ ಎಂದು ಶಂಕರಯ್ಯ ಎಲ್ಲರ ಪರವಾಗಿ ನುಡಿದರು. ಮುಂದಿನ ಕೆಲಸಗಳು ಬೇಗ ಬೇಗ ನಡೆದವು. ನವ ವಧೂವರರ, ಹಾಗೂ ಸಾಕ್ಷಿಗಳ ಸಹಿಯನ್ನು ಹಾಕಿಸಿಕೊಂಡರು. ಶಂಕರಯ್ಯ ಮುಂಚೆಯೇ ತಿಳಿಸಿದ್ದರಿಂದ. ಅವರ ಪರಿಚಯದವರು, ಎರಡು ಹೂವಿನ ಹಾರಗಳನ್ನು ತರಿಸಿಟ್ಟಿದ್ದರು. ನಿರ್ಮಲಾ, ರಂಗನಾಥ. ಪರಸ್ಪರ ಹಾರ ಬದಲಾಯಿಸಿಕೊಂಡರು. ನಿರ್ಮಲೆಯ ತಂದೆ ಅಳಿಯನಿಗೆ ಒಂದು ಕೈ ಗಡಿಯಾರವನ್ನು ಉಡುಗೊರೆಯನ್ನಾಗಿ ನೀಡಿದರು. ಸತ್ಯ ತನ್ನ ಸ್ನೇಹಿತನಿಗೆ

ಒಂದು ಉಂಗುರವನ್ನು ಉಡುಗೊರೆ ಕೊಟ್ಟ. ಅದು ರಂಗನಾಥನ ಕೈ ಬೆರಳಿಗೆ ತೊಡಿಸಿದ. ಸತ್ಯ ಸಂತೋಷದಿಂದ ಚಪ್ಪಾಳೆ ತಟ್ಟಿ ಇಬ್ಬರನ್ನೂ ಅಭಿನಂದಿಸಿದ. ದೇವಸ್ಥಾನದಲ್ಲಿ ಕೊಟ್ಟಿದ್ದ ಪ್ರಸಾದವನ್ನು ಎಲ್ಲರಿಗೂ ಹಂಚಿದ. ಆಗ ಸ್ವೀಟ್ಸ್‌ನ್ನೇ ತಂದಿಲ್ಲವೆನ್ನುವುದು ಎಲ್ಲರಿಗೂ ಅರಿವಾಯಿತು. ಶಂಕರಯ್ಯನ ಪರಿಚಯದ ವ್ಯಕ್ತಿ ಉದಾರತೆಯಿಂದ ಸ್ವೀಟ್ಸ್ ತರಿಸಿ ಎಲ್ಲರಿಗೂ ಕೊಟ್ಟರು. ಮತ್ತೊಮ್ಮೆ ಅಲ್ಲಿದ್ದವರೆಲ್ಲಾ ಚಪ್ಪಾಳೆ ತಟ್ಟಿ ಹೊಸ ದಂಪತಿಗಳಿಗೆ ಶುಭ ಕೋರಿದರು. ರಂಗನಾಥ ಕಂಗ್ರಾಟ್ಸ್ ನಿರ್ಮಲಾ ಎಂದು ವಿಷ್ ಮಾಡಿದ. ನಿರ್ಮಲಾ ಏಕೋ ಏನೋ ಮೌನಿಯಾಗಿದ್ದಳು.

ಅಲ್ಲಿಂದ ಅವರು, ನಾಲ್ಕು ಜನರೂ, ಒಂದು ಒಳ್ಳೆಯ ಹೆಸರಾಂತ ಹೋಟೆಲ್ಲಿಗೆ ಬಂದು ಸಿಹಿ ಊಟಕ್ಕೆ ಆರ್ಡರ್ ಕೊಟ್ಟರು. ರಂಗನಾಥ ಬೇಡ ಬೇಡ ವೆಂದರೂ ಶಂಕರಯ್ಯ ಬಿಲ್ ಪೇ ಮಾಡಿದರು.

ಪರವಾಗಿಲ್ಲ, ಎಷ್ಟು ಕಡಿಮೆ ಖರ್ಚಿನಲ್ಲಿ ಮಗಳ ಮದುವೆ ಮಾಡಿ ಮುಗಿಸಿದರು ಈತ? ಎಷ್ಟು ದುಡ್ಡಿದ್ದರೇನು? ಖರ್ಚು ಮಾಡುಕ್ಕೆ ಮನಸ್ಸಿರ ಬೇಕಲ್ಲ... ಈ ಡಾಕ್ಟರಿಗಾದರೂ ಅಷ್ಟೇ ...ಅಂತಹ ಆಸೆಯೇ ಇಲ್ಲವೋ ಏನೋ.. ಸತ್ಯ ತನ್ನಲ್ಲೇ ಚಿಂತಿಸುತ್ತಿದ್ದ.

ಅಲ್ಲಿಂದ, ಎಲ್ಲರೂ ಮತ್ತೆ ಟ್ಯಾಕ್ಸಿಯಲ್ಲಿ ಕುಳಿತು ಮನೆಗೆ ಹೊರಟರು. ನಿರ್ಮಲೆಯ ತಂದೆ, ತಾವು ತಮ್ಮ ಮನೆಯ ಹತ್ತಿರ ಇಳಿಯುವುದಾಗಿ ತಿಳಿಸಿದರು. ಅವರಿಗೆ ರಂಗನಾಥನ ಮನೆಗೆ ಬರುವ ಇಚ್ಛೆ ಇರಲಿಲ್ಲ. ನಿರ್ಮಲೆಯೂ ಏನೂ ಹೇಳದೇ ಸುಮ್ಮನಿದ್ದಳು. ರಂಗನಾಥ ಏನಾದರೂ ಹೇಳುವಂತೆ ಅನ್ನಿಸದಿದ್ದರಿಂದ ಸತ್ಯ ಬಾಯಿಮಾತಿಗೆ ಎಂಬಂತೆ ಹೇಳಿದ.

"ನಿಮ್ಮ ಮಗಳ ಮನೆಗೆ ಬಂದು ಹೋಗಬಹುದಲ್ಲ"

"ಈಗ ಆಗುಲ್ಲ. ನನಗೆ ಬೇಕಾದಷ್ಟು ಕೆಲಸಗಳಿವೆ. ಇವತ್ತೂ ಎಷ್ಟೋ ಕೆಲಸಗಳನ್ನೂ ಬಿಟ್ಟು ಇಲ್ಲಿಗೆ ಬಂದಿದ್ದೆ. ಅಲ್ಲದೆ ನನ್ನ ಹೆಂಡತಿಯ ಆರೋಗ್ಯ ಚೆನ್ನಾಗಿಲ್ಲ" ಎಂದು ಹೇಳಿ, ನಿರ್ಮಲಾ ರಂಗನಾಥರ ಕಡೆ ತಿರುಗಿ "ದೇವರು ನಿಮ್ಮಿಬ್ಬರನ್ನೂ ಸುಖವಾಗಿಟ್ಟಿರಲಿ " ಎಂದು ಹಾರೈಸಿ ಕಾರಿನಿಂದ ಇಳಿದರು.

ಇಷ್ಟೇ.. ಇವರ ಪ್ರೀತಿ ವಾತ್ಸಲ್ಯ ಎಂದು ಕೊಂಡ ಸತ್ಯ.

ರಂಗನಾಥ ತನ್ನ ತಾಯಿಗೆ ಬಗ್ಗೆ ಚಿಂತಿಸುತ್ತಿದ್ದ . ಇವರ ರೀತಿ ನೋಡಿದರೆ ಹೀಗೆ.. ಅಮ್ಮನೋ, ನಾನ್ಯಾಕೆ ಅಂತ ಇಲ್ಲಿಗೆ ಬರಲಿಲ್ಲ. ಈಗ ನಮ್ಮಿಬ್ಬರನ್ನೂ ಹೇಗೆ ಸ್ವಾಗತಿಸುತ್ತಾಳೋ? ಮಗನ ಮದುವೆ ಅಂತ ಅತಿ ಸಂಭ್ರಮವಂತೂ ಇಲ್ಲವೇ ಇಲ್ಲ. ಇಬ್ಬರೂ ಸರಿಯಾಗಿದಾರೆ. ಇದು ನಮ್ಮಿಬ್ಬರಿಗೆ ಸಂಬಂಧಿಸಿದ್ದು ಅಂದರೆ.. ಬರೀ ನಾವಿಬ್ಬರೇ... ಎಲ್ಲೋ ಅಪ್ಪಿ ತಪ್ಪಿ, ಸತ್ಯ ಬಂದು ಮಧ್ಯೆ ಮಧ್ಯೆ ಓಡಾಡಿದ್ದ ರಿಂದ ಸರಿ ಹೋಯ್ತು.. ಇಲ್ಲದಿದ್ದರೆ ಈ ಕೆಲಸ ಕೂಡಾ ಇಷ್ಟು ಸುಗಮವಾಗಿ ನೆರವೇರುತ್ತಿತ್ತೋ ಇಲ್ಲವೋ ಅಂತಂದುಕೊಂಡಾಗ ಖೇದವಾಗಿತ್ತು.

ಟ್ಯಾಕ್ಸಿನಿಂತ ಸದ್ದಾದಾಗ ಯಾರೋ ಬಂದು ಇಣುಕಿ ನೋಡಿ, ಹಾಗೆ ಮಾಯ ವಾಗಿದ್ದರು. ಸತ್ಯ ಇಳಿದು ಮುಂದಾಗಿ ಹೋದ. ಕಾವೇರಮ್ಮ ಎದುರಿಗೆ ಬರದೇ ಪಕ್ಕಕ್ಕೆ ನಿಂತಿದ್ದಳು. ಅಮ್ಮಾ ಆರತಿಗೆ ಸಿದ್ದ ಮಾಡಿದೀರಾ? ಸತ್ಯ ಕೇಳಿದಾಗ ಆಕೆ

ಹೂಂ ಎಂದು ತಲೆ ಆಡಿಸಿ.

"ಹೂಂನಪ್ಪಾ ಪಕ್ಕದ ಮನೆ ಹೆಂಗಸರಿಗೆ ಹೇಳಿದ್ದೀನಿ. ಹೋಗಿ ಕರದ್ರೆ ಬರ್ತಾರೆ" ಸತ್ಯ ಹೋಗಿ ಹೇಳಿದ ಕೂಡಲೇ ಪಕ್ಕದ ಮನೆಯ ಓರಗಿತ್ತಿ ಯರಿಬ್ಬರೂ, ಬಂದು ಸರಸರನೆ, ಬಾಗಿಲಿ ಮುಂದೆ ರಂಗೋಲಿ ಹಾಕಿ, ಮಣೆಯನ್ನು ಇಟ್ಟು ಹೊಸ ದಂಪತಿ ಗಳಿಗೆ ಬರುವಂತೆ ಕರೆದರು. ಕಾಲು ಎಳೆದು ಕುಂಟುತ್ತಾ ನಿಧಾನವಾಗಿ ಬಂದ ನಿರ್ಮಲೆಯನ್ನು ಇಬ್ಬರೂ ಬೆರಗಾಗಿ ನೋಡಿಯೇ ನೋಡಿದರು. ನಿರ್ಮಲೆಗೆ ಬೇಸರವೆನಿಸಿತ್ತು. ರಂಗನಾಥನಿಗೆ ಮುಜುಗರವೆನಿಸಿತ್ತು.

ಮದುಮಕ್ಕಳಿಗೆ ಆರತಿಯಾದ ಮೇಲೆ, ದಂಪತಿಗಳು ಮನೆಯೊಳಕ್ಕೆ ಅಡಿ ಇಟ್ಟರು. ಹೊಸ್ತಿಲ ಮೇಲೆ ಸೇರಿನ ತುಂಬಾ ಅಕ್ಕಿ ತುಂಬಿ, ಬೆಲ್ಲದ ಅಚ್ಚನ್ನು ಮೇಲೆ ಇಟ್ಟು, ನವವಧು ಅದನ್ನು ಬಲಗಾಲಿನಿಂತ ಒದ್ದು ಉರುಳಿಸಿ, ಒಳಗೆ ಬಲಗಾಲಿನ್ನಿಟ್ಟು ಬರುವ ಪದ್ಧತಿ.. ಆದರೆ ಈ ಕ್ರಮವನ್ನು ಉದ್ದೇಶ ಪೂರ್ವಕ ವಾಗಿಯೇ ಆಣಿ ಮಾಡಿರಲಿಲ್ಲ. ಇದು ಸತ್ಯನ ಗಮನಕ್ಕೆ ಬಂತು. ಬಲಗಾಲು ಊನ ಅಂತ ತಿಳಿದೂ ತಿಳಿದು ಆ ಕ್ರಮವನ್ನು ಆಚರಿಸುವುದು ಹೇಗೆ? ಪರವಾಗಿಲ್ಲ. ಕಾವೇರಮ್ಮ ಬುದ್ಧಿವಂತೆ ಎಂದು ಅವರನ್ನು ಮನದಲ್ಲೇ ಶ್ಲಾಘಿಸಿದ.

ಪಕ್ಕದ ಮನೆಯ ಹೆಂಗಸರು ಸಹ, ಆಮೇಲೆ ಬೇಕಾದರೆ ಮತ್ತೆ ಬರ್ತೀವಿ ಅಂತ ಹೇಳಿ ಹೊರಟು ಹೋದರು. ರಂಗನಾಥನೇ, "ಒಳಗೆ ಬಾ" ಎಂದು ಸಂಜ್ಞೆ, ಮಾಡಿದ. ನಿರ್ಮಲಾ ರಂಗನಾಥ ಇಬ್ಬರೂ ಜೊತೆ ಜೊತೆಯಾಗಿ ಒಳಗಿನ ಕೊಠಡಿಗೆ ಬಂದರು. ರಂಗನಾಥನ ಸನ್ನೆಗೆ ಮರುಮಾತಿಲ್ಲದೇ, ನಿರ್ಮಲಾ ಅಲ್ಲಿ ಹಾಕಿದ್ದ ಕುರ್ಚಿಯ ಮೇಲೆ ಕುಳಿತಳು. ಹಾಗೇ ಮನೆಯನ್ನೊಮ್ಮೆ ವೀಕ್ಷಿಸಿದಳು.

ಚಿಕ್ಕ ವೆರಾಂಡ...ನಂತರ ಹಾಲ್.. ವೆರಾಂಡಕ್ಕೆ ಸೇರಿದಂತೆ ಒಂದೇ ಒಂದು ರೂಮ್, ಹಾಲಿಗೆ ಸೇರಿದಂತೆ ಅಡಿಗೆ ಮನೆ, ಅದರ ಹಿಂಭಾಗಕ್ಕೆ ಬಚ್ಚಲುಮನೆ ಇತ್ಯಾದಿ. ಚಿಕ್ಕ ಮನೆ ಎಂದು ತನ್ನಲ್ಲಿಯೇ ಹೇಳಿಕೊಂಡಳು. ಹಾಲ್‌ನಲ್ಲಿ ಹಾಕಿದ್ದ ಮಂಚದ ಮೇಲೆ, ಮನೋಜ ಮಲಗಿದ್ದ. ಅವನ ಪಕ್ಕದಲ್ಲಿ ರಂಗನಾಥ ಕುಳಿತು, ಸ್ನೇಹಿತನಿಗೂ ಕುಳಿತುಕೊಳ್ಳುವಂತೆ ಹೇಳಿದ.

ಸತ್ಯ ಕಾವೇರಮ್ಮನಿಗೆ ಹೇಳಿ. ಕಾಫಿ ಮಾಡಿಸಿದ್ದ. ತಾನೇ ಒಳಗೆ ಹೋಗಿ ಕಾಫಿಯ ಬಟ್ಟಲುಗಳನ್ನು ತಂದು, ಎಲ್ಲರಿಗೂ ಕೊಟ್ಟ. ನಿರ್ಮಲಾ ಮಾತಿಲ್ಲದೇ ಕಾಫಿ ಕುಡಿದಳು. ಇಲ್ಲಿ ಸಮಯ ಕಳೆಯುವುದು ಹೇಗೆ ಎಂದು ಯೋಚಿಸುತ್ತಿರು ವಂತಿತ್ತು. ಸತ್ಯ ಪಿಸುದನಿಯಲ್ಲಿ ತನ್ನ ಸ್ನೇಹಿತನಿಗೆ ಹೇಳಿದ.

"ಹೊಸ ಜಾಗ.. ಅವರಿಗೂ ಮುಜುಗರ..ಅವರನ್ನೇಕೆ ನಿನ್ನ ರೂಮುಗೆ ಕರೆದುಕೊಂಡು ಹೋಗಬಾರದು? ರೂಮು ಕ್ಲೀನಾಗಿಲ್ಲದಿದ್ದರೆ ಹೇಳು.. ನಾನು ಸರಿ ಮಾಡಿ ಬರ್ತೀನಿ"

"ಎಲ್ಲಾ ಸರಿಯಾಗಿದೆ" ರಂಗನಾಥ ನಿರ್ವಿಕಾರವಾಗಿ ಹೇಳಿ ನಿರ್ಮಲೆಯ ಕಡೆ ತಿರುಗಿದ. "ಬಾ ನಿರ್ಮಲಾ, ಸುಸ್ತಾಗಿದ್ದರೆ ರೆಸ್ಟ್ ತಗೊಳ್ಳುವಂತೆ" ಅಷ್ಟು ಹೇಳಿದ್ದೆ ಸಾಕು ಎಂಬಂತೆ ನಿರ್ಮಲಾ ಎದ್ದಳು. ಕಾವೇರಮ್ಮ ಅಡಿಗೆಮನೆಯಿಂದ ಆಚೆಗೆ ಬರುವಷ್ಟರಲ್ಲಿ ನಿರ್ಮಲಾ ರೂಮನ್ನು ಸೇರಿದ್ದಳು.

"ಹೊಸದಾಗಿ ಮದುವೆಯಾದವರು, ಮೊದಲು ದೇವರಿಗಾದರೂ ನಮಸ್ಕಾರ ಮಾಡಬಾರದಾಗಿತ್ತೇ.. ಅವಳು ಹೇಗೋ ಏನೋ.... ಏನೂ ಮಾಡದಿರಬಹುದು. ಆದರೆ ಇವನು?..ಇವನೂ ಇವತ್ತಿನಿಂದಲೇ ಎಲ್ಲಾ ಬಿಟ್ಟನೋ ಏನೋ?" ಅಂತ ಅಂದು ಕೊಂಡಾಗ ಮನಸ್ಸು ಭಾರವಾಗಿತ್ತು.

ನಿರ್ಮಲೆಗೆ ರೆಸ್ಟ್ ತಗೊಳ್ಳುವಂತೆ ಹೇಳಿ, ರೂಮಿನ ಬಾಗಿಲನ್ನು ಮುಂದಕ್ಕೆ ಎಳೆದುಕೊಂಡು, ರಂಗನಾಥ ಹೊರಕ್ಕೆ ಬಂದಾಗ, ಸತ್ಯ ಹುಬ್ಬೇರಿಸಿದ.

ಏನಯ್ಯಾ? ಅವರೊಬ್ಬರನ್ನೇ ಬಿಟ್ಟು ಬಂದೆಯಾ? ಹೊಸ ಜಾಗ.... ಅವರಿಗೂ ಮುಜುಗರವಾಗ್ತ ಇರುತ್ತೆ, ನೀನು ಕಂಪೆನಿ ಕೊಡಬಾರದಾ? ನಾನಿನ್ನು ಬರ್ತೀನಪ್ಪಾ.."

"ಹೊಸ ಜಾಗವಾದರೇನು? ಅಡ್ಜಸ್ಟ್ ಮಾಡಿಕೋಬೇಕು ಅಲ್ವಾ? ಇವತ್ತಿನಿಂದಲೇ ಮಾಡಿಕೊಳ್ಳಲಿ ಬಿಡು. ನೀನು ಇನ್ನು ಸ್ವಲ್ಪ ಹೊತ್ತು ಇದ್ದು ಹೋಗು..ಸ್ವಲ್ಪ ಹೊತ್ತು ಮಾತನಾಡೋಣ"

"ನಾನೀಗ ಇಲ್ಲೇ ಕೂತರೆ, ನಿನ್ನ ಮಿಸೆಸ್ ನನ್ನನ್ನು ಬೈಕೋತಾರೆ ಅಷ್ಟೆ. ನಾನು ಬರ್ತೀನಪ್ಪಾ"

"ಇರಲಿ ಬಿಡೋ..ಈಗ ಅವಳು ರೆಸ್ಟ್ ತಗೊಳ್ಳಲಿ..ಈ ರಾತ್ರಿಯೆಲ್ಲಾ ನಮ್ಮದೇ ಅಲ್ವಾ?"

"ಓ...ಅದಾ ನಿನ್ನ ಯೋಚನೆ? ನಿನಗೀಗ ರೆಸ್ಟ್ ಬೇಡವಾ?"

"ಅಲ್ಲಿ ಇರುವುದು ಒಂದೇ ಮಂಚ, ಒಂದೇ ಹಾಸಿಗೆ, ಇಬ್ಬರಿಗೂ ಅಡ್ಜಸ್ಟ್ ಆಗಬೇಕಾದರೆ ಅವಳಿಗೆ ಸಮ್ಮತವಿರಬೇಕು..ಅವಳು ಏನಂದುಕೊಳ್ತಾಳೋ..?"

"ಓ..ಹೋ...ಹೋ...ಹಾಗಾ?" ಸತ್ಯ ಮತ್ತೆ ನಕ್ಕ. ರಂಗನಾಥ ಏನೋ ಆಲೋಚನೆಯಲ್ಲಿ ಮುಳುಗಿದಂತಿತ್ತು. ಮಧ್ಯೆ ಮಧ್ಯೆ ಬೇರೆ ಏನೇನೋ ಮಾತುಗಳನ್ನಾಡಿದರೂ, ಸತ್ಯ ಹೊರಡ್ತೀನಿ ಎಂದು ಎದ್ದು ನಿಂತಾಗ, ರಂಗನಾಥ ಕೈ ಕುಲಕಿ "ಥ್ಯಾಂಕ್ ಯೂ ವೆರಿಮಚ್ ಸತ್ಯ" ಎಂದು ಹೃದಯ ಪೂರ್ವಕವಾಗಿ ನುಡಿದ.

"ಇರಲಿ ಬಿಡಪ್ಪಾ. ಪರವಾಗಿಲ್ಲ ಎಂದು ಸತ್ಯ ರಂಗನಾಥನ ಬೆನ್ನು ತಟ್ಟಿ ವಿಶ್ವಾಸ ಸೂಚಿಸಿ, ಅವನಿಂದ ಬೀಳ್ಕೊಂಡ. ಅಷ್ಟು ಹೊತ್ತಿಗಾಗಲೇ ಸಾಯಂಕಾಲ ವಾಗುತ್ತಾ ಬಂದಿತ್ತು. ಅವನು ಆ ಕಡೆ ಹೋದ ಕೂಡಲೇ ರಂಗನಾಥ ಅಳುಕುತ್ತಾ ರೂಮಿನ ಬಾಗಿಲನ್ನು ಮೆಲ್ಲನೆ ದೂಡಿ ಒಳಗೆ ಅಡಿ ಇಟ್ಟ. ಮಂಚದ ಮೇಲೆ ಹಾಯಾಗಿ ಮಲಗಿ ನಿದ್ರಿಸುತ್ತಿದ್ದ ನಿರ್ಮಲೆಯನ್ನು ಕಂಡು ಹಾಗೇ ನಿಂತ. ನಿರ್ಮಲ ಬಟ್ಟೆ ಬದಲಾಯಿಸದೇ ಅದೇ ಹೊಸ ಸೀರೆಯನ್ನುಟ್ಟು ಮಲಗಿದ್ದಳು. ಅದೇ ಮೆರೂನ್ ಕಲರಿನ ಸೀರೆ. ಅವಳ ಮೈ ಬಣ್ಣಕ್ಕೆ ಚೆನ್ನಾಗಿ ಒಪ್ಪುತ್ತಿತ್ತು ಅವಳನ್ನೆ ನೋಡುತ್ತಾ ನಿಂತು ಬಿಟ್ಟ.

ಇಂತಹ ರೂಪಸಿ ನನ್ನ ಮಡದಿ., ಎಂಬ ಅಭಿಮಾನದಿಂದ ಅವನ ಹೃದಯ ತುಂಬಿ ಬಂತು. ಆ ಗಳಿಗೆಯಲ್ಲಿ ಅವಳನ್ನು ಅಪ್ಪಿ ಮುದ್ದಾಡುವ ಮನಸ್ಸಾಯಿತು. ಆದರೆ.. ಅವಳು ಏನಂದು ಕೊಳ್ಳುವಳೋ ಏನೋ... ನಾನು ಅವಳ ಗಂಡ ನಿಜ ಆದರೆ ಅವಳು? ಏನೂ ಅರಿಯದ ಚಿಕ್ಕವಯಸ್ಸಿನ ಹೆಣ್ಣಲ್ಲ. ನನ್ನ ಬಗ್ಗೆ ಕೆಟ್ಟ ಭಾವನೆಗಳು ಮೂಡಿದರೆ?ನನ್ನನ್ನು ಪಶು ಎಂದುಕೊಂಡರೆ?

ಅವಳೇ ಡಾಕ್ಟರು..ಅವಳಿಗೆ ಎಲ್ಲಾ ವಿಷಯದಲ್ಲಿಯೂ ತಿಳುವಳಿಕೆ ಇದೆ. ಯಾರೂ

ತಿಳಿಸಿಕೊಡಬೇಕಾಗಿಲ್ಲ. ಆದರೆ..ಅವಳು ತಾನಾಗಿಯೇ ನನ್ನ ಬಳಿಗೆ ಬರುತ್ತಾಳೆಯೇ....? ನಾನಾಗಿಯೇ ಹೇಗೆ ಕೇಳುವುದು? ತನ್ನಲ್ಲೇ ಆಲೋಚಿಸು ತ್ತಿದ್ದ. ಅಷ್ಟರಲ್ಲಿ ಮಗ್ಗುಲು ಬದಲಾಯಿಸಿದವಳು ಕಣ್ಣು ತೆರೆದು ನೋಡಿದಳು. ರಂಗನಾಥನನ್ನು ಕಂಡು ಎದ್ದು ಕುಳಿತಳು.

ಎಷ್ಟು ಹೊತ್ತಿಂದ ಹೀಗೇ ನಿಂತಿದಾನೋ...ಎನಿಸಿ ನಾಚಿಕೆ ಆವರಿಸಿತು.

"ನಿರ್ಮಲಾ ನಿದ್ದೆ ಬಂದಿತ್ತಾ?"

"ಹೂಂ ಸ್ವಲ್ಪ ಬಂದಹಾಗಿತ್ತು. ನೀವು ಮಲಗಲೇ ಇಲ್ವಾ?"

"ಇಲ್ಲ ಸತ್ಯ ಈಗ ತಾನೇ ಹೊರಟ..ನೀನು ಬಟ್ಟೆ ಬದಲಾಯಿಸಲೇ ಇಲ್ವಾ?ಹೊಸ ಸೀರೆಯಲ್ಲೇ ಮಲಗಿದೀಯಲ್ಲ?"

"ಟ್ಯಾಕ್ಸಿಯಿಂದ ಸೂಟ್‌ಕೇಸನ್ನು ಇಳಿಸಿ. ಎಲ್ಲಿಟ್ಟರು ಅಂತ ಗೊತ್ತಾಗ್ಲಿಲ್ಲ. ಹಾಗೇ ಮಲಗಿಬಿಟ್ಟೆ. ನಿಮ್ಮದೇ ತಾನೇ ಈ ಮಂಚ ಈ ಹಾಸಿಗೆ?"

"ಹೌದು.. ಯಾಕೆ?"

"ಅದ್ಸರಿ..ಇಷ್ಟು ಚಿಕ್ಕ ಮಂಚ.ಇಬ್ಬರಿಗೆಲ್ಲಿ ಸಾಕಾಗುತ್ತೆ? ಹಾಲಿನಲ್ಲಿರುವ ಮಂಚಾನು ತಂದು ಜೊತೆಗೆ ಹಾಕಿದರೆ ಇಬ್ಬರಿಗೂ ಆಗುತ್ತೆ?"

ರಂಗನಾಥನಿಗೆ ಆ ಮಾತು ಸರಿ ಎನಿಸಲಿಲ್ಲ.

"ಆ ಮಂಚವನ್ನು ತಂದು ಇಲ್ಲಿ ಹಾಕಿ ಬಿಟ್ಟರೆ, ಅಮ್ಮ ಹೇಗೆ ಮಲಗ್ತಾಳೆ? ಅಲ್ಲದೇ ಎರಡು ಮಂಚಕ್ಕೆ ಈ ರೂಮಿನಲ್ಲಿ ಜಾಗವಿಲ್ಲ. ನಮ್ಮ ಮನೆ ಚಿಕ್ಕದು. ರೂಮು ಚಿಕ್ಕದು..ಮಂಚ ಚಿಕ್ಕದು..ಆದರೆ ನನ್ನ ಮನಸ್ಸು ಚಿಕ್ಕದಲ್ಲ.."ಅವಳನ್ನೇ ನೋಡುತ್ತಾ ಕಿರುನಗೆ ನಕ್ಕ.

"ಈ ಮಾತನ್ನು ನೀವೇ ಹೇಳಿಕೋ ಬಾರದು. ನಾನು ಹೇಳಬೇಕು.."

"ಹೌದು, ಹೌದು, ಹೋಗಲಿ ಈ ಮಂಚಾನ ಹೊರಗೆ ಹಾಕಿ ಬಿಡೋಣ. ಆ ಮಂಚ ಇನ್ನೂ ಸ್ವಲ್ಪ ಅಗಲವಾಗಿದೆ. ಅದನ್ನು ಇಲ್ಲಿಗೇ ತಂದು ಹಾಕಿ ಬಿಡೋಣ. ಸತ್ಯ ಇದ್ದಾಗಲೇ ಗೊತ್ತಾಗಿದ್ದರೆ ಚೆನ್ನಾಗಿತ್ತು. ನನ್ನ ಒಬ್ಬನೇ ಕೈಲಿ ಆಗುಲ್ಲ. ಇಲ್ಲೇ ಹೋಗ್ತಿರ್‍ತಾನೆ. ಬೇಗ ಹೋಗಿ ಕರೆದುಕೊಂಡು ಬಂದುಬಿಡ್ತೀನಿ" ಎನ್ನುತ್ತಾ ಆಚೆಗೆ ಬಂದು ಸ್ಕೂಟರನ್ನು ಸ್ಟಾರ್ಟ್ ಮಾಡಿದ. ತನ್ನ ಕೈಲಿ ಆಗದ ಕೆಲಸ ಎಂದು ಕೊಂಡು ನಿರ್ಮಲ ಸುಮ್ಮನಿದ್ದಳು.

ತಾಯಿಗೆ ಯಾವ ವಿಷಯವೂ ಗೊತ್ತಿಲ್ಲದೇ, ಸುಮ್ಮನೇ ಇಣುಕಿ ನೋಡಿದಳು. ಆನತಿ ದೂರದಲ್ಲೇ ನಡೆದು ಹೋಗುತ್ತಿದ್ದ ಸತ್ಯನನ್ನು ಸಮೀಪಿಸಿ ಸ್ಕೂಟರ್ ನಿಲ್ಲಿಸಿದ. ಸತ್ಯ ಇತ್ತ ತಿರುಗಿದ.

"ಏನಯ್ಯಾ... ಹೆದರಿ ಓಡಿ ಬಂದ ಹಾಗಿದೆ? ಏನು ಮಾಡಿದೆ?"ಎಂದು ಸ್ನೇಹಿತ ತಮಾಷೆಯಿಂದ ಕೇಳಿದ.

"ಏನಿಲ್ಲಪ್ಪಾ.."ಎನ್ನುತ್ತಾ ಮಂಚದ ವಿಚಾರ ತಿಳಿಸಿದ.

"ಓ..ಅಷ್ಟೇನಾ? ನೀವೇ ಇಬ್ಬರು ಇದ್ದಿರಲ್ಲ..?" ಎಂದು ಹೇಳ ಹೊರಟವನು ಹಾಗೇ ಸುಮ್ಮನಾದ. ನಿರ್ಮಲೆಯ ಕಾಲು ನೆನಪಾಗಿತ್ತು.

"ಅಯ್ಯಪ್ಪಾ ಬರ್ತೀನಿ, ಈಗಲೇ ಬರಲೋ, ಆಮೇಲೆ ಬರಲೋ? ಮನೆಗೆ ಹೋಗಿ

ದೀಪ ಹಾಕಿ ಬರ್ತೀನಿ. ಕತ್ತಲಾಗ್ತಾ ಬಂದಿದೆ. ನೀನೂ ಬರೋದಾದ್ರೆ ಬಾ.. ಹಾಗೇ ಹೋಗಿ ಮಾರ್ಕೆಟ್ಟಿನಲ್ಲಿ ಒಂದಿಷ್ಟು ಹೂವು ಹಣ್ಣು ಕೊಂಡು ತರೋಣ. ಇವತ್ತು ನಿನ್ನ ಫಸ್ಟ್ ನೈಟ್ ಸ್ವಲ್ಪ ರಸಿಕತನ ತೋರಿಸು."

" ಹುಂ ಆಡು..ಆಡು.. ಎಷ್ಟಾಗಲೀ ನೀನು ಅನುಭವಸ್ಥ"

"ಇದಕ್ಕೆ ಅನುಭವ ಏಕೆ? ಎಲ್ಲಾ ತಾನಾಗಿಯೇ ತಿಳಿಯುತ್ತೆ. ನಿನಗೂ ನನ್ನಷ್ಟೆ ವಯಸ್ಸಾಗಿದೆ. ಆದರೆ ಮದುವೆ ಲೇಟು ಅಷ್ಟೇ. ಒಂಥರಕ್ಕೆ ಒಳ್ಳೆಯದೇ ಬಿಡು. ಇಲ್ಲದಿದ್ದರೆ. ನಿನಗೂ ಇಷ್ಟು ಹೊತ್ತಿಗೆ ಎರಡು ಮಕ್ಕಳಾಗಿರುತ್ತಿದ್ದವು." ರಂಗನಾಥ ಸ್ನೇಹಿತನ ಕಡೆ ನೋಡಿ ಮುಗುಳ್ನಕ್ಕ.

"ಯಾಕಯ್ಯಾ..ಇವತ್ತು ನಿನ್ನ ಹೆಂಡತಿ ನೆನಪಿಗೆ ಬರ್ತಿದಾರಾ?"

"ಇಲ್ಲಪ್ಪಾ ಇಲ್ಲ. ಎರಡು ತಿಂಗಳಿನಿಂದ ಹಾಯಾಗಿದೀನಿ"

"ನಿನ್ನ ಮಾತು ಕೇಳ್ತಾ ಇದ್ರೆ ಆಯ್ತು. ನಡೀ ಬೇಗ" ಎನ್ನುತ್ತಾ ಅವನನ್ನು ಸ್ಕೂಟರ್‌ನಲ್ಲಿ ಕೂರಿಸಿಕೊಂಡು, ಅವರ ಮನೆ ಕಡೆ ನಡೆದ.

ನಿರ್ಮಲೆಯನ್ನು ಆಚೆ ವೆರಾಂಡದಲ್ಲಿ ಕೂರುವಂತೆ ಹೇಳಿ, ಇಬ್ಬರಿಗೂ ಸೇರಿ ಮಂಚವನ್ನು ಹಾಸಿಗೆಯನ್ನು ಬದಲಿಸಿದರು. ಒಗೆದ ಮಗ್ಗುಲು ಹಾಸಿಗೆಗಳನ್ನು ಹಾಕಿ, ಹೊದೆಯುವ ಬ್ಲಾಂಕೆಟ್‌ಗಳನ್ನು ತೆಗೆದಿಟ್ಟ. ಸತ್ಯ ಉತ್ಸಾಹದಿಂದ ಹೂ ಮಾಲೆಯನ್ನು ಮಂಚಕ್ಕೆ ಇಳಿ ಬಿಡಲು ಹೋದಾಗ ರಂಗನಾಥ ತಡೆದಿದ್ದ.

"ಇದೆಲ್ಲಾ ಬೇಡಪ್ಪಾ... ನಿರ್ಮಲ ಏನಂದು ಕೊಳ್ತಾಳೋ...?"

"ಏನೂ ಅಂದ್ಕೊಳ್ಳಲ್ಲ. ಹೆಂಗಸರು ಬಾಯಿಬಿಟ್ಟು ಹೇಳದಿದ್ರೂ ಇದನ್ನೆಲ್ಲ ಎಕ್ಸ್‌ಪೆಕ್ಟ್ ಮಾಡ್ತಾರೆ. ನಾನು ನಿನಗಿಂತ ಸೀನಿಯರ್. ನನ್ನ ಮಾತು ಕೇಳು" ಎಂದ. ಕಾವೇರಮ್ಮ ಕುಳಿತಲ್ಲಿಂದಲೇ ಎಲ್ಲಾ ಗಮನಿಸುತ್ತಿದ್ದಳು. ಊಟದ ಸಮಯವಾಗುತ್ತಾ ಬಂದಿತ್ತು ಸತ್ಯನನ್ನೂ ಊಟಕ್ಕೆ ಎಬ್ಬಿಸಿದರು. ಸಿಹಿ ಅಡಿಗೆ ಬಡಿಸಿದರು. ಬೆಳಗಿನ ಹೋಟೆಲ್ಲಿನ ಊಟಕ್ಕಿಂತ ಇದು ಚೆನ್ನಾಗಿದೆ ಎಂದು ಹೊಗಳುತ್ತಾ ಸತ್ಯ ಚೆನ್ನಾಗಿ ಉಂಡ. ನಿರ್ಮಲ ಏನೋ ಆತಂಕದಿಂದುಂಡ ಶಾಸ್ತ್ರ ಮಾಡಿದಳು. ರಂಗನಾಥ ಸಹ ಉಪಚಾರ ಮಾಡಲಿಲ್ಲ.

ಹೊತ್ತಾಯಿತೆಂದು ಸತ್ಯ ಹೊರಟ. ಅವನ ಹಿಂದೆ ಗೇಟಿನ ತನಕ ಬೀಳ್ಕೊಡಲೆಂದು ರಂಗನಾಥ ಬಂದ. "ಗುಡ್‌ನೈಟ್" ಎಂದು ಹೇಳಿದನು, ಹನಿಮೂನ್‌ಗೆ ಹೋಗುವ ಪ್ಲಾನ್ ಇದೆಯಾ? ಅಂತ ಕೇಳಿದ.

"ನಾನು ಆ ಬಗ್ಗೆ ಯೋಚಿಸಿಲ್ಲಪ್ಪಾ. ಅವಳು ಆಸೆಪಟ್ಟರೆ ಹೋಗಿ ಬರುವ ಯೋಚನೆ ಮಾಡಿದರಾಯ್ತು."

"ಅವರಾಗಿಯೇ ಏನೂ ಕೇಳುಲ್ಲ. ನೀನಾಗಿಯೇ ಕೇಳಬೇಕು. ಅಲ್ಲದೇ, ನಿನ್ನ ಮನೆಗೆ, ಮದುವೆಯಾಗಿ ಕರೆತಂದಿದೀಯ...ಅವರನ್ನು ನೀನು ಮೆಚ್ಚಿಸಬೇಕು." ಎಂದು ಸ್ನೇಹಿತನ ಕೈಕುಲುಕಿ, ಮತ್ತೊಮ್ಮೆ ಶುಭವನ್ನ ಹಾರೈಸಿ, ಇವನ ಸ್ಕೂಟರಿನಲ್ಲೇ ಹೊರಟ.

ರಂಗನಾಥ ಒಳಗೆ ಬಂದಾಗ ತಾಯಿ ತಟ್ಟೆಗಳನ್ನು ತೆಗೆದು ಗೋಮಯ ಹಚ್ಚುತ್ತಿದ್ದುದನ್ನು ಕಂಡು ಕಷ್ಟವಾಯಿತು. "ಸತ್ಯನನ್ನು ಕಳಿಸಿ ಬಂದು, ನಾನು ಎಲ್ಲಾ ತೆಗೀತಿದ್ದೆ..ನೀನ್ಯಾಕೆ ಮಾಡೋಕೆ ಹೊರಟೆ?" ರೇಗಿದ.

"ಇರಲಿ ಬಿಡೋ. ಮದು ಮಕ್ಕಳು..ನೀವೇಕೆ ಎಂಜಲು ತಟ್ಟೆ ತೆಗೆದು ತೊಳೆಯ ಬೇಕು? ಒಲೆ ಹತ್ತಿರ ಎರಡು ಲೋಟಗಳಲ್ಲಿ ಹಾಲು ಹಾಕಿಟ್ಟಿದೀನಿ. ಅದು ನಿಮ್ಮಿಬ್ಬರಿಗೆ. ಬೆಳಗಿನಿಂದ ತಿರುಗಾಡಿ ಸುಸ್ತಾಗಿರಬೇಕು. ಮಲಕ್ಕೊ ಹೋಗು"

ಒಂದು ಗಳಿಗೆ ತಾಯಿಯ ಕಡೆ ನೋಡಿದ. ಅವಳು ಇವನ ಕಡೆ ನೋಡುತ್ತಿರ ಲಿಲ್ಲ. ಅಡಿಗೆ ಮನೆಗೆ ಬಂದು, ಹಾಲಿನ ಲೋಟಗಳನ್ನು ಎತ್ತಿಕೊಂಡು ರೂಮಿಗೆ ನಡೆದ.

"ನಿನ್ನ ಊಟ ಆಯ್ತು." ಎಂದು ಮಗ ಕೇಳಲಿಲ್ಲವೆಂದು ಮನಸ್ಸು ಪೆಚ್ಚಾಯಿತು. ಹೆಂಡತಿ ಬಂದಳು. ನಾನ್ಯಾವ ಲೆಕ್ಕ..ಎಂದು ಕೊಂಡು ಮುಂದಿನ ಕೆಲಸಗಳನ್ನು ನೋಡಿದಳು.

ಸತ್ಯ ರಂಗನಾಥ ಮಾತನಾಡುತ್ತಿದ್ದಾಗ, ನಿರ್ಮಲ ಬಟ್ಟೆ ಬದಲಾಯಿಸಿದಳು. ನಿರ್ಮಲೆಯ ಕೈಗೆ ಹಾಲಿನ ಲೋಟವನ್ನಿತ್ತು ನಗುತ್ತಾ ಹೇಳಿದ

"ಇದು ನಿನ್ನ ಕೆಲಸ, ಅದನ್ನ ನಾನು ಮಾಡ್ತಿದ್ದೀನಿ"

"ಅಂದ್ರೆ...."

"ಇದು ನಮ್ಮ ಫಸ್ಟ್ ನೈಟ್..ನೀನು ಹಾಲು ತಂದು ನನಗೆ ಕುಡಿಸ ಬೇಡವೇ?" ಮತ್ತೆ ನಗುತ್ತಾ ನುಡಿದ...ಅದೇ ಪದ್ಧತಿ ತಾನೇ...?"

" ಯಾರೋ ಮಾಡಿದರಾಯ್ತು. ನಾವು ಎಲ್ಲಾದನ್ನು ಪದ್ಧತಿ ಪ್ರಕಾರವೇನೂ ಮಾಡ್ತಿಲ್ಲವಲ್ಲ?"

"ಅದ್ಸರಿ ಶಾಸ್ತ್ರ, ಮಂತ್ರ, ಓಲಗ ಸದ್ದು ಗದ್ದಲವಿಲ್ಲದೇ ಮದುವೆ ಆದವರು ನಾವು. ಆದರೆ, ಮದುವೆ ಹೇಗೇ ಆದರೂ ಸರಿ, ಗಂಡ ಹೆಂಡತಿ ಸಂಬಂಧ ಮಾತ್ರ ಒಂದೇ ರೀತಿ ತಾನೇ...?"

"ಅಂದ್ರೇ...?"

"ಸುಮ್ಮನೇ ಅಂದ್ರೆ....ಅಂದ್ರೇ... ಅಂತ ಕೇಳಿ ಕೇಳಿ ಟೈಂ ವೇಸ್ಟ್ ಮಾಡ್ತಾ ಇದೀಯ.. ಈ ಹಾಲು ಕುಡಿದು ಬಿಡು. ಬೇಗ ಮಲಗೋಣ."

"ನನಗೆ ಹಾಲು ಸೇರುಲ್ಲ. ನೀವೇ ಕುಡಿದು ಬಿಡಿ."

"ಹಾಗೆನ್ನ ಬೇಡ ನಿರ್ಮಲಾ.. ಇವತ್ತೊಂದು ದಿನ ಕುಡಿದು ಬಿಡು. ಅಮ್ಮ ಪ್ರೀತಿಯಿಂದ ಕೊಟ್ಟಿದಾಳೆ"

" ನಿಮ್ಮಮ್ಮನಿಗೋಸ್ಕರ ಕುಡಿಯಲೇ ಬೇಕಾ? ನನಗೆ ಸ್ವಲ್ಪವೇ ಸಾಕು" ಎನ್ನುತ್ತಾ ಉಳಿದ ಹಾಲನ್ನು ಅವನಿಗೇ ಕೊಟ್ಟುಬಿಟ್ಟಳು. ಬಲವಂತದಿಂದ ಎಲ್ಲಾ ಹಾಲನ್ನು ಗಟಗಟನೆ ಕುಡಿದು, ಲೋಟಗಳನ್ನು ಎತ್ತಿ ಒಂದು ಕಡೆ ಇಟ್ಟು ಬಂದು, ಮಡದಿಯ ಪಕ್ಕ ಕುಳಿತ.

"ನಿರ್ಮಲಾ ಎನನ್ನಿಸುತ್ತೆ?" ಅನುಮಾನಿಸುತ್ತಾ ಕೇಳಿದ.

"ಏನನ್ನಿಸಬೇಕು?" ಮರುಪ್ರಶ್ನೆ ಹಾಕಿದಳು.

"ಹೊಸ ಜಾಗ, ಹೊಸ ಜನ, ಪರಿಸರ ಹೇಗನ್ನಿಸುತ್ತೆ ಅಂತ ಕೇಳಿದೆ, ಬೇಜಾರೇನಾಗ್ತಾ ಇಲ್ಲವಲ್ಲ?"

"ಒಂಥರಾ ಬೇಜಾರೇ..ಈ ಮನೆಗೆ ಬಂದಾಗಿನಿಂದ ಒಬ್ಬಳೇ ಈ ರೂಮಿನಲ್ಲಿ

ದೀನಿ. ನಿಮ್ಮ ಫ್ರೆಂಡ್‌ಗೆ ಅಷ್ಟು ತಿಳಿಯಬೇಡವಾ?"

"ಸಾರಿ. ನಿರ್ಮಲಾ..ಅವನನ್ನೂ ಬಲವಂತವಾಗಿ ಉಳಿಸಿಕೊಂಡವನು ನಾನೇ. ಅವನ ಹೆಂಡತೀನೂ ತವರಿಗೆ ಹೋಗಿದ್ದಾಳೆ. ಮನೇಲಿ ಅವನೊಬ್ಬನೇ. ಅವನು ನನ್ನ ಒಡಹುಟ್ಟಿದವನಿಗಿಂತ ಹೆಚ್ಚು...ಹೋಗಲಿ ಬಿಡು. ಈಗ ನಾನು ಬಂದಿದೀನಲ್ಲ. ಇದುವರೆಗಿನ ನಿನ್ನ ಬೇಜಾರೆಲ್ಲಾ ಕಳೆದು ಹೋಗುತ್ತೆ"ಎನ್ನುತ್ತಾ ಅವಳನ್ನು ಬಳಸಿ ತನ್ನೆಡೆಗೆ ಎಳೆದುಕೊಂಡ.

ನಿರ್ಮಲ ಕೊಸರಿ ಕೊಳ್ಳದೇ ಸುಮ್ಮನಿದ್ದುದನ್ನು ಗಮನಿಸಿ ಉತ್ತೇಜನ ಗೊಂಡು, ಅವಳ ಮುಖವನ್ನು ತನ್ನೆಡೆಗೆ ತಿರುಗಿಸಿಕೊಂಡ. ಅವಳ ನಾಚಿಕೆ ಯಿಂದ ಕಣ್ಣುಗಳನ್ನೂ ಮುಚ್ಚಿಕೊಂಡಳು.

"ಅರೇ...ನಿನಗೆ ನಾಚಿಕೇನಾ? ಒಂದು ಕ್ಷಣದಲ್ಲಿ ನಾಚಿಕೆಯನ್ನು ದೂರ ಮಾಡಿಬಿಡ್ತೀನಿ" ಎನ್ನುತ್ತಾ, ಅವಳನ್ನು ಬಿಗಿಯಾಗಿ ಅಪ್ಪಿಕೊಂಡ. ಅವನ ಬಿಗಿ ಅಪ್ಪುಗೆಯಲ್ಲಿ ನಿರ್ಮಲ ಬಿಸಿಯಾದಳು. ಅವನಿಗೆ ಒತ್ತಿಕೊಂಡು ಅಪ್ಪುಗೆಯನ್ನು ಇನ್ನು ಬಿಗಿಗೊಳಿಸಿದಳು.

ಡಾಕ್ಟರಾದವಳು, ಎಲ್ಲಾ ತಿಳಿದುಕೊಂಡಿರುವವಳು, ವಯಸ್ಸಿನಲ್ಲೂ ಚಿಕ್ಕ ವಳೇನಲ್ಲ, ನನ್ನನ್ನು ವಿರೋಧಿಸಿ, ದೂರ ಮಾಡಿ ನನ್ನ ಭಾವನೆಗಳನ್ನು ಘಾಸಿ ಗೊಳಿಸಿದರೆ ಏನು ಮಾಡುವುದು ಎಂದು ಚಿಂತಿಸಿದ್ದವನಿಗೆ, ಅವಳ ಆಶ್ಚರ್ಯ ಗೊಳಿಸಿತು. ಸಂತಸವನ್ನು ಉಂಟುಮಾಡಿತು. ಪರವಾಗಿಲ್ಲ ಮದುವೆ ಅರ್ಥವನ್ನು ಚೆನ್ನಾಗಿ ತಿಳಿದುಕೊಂಡಿದಾಳೆ ಎಂದುಕೊಂಡ.

ತಾನು ಕುಮಾರಿಯಾಗಿಯೇ ಜೀವಮಾನ ಕಳೆಯ ಬೇಕಾಗಬಹುದೇನೋ ಎಂದು ಕೊಂಡಿದ್ದವಳಿಗೆ, ತಾನು ಮನಸಾರೆ ಮೆಚ್ಚಿ ಮಂದುವೆಯಾದವನನ್ನೂ, ಮೊದಲ ರಾತ್ರಿ ದೂರ ಮಾಡುವ ಮನಸ್ಸೇನೂ ಇರಲಿಲ್ಲ. ಗಂಡನ ತೋಳ್ತೆಕ್ಕೆ ಯಲ್ಲಿ ಹೊಸ ಹೊಸ ಅನುಭವಗಳನ್ನು ಸವಿದಳು. ಯಾವ ಬೇರೆ ಚಿಂತೆಯೂ ಇಲ್ಲದೇ, ಮಧುರ ಭಾವನೆಗಳಿಂದ ನವ ದಂಪತಿಗಳು ಒಂದಾದರು. ಯಾವ ಸಂಕೋಚವೂ ಇಲ್ಲದೇ ಗಂಡನ ತೋಳ್ತೆಕ್ಕೆಯಲ್ಲಿ ಮಲಗಿದ್ದವಳು ಲಲ್ಲೆ ಗೆರೆಯುತ್ತಾ ಕೇಳಿದಳು.

"ನಾವು ಹನಿ ಮೂನ್‌ಗೆ ಹೋಗೋಣ್ವಾ?" ಮಡದಿಯ ಮುದ್ದು ಮಾತಿಗೆ ಮರುಳಾಗಿ ಹೂಂ ಗುಟ್ಟಿದ. ತಕ್ಷಣ ಕೇಳಿದಳು

"ಯಾವಾಗ ಹೋಗೋಣ? ನಾಳೇನೇ ಹೋಗೋಣ್ವಾ?"

"ಈ ಮುಂಚೇನೇ ಪ್ಲಾನ್ ಮಾಡಿಕೊಂಡಿದ್ರೆ, ನಾಳೆ ಹೋಗಬಹುದಾಗಿತ್ತು. ಅಲ್ಲದೇ ಭಾನುವಾರ ನನ್ನ ಫ್ರೆಂಡ್ಸ್‌ಗೆಲ್ಲಾ ಪಾರ್ಟಿ ಕೊಡ್ತಿದೀನಿ"

"ಹೌದಾ, ನನಗೆ ಹೇಳಿರಲೇ ಇಲ್ಲ?"

" ಈಗ ಹೇಳ್ತಿದೀನಲ್ಲ. ನಿನ್ನ ಸ್ನೇಹಿತರು, ನಿನಗೆ ಬೇಕಾದವರನ್ನು ಕರಿಯುವುದಾದರೆ ಕರಿ"

"ನನಗಂತಹವರು ಯಾರೂ ಇಲ್ಲ. ನಾನು ಯಾರನ್ನೂ ಕರೆಯಲ್ಲ."

"ಈಗಾಗ್ಲೇ ತುಂಬಾ ಹೊತ್ತಾಗಿರಬಹುದು. ಬೆಳಿಗ್ಗೆ ಮಾತನಾಡೋಣ ಎಂದು ಮಡದಿಯ ಕೆನ್ನೆ ತಟ್ಟಿ ನುಡಿದು, ಈಗ ಮಲಕ್ಕೋ ನಿದ್ದೆ ಮಾಡು" ಎಂದ.

ಬೆಳಿಗ್ಗೆ ಎಚ್ಚರವಾದಾಗ, ಮಗ್ಗುಲಲ್ಲಿ ಮಲಗಿದ ಮಡದಿಯನ್ನು ಒಲುಮೆ ಯಿಂದ ನೋಡಿದ. ರಾತ್ರಿ ಅವಳು ಹನಿಮೂನ್‌ಗೆ ಹೋಗೋಣ ಎಂದು ಕೇಳಿದ ಮಾತು ನೆನಪಾಯಿತು. ಕೆಲವು ಸಲ ಚಿಕ್ಕ ಹುಡುಗಿಯ ತರಹ ಆಡಿಬಿಡ್ತಾಳೆ ಎಂದು ತನಗೆ ತಾನೇ ಹೇಳಿಕೊಂಡ.

ಸಕ್ಕರೆ ನಿದ್ದೆಯಲ್ಲಿರುವವಳನ್ನೇಕೆ ಎಬ್ಬಿಸುವುದೆಂದುಕೊಂಡು, ತಾನು ಮಾತ್ರ ಎದ್ದು ಆಚೆಗೆ ಬಂದ. ತಾಯಿಯಾಗಲೇ, ಬೆಳಗಿನ ಮನೆ ಕೆಲಸಗಳಲ್ಲಿ ತೊಡಗಿದ್ದಳು. ಅಲ್ಲಿಯೇ ಕುಳಿತು, ತನ್ನ ಪಾಡಿಗೆ ತಾನೇ ಆಟ ಆಡುತ್ತಿದ್ದ ಮನೋಜನನ್ನು ಎತ್ತಿ ಮುದ್ದಾಡಿದ.

ತಾನು ಸ್ನಾನ ಮಾಡಿ. ಕಾಫಿ ಕುಡಿದು, ಇನ್ನು ಎದ್ದಿರದೇ ಇದ್ದ ನಿರ್ಮಲೆಯನ್ನು ಎಬ್ಬಿಸಲು ಬಂದ.

"ಗುಡ್ ಮಾರ್ನಿಂಗ್ ಮೇಡಂ, ಬೆಡ್ ಕಾಫಿ ಕುಡೀತೀರಾ?" ಕಣ್ಣಿಗೆ ಕೈ ಮರೆಮಾಡಿ ಮಲಗಿದ್ದವಳನ್ನು ಕೇಳಿದ.

"ಬೆಳಗಾಗಿ ಹೋಯ್ತಾ? ಏಳುಕ್ಕೇ ಇಷ್ಟವಾಗ್ತಿಲ್ಲ" ಎಂದಳು ನಿದ್ದೆಯ ಮಂಪರಿನ ಧ್ವನಿಯಲ್ಲಿ.

ಏಳಿ ಮೇಡಂ, ಏಳೂವರೆಯಾಗಿ ಹೋಗಿದೆ. ಹೀಗೇ ಅಭ್ಯಾಸವಾಗಿ ಹೋದ್ರೆ, ಕ್ಲಿನಿಕ್ ಬಾಗಿಲನ್ನು ತಡವಾಗಿ ತೆಗೆಯ ಬೇಕಾಗುತ್ತೆ"

"ಕ್ಲಿನಿಕ್ ಅನ್ನೂತ್ಲೇ ನೆನಪಿಗೆ ಬಂತು" ಎನ್ನುತ್ತಾ ಎದ್ದು ಕುಳಿತಳು. "ಒಂದು ವಾರಕ್ಕಿಂತ ಹೆಚ್ಚು ಕ್ಲಿನಿಕ್‌ನ ಮುಚ್ಚುವುದು ಸರಿಯಲ್ಲ. ಡಿ.ಪಿ.ಟಿ., ಪೋಲಿಯೋ ಡ್ರಾಪ್ಸ್ ಕೊಡಬೇಕಾದ ಮಕ್ಕಳಿಗೆ ತೊಂದರೆ ಆಗುತ್ತೆ"

"ಆಯ್ತು, ಕ್ಲಿನಿಕ್..ಅಲ್ಲೇ ಸದಾ ಕಾಲ ಕಳೆಯುವವರಿಗೆ ಅದೇ ಚಿಂತೆ. ಈಗ ಅದನ್ನೆಲ್ಲ, ಒಂದು ವಾರ ಮರೆತು ಜಾಲಿಯಾಗಿದ್ದು ಬಿಡು, ಭಾನುವಾರ ಪಾರ್ಟಿ, ಆಮೇಲೆ ಹನಿಮೂನ್, ಆಮೇಲೆ ಅಲ್ಲಿಂದ ಬಂದ್ಮೇಲೆ ಕ್ಲಿನಿಕ್. ರೈಟ್?" ಎಂದ ಅವಳನ್ನು ಓಲೈಸುತ್ತಾ. ಅವಳು ಕಣ್ಣರಳಿಸಿದಳು.

ನಾಳೆಗೆ ಅವರನ್ನೆಲ್ಲಾ ನಾನೇ ಕರೆದು ಬರಬೇಕು..ಅಮ್ಮನಿಗೆ ಒಂದಿಷ್ಟು ಹೆಲ್ಪ್ ಮಾಡಬೇಕು ತನಗೇ ಎಂಬಂತೆ ಹೇಳಿಕೊಂಡ. ಅವಳು ಯಾವ ಉತ್ಸಾಹವನ್ನು ತೋರಿಸಲಿಲ್ಲ. ಸುಮ್ಮನಾದ.

ಹೊಸ ಜಾಗ, ಹೊಂದಿಕೊಳ್ಳಲು ಅವಳಿಗೆ ತುಂಬಾ ಸಮಯ ಬೇಕಾಗ ಬಹುದು, ಎಷ್ಟಾಗಲೀ ಅವಳು ಬೆಳೆದ ಪರಿಸರವೇ ಬೇರೆ ಎಂದುಕೊಂಡ. ಅವನೊಡನೆಯೇ ಎದ್ದು ಬಂದವಳಿಗೆ, ಮನೆಯ ಪರಿಚಯವನ್ನು ಮಾಡಿಕೊಡುವ ಅಗತ್ಯವೇನಿಲ್ಲ ಅಂತ ಅನ್ನಿಸಿದರೂ, ಅವಳಿಗೆ ಸಹಾಯಬೇಕಿತ್ತು. ನಿರ್ಮಲಾ ಸ್ನಾನ ಮಾಡಿ ಬರುವ ವರೆಗೂ ಕಾದಿದ್ದು. ಇಬ್ಬರೂ ಒಟ್ಟಿಗೇ ತಿಂಡಿ ಕಾಫಿಯನ್ನು ಮುಗಿಸಿದರು. ಅವನು ಹೊರಗೆ ಹೊರಟಾಗ, ನಿರ್ಮಲಾ ಯಾವ ಸಂಕೋಚವಿಲ್ಲದೇ ಹೇಳಿದ್ದಳು. "ನಾನೂ ಬರ್ತೀನಿ ನನಗೆ ಇಲ್ಲಿ ಬೇಜಾರಾಗುತ್ತೆ" ಅಂತ.

"ಬೇಡ ನುರ್ಮಲಾ, ನಾನು ಮೊದಲು ಬುಕಿಂಗ್ ಆಫೀಸಿಗೆ ಹೋಗಿ, ಆಮೇಲೆ ಕಾಲೇಜಿಗೆ ಹೋಗಿ ಬರ್ತೀನಿ."

"ಯಾಕೆ ? ಅಲ್ಲಿಗೆಲ್ಲಾ ನನ್ನನ್ನು ಕರಕೊಂಡು ಹೋಗುಕ್ಕೆ ಇಷ್ಟವಿಲ್ವಾ?"

"ಅದೆಲ್ಲಾ ಅಲ್ಲ, ನಾನು ಬೇಗ ಹೋಗಿ ಬಂದು ಬಿಡ್ತೀನಿ"

ಅವಳಿಗೆ ನಿರಾಸೆಯಾಯ್ತು. ತನ್ನನ್ನು ಕರೆದುಕೊಂಡು ಹೋಗಿ ಸುತ್ತಾಡಲು ಅವನಿಗೆ ಇಷ್ಟವಿಲ್ಲದಿರಬಹುದೇನೋ ಎಂದು ಕೊಂಡಳು. ಎದ್ದು ರೂಮ್ ಸೇರಿಕೊಂಡಳು.

ರೂಮಿನಲ್ಲೇ ಕೂತು ಏನ್ಮಾಡ್ತೀಯ? ಹೊರಗೆ ಬಂದು ಅಮ್ಮನ ಜೊತೆ ಮಾತಾಡ್ತಾ ಇರು. ಮನೋಜನ್ನ ಆಡಿಸ್ತಾ ಇರು. ಎಂದು ಹೇಳುವ ಮನಸ್ಸಾದರೂ, ಅವಳ ಮನಸ್ಸಲ್ಲಿ ಏನಿದೆಯೋ ಅಂತ ಅನ್ನಿಸಿ ಸುಮ್ಮನಾದ. ಅವಳ ಮುಂದೆ ನಾಲ್ಕೈದು ಮ್ಯಾಗ್ಜೈನ್ಸ್‌ಗಳನ್ನು ಹಾಕಿ ಬೇಗ ಬಂದು ಬಿಡ್ತೀನಿ ಎಂದು ಅವಳ ಕೆನ್ನೆ ತಟ್ಟಿದ. ಅವನು ವಾಪಸ್ಸು ಬರುವವರೆಗೂ ಅವಳು ಹೊರಗೇ ಬರಲಿಲ್ಲ. ಇದು ಕಾವೇರಮ್ಮನ ಗಮನಕ್ಕೆ ಬಂದಿತಾದರೂ,"ನನಗೆ ಗೊತ್ತಿತ್ತು ಇದು ಹೀಗೇ ಆಗುತ್ತೆ ಅಂತ. ನಮಗೂ ಅವಳಿಗೂ ಎಲ್ಲಿಸರಿಹೋಗುತ್ತೆ" ಎಂದು ಆಕೆ ಒಂದೇ ದಿನದಲ್ಲಿ ನಿರ್ಣಯಿಸಿದ್ದರು. ನಿತ್ಯದ ಕೆಲಸ ಕಾರ್ಯಗಳಲ್ಲಿ ಆಕೆಗೆ ಸಮಯ ಕಳೆಯುವುದು ಕಷ್ಟವೇನಲ್ಲ. ಎಲ್ಲಾ ಕೆಲಸಗಳನ್ನು ಮುಗಿಸಿ ಕೊಂಡು ರಂಗನಾಥ ಬಂದ. ಬಾಗಿಲನ್ನು ತೆಗೆದವಳು ತಾಯಿಯೇ, ಇಬ್ಬರೂ ಒಬ್ಬರನ್ನೊಬ್ಬರು ಸುಮ್ಮನೇ ನೋಡಿದರು.

ಅಮ್ಮಾ..ನಾಳೆದಿನ ನನ್ನ ಕಾಲೇಜಿನ ಫ್ರೇಂಡ್ಸ್ ಹದಿನೈದು ಜನರನ್ನು ಊಟಕ್ಕೆ ಕರೆದಿದ್ದೀನಿ. ನಿನ್ನ ಕೈಲಿ ಆಗುವುದಾದರೆ ಮನೇಲೆ ಊಟಕ್ಕೆ ಸಿದ್ಧಮಾಡೋಣ. ಇಲ್ಲದಿದ್ರೆ ಅವರುಗಳನ್ನು ಊಟಕ್ಕೆ ಕರೆದುಕೊಂಡು ಹೋಗ್ತೀನಿ.

"ಹದಿನೈದು ಜನ ಅಂದ್ರೆ, ನನಗೆ ಕಷ್ಟವೇ! ಸಹಾಯಕರು ಯಾರಾದರೂ ಇದ್ದರೆ ಕಷ್ಟವಾಗುಲ್ಲ"

"ನಾನು ನಿನಗೆ ಸಹಾಯ ಮಾಡ್ತೀನಮ್ಮ. ಏನೇನೋ ತುಂಬಾ ಸುಮ್ಮನೇ ಮಾಡುವುದು ಬೇಡ. ಮೈಸುರು ಪಾಕು, ಬಿಸಿಬೇಳೆ ಹುಳಿಯನ್ನ. ಬೋಂಡ, ಮೊಸರನ್ನ ಇಷ್ಟೆ ಸಾಕು"

"ಸರಿಯಪ್ಪಾ..ನಿನಗೆ ಧೈರ್ಯವಿದ್ದರೆ ಸರಿ. ಆಮೇಲೆ ನಿನ್ನ ಸ್ನೇಹಿತರು ನಗುವಂತೆ ಆಗಬಾರದು"

"ಹಾಗೇಕೆ ಆಗುತ್ತೆ? ಬಿಡು..ನಿನಗೆ ಏನೇನು ಮನೇ ಸಾಮಾನುಗಳು ಬೇಕು ಅಂತ ಒಂದು ಲಿಸ್ಟ್ ಹಾಕಿಕೊಡು..ಮೂಲೆ ಅಂಗಡಿಯವನಿಗೆ ಕೊಟ್ಟು ಬರ್ತೀನಿ..."

ಮಗ ಇಷ್ಟೆಲ್ಲಾ ಖರ್ಚು ಮಾಡ್ತಿದಾನಲ್ಲ...ಎಲ್ಲಿಂದ ದುಡ್ಡು ಒದಗಿಸಿದ ಎನ್ನೋ ಸಂಶಯ ಬಂದರೂ, ಮಗನನ್ನೂ ಕೇಳಲಿಲ್ಲ. ಮದುವೆ ಅಂದ್ರೆ ಖರ್ಚಿಲ್ಲದೇ ನಡೆಯುತ್ಯೆ? ಅವನಿಗೂ ಆಸೆಗಳಿರುಲ್ಲವೇ? ಎಂದು ಕೊಂಡು ತಲೆಯಾಡಿಸಿದಳು. ತಾಯಿಯ ಬಳಿ ಹೆಚ್ಚು ಹೊತ್ತು ನಿಲ್ಲದೇ, ತಕ್ಷಣವೇ, "ತಡೀ...ಈಗ ಬಂದೆ" ಎನ್ನುತ್ತಾ ತನ್ನ ರೂಮಿಗೆ ಬಂದ. ನಿರ್ಮಲಾ ಮಂಚದ ಚೌಕಟ್ಟಿಗೆ ಒರಗಿ ಕುಳಿದು, ಏನನ್ನೋ ಓದುತ್ತಿದ್ದಳು. ಇವನನ್ನು ಕಂಡೊಡನೆ ಮುಗುಳ್ನಕ್ಕು ಟಿಕೆಟ್ಟು ಸಿಕ್ತಾ, ಎಲ್ಲಿಗೆ ಸಿಕ್ತು" ಎಂದು ಕೇಳಿದಳು.

ಎಲಾ! ಹನಿಮೂನ್‌ಗೆ ಹೋಗೋಕೆ ಎಷ್ಟು ಆತುರಾವಾಗಿದ್ದಾಳಲ್ಲಾ

ಎಂದುಕೊಳ್ಳುತ್ತಾ ಮಡದಿಯ ಮುದ್ದು ಮುಖವನ್ನು ನೋಡಿ ಸುಮ್ಮಾದ. ಆವಳು ಮತ್ತೆ ಪ್ರಶ್ನಿಸಿದಾಗ ನೀರಸವಾಗಿ ಹೇಳಿದ.

"ರೈಲಿನಲ್ಲಿ ಬುಕಿಂಗ್ ಮುಗಿದು ಹೋಗಿದೆ. ಹದಿನೈದು ದಿನಗಳವರೆಗೆ ಸಿಗುವ ಛಾನ್ಸೇ ಇಲ್ಲ. ಬಸ್ಸಿಗೆ ತಂದಿದೀನಿ. ಅದೂ ನಾಳೆ ರಾತ್ರಿಯ ಬಸ್ಸಿಗೆ. ರಾತ್ರಿಯ ಪ್ರಯಾಣ... ನಿನಗೇನೂ ತೊಂದರೆ ಇಲ್ಲದಿದ್ದರೆ ಹೋಗಿ ಬರೋಣ."

"ತೊಂದರೆ ಏನು?ನೀವಿರ್ತೀರಲ್ಲ ಜೊತೆಗೆ"

"ಅದೇನೋ ಸರಿ...ಇಷ್ಟು ಹೊತ್ತು ನೀನು ಹೇಗೆ ಕಾಲ ಕಳೆದೆ? ಇಲ್ಲೇ ಕೂತು ಓದುತ್ತಿದ್ದೆಯಾ?"

"ಕೆಲಸದವಳು ಬಂದಿದ್ದಳು. ಅವಳ ಹತ್ತಿರ ಮಾತನಾಡುತ್ತಿದ್ದೆ. ಬಟ್ಟೆ ಕೇಳಿದಳು ಒಗೆಯೋಕೆ ಅಂತ, ಕೊಟ್ಟೆ. ನಿಮ್ಮ ಬಟ್ಟೇನೂ ಕೇಳಿದಳು. ಎಲ್ಲಿದೆ ಅಂತ ನನಗೆ ಗೊತ್ತಿರಲಿಲ್ಲ."

"ಬಿಡು. ಅಮ್ಮನೋಡ್ಕೊಂಡಿರುತ್ತಾಳೆ, ಅವಳ ಹತ್ತಿರ ಏನು ಮಾತಾಡಿದೆ?"

"ಸುಮ್ಮನೇ ಏನೋ ಕೇಳಿದೆ...ಅವಳು ಹೊಸದಾಗಿ ಸೇರಿಕೊಂಡಿದಾಳಂತೆ... ನೆನ್ನೆಯಿಂದ ಬರ್ತಿದಾಳಂತೆ...ಹೌದಾ, ಯಾಕೆ?"

"ಯಾಕೆ ಅಂದ್ರೆ, ನಮ್ಮ ನಮ್ಮ ಕೆಲಸವನ್ನು ನಾವೇ ಮಾಡಿಕೊಳ್ಳುತ್ತಿದ್ದೆವು. ನಮಗೆ ಕೆಲಸದವಳ ಅಗತ್ಯವಿರಲಿಲ್ಲ. ಈಗ ನಿನಗೋಸ್ಕರ ಗೊತ್ತು ಮಾಡಿಕೊಂಡಿದೀವಿ ಅಷ್ಟೆ."

"ಥ್ಯಾಂಕ್ ಗಾಡ್! ಸಧ್ಯ ನಿಮಗೆ ಅಷ್ಟು ತಿಳೀತಲ್ಲ. ನಾನೆಂದೂ ಬಟ್ಟೆಗಳನ್ನೂ ಒಗೆದು, ಹಿಂಡಿ, ಹರವಿದವಳಲ್ಲ"

"ನನಗೆ ಗೊತ್ತು... ಆದರೆ ಸಮಯಾ ಅಂದ್ರೆ ಎಲ್ಲಾಕಲಸಾಮೂ ಗೊತ್ತಿರಬೇಕು. ಅದು ಬಿಡು. ನಾಳೆ ಮಧ್ಯಾಹ್ನ ಹನ್ನೆರಡು ಗಂಟೆಗೆ ನನ್ನ ಕಲೀಗ್ಸ್, ಸ್ನೇಹಿತರು, ಒಟ್ಟು ಹದಿನಾರು ಜನ ಊಟಕ್ಕೆ ನಮ್ಮ ಮನೆಗೇ ಬರ್ತಾರೆ ಅಷ್ಟು ಹೊತ್ತಿಗೆ ಎಲ್ಲಾ ರೆಡಿಯಾಗಿರಬೇಕು?"

"ಅಡಿಗೆಯವರಿಗೆ ಹೇಳಿದೀರಿ ತಾನೇ,...?"

"ಅವರ್‍ಯಾಕೆ! ನಾವೆಲ್ಲಾ ಸೇರಿ ಮಾಡಿದ್ರಾಯ್ತು"

" ತಮಾಷೆ ಮಾಡ್ತಿದೀರಾ? ಮನೆಯವರೇ ಅಷ್ಟು ಜನರಿಗೆ ಎಲ್ಲಾ ಎಲ್ಲಿ ಮಾಡುಕ್ಕೆ ಆಗುತ್ತೆ?"

"ಯಾಕೆ ಆಗುಲ್ಲ? ನಾವು ಮೂರು ಜನರು ಇದ್ದೀವಿ...ಗೊತ್ತಾ?" ಅವನು ಕೆಣಕುವಂತೆ ತಮಾಷೆಯಾಗಿ ಕೇಳಿದ.

"ಅಂದ್ರೆ...ನನ್ನನ್ನು ಸೇರಿಸಿಕೊಂಡಿದೀರಾ? ನನಗೆ ಏನೂ ಬರುಲ್ಲ ಅಂತ ನಿಮಗೆ ಗೊತ್ತಿರಬೇಕಲ್ಲ?"

"ಕಲಿತು ಕೊಂಡರೆ ಎಲ್ಲಾ ಬರುತ್ತೆ. ಯಾವುದೂ ಕಷ್ಟವಲ್ಲ. ನಾನು ಹೇಳಿಕೊಡ್ತೀನಿ. ನಿನಗೆ"

"ಪ್ಲೀಸ್, ಆ ಕೆಲಸ ನನಗೆ ಬೆಡಪ್ಪಾ. ನನ್ನ ಕೈಲಿ ಅಡಿಗೆ ಕೆಲಸವಂತೂ ಸಾಧ್ಯವಿಲ್ಲ. ಕೈ ತಿರುಗಿಸುತ್ತಾ ನುಡಿದಳು"

"ಯಾಕೆ ಸಾಧ್ಯವಿಲ್ಲ? ಪ್ರಯತ್ನ ಮಾಡಿ ನೋಡು. ಕಾಲೇಜಿಗೆ ಹೋಗುವ ಗಂಡಸು, ನಾನೇ ಕಲಿತಿದ್ದೀನಂತೆ..ಅದೇನು ಕಷ್ಟ? ನಿನಗೂ ಏನೂ ಕಷ್ಟ ವಾಗುವುದಿಲ್ಲ."

"ನಿಮಗೆ ಬರುತ್ತಾ? ನಿಜವಾಗಿಯೂ?" ತಮಾಷೆಗೆ ಹೇಳುತ್ತಿದಾನೆಂದು, ನಂಬದವಳಂತೆ ಕೇಳಿದಳು.

"ಯಾಕೆ ಸುಳ್ಳು ಅಂತನ್ನಿಸುತ್ತಾ? ಅವತ್ತೇ ಹೇಳಿದ್ನಲ್ಲ?"

"ತಮಾಷೆಗೆ ಹೇಳ್ತಿದೀರಿ ಅಂತ ಅಂದ್ಕೊಂಡೆ. ಇನ್ನು ನನಗೇನೂ ಕಷ್ಟವಿಲ್ಲ ಬಿಡಿ. ಇಬ್ಬರಲ್ಲಿ ಯಾರಿಗೋ ಒಬ್ಬರಿಗೆ ಅಡಿಗೆ ಮಡೋಕೆ ಬಂದ್ರಾಯ್ತು" ಅವಳು ನಗುತ್ತಾ ನುಡಿದಳು.

"ಹಾಗಾದ್ರೆ ಊಟನೂ ಯಾರೋ ಒಬ್ಬರು ಮಾಡಿದ್ರಾಯ್ತು. ನೀನು ಊಟ ಮಾಡಿಬಿಡು. ನಾನು ನಿನ್ನನ್ನೇ ನೋಡ್ತಾ ಹೊಟ್ಟೆ ತುಂಬಿಸಿಕೊಳ್ತೀನಿ" ಅವನ ತಮಾಷೆಯ ಮಾತಿಗೆ ಬಾಯ್ತುಂಬಾ ನಕ್ಕಳು. ನಗುತ್ತಿದ್ದ ಅವಳನ್ನೇ ಮನಸಾರೆ ನೋಡಿದ. ಇದ್ದಕ್ಕಿದ್ದಂತೆ ಗಂಭೀರನಾದ.

" ಏನು ಯೋಚಿಸ್ತಿದೀರಾ...ನನ್ನಂತಹವಳನ್ನೂ ಹನಿಮೂನ್ ಕರೆದುಕೊಂಡು ಹೋಗಿ ಹೇಗೆ ಸಂಭಾಳಿಸುವುದು ಅಂತ ತಾನೇ?"

"ಅಲ್ಲ..ಅಲ್ಲ, ಅಮ್ಮನ್ನ ಒಬ್ಬಳನ್ನೇ ಚಿಕ್ಕಮಗು ಜೊತೆ ಬಿಟ್ಟು ಹೋಗ ಬೇಕಲ್ಲ ಅಂತ ಅವಳು ಎಂದೂ ಒಬ್ಬಳೇ ಇದ್ದವಳಲ್ಲ.."

ಈ ಮಾತಿಗೆ ನಿರ್ಮಲಾ ಏನೂ ಆಡಲಿಲ್ಲ.

"ಬೆಳಗ್ಗಿಂದ ಅಮ್ಮ ಒಬ್ಬಳೇ ದುಡೀತಿದಾಳೆ. ನಮ್ಮೆಲ್ಲರ ಊಟ ಬೇಗ ಮುಗಿದರೆ, ಅವಳ ಕೆಲಸಾನೂ ಮುಗಿಯುತ್ತೆ, ಸ್ವಲ್ಪ ರೆಸ್ಟೂ ಸಿಗುತ್ತೆ. ಬಾ ಊಟ ಮಾಡಿ ಬಿಡೋಣ" ಎನ್ನುತ್ತಾ ತಾನೇ ಎದ್ದು ಮುಂದಾಗಿ ಹೋಗಿ, ತಟ್ಟೆ ಹಾಕಿ, ನೀರಿನ ಲೋಟಗಳನ್ನಿಟ್ಟು, ನಿರ್ಮಲಳನ್ನೂ ಕರೆದ. ಡೈನಿಂಗ್ ಟೇಬಲ್ ಇದ್ದಿದ್ದರೆ ತನ್ನಂತಹವಳಿಗೆ ಸುಭವಾಗಿರುತ್ತಿತ್ತೆನಿಸಿತು. ಆಮೇಲೆ, ಅತನಿಗೆ ಹೇಳಬೇಕು ಎಂದುಕೊಂಡಳು.

ಊಟ ಮುಗಿಸಿ, ನಿರ್ಮಲ ಎದ್ದು ಕೈ ತೊಳೆದು ಬರುವಷ್ಟರಲ್ಲಿ ರಂಗನಾಥ ಗೋಮೆ ಹಚ್ಚಿದ್ದ. ಇದನ್ನೆಲ್ಲಾ ಮಾಡಿ ನಿರ್ಮಲಳಿಗೆ ಅಭ್ಯಾಸವಿಲ್ಲವೆಂದು ತಿಳಿದಿತ್ತು. ಹೇಗೂ ದಿನವೂ ಇದು ತನ್ನ ಕೆಲಸ. ತಾನು ಮಾಡದಿದ್ದರೆ ಅಮ್ಮ ಮಾಡ್ತಾಳೆ. ಅದು ಬೇಡವೆಂದೆನಿಸಿತ್ತು. ನಿರ್ಮಲೆಗೂ ಮುಜುಗರವಾಗಿತ್ತು. ತಾನು ಇದನ್ನೆಲ್ಲಾ ಎಂದೂ ಮಾಡಿಯೇ ಅಭ್ಯಾಸವಿಲ್ಲವೆಂದ ಮೇಲೆ, ಅದರ ಬಗ್ಗೆ ಮಾತನಾಡುವು ದಾಗಲೀ, ತಲೆ ಕೆಡಿಸಿಕೊಳ್ಳುವುದಾಗಲೀ ಯಾಕೆ ಬೇಕು ಎಂದು ಕೊಂಡು ಸುಮ್ಮನಾಗಿ ದ್ದಳು. ಡೈನಿಂಗ್ ಟೇಬಲ್ ಇದ್ದಿದ್ದರೆ. ಇದೆಲ್ಲಾ ಕಷ್ಟವೇನಲ್ಲ ಅಂತ ಅಂದು ಕೊಂಡಳು.

ಕೈ ತೊಳೆದು ಸೀದಾ ತನ್ನ ರೂಮು ಸೇರಿದ ಸೊಸೆಯನ್ನು ಕಾವೇರಮ್ಮ ಗಮನಿಸಿ ದಳು. ನಂಗೊತ್ತಿತ್ತು ಇಷ್ಟೇಯ ಅಂತ...ಮನೆ ಕೆಲಸ ಬರದವಳನ್ನು ಏನು ಅಂತ ಮೆಚ್ಚಿ ಮದುವೆಯಾದನೋ...? ಇವನಿಗೇ ಬುದ್ದಿ ಇಲ್ಲ...ಇನ್ನೇನು? ಅನುಭವಿಸಲಿ... ಎಂದು ತನಗೇ ಹೇಳಿಕೊಂಡಳು.

ಭಾನುವಾರ ಮಧ್ಯಾಹ್ನ ಸ್ನೇಹಿತರೆಲ್ಲಾ ಬರುವಷ್ಟರಲ್ಲಿ ಊಟಕ್ಕೆ ಎಲ್ಲಾ

ಸಿದ್ಧವಾಗಿತ್ತು. ಬೆಳಿಗ್ಗೆ ಬೇಗನೇ ಎದ್ದು ತಾಯಿಯ ಜೊತೆ ಸೇರಿ, ಅಡಿಗೆಗೆ ಸಹಾಯಕನಾಗಿದ್ದ ರಂಗನಾಥ. ಸ್ನೇಹಿತನಿಗೆ ತನ್ನ ಸಹಾಯ ಬೇಕಾಗಬಹುದೆಂದು ಊಹಿಸಿ, ಸತ್ಯ ಸಹ ಮುಂಚಿತವಾಗಿ ಬಂದಿದ್ದ. ನಿರ್ಮಲ ತನಗೇನೂ ಸಂಬಂಧಪಟ್ಟುದಲ್ಲವೆಂಬಂತೆ ಒಳಗೇ ಇದ್ದುದು ಅಸಮಾಧಾನವಾಗಿತ್ತು. ರಂಗನಾಥನಿಗೆ ನಿರ್ಮಲೆಯ ವಿಚಾರ ತಿಳಿದದ್ದೆ. ಆದ್ದರಿಂದ ಏನೂ ಆಡಲೂ ಇಚ್ಛಿಸದೇ ಸುಮ್ಮನಾಗಿದ್ದ. ನಿರ್ಮಲೆಗೆ ಮಾತ್ರ ಮುಜುಗರ ಹೆಚ್ಚಾಗುತ್ತಿತ್ತು. ಮದುವೆಯಾಗಿ ಈ ಮನೆಗೆ ಕಾಲಿಟ್ಟ ಮಾರನೇ ದಿನವೇ ತನಗೆ ಇಂಥ ಪೇಚಿನ ಸ್ಥಿತಿ ಒದಗಬಹುದೆಂದು ಅವಳಿಗೆ ಅನ್ನಿಸಿರಲಿಲ್ಲ. ಮೊದಲೇ ಸರಿ, ಬೇಗ ಬೇಗ ನಡೆದಾಡುವುದಕ್ಕಾಗುವುದಿಲ್ಲ. ಜೊತೆಗೆ ತನಗ್ಯಾವ ಮನೆ ಕೆಲಸ ಮಾಡಿ ಗೊತ್ತಿಲ್ಲ. ರಂಗನಾಥನ ಮೇಲೆ ಸಿಟ್ಟು ಬಂತು. ಎಲ್ಲಾ ತಿಳಿದಿದ್ದೂ, ಅವರುಗಳನ್ನು ಮನೆಗೇಕೆ ಕರೆಯಬೇಕಾಗಿತ್ತೊ? ಯಾವುದಾದರೊಂದು ಒಳ್ಳೆಯ ಹೋಟೆಲ್ಲಿಗೆ ಕರೆದುಕೊಂಡು ಹೋಗಿದ್ದರಾಗುತ್ತಿರಲಿಲ್ಲವೇ? ಎಂದುಕೊಂಡಳು. ಕರೆದ ಸ್ನೇಹಿತರೆಲ್ಲಾ ಒಬ್ಬೊಬ್ಬರಾಗಿ ಬಂದರು. ಹೆಂಡತಿಯನ್ನು ಪರಿಚಯ ಮಾಡಿಸಿ ಕೊಡಲೆಂದು, ಕರೆದೊಯ್ಯಲು ರೂಮಿಗೆ ಬಂದ. ಮುನಿಸಿಕೊಂಡು ಕೂತಿದ್ದ ಮಡದಿಯನ್ನು ಕಂಡು ನಗು ಬಂತು.

"ಸಿಟ್ಯಾಕೆ ನನ್ನ ಬೊಂಬೆಗೆ ಎಲ್ಲಾ ಕೆಲಸ ಮಾಡಿ ಸುಸ್ತಾಯಿತಾ ಅಥವಾ...?"

"ನಿಂಗೇನೂ ಬರುಲ್ಲ ಅಂತ ವ್ಯಂಗ್ಯವಾಗಿ ಮಾತನಾಡಬೇಡಿ.ನನಗೆಲ್ಲಾ ಗೊತ್ತೂ. ನನಗೆ ಬೇಕೂಂತ ಅವಮಾನ ಮಾಡ್ತಿದೀರಾ?"

"ನನ್ನ ಡಿಯರ್‌ಗೆ ಎಂದಾದ್ರೂ ಅವಮಾನ ಮಾಡ್ತೀನಾ? ಈಗೇನಾಯ್ತು ನಿಂಗೆ? ನನ್ನ ಕಲೀಗ್ಸ್ ಎಲ್ಲಾ ಬಂದಿದಾರೆ. ಪರಿಚಯ ಮಾಡಿಸ್ತೀನಿ ಬಾ.. ಸುಮ್ಮನೇ ಕೂತಿರುವ ಬದಲು, ಡ್ರೆಸ್ ಮಾಡಿಕೊಂಡು ರೆಡಿಯಾಗಿರಬಾರ ದಾಗಿತ್ತಾ?"

"ನಾನು ಸುಮ್ಮನೇ ಕೂತಿದ್ದೆ ಅಂತ ಮತ್ತೆ ಹಂಗಿಸ್ತಿತೀರಿ. ಎಲ್ಲಾ ಗೊತ್ತಿದ್ದೂ ನಿಮ್ಮ ಸ್ನೇಹಿತರನ್ನು ಮನೆಗೇಕೆ ಕರೆಯಬೇಕಾಗಿತ್ತು ಹೋಟೆಲ್ಲಿಗೆ ಕರೆದುಕೊಂಡು ಹೋಗಿದ್ದರೆ ಆಗ್ತಿರಲಿಲ್ವಾ?"

"ಅವರಿಗೆಲ್ಲ ಹೋಟೆಲ್ಲಿನ ಊಟ ಅಪರೂಪವೇನಲ್ಲ. ಮನೆ ಊಟವನ್ನೇ ಅವರೆಲ್ಲಾ ಬಯಸೋದು. ನೀನು ಹೊಸಬಳು, ನೀನು ಅಡಿಗೆ ಮಾಡಿ ಬಿಡಿಸಲಿ ಅಂತ ಯಾರೂ ನಿರೀಕ್ಷಿಸುಲ್ಲ. ಇದಂತೂ ನಿಜ."

"ಅವರುಗಳೆನಾದ್ರೂ ಯೋಚಿಸಲಿ. ನನಗೇನು?"

"ಯಾಕೇ ತುಂಬಾ ಸಿಟ್ಟು ಬಂದಿದೆ. ಇರಲಿ. ಅವರೆಲ್ಲಾ ಹೋದಮೇಲೆ ನಿನ್ನನ್ನು ವಿಚಾರಿಸ್ಕೋತೀನಿ ಎಂದು ಕಣ್ಣು ಹೊಡೆದ. ಈಗ ಪ್ಲೀಸ್..ಹೊರಗೆ ಬಂದು, ನನ್ನ ಸ್ನೇಹಿತರಿಗೆ ನಿನ್ನ ದರ್ಶನವನ್ನು ಕೊಡು ದೇವಿ" ಎಂದು ಅವನು ನಾಟಕೀಯವಾಗಿ ಹೇಳಿದಾಗ ಅವಳಿಗೆ ನಗುವನ್ನು ತಡೆಯಲಾಗಲಿಲ್ಲ. ಅಲ್ಲಿ ಗೋಡೆಗೆ ತೂಗು ಹಾಕಿದ್ದ ಕನ್ನಡಿಯಲ್ಲಿ ಮುಖ ನೋಡಿಕೊಂಡು, ಕೂದಲನ್ನೂ ಬೇಗ ಬೇಗ ಬಾಚಿ, ಜಡೆ ಹೆಣೆದುಕೊಂಡು, ಸೀರೆ ಬದಲಾಯಿಸಿ, ಹೊರಗೆ ಬರುವಷ್ಟರಲ್ಲಿ, ಹತ್ತು ನಿಮಿಷಕ್ಕಿಂತ ಹೆಚ್ಚಿನ ಸಮಯ ಕಳೆದಿತ್ತು. ತಮ್ಮ ತಮ್ಮಲೇ ಮಾತನಾಡುತ್ತಿದ್ದವರು, ಮಾತು ನಿಲ್ಲಿಸಿ

ಒಟ್ಟಿಗೇ ಅವಳ ಕಡೆ ತಿರುಗಿದರು. ಬಾಗಿಲಿಗೆ ಒರಗಿ ನಿಂತಿದ್ದ. ರಂಗನಾಥ ಅವಳನ್ನು ಎಲ್ಲರಿಗೂ ಪರಿಚಯಿಸಿದ. ಇವಳು ನನ್ನ ಮಿಸೆಸ್ .. ಡಾ, ನಿರ್ಮಲಾ, ಅವರಲ್ಲಿ ಕೆಲವರಿಗೆ ಅವಳನ್ನೂ ನೋಡಿ ಪರಿಚಯವಿತ್ತು. ನೋಡಿದ ಕೂಡಲೇ ಗುರುತಿಸಿದ್ದರು. ಎಲ್ಲರೂ ಅವಳಿಗೆ ಕೈ ಮುಗಿದು ನಮಸ್ಕಾರ ಎಂದು ಹೇಳಿ ಕೈ ಮುಗಿದು ಮತ್ತೆ ಶುಭಾಶಯವನ್ನೂ ಕೋರಿದರು. ರಂಗನಾಥ ಮತ್ತೊಮ್ಮೆ ಒಬ್ಬಬ್ಬರ ಹೆಸರನ್ನೇ ಹೇಳಿ, ಅವರುಗಳ ಪರಿಚಯವನ್ನು ತಿಳಿಸಿದ. ಅವರುಗಳು ಎದ್ದು ನಿಂತು ಕೈ ಮುಗಿದು ಮುಗುಳ್ನಕ್ಕು ಮತ್ತೊಮ್ಮೆ ನಮಸ್ಕಾರ ಎಂದು ನುಡಿದಿದ್ದರು. ಇವಳೂ ಪ್ರತಿ ನಮಸ್ಕಾರವನ್ನೂ ಕೈ ಮುಗಿದು ಸೂಚಿಸಿದ್ದಳು.

ಏನನ್ನೂ ಆಡದೇ ನಿಂತಿದ್ದ ಅವಳನ್ನೇ ಗಮನಿಸುತ್ತಿದ್ದ ಅವರುಗಳ ಮನಸ್ಸಿನಲ್ಲಿ ಏನೇನೋ ಆಲೋಚನೆಗಳು "ಇಂಥ ಡಾಕ್ಟರು. ಇವನಿಗೆ ಹೇಗೆ ಸಿಕ್ಕಿದಳು? ಎನ್ನುವುದೇ ಮುಖ್ಯವಾದ ಪ್ರಶ್ನೆ ..ಮುಜುಗರವನ್ನು ಹೋಗಲಾಡಿಸು ವಂತೆ, ಬುದ್ದಿ ಉಪಯೋಗಿಸಿ ಸತ್ಯ ನಿರ್ಮಲೆಯ ಬಳಿಗೆ ಒಂದು ಕುರ್ಚಿಯನ್ನು ತಂದು ಹಾಕಿ ಕೂತ್ಕೊಳ್ಳಿ ಎಂದ. ಅಷ್ಟೇ ಸಾಕು ಎಂಬಂತೆ  ನಿರ್ಮಲಾ ಕುಳಿತಳು.

ಸತ್ಯ, ರಂಗನಾಥನಿಗೆ ಸಹಾಯಕನಾಗಿ ನಿಂತ. ಹಾಲಿನಲ್ಲಿ ಎಲ್ಲ ಎಲೆಗಳನ್ನು ಹಾಕಿ, ಸಿಹಿ ಅಡಿಗೆಯನ್ನೂ ಬಡಿಸಿದರು. ಸ್ನೇಹಿತರುಗಳು ಮಜವಾಗಿ ಚಪ್ಪರಿಸಿಕೊಂಡು ಉಂಡರು. ನಂತರ, ತಂದಿತ್ತ ಎಲೆ ಅಡಿಕೆಯನ್ನು ತಂದಿಟ್ಟ.`ಕೆಲವರು ಎಲೆ ಅಡಿಕೆಯನ್ನು, ಕೆಲವರು ಬರೀ ಅಡಿಕೆಯನ್ನು ಹಾಕಿಕೊಂಡರು.

ನಾವುಗಳು ವೆರಾಂಡದಲ್ಲಿ ಮಾತನಾಡ್ತಾ ಕೂತಿರ್ರೀವಿ. ನೀವುಗಳೂ ಊಟಮಾಡಿ. ಬೇಕಾದ್ರೆ ನಾವು ಬಡಿಸ್ತೀವಿ ಸ್ನೇಹಿತರಲ್ಲಿ ಕೆಲವರು ನುಡಿದಾಗ, ರಂಗನಾಥ ನಯವಾಗಿ ನಿರಾಕರಿಸಿದ್ದ.

"ಪರವಾಗಿಲ್ಲ ಅಮ್ಮ ಬಡಿಸ್ತಾರೆ...ಅವರಿಗೆ ಇವತ್ತು ಏಕಾದಶಿ.. ಊಟ ಮಾಡುವುದಿಲ್ಲ." ಅವತ್ತು ಏಕಾದಶಿಯೇನೋ ನಿಜ. ಆದರೆ ಮಗನ ಮಾತಿನಿಂದ ಕಾವೇರಮ್ಮನಿಗೆ ಆಶ್ಚರ್ಯವಾಗಿತ್ತು. ಅವರೆಲ್ಲರೂ ಹೊರಗೆ ಕುಳಿತು ಮಾತನಾಡು ತ್ತಿದ್ದರೂ. ಸತ್ಯನೂ ಅಲ್ಲೇ ನಿಂತ.

ಇಲ್ಲಿ ರಂಗನಾಥ, ಸರಸರನೆ ಎಲ್ಲರ ಎಲೆ ತೆಗೆದು ಎಸೆದು, ಗೋಮೆ ಗಚ್ಚಿ ಒರೆಸಿದ. ನಿರ್ಮಲ ಅಲ್ಲಿ ನಿಲ್ಲಲು ಇಷ್ಟವಿಲ್ಲದೇ ರೂಮು ಸೇರಿದಳು. ಇದನ್ನೆಲ್ಲಾ ಮಾಡುಕ್ಕೆ ಇವತ್ತಾದರೂ ಕೆಲಸದವಳನ್ನೂ ಉಳಿಸಿಕೊಳ್ಳ ಬಾರದಾಗಿತ್ತೇ ಅಂತೆನಿಸಿತ್ತು. ತಾಯಿ ಕಂಡರೂ ಕಾಣದಂತೆ ಸುಮ್ಮನಿದ್ದಳು. ಮಗ ಉಳಿದ ಮೂವರಿಗೆ ಎಲೆ ಹಾಕಿದ. ಅವರುಗಳು ಕುಳಿತ ನಂತರ, ಕಾವೇರಮ್ಮ ಮೌನವಾಗಿ ಬಡಿಸಿದಳು. ನಿರ್ಮಲೆಗೆ ಚೆನ್ನಾಗಿ, ಹೊಟ್ಟೆ ಹಸಿದಿತ್ತು. ಅಡಿಗೆಯೂ ರುಚಿಯಾಗಿತ್ತು. ಸಂಕೋಚವನ್ನು ಬದಿಗಿಟ್ಟು ಊಟ ಮಾಡಿದಳು. ರಂಗನಾಥ, ಸತ್ಯ ಇಬ್ಬರಿಗೂ, ಸ್ನೇಹಿತರು ಹೊರಗೆ ಹರಟುತ್ತಿದ್ದುದು ಗಮನದಲ್ಲಿದ್ದುದರಿಂದ ಬೇಗ ಬೇಗ ಊಟ ಮುಗಿಸಿ ಎದ್ದರು. ಎಲ್ಲರಿಗೂ, ಅವರವರ ಎಂಜಲೆಲೆಯನ್ನು ಮಡಿಚಿ ಎಸೆದರು. ನಿರ್ಮಲ ಮನಸ್ಸಿಲ್ಲದ ಮನಸ್ಸಿನಲ್ಲಿ ಊಟ ಮಾಡಿದ ಜಾಗಕ್ಕೆ ನೀರು ಚುಮುಕಿಸಿ ಬಟ್ಟೆಯಲ್ಲಿ ಒರೆಸಿದಳು. ಅಲ್ಲೇ ಕುಳಿತು ಅವಳ ಕೆಲಸವನ್ನು ಗಮನಿಸುತ್ತಿದ್ದ ಕಾವೇರಮ್ಮನಿಗೆ ಸರಿ ಎನಿಸಲಿಲ್ಲ.

ಎಂದು ಕೆಲಸ ಮಾಡಿ ತಿಳಿಯದು. ಏನು ಚೆನ್ನೋ ಇವಳು ಒರೆಸಿದ್ದು. ಅಲ್ಲದೇ ಕುಂಟಿಕೊಂಡು ಇವಳು ಬರುವಷ್ಟರಲ್ಲಿ ನೆಲ ತಾನಾಗಿಯೇ ಒಣಗಿತ್ತು ಎಂದುಕೊಂಡು, ಮತ್ತೊಮ್ಮೆ ಮಗನ ಅವಿವೇಕಕ್ಕೆ ಮರುಗಿದಳು.

ಬಂದಿದ್ದವರು ಮತ್ತೊಮ್ಮೆ ರಂಗನಾಥನ ಕೈ ಕುಲಕಿ, ಶುಭಾಶಯಗಳನ್ನು ಕೋರಿ, ತಂದಿದ್ದ ಉಡುಗೊರೆಯನ್ನು ಅವನ ಕೈಗಿತ್ತು ಹೊರಟರು. ಸತ್ಯ ಮತ್ತೂ ಸ್ವಲ್ಪ ಹೊತ್ತು ಕುಳಿತು ಮಾತನಾಡುತ್ತಿದ್ದ. ನಿರ್ಮಲೆಯ ಮನಸ್ಸಂತೂ ಪೂರಾ ಕೆಟ್ಟು ಹೋಗಿತ್ತು.

ಆಕಳಿಸುತ್ತಿದ್ದ ರಂಗನಾಥನನ್ನು ಕಂಡು ಸತ್ಯನೂ ಎದ್ದ. "ತುಂಬಾ ಕೆಲಸವಿತ್ತು ಅಂತ ಬೇಗ ಎದ್ದು ಬಿಟ್ಟಿದ್ದೆ. ಈಗ ನಿದ್ದೆ ಬರ್ತಿದೆ"

"ಹೋಗು..ಸ್ವಲ್ಪ ಹೊತ್ತು ಮಲಕ್ಕೋ..ರಾತ್ರಿಯೂ ನಿದ್ದೆ ಸಾಲದೇನೋ?" ನಗುತ್ತಾ ತಮಾಷೆಯಾಗಿ ನುಡಿದಾಗ.,

"ಹಾಗೇನಿಲ್ಲಪ್ಪಾ ಗಡದ್ದಾಗಿ ನಿದ್ದೆಹೊಡೆದೆ"ಎಂದ, ಒಳಗೆ ರೂಮಿನಲ್ಲಿ ಒಂಟಿಯಾಗಿ ಕುಳಿತಿದ್ದ ನಿರ್ಮಲೆಯ ಬಗ್ಗೆ ಚಿಂತಿಸುತ್ತಾ. ಸ್ನೇಹಿತ ಹೊರಟಾಗ ನಿಜಕ್ಕೂ ಖುಷಿಯಾಗಿತ್ತು.

ಗೋಡೆಯ ಕಡೆ ಮುಖ ತಿರುಗಿಸಿ ಮಲಗಿದ್ದ ನಿರ್ಮಲ ರಂಗನಾಥ ಬಂದು ಮಂಚದ ಮೇಲೆ ಕುಳಿತಾಗಲೂ, ಈ ಕಡೆ ತಿರುಗಲಿಲ್ಲ. ಏಯ್...ನಿರ್ಮಲಾ.. ಅಂತ ಕರೆದರೂ, ಉತ್ತರಿಸಲಿಲ್ಲ. ನಿದ್ದೆ ಬಂದಿರಬಹುದು... ಎಬ್ಬಿಸುವುದೇಕೆ ಎಂದುಕೊಂಡು, ತಾನೂ ಮಲಗಿದ ಗಾಢವಾದ ನಿದ್ರೆ ಬಂದಿತು.

ಎಚ್ಚರವಾದಾಗ, ಪಕ್ಕದಲ್ಲಿ ತಿರುಗಿ ನೋಡಿದ. ನಿರ್ಮಲ ಹಾಗೇ ಮಲಗಿದ್ದಳು. ಚೆನ್ನಾಗಿ ನಿದ್ದೆ ಹೊಡೆದುದರಿಂದ ಮೈಮನ ಹಗುರವಾಗಿತ್ತು.. ಮಡದಿಯ ತೋಳು ಮುಟ್ಟಿ ಎಚ್ಚರಿಸಿದ

"ನಿರ್ಮಲಾ...ಏಳು...ಪ್ಯಾಕ್ ಮಾಡಬೇಕು. ರಾತ್ರಿ ಹತ್ತು ಗಂಟೆಗೇ ಬಸ್ಸು.."ಎಚ್ಚರಗೊಂಡ ನಿರ್ಮಲಾ ಮೈಮುರಿಯುತ್ತಾ ಪ್ರಶ್ನಿಸಿದಳು.

"ಈಗ ಎಷ್ಟು ಗಂಟೆ?"

"ಆರು ಗಂಟೆ, ಏಳ್ತೀಯಾ? ಕಾಫಿ ತರಲಾ?"

"ಹೂಂ ಕಾಫಿ ಬೇಕು ಅಂತ ಅನ್ನಿಸ್ತಿದೆ.... ತುಂಬಾ ಬಾಯಾರಿಕೆ"

ರಂಗನಾಥ ಎದ್ದು ಹೋಗಿ, ಎರಡು ಬಟ್ಟಲುಗಳಲ್ಲಿ ಕಾಫಿ ಹಾಕಿ ಕೊಂಡು, ರೂಮಿಗೆ ತಂದ. ಕಾವೇರಮ್ಮಮ್ಮ ತಮ್ಮ ಪಾಡಿಗೆ ತಾವು ಮನೋಜನ ಸಂಗಡ ಹೊರಗೆ ಮೆಟ್ಟಿಲುಗಳ ಮೇಲೆ ಕುಳಿತಿದ್ದಳು.

"ಕಾಫಿ ತುಂಬಾ ಚೆನ್ನಾಗಿದೆ. ನಿಮ್ಮ ತಾಯಿ ಎಲ್ಲಾ ಚೆನ್ನಾಗಿ ಎಷ್ಟು ಚೆನ್ನಾಗಿ ಮಾಡ್ತಾರೆ ಅಲ್ವಾ?"

"ಹೂಂ ಈ ಮಾತನ್ನು ನೀನು ಅವಳಿಗೇ ಏಕಗೆ ಹೇಳಬಾರದು? ತುಂಬಾ ಸಂತೋಷ ಪಟ್ಟು ಕೊಳ್ತಳೆ"

"ಅದು ಕಷ್ಟ ನಾನು ಅವರ ಎದುರಿಗೆ ನಿಂತು ಮಾತಾಡಲಾರೆ"

"ಯಾಕೆ ಹೆದರಿಕೇನಾ? ಅವಳೇನು ಕೆಟ್ಟ ಅತ್ತೆ ಅಲ್ಲ."

"ಹಾಗೆಲ್ಲಿ ಅಂದೆ ನಾನು? ಸಿಡುಕಿದಳು. ನಾನಿಷ್ಟು ದೊಡ್ಡವಳು ನನಗೆ ಮನೆ ಕೆಲಸ ಏನೇನೂ ಬರುಲ್ಲ.. ಅವರೆದುರಿಗೆ ನಿಂತ ಅವರು ಮಾಡಿದ್ದನ್ನು ಹೊಗಳಿದರೆ ನಗುಲ್ವೇ? ತನಗೇನೂ ಬರುಲ್ಲ ಅಂತ, ನನಗೆ ಪೂಸಿ ಹೊಡೀತಿದಾಳೆ ಅಂತ ಅಂದ್ಕೋತಾರೆ ಅಷ್ಟೇ..."

"ಅಮ್ಮ ಹಾಗೆಲ್ಲ ಅಲ್ಲ. ತುಂಬಾ ಒಳ್ಳೆಯವಳು .. ಆದರೆ ಪಾಪ ಜೀವನದಲ್ಲಿ ತುಂಬಾ ನೊಂದಿದಾಳೆ"

"ನಾನೆಷ್ಟು ನೊಂದಿದೀನಿ ಗೊತ್ತಾ?" ಎಂದು ಹೇಳಿಕೊಳ್ಳುವ ಮನಸ್ಸಾದರೂ ತಡೆದುಕೊಂಡಳು.. ತನ್ನ ತಾಯಿಯ ಮನೆಯ ಬಗ್ಗೆ ಅವನಿಗೆ ಏನನ್ನೂ ಹೇಳುವುದು ಬೇಡ ಎಂದು ನಿರ್ಧರಿಸಿದಳು.

ಯೆಸ್ ಗೆಟಪ್...ಪೆಟ್ರೋಲ್ ಬಿತ್ತಲ್ಲಾ...ಇನ್ನು ಕ್ವಿಕ್ ಆಗಿ ರೆಡಿಯಾಗಿ ಬಿಡಬೇಕು. ನನ್ನ ಬಟ್ಟೆಗಳನ್ನು ಪ್ಯಾಕ್ ಮಾಡಿಬಿಡು.

ನನ್ನದು ರೆಡಿಯಾಗಿ ಪ್ಯಾಕ್ ಆಗಿರುವ ಸೂಟ್‌ಕೇಸ್ ಇದೆ. ನಿಮ್ಮ ಬಟ್ಟೆಗಳನ್ನು ನೀವೇ ಪ್ಯಾಕ್ ಮಾಡ್ಕೊಳ್ಳಿಪ್ಪಾ. ಪ್ಲೀಸ್...ಅವಳ ನುಡಿಗಳಿಗೆ ಸೋತು ಹೋದ. ಸರಸರನೆ ಅವಳು ನೋಡುತ್ತಿರುವಂತೆಯೇ ಅವನು ಪ್ಯಾಕ್ ಮಾಡಿ ಮುಗಿಸಿದ.

ಒಂಭತ್ತು ಗಂಟೆಯ ಹೊತ್ತಿಗೆ ಊಟ ಮುಗಿಸಿ ಸಿದ್ಧರಾದರು.

ಅಮ್ಮ...ಸತ್ಯನಿಗೆ ಎಲ್ಲಾ ಹೇಳಿದೀನಿ. ಅವನು ಬಂದು ಇಲ್ಲಿ ನಿಮ್ಮ ಜತೆ ಮಲಗುತ್ತಾನಂತೆ. ನಿನಗೂ ಅನುಕೂಲವಾಗುತ್ತೆ. ಏನೂ ಭಯವಿಲ್ಲ. ನಾವು ಹೋಗಿ ಬರೋಣವೇನಮ್ಮ."

"ಹೂ.ನಪ್ಪಾ ...ಸುಖವಾಗಿ ಹೋಗಿಬನ್ನಿ, ಮೊದ್ಲು ದೇವರಿಗೆ ಕೈಮುಗಿದು ನಮಸ್ಕಾರ ಮಾಡಿ."

ರಂಗನಾಥ ಮೈ ಬಗ್ಗಿಸಿ ನಮಸ್ಕರಿಸಿದಾಗ, ನಿರ್ಮಲೆಯೂ ಅಂತೆಯೇ ಮಾಡದೆ ಕೈ ಮುಗಿದು ನಮಸ್ಕರಿಸಿದಳು. ರಂಗನಾಥನ ಜೊತೆ ಜೊತೆಯಲ್ಲೇ ಬರ್ತೀನಿ ಎಂದು ನುಡಿದಳು. ಇಬ್ಬರೂ ಹೊರಟರು. ಅದೇ ಸಮಯಕ್ಕೆ ಸರಿಯಾಗಿ ಸತ್ಯ ಆಟೋದಲ್ಲಿ ಬಂದಿಳಿದ. ಸತ್ಯನಿಗೆ ಮತ್ತೊಮ್ಮೆ ಎಲ್ಲ ಹೇಳಿದ. ಇಬ್ಬರೂ ಅದೇ ಆಟೋ ಹತ್ತಿ ಬಸ್ ಸ್ಟ್ಯಾಂಡ್‌ಗೆ ಬಂದರು.

ರಾತ್ರಿಯ ಪ್ರಯಾಣ ಹಿತಕರವಾಗಿಲ್ಲದಿದ್ದರೂ, ಹೊರಗೆ ತಿರುಗಾಡಿ ಬರುವ ಆಸೆಯಿಂದ ಹೊರಟಿದ್ದ ನಿರ್ಮಲ ಮುದವಾಗಿರುವಂತೆ ಕಂಡಿತು. ರಂಗನಾಥನಿಗೋ ತಾಯಿಯದೇ ಚಿಂತೆ. ಮನೋಜನನ್ನು ಸುಧಾರಿಸಿ ನೋಡಿ ಕೊಂಡು ಒಬ್ಬಳೇ ಹೇಗಿರುತ್ತಾಳೋ ಅಂತ ಮನೆಗೆ ಬೇಕಾದ ದಿನಸಿ ಪದಾರ್ಥ ಗಳೆಲ್ಲಾ ಇದ್ದವು. ಹಾಲಿನವನು ಮನೆಗೇ ಬರುತ್ತಿದ್ದ. ತರಕಾರಿ ಬೇಕೆನಿಸಿದರೆ, ಮನೇ ಮುಂದೆ ಮಾರಲು ಬರುವವರಿದ್ದರು...ಹೊರಗೆ ಹೋಗುವ ಕೆಲಸವೇನೂ ಇಲ್ಲ. ಆದರೂ... ಆದರೂ... ಏನೋ ಆತಂಕ. ಇದೇ ಮಾತನ್ನು ಒಂದೆರಡು ಸಲ ಆಡಿದಾಗ ನಿರ್ಮಲ ಒರಟಾಗಿ ಹೇಳಿದಳು.

"ನಾನು ಪಕ್ಕದಲ್ಲಿರುವಾಗ, ನಿಮಗೆ ನಿಮ್ಮಮ್ಮನ ಚಿಂತೇನಾ? ಅವರು ಎಲ್ಲಾ ತಿಳಿದವರು. ನಿಮ್ಮ ಸ್ನೇಹಿತ ನೋಡ್ಕೋತಾರೆ. ಇನ್ನೇಕೆ ನಿಮಗೆ ಚಿಂತೆ? ನಾವು

ಹನಿಮೂನ್‌ಗೆ ಹೋಗುತ್ತಿರುವ ಹೊಸ ದಂಪತಿಗಳು. ರ್ಮೊಮಾಂಟಿಕ್ ಆಗಿ ಮಾತನಾಡಿ."

"ನನ್ನ ಪರಿಸ್ಥಿತಿ ನಿನಗೆ ಅರ್ಥವಾಗುಲ್ಲ."

"ಅಂಥಾದ್ದೇನಾಗಿದೆ ಈಗ? ಕಾಲೇಜಿನಲ್ಲಿ ಇಂಗ್ಲೀಷ್ ಪಾಠ ಹೇಳಿ ಕೊಡುವವರು ನೀವು...ನೀವು ಬಹಳ ರ್ರೊಮಾಂಟಿಕ್ ಅಂತ ಅಂದುಕೊಂಡಿದ್ದೆ ನಿಮಗೆ ಸದಾ ಮನೆಯ ಚಿಂತೆ ...ಅದೂ ಅವರಿಬ್ಬರದು.."

"ಅವರಿಬ್ಬರ ಜವಾಬ್ದಾರಿ ನನ್ನ ಮೇಲಿದೆಯಲ್ಲ.?"

"ನನ್ನ ಜವಾಬ್ದಾರೀನೂ ನಿಮ್ಮ ಮೇಲೇ ಇದೆ.. "ನಗುತ್ತಾ ಅಂದಳು

"ನೀನು ಎಜುಕೇಟೆಡ್..ಎಲ್ಲಾ ತಿಳಿದವಳು..ನಿನ್ನ ವಿಚಾರನೇ ಬೇರೆ..ಅಮ್ಮನ ವಿಚಾರಾನೇ ಬೇರೆ."

"ಇಷ್ಟೆಲ್ಲಾ ಚಿಂತೆ ಮಾಡುವ ಬದಲು, ಅವರುಗಳನ್ನು ಕರೆದುಕೊಂಡು ಬರಬೇಕಾಗಿತ್ತು?"

"ಹನಿಮೂನ್ ಅಲ್ಲದಿದ್ದರೆ ಹಾಗೇ ಮಾಡುತ್ತಿದ್ದೆನೋ ಏನೋ..?"

"ಹಾಗೇನು ಮಾಡುತ್ತಿರಲಿಲ್ಲ. ನೀವೆಲ್ಲಿಗೂ ಹೋಗ್ತಾನೆ ಇರಲಿಲ್ಲ."

"ಯೂ ಆರ್ ರೈಟ್. ನಾನು ಅಮ್ಮನ್ನ ಬಿಟ್ಟು ಒಂದು ದಿನವೂ ಎಲ್ಲಿಗೂ ಹೋದವನಲ್ಲ. ಪ್ರತಿವರ್ಷ ಕಾಲೇಜಿನಿಂದ ಎಕ್ಸ್‌ಕರ್ಷನ್‌ಗೆ ಬನ್ನಿ ಅಂತ ಕರೀತಾರೆ. ಅದಕ್ಕೆ ಸಹ ಹೋಗುತ್ತಿರಲಿಲ್ಲ."

"ಹಾಗಾದ್ರೆ..ಈಗ ನನ್ನಿಂದ ನಿಮಗೂ..ನಿಮ್ಮ ತಾಯಿಗೂ ತೊಂದರೆ?"

"ಎಂಥಾ ಮಾತು ನಿರ್ಮಲಾ ನನಗೆ ನೀವಿಬ್ಬರೂ ಬೇಕು..ಅವಳು ನನ್ನ ತಾಯಿ ನೀನು ನಾನು ಮೆಚ್ಚಿದವಳು ಎನ್ನುತ್ತಾಅವಳ ಭುಜದ ಮೇಲೆ ತನ್ನ ತಲೆಯನ್ನಿರಿಸಿದ" ನಿರ್ಮಲ ಎಲ್ಲವನ್ನು ಮರೆತಳು.

ಬಸ್ಸು, ಗೋವಾವನ್ನು ಸೇರಬೇಕಾದ ಸಮಯಕ್ಕಿಂತ ಒಂದು ಗಂಟೆ ಲೇಟಾಗಿ ತಲುಪಿತು. ಬಸ್ಸಿನಿಂದ ಇಳಿಯುತ್ತಿದ್ದಂತೇ, ಕೂಲಿಗಳು, ಗೈಡ್‌ಗಳು ನಾ ಮುಂದು, ತಾಮುಂದು ಎಂದು ತಳ್ಳಿಕೊಂಡು ಬಂದರು. ಇವರು ಒಬ್ಬ ಗೈಡ್‌ನ ಸಹಾಯದಿಂದ ಒಂದು ಸುಸಜ್ಜಿತ ಹೋಟೆಲ್ಲನ್ನು ತಲುಪಿದರು. ನಿರ್ಮಲಾ ಬೆರಗಾಗಿ ಪ್ರಕೃತಿ ಸೌಂದರ್ಯವನ್ನು ಜನ ಜಂಗುಳಿಯನ್ನು ನೋಡುವುದರಲ್ಲಿ ತಲ್ಲೀನಳಾಗಿದ್ದಳು. ಹೋಟೆಲ್ಲಿಗೇ ತಿಂಡಿಯನ್ನು ತರಿಸಿಕೊಂಡರು.

"ಇಲ್ಲಿಂದ ವಾಪಸ್ಸು ಹೋಗುವಾಗ, ರೈಲಿನಲ್ಲಿ ಹೋಗೋಣ. ಜರ್ನಿ ಇಷ್ಟು ಕಷ್ಟವಾಗಿರುಲ್ಲ. ನೀನು ಸ್ವಲ್ಪ ಹೊತ್ತು ಮಲಗಿಕೊಂಡು ರೆಸ್ಟ್ ತಗೊಳ್ಳುವು ದಾದರೆ ತಗೋ. ನಾನು ರೈಲಿಗೆ ಬುಕ್ ಮಾಡಿಸಿಕೊಂಡು ಬರ್ತೀನಿ,"

"ಬರ್ತಿದ್ದ ಹಾಗೇ ವಾಪಸ್ಸು ಹೋಗೋ ಚಿಂತೇನಾ ಆಗಲೇ...? ಯಾಕೆ? ಹೋದರಾಯ್ತು ನಿಧಾನವಾಗಿ...ನಿಮ್ಮಮ್ಮನ ಚಿಂತೇನಾ?"ತಮಾಷೆ ಮಾಡಿದಳು.

"ನಿನಗೆ ತಮಾಷೆ..ನಾನೂ ನಿನ್ನ ತಾಯಿಯ ಬಗ್ಗೆ ಹೀಗೇ ಮಾತನಾಡಿದರೆ ನಿನಗೇನನ್ನಿಸುತ್ತೆ?" ಅವಳ ಪಕ್ಕದಲ್ಲಿ ಕೂರುತ್ತಾ ಕೇಳಿದ

"ಏನೂ ಅನ್ನಿಸುಲ್ಲ. ಏನು ಬೇಕಾದ್ರೂ ಆಡಿ"

"ಏನಾದ್ರೂ ವಿಚಾರ ಗೊತ್ತಿದ್ರಲ್ವಾ ಆಡೋದು...ಇಷ್ಟಕ್ಕೂ ಇದುವರೆಗೂ ನಾನು ಅವರನ್ನು ನೋಡೇ ಇಲ್ಲ. ನನ್ನನ್ನು ಪರಿಚಯ ಮಾಡಿಸಿ ಕೊಡಲೇ ಇಲ್ಲ ನೀನು?"

"ನಮ್ಮಮ್ಮ ಸ್ವಲ್ಪ ಬಿಜಿ. ಸಮಯಾನೇ ಒದಗಲಿಲ್ಲ. ಈಗ ಅವರಿವರ ಮಾತು ಏಕೆ? ನಮ್ಮಿಬ್ಬರ ಮಾತು ಸಾಕು."

" ನನಗೂ ನಿಮನ್ನ ಮನೆಯವರ ವಿಚಾರವನ್ನು ತಿಳಿದುಕೊಳ್ಳಬೇಕು ಅನ್ನೋ ಕುತೂಹಲ ಇರುಲ್ವಾ? ನಮ್ಮ ಮನೆಯವರ ವಿಚಾರವನ್ನು ನೀನು ಕೇಳಿದ್ರೆ ನೀನು ಹೇಳುಲ್ವಾ?"

"ಎಲ್ಲಿ ಹೇಳಿದ್ರಿ? ನಿಮ್ಮ ತಂಗಿಯ ವಿಚಾರವನ್ನು ಕೇಳಿದಾಗಲೆಲ್ಲಾ ಎದ್ದು ಓಡಿ ಹೋಗ್ತಿದ್ರೀ..ಈಗ ನನಗೇನೂ ಕೇಳುವ ಆಸಕ್ತಿ ಇಲ್ಲ ಬಿಡಿ. ಅವಳ ಆ ನುಡಿ ಅವನನ್ನು ವ್ಯಥೆಗೀಡು ಮಾಡಿತು. ಇಷ್ಟೇನಾ ಇವಳಿಗೆ ನಮ್ಮ ಮನೆಯವರ ಮೇಲಿನ ಆಸಕ್ತಿ? ಹಾಗಾದರೆ, ಯಾವುದೋ ಒಂದು ಸ್ತ್ರೀ ಸಹಜವಾದ ಆಸೆಯಿಂದ ಮದುವೆ ಆಗಿದಾಳೆ ಅಂತ ಕಾಣಿಸುತ್ತೆ. ಬರೀ ನಾನೊಬ್ಬ ಬೇಕು ಅಷ್ಟೇ.... ಎನ್ನುವ ನಿರ್ಧಾರಕ್ಕೆ ಬಂದಿದ್ದ.

"ನಿನಗೆ ಆಸಕ್ತಿ ಇಲ್ಲದಿದ್ದರೆ ಬೇಡ ಬಿಡು. ನಾನಾಗೇ ನಾನು ಹೇಳುವ ಮನಸ್ಸಂತೂ ಇಲ್ಲ. ಆದರೆ, ಗಂಡ ಹೆಂಡತಿ ಅಂತ ಅಂದ್ರೆ..ಇಬ್ಬರ ಮವೆಯವರ ವಿಚಾರವನ್ನು ಕೇಳಿ ತಿಳಿದುಕೊಳ್ತಾರೆ ಅಂತ ಅಂದ್ಕೊಂಡಿದ್ದೆ. ನಿಮ್ಮ ಮನೆಯ ವಿಚಾರಾನೂ ಅಷ್ಟೇ..ನಾನಾಗಿಯೇ ನಾನು ಕೇಳುಲ್ಲ. ನಿನಗಿಷ್ಟವಿಲ್ಲದಿದ್ದರೆ ನೀನೂ ಹೇಳಬೇಡ...."

"ರಂಗನಾಥ ಅಂತ ಹೆಸರಿಟ್ಟುಕೊಂಡು, ಆಗಾಗ್ಗೆ ರಾಂಗ್ ಆಗ್ತೀರಲ್ಲ ಬರೀ ವಾಗ್ವಾದಾನೇ ಮಾಡ್ತೀರಾ...?"

"ಎಷ್ಟಾಗಲೀ, ಸದಾ ಬಾಯಿ ಒಣಗಿಸಿಕೊಂಡು, ಗಂಟಲು ಹರಿದು ಕೊಳ್ಳುವ ಮೇಷ್ಟ್ರು ನಾನು. ಈಗ ಗಂಟಲು ಒಣಗಿದರೆ, ಔಷಧಿ ಕೊಡೋಕೆ ನೀನಿದೀಯಲ್ಲ.?" ಎನ್ನುತ್ತಾ ಅವಳ ಬಳಿಗೆ ಸರಿದ.

"ಅಬ್ಬಾ ಔಷಧ ಬೇಕಾದಾಗ ಮಾತ್ರ ನನ್ನ ಜ್ಞಾಪಕ ಬರುತ್ತೆ ಅಂತಾಯ್ತು.?" ಎಂದಳು ಕಿಲಕಿಲನೆ ನಗುತ್ತಾ. ರಂಗನಾಥ ಮಡದಿಯ ಚೆಲುವನ್ನು ಆಸ್ವಾದಿಸಿದ.

ಮಲಗಿ ನಿದ್ದೆ ಮಾಡಿ ಎದ್ದು, ರೂಮಿಗೇ ಊಟ ತರಿಸಿಕೊಂಡು ತಿಂದರು. ಮತ್ತೆ ಕೆಲವು ಸಮಯದ ನಂತರ ಹೊರಗೆ ತಿರುಗಾಡಲು ಹೊರಟರು. ಮೊದಲು ರೈಲ್ವೇ ಸ್ಟೇಷನ್‌ಗೆ ಬಂದು ಬುಕಿಂಗ್ ಆಫೀಸ್ನಲ್ಲಿ ವಿಚಾರಿಸಿದ. ಮುಂದಿನ ಐದಾರು ದಿನಗಳ ನಂತರಕ್ಕೆ ಫಸ್ಟ್ ಕ್ಲಾಸಿನಲ್ಲಿ ಎರಡು ಸೀಟು ಸಿಕ್ಕಿತು. ಹೊರಗೆ ಟ್ಯಾಕ್ಸಿಯ ಒಳಗಡೆಯೇ ಕುಳಿತು ಏನನ್ನೋ ಓದುತ್ತಿದ್ದಳು. ಟ್ಯಾಕ್ಸಿ ಡ್ರೈವರ್, ಇಳಿದು ಆಚೆ ನಿಂತಿದ್ದ. ಮನಸ್ಸಿಗೆ ನಿರಾಳವಾಯಿತು. ಎಜುಕೇಟೆಡ್, ತಿಳುವಳಿಕೆ ಯುಳ್ಳವಳು, ಎಲ್ಲಾ ಮ್ಯಾನೇಜ್ ಮಾಡಿಕೊಳ್ಳುವ ಶಕ್ತಿ ಅವಳಿಗಿದೆ ಅಂತ ನನಗೆ ಗೊತ್ತಿದ್ದರೂ, ನನಗೇಕೆ ಆತಂಕ? ಏಕೋ ಏನೋ ಆ ಅನಿಸಿಕೆಗೆ ನಗು ಬಂತು.

ಅಲ್ಲಿಂದ ಮೊದಲಿಗೆ ಇಬ್ಬರೂ ಬೀಚಿಗೆ ಬಂದರು ವಿಶಾಲವಾದ ಸಾಗರವನ್ನು ಕಂಡು ಕುಣಿದಾಡಿಬಿಟ್ಟಳು. ಅಲೆಯೊಡನೆ ಆಟವಾಡಿ ಆನಂದಿಸಿದಳು. ಮರಳಿನ ಮೇಲೆ ಕೈ ಬೆರಳಿನಿಂದ ಏನೇನೋ ಗೀಚಿ ತಣಿದಳು. ಅವಳ ಮುಗ್ಧತೆಗೆ, ಉತ್ಸಾಹಕ್ಕೆ ಬೆರಗಾದ

ತನಗೇಕೆ ಹಾಗೆಲ್ಲಾ ಆಡಬೇಕು ಅಂತ ಅನ್ನಿಸಲಿಲ್ಲ. ಪ್ಯಾಂಟಿನ ಜೇಬಿನೊಳಕ್ಕೆ ಕೈಗಳನ್ನು ಇಳಿಬಿಟ್ಟು, ತುರಿಕಿ, ಅವಳನ್ನೇ ನೋಡುತ್ತಿದ್ದ. ತನಗೇ ಸಾಕು ಎನಿಸುವವರೆಗೂ ಆಡಿಕೊಳ್ಳಲಿ ಎನ್ನುವಂತೆ ಸುಮ್ಮನಿದ್ದ.

"ಬೋಟಿಂಗ್ ಹೋಗೋಣ್ವಾ? ಎಲ್ಲರೂ ಹೋಗ್ತಿದಾರೆ..." ಕೇಳಿದಳು.

"ಹೂಂ. ಹೋಗೋಣ. ನಿನ್ನ ಆಟ ಮುಗಿದಿದ್ದರೇ.."ನಕ್ಕ.

"ನಿಮಗೆ ನಗು. ನಾನು ಚಿಕ್ಕವಳಾಗಿದ್ದಾಗ ಇದನ್ನೆಲ್ಲಕಂಡಿರಲಿಲ್ಲ. ಈಗ ಕಂಡಾಗ ಅದೇ ಉತ್ಸಾಹ ಮೂಡಿ ಬಂದ್ರೆ ತಪ್ಪಾ?"

"ತಪ್ಪೇನಿಲ್ಲ. ತಪ್ಪೇನಿಲ್ವಲ...ಮಕ್ಕಳನ್ನು ನೋಡಿ ನೋಡಿ, ನೀನೂ ಮಗುವಾಗಿ ಬಿಟ್ಟಿದೀಯೇನೋ ಅಂತನ್ನಿಸಿಬಿಡ್ತು. ಆದರೆ ನನಗೇಕೋ.. ನಿನ್ನ ಹಾಗೆ ಆಡಬೇಕು ಅಂತನ್ನಿಸಲೇ ಇಲ್ಲ."

"ನಿಮ್ಮ ಸ್ಟೂಡೆಂಟ್ ಯಾರಾದ್ರೂ ಇಲ್ಲಿರಬಹುದು ನೋಡಿದರೆ ಏನು ಗತಿ? ಚುಡಾಯಿಸದೇ ಬಿಡ್ತಾರಾ ಎನ್ನೋ ಅನುಮಾನ ಇರಬಹುದು.?"

"ಸ್ಟೂಡೆಂಟ್ಸ್‌ಗೆಲ್ಲಾ ಹೆದರೋನು ನಾನಲ್ಲ ಎಂದ ಬಿಗುವಾಗಿ."

ಸಾಕಷ್ಟು ಸುತ್ತಾಡಿ ರೂಮಿಗೆ ಬಂದಾಗ ರಾತ್ರಿಯಾಗಿತ್ತು ಊಟದ ವೇಳೆ ಮೀರಿರಲಿಲ್ಲವಾದ್ದರಿಂದ, ರೂಮಿಗೇ ಊಟ ಬಂತು. ಊಟ ಮಾಡಿ ಮಲಗಿದ ನಿರ್ಮಲ ನೆಮ್ಮದಿಯಿಂದ ನಿದ್ದೆ ಮಾಡಿದಳು. ಸಾಗರದ ಅಲೆಗಳಲ್ಲಿ ಓಲಾಡುತ್ತಾ ತೇಲಾಡುತ್ತಾ ವಿಹರಿಸಿದಳು. ಕನಸಿನಲ್ಲಿ ಅವಳು ಕನವರಿಸಿದಾಗ ರಂಗನಾಥ ಬೆಚ್ಚಿಬಿದ್ದ. ಅವನಿಗೇಕೋ ನಿದ್ದೆಯೇ ಬಂದಿರಲಿಲ್ಲ.

ಮುಂದಿನ ಎರಡು ದಿನಗಳಲ್ಲಿ ಸುತ್ತಾಡುವಷ್ಟು ಸುತ್ತಾಡಿ ದಣಿದರು. ಪ್ರೇಕ್ಷಣೀಯ ಸ್ಥಳಗಳನ್ನು ನೋಡಿದರು. ನಿರ್ಮಲ ಕಂಡ ಕಂಡ ವಸ್ತುಗಳನ್ನೆಲ್ಲ ಕೊಳ್ಳಲು ಇಚ್ಛಿಸಿದಳು. ಬೇಡ, ಇಲ್ಲಿ ದುಬಾರಿ ಅಂತ ಹೇಳಿದರೂ, ತನಗೆ ಬೇಕೆನಿಸಿದ ಸೀರೆಗಳನ್ನು ಕೊಂಡಳು. ಮಡದಿಯ ಇಚ್ಛೆಗೆ ಅಡ್ಡಿ ಬರಲಿಚ್ಛಿಸದೆ ಅವಳು ಕೇಳಿದ್ದನ್ನೆಲ್ಲ ರಂಗನಾಥ ಕೊಡಿಸಿದ. ಅವಳ ಖುಷಿಯನ್ನು ಕಂಡು ಅವನಿಗೂ ಖುಷಿಯಾಗಿತ್ತು. ಇನ್ನು ನಾಳೆ ಒಂದೇ ದಿನ, ನಾಳಿದ್ದು ಹೊರಟು ಬಿಡಬೇಕು ಎಂದುಕೊಂಡಾಗ, ಊರಿನಲ್ಲಿದ್ದ, ತಾಯಿಯ, ಮನೋಜನ ನೆನಪಾಗಿತ್ತು. ಅವರಿಬ್ಬ ರಿಗೂ ಇಲ್ಲಿಂದ ಏನಾದರೂ ಹೋಗೋಣ ಎಂದು ಕೊಂಡು, ಪರ್ಸುತೆಗೆದು, ಹಣ ಎಣಿಸಿ ನೋಡಿದಾಗ ಸಾಕಷ್ಟು ಹಣವಿರಲಿಲ್ಲ. ಸ್ವಲ್ಪವೇ ಉಳಿದಿತ್ತು. ಮನಸ್ಸು ಹಿಂಜರಿದರೂ ನಿರ್ಮಲೆಯನ್ನು ಕೇಳಿದ.

"ನಿರ್ಮಲಾ, ನಿನ್ನ ಹತ್ತಿರ ಸ್ವಲ್ಪ ದುಡ್ಡೇನಾದ್ರೂ ಇದೆಯಾ?"ಅಂತ.

"ಯಾಕೆ?" ಅವಳು ಆಶ್ಚರ್ಯ ಅನುಮಾನಗಳಿಂದ ಕೇಳಿದಳು.

"ನಾನು ತಂದಿದ್ದೆಲ್ಲಾ ಮುಗಿದು ಹೋಗಿದೆ. ಹೋಟೆಲ್ಲಿನ ಬಿಲ್ ಪೇ ಮಾಡುಕ್ಕೆ ಟ್ಯಾಕ್ಸಿಗೆ ಅಂತ ಒಂದಿಷ್ಟು ಇಟ್ಟುಕೊಂಡಿದೀನಿ ಅಷ್ಟೇ"

"ಮತ್ತೆ ಬಿಡಿ. ಅಡ್ಜಸ್ಟ್ ಆಗುತ್ತಲ್ಲ. ಇನ್ಯಾಕೆ?"

"ಅಮ್ಮಂಗೆ, ಮನೋಜರಿಗೆ, ಏನಾದ್ರು ತಗೊಳ್ಳೋಣ ಅಂತನಿಸ್ತು"

"ಮುಂಚೇನೇ ಹೇಳಿದ್ರೆ, ನಾನು ತಗೋಳ್ತಾನೇ ಇರಲಿಲ್ಲ. ಅವರಿಬ್ಬರಿಗೇ ತಗೋ

ಬಹುದಾಗಿತ್ತು?" ಧ್ವನಿಯಲ್ಲಿ ಮೃದುತ್ವವಿರಲಿಲ್ಲ.

"ಈಗೇನಾಯ್ತೀಗ? ಅವರಿಗೂ ತಗೊಂಡ್ರೆ ಆಯ್ತು. ನಿನ್ನ ಹತ್ತಿರ ಹಣ ಇದ್ದರೆ ಕೊಟ್ಟಿರು." ನಿರ್ಮಲ ಕೆಟ್ಟ ಮುಖ ಮಾಡಿದಳು.

"ಸಾರಿ, ನನ್ನ ಹತ್ತಿರ ಇಲ್ಲ. ನಾನು ಏನೂ ತಂದಿಲ್ಲ."

"ಆಂ!ತಮಾಷೆ ಮಾಡ್ತಿದೀಯ? ಅಮ್ಮಂಗೆ, ಮನೋಜಂಗೆ ಏನೂ ತಗೊಂಡು ಹೋಗುವುದು ಬೇಡ ಅಂತ ಮನಸ್ಸಿನಲ್ಲಿದ್ರೆ ಹಾಗೇ ಹೇಳಿಬಿಡು. ತಮಾಷೆಗೂ ಸುಳ್ಳು ಹೇಳಬೇಡ?" ಅವನಿಗೆ ಆಶ್ಚರ್ಯವಾಗಿತ್ತು.

"ಸುಳ್ಳ್ಯಾಕೆ ಹೇಳಲಿ ನಾನು? ನೀಜಾನೇ...ನಾನೇನೂ ತಂದಿಲ್ಲ "ಅವಳ ಮುಖ ಕೆಂಪಾಗಿತ್ತು. ಧ್ವನಿ ನಡುಗಿತ್ತು.

"ಜೋಕ್ ತುಂಬಾ ಚೆನ್ನಾಗಿದೆ. ಅಷ್ಟೊಂದು ಸಂಪಾದಿಸುವವಳು ನೀನು. ಕೈಯಲ್ಲಿ ಹಣ ಇಟ್ಕೊಂಡಿಲ್ಲ ಅಂದರೆ ನಾನು ಹೇಗೆ ನಂಬಲಿ? ನಿನಗಿಷ್ಟವಿಲ್ಲ ದಿದ್ದರೆ ಕೊಡಬೇಡಬಿಡು. ತಂದಿಲ್ಲ ಅಂತ ಮಾತ್ರ ಸುಳ್ಳು ಹೇಳಬೇಡ."

"ಇಷ್ಟ, ಇಷ್ಟವಿಲ್ಲ ಅಂತ ಏನೂ ಇಲ್ಲ. ತಂದಿಲ್ಲ ಅಷ್ಟೇ.. ತರಬೇಕು ಅಂತ ನನಗೆ ಅನ್ನಿಸಲಿಲ್ಲ. ತರಲಿಲ್ಲ. ನೀವು ಜತೆಯಲ್ಲಿ ಇದ್ರಿ...ನನಗೆ ಹಣದ ಅವಶ್ಯಕತೆ ಏನಿತ್ತು? ನನಗೆ ಹೇಗೆ ಗೊತ್ತಾಗಬೇಕು ನೀವು ಕೇಳ್ತೀರಿ ಅಂತ? ನೀವೇ ಇನ್ನೊಂದಿಷ್ಟು ಹಣ ತರಬಹುದಾಗಿತಲ್ಲ.?" ಅವನ ಕಡೆ ನೋಡದೇ ಮಾತನಾಡಿದಳು.

"ನಾನ? ನಾನೇನು ಈಗ ಕಮ್ಮಿ ತಂದಿದ್ದೆ ಅಂತ ಅಂದ್ಕೊಂಡ್ಯಾ? ತಂದ ಹಣವೆಲ್ಲಾ ಖರ್ಚಾಗಿ ಹೋಗಿದೆ ಅಷ್ಟೇ. ಯಾಕೆ ಖರ್ಚಾಯಿತು? ಎಷ್ಟು ಖರ್ಚಾಯಿತು? ಅಂತ ನನಗೆ ಗೊತ್ತಿಲ್ಲ ಅಷ್ಟೇ. ಹೋಗಲಿ ಬಿಡು. ಇನ್ನು ಮಾತನಾಡಿ ಏನು ಪ್ರಯೋಜನ?" ಅವನಿಗೆ ತುಂಬಾ ಅಸಮಾಧಾನವಾಗಿದೆ ಯೆನ್ನುವುದನ್ನು ಅರಿತಳು. ಮುಂದಿನ ತಿರುಗಾಟ, ಸುತ್ತಾಟದಲ್ಲಿ ಆಸಕ್ತಿ ಬರಲಿಲ್ಲ. ಸೀದಾ ಹೋಟೆಲ್ಲಿಗೆ ಬಂದರು. ಇಬ್ಬರ ಮನಸ್ಸೂ ಕದಡಿ ಹೋಗಿತ್ತು.

ಎಂದಿಗಿಂತ ಮೌನವಾಗಿದ್ದ ಅವನ್ನು ಕಂಡು ಬೇಸರವೆನಿಸಿತು. ತನ್ನ ಹತ್ತಿರ ಹಣವಿರಲಿಲ್ಲ. ಆದ್ದರಿಂದ ತರಲಿಲ್ಲ ಎಂದು ಹೇಳುವುದಕ್ಕಾಗಲಿಲ್ಲ ಅವಳಿಂದ. ತಾನು ಅಷ್ಟು ಸಂಪಾದಿಸಿದರೂ, ಅದನ್ನೆಲ್ಲ ತಂದೆಗೆ ಕೊಟ್ಟು ಬಿಡ್ತೀನಿ ಎಂದು ಹೇಳಿಕೊಳ್ಳುವ ಮನಸ್ಸಾಗಲಿಲ್ಲ. ಇವನೂ ಸಂಪಾದಿಸುವವನೇ. ತಾಯಿಗಾಗಲೀ, ಹೆಂಡತಿಗಾಗಲೀ, ಖರ್ಚುಮಾಡುವ ಜವಾಬ್ದಾರಿ ಇವನದೇ ತಾನೆ. ಅದಕ್ಕೆ ತಾನೇಕೆ ತಲೆ ಕೆಡಿಸಿಕೊಳ್ಳಬೇಕು ಎಂದುಕೊಂಡು ತಲೆ ಕೊಡವಿಕೊಂಡಳು.

ಅಂತೂ ತಾಯಿಗೆ ಅಂತ ಏನನ್ನೂ ತಗೊಳ್ಳಲಾಗಲಿಲ್ಲ. ಅಮ್ಮ ಏನಂದು ಕೊಳ್ಳಬಹುದು? ಅಮ್ಮನಿಗೆ ಅಂತ ಇದುವರಿಗೂ ತಾನು ಏನನ್ನು ತಂದು ಕೊಟ್ಟಿಲ್ಲ..ಹೆಂಡತಿಗಾದರೆ ಕೊಡಿಸಿದ ಅಂತ ಅಮ್ಮ ಗೇಲಿ ಮಾಡಬಹುದು ಅಥವಾ, ಬೇಸರಗೊಳ್ಳಬಹುದು. ಈ ಯೋಚನೆ ಮುಂಚೆಯೇ ಬಂದಿದ್ರೆ... ಒಂದಿಷ್ಟು ಖರ್ಚು ಕಮ್ಮಿ ಮಾಡಬಹುದಾಗಿತ್ತು. ಅಥವಾ ನಿರ್ಮಲಾ ಹೇಳಿದಂತೆ ಇನ್ನೊಂದಿಷ್ಟು ಹಣಕ್ಕೆ ವ್ಯವಸ್ಥೆ ಮಾಡಬಹುದಾಗಿತ್ತು.

ನನಗೆ ಹೇಗೆ ಹೇಳಿಬಿಟ್ಟಳು ಹಣ ತಂದಿಲ್ಲ ಅಂತ? ಹೇಳ್ತಿರುವುದನ್ನು ನಿಜ

ಅಂತ ಹೇಗೆ ನಂಬುವುದು? ಕೆಲಸಕ್ಕೆ ಹೋಗಿ ಸಂಪಾದಿಸುವ ಹುಡುಗಿಯರೆಲ್ಲಾ ಪಾಕೆಟ್ ಮನಿ ಇಟ್ಕೊಂಡಿರ್ತಾರೆ ಅಂತ ಅಂದ್ಕೊಂಡಿದ್ದೆ. ಅವಳು ಹಣವನ್ನೆಲ್ಲಾ ಕೂಡಿಡುತ್ತಾಳೋ ಏನೋ? ಇವಳಿಗೆ ಖರ್ಚುತಾನೇ ಏನಿದೆ? ಹೊರಗೆಲ್ಲೂ ತಿರುಗುಲ್ಲ, ತಿನ್ನಲ್ಲ ಕುಡಿಯುಲ್ಲ. ಸ್ನೇಹಿತೆಯರಿಲ್ಲ. ಆದರೆ ಹೊಸದಾಗಿ ಮದುವೆಯಾಗಿ ಪರರ ಮನೆಗೆ ಬಂದವಳು, ಬರಿಗೈಲಿ ಬಂದಿದ್ದಾಳೆಯೆ? ಅಥವಾ ತಂದಿದ್ದರೂ, ಮನೆಯಲ್ಲೇ ಇಟ್ಟಿದ್ದಾಳೆಯೆ? ಸಂಪಾದಿಸುವವಳು ಬರಿಗೈಲಿ ಬಂದು ನನ್ನಿಂದ ಖರ್ಚು ಮಾಡಿಸಿದಳಲ್ಲ ಇದು ನ್ಯಾಯ ಸಮ್ಮತವೇ? ಅಥವಾ ಗಂಡನ ಪ್ರೀತಿಯನ್ನು ಪರೀಕ್ಷಿಸುವ ವಿಧಾನವೋ. ಅವನ ಪ್ರಶ್ನೇಗಳು ಹೆಚ್ಚುತ್ತಾ ಹೋದವು. ನಿದ್ದೆ ಸುಳಿಯಲಿಲ್ಲ ಏಕೋ ಏನೋ ಪಕ್ಕದಲ್ಲಿ ಮಲಗಿದವಳ ಮೈ ಮುಟ್ಟಲೂ ಮನಸ್ಸಾಗಲಿಲ್ಲ. ತನ್ನ ಪಾಡಿಗೆ ತಾನು ಹಣೆಯ ಮೇಲೆ ಕೈ ಅಡ್ಡ ಇಟ್ಟು ಮಲಗಿದ ನಿರ್ಮಲಾ ಲವನ ಉದಾಸೀನವನ್ನು ಗಮನಿಸಿದಳು. ರೇಗಿ ಹೋಯಿತು. ಪ್ರೀತಿ ಪ್ರೇಮ ಕೂಡಾ ಬೇಡವಾಗುವಷ್ಟು ಸಿಟ್ಟು ಬಂದಿದೆ. ಅಂಥಾ ತಪ್ಪು ನನ್ನಿಂದೇನಾಗಿದೆ? ನನ್ನ ಹತ್ತಿರ ಹಣವಿಲ್ಲದಿದ್ದರೆ ಅದು ನನ್ನ ತಪ್ಪೇ? ಸಾಕಷ್ಟು ಹಣ ಖರ್ಚು ಮಾಡುವುದಕ್ಕಾಗದಿದ್ರೆ ಹನಿಮೂನ್‌ಗೆ ಅಂತ ಯಾಕೆ ಬರಬೇಕಾಗಿತ್ತು? ಈಗ ಇದರ ಸೊಗಸೂ ಹೊರಟು ಹೋಯ್ತು ಎಂದುಕೊಂಡಳು. ಈ ಒಂದು ಮುನಿಸು ವಿರಸಕ್ಕೆ ಎಡೆಯಾಯಿತು. ಹನಿಮೂನಿನ ಸೊಗಸು ಮರೆಯಾಗಿತ್ತು.

ರಾತ್ರಿ ಕಳೆದು ಬೆಳಗಾಯ್ತು. ಇಬ್ಬರೂ ಮೌನವಾಗಿದ್ದರು. ಎಂದಿನಂತೆ ಕಾಫಿ, ತಿಂಡಿ ಮುಗಿಸಿ, ತಿರುಗಾಡಲು ಸಿದ್ದರಾಗಬೇಕಾಗಿತ್ತು. ಅವನಾಗಿಯೇ ಏನೂ ಹೇಳದಿದ್ದಾಗ ಅವಳೂ ಸ್ವಲ್ಪ ಹೊತ್ತು ಸುಮ್ಮನಿದ್ದು ಕೇಳಿದಳು.

"ನನ್ನ ಮೇಲೆ ಸಿಟ್ಟಾ ನಿಮಗೆ?"

"ಇಲ್ಲ. ಸಿಟ್ಯಾಕೆ?"

"ಮತ್ತೆ?" ಇವತ್ತೇ ಕಡೇ ದಿನ. ಹೊರಗೆ ತಿರುಗಾಡುವುದು ಬಿಟ್ಟು ರೂಮಿನಲ್ಲೇ ಇದೀವಲ್ಲ. ತಿರುಗಾಡಲು, ಮತ್ತೆ ಮತ್ತೆ ಬರ್ತೀವಾ?"

"ಸಾರಿ. ನಿರ್ಮಲಾ. ನನಗ್ಯಾಕೋ ಮೂಡ್ ಚೆನ್ನಾಗಿಲ್ಲ. ಸಾಯಂಕಾಲ ಹೋಗೋಣ.?"

"ನಿಮ್ಮ ಮೂಡ್ ಯಾಕೆ ಕೆಟ್ಟಿದೆ ಅಂತ ನನಗೆ ಗೊತ್ತಾಯ್ತು. ಈ ಸೀರೆಗಳನ್ನೇ ನಿಮ್ಮಮ್ಮನಿಗೆ ಕೊಟ್ಟು ಬಿಡಿ. ನನ್ನ ಹತ್ತಿರ ಬೇಕಾದಷ್ಟಿದೆ. ಪರವಾಗಿಲ್ಲ."

"ಬೇಡ ನಿನಗೆ ಅಂತ ಆಸೆ ಪಟ್ಟು ತಗೊಂಡಿರುವುದು. ಊರಿಗೆ ಹೋದಮೇಲೆ ಅಮ್ಮನಿಗೆ ಕೊಡಿಸಿದಾರಾಯ್ತು."

"ಮತ್ತೆ? ಹಾಗಾದರೆ ಕೋಪ ಯಾಕೆ?" ಎನ್ನುತ್ತಾ ತಾನಾಗಿಯೇ ಅವನ ಬಳಿ ಸರಿದಳು. ರಾತ್ರಿಯೆಲ್ಲಾ ವಿರಹಿಗಳಂತೆ ದೂರವಿದ್ದವರು, ಈಗ ಎಲ್ಲಾ ಮರೆತು ಮಧುರ ಸುಖವನ್ನು ಅನುಭವಿಸಿದರು. ಆದರೂ ರಂಗನಾಥನ ಮನಸ್ಸಿನಲ್ಲಿ ಅಸಮಾಧಾನದ ಹೊಗೆ ಆಡುತ್ತಲೇ ಇತ್ತು. ಅದರ ಅರಿವಿಲ್ಲದ ನಿರ್ಮಲ ತನ್ನ ಸುಖಾನುಭವದ ಕಡೆ ಗಮನವಿತ್ತಿದ್ದಳು.

ಬೆಳಿಗ್ಗೆ ಬೇಗನೇ ಹೊರಡಬೇಕಾಗಿದ್ದುದರಿಂದ ರಾತ್ರಿಯೇ ಎಲ್ಲಾ ಪ್ಯಾಕ್

ಮಾಡಿದರು. ಹೋಟೆಲ್ಲಿನ ಬಿಲ್ಲನ್ನು ಸಹ ರಾತ್ರಿಯೇ ಪೇ ಮಾಡಿ ಊರಿಗೆ ವಾಪಸ್ಸು ಹೊರಡಲು ರೆಡಿಯಾಗಿದ್ದರು. ರೈಲು ಹತ್ತಿದಾಗ ರಂಗನಾಥನ ಪರ್ಸು ಹೆಚ್ಚು ಕಡಿಮೆ ಖಾಲಿ. ಅವನಿಗೆ ಒಂದು ತರಹ ಹೀನಾಯವಾಗಿತ್ತು. ನಿರ್ಮಲ ನಿರ್ಯೋಚನೆಯಿಂದ ಇದ್ದುದನ್ನು ಗಮನಿಸಿದ. ನನ್ನಿಂದ ಇಷ್ಟು ಖರ್ಚು ಮಾಡಿಸಿದಳಲ್ಲ. ನನಗೆ ಏನು ತೆಗೆಸಿಕೊಟ್ಟಳು ಎಂದು ಕೂಡಾ ಆಲೋಚಿಸು ವಂತಾಗಿತ್ತು. ಗಂಡನಿಗೆ ಅಸಮಾಧಾನವಾಗಿದೆಯನ್ನರಿತಿದ್ದ ನಿರ್ಮಲಾ ಮೌನಿಯಾಗಿದ್ದಳು. ಏನು ಮಾತನ್ನಾಡಿದರೆ, ಏನು ಹೇಳಿ ಬಿಡಬೇಕಾಗುತ್ತದೋ ಎಂದು ಹೆದರಿದಳು. ಪ್ರಯಾಣ ಮುಗಿದು ಊರನ್ನು ಸೇರಿದರೆ ಸಾಕು ಎನ್ನುವ ಹಂತದಲ್ಲಿದ್ದ ರಂಗನಾಥ. ರೈಲ್ವೆ ಸ್ಟೇಷನ್ನಿನಲ್ಲಿ ಇಳಿದ ಕೂಡಲೇ ಸೀದಾ ಆಟೋ ಹಿಡಿದು ಮನೆಗೆ ಬಂದರು.

ಅಮ್ಮಾ ಅವನ ಹತ್ತಿರ ಚಿಲ್ಲರೆ ಇಲ್ಲವಂತೆ ಎಂದು ಹೇಳಿ ತಾಯಿಯ ಕೈನಿಂದ ಹಣ ತೆಗೆದುಕೊಂಡು ಆಟೋದವನಿಗೆ ಕೊಟ್ಟಿದ್ದ. ನಿರ್ಮಲ ಬೇಕೂಂತ ತನಗೆ ಅವಮಾನ ಮಾಡುತ್ತಿದಾನೆಂದೇ ಭಾವಿಸಿದಳು.

ಮಗ ಬಂದು ತನ್ನನ್ನೇಕೆ ಹಣ ಕೇಳಿದ. ಅವಳ ಹತ್ತಿರವೂ ಚಿಲ್ಲರೆ ಇರಲಿಲ್ಲವೇ? ಏನು ನಮ್ಮ ಹಾಗೇ? ಈ ಕಾಲದವರು, ಪರ್ಸಿನಲ್ಲಿ ಹಣ ಇಟ್ಟುಕೊಂಡು ತಿರುಗ್ತಾರಲ್ಲ? ಎಂದು ಕೊಂಡಳು ಕಾವೇರಮ್ಮ.

ಯಾವ ವಿಚಾರವೂ ತಾಯಿಗೆ ತಿಳಿಯಲಿಲ್ಲ. ಅವಳೂ ಏನೂ ಕೇಳಲಿಲ್ಲ ರಂಗನಾಥನೂ ಏನೂ ತಿಳಿಸಲಿಲ್ಲ. ನಿರ್ಮಲ ತಾನು ಆಸೆಯಿಂದ ಕೊಂಡು ಕೊಂಡ ಸೀರೆಗಳನ್ನು ಹೊರಗೆ ತೆಗೆಯುವ ಮನಸ್ಸೇ ಮಾಡಲಿಲ್ಲ. ರಂಗನಾಥನೂ ಅದನ್ನೂ ಮರೆತಂತೆ ನಟಿಸಿದ. ಇಬ್ಬರೂ ಸುಮ್ಮನಿದ್ದುಬಿಟ್ಟರು.

ಐದಾರು ದಿನಗಳು ಕಳೆದವು. ಈಗ ರಂಗನಾಥನ ರಜ ಮುಗಿದಿತ್ತು. ಕಾಲೇಜಿಗೆ ಹೋಗಿ ಬರಲಾರಂಭಿಸಿದ್ದ. ನಿರ್ಮಲ ಕ್ಲಿನಿಕ್‌ಗೆ ಹೋಗಿ ಬರುತ್ತಿದ್ದಳು. ಬೆಳಗಿನ ಹೊತ್ತು, ಅವಳನ್ನು ಹತ್ತುಗಂಟೆಯ ಹೊತ್ತಿಗೆ ಕ್ಲಿನಿಕ್‌ಗೆ ಬಿಟ್ಟು ಬರುತ್ತಿದ್ದ. ನಂತರ ಹನ್ನೊಂದು ಗಂಟೆಗೆ ತಾನು ಕಾಲೇಜಿಗೆ ಹೋಗುತ್ತಿದ್ದ ಅವನು ಮಧ್ಯಾಹ್ನ ಮೂರು ಗಂಟೆಗೆ ವಾಪಸ್ಸು ಬರುವವರೆಗೂ ಅವಳು ಕ್ಲಿನಿಕ್‌ನಲ್ಲೇ ಇರುತ್ತಿದ್ದಳು. ನಂತರ ಇಬ್ಬರೂ ಒಟ್ಟಿಗೇ ಮನೆಗೆ ಬಂದು ಊಟ ಮಾಡಿ ರೆಸ್ಟ್ ತಗೊಳ್ಳುತ್ತಿದ್ದರು. ಮತ್ತೆ ಸಾಯಂಕಾಲ ಏಳು ಗಂಟೆಯ ಹೊತ್ತಿಗೆ ಮತ್ತೆ ಅವಳನ್ನು ಕ್ಲಿನಿಕ್ ತಲುಪಿಸಿ, ತಾನು ಒಂದು ಮನೆಗೆ ಟ್ಯೂಷನ್ ಹೇಳಿ ಕೊಡಲು ಹೋಗುತ್ತಿದ್ದ. ಇದು ಮದುವೆ ಆದ ಮೇಲೆ ಮಾಡಿಕೊಂಡ ಬದಲಾವಣೆ. ಮೊದಲು ಕಾಲೇಜಿನಿಂದ ಸೀದಾ ಟ್ಯೂಷನ್ ಕ್ಲಾಸನ್ನು ಮುಗಿಸಿ ಕೊಂಡು ಮನೆಗೆ ಬರುತ್ತಿದ್ದ .

ಪಿ. ಯು. ಸಿ. ಯಲ್ಲಿ ಇಂಗ್ಲೀಷ್‌ನಲ್ಲಿ ಫೇಲಾದ ಒಬ್ಬಳು ಹುಡುಗಿಗೆ ಪಾಠ ಹೇಳಿಕೊಡುತ್ತಿದ್ದ. ಹುಡುಗಿ ಬಡವರ ಮನೆಯವಳಾದುದರಿಂದ ಫೀಸು ತೆಗೆದುಕೊಳ್ಳುತ್ತಿರಲಿಲ್ಲ. ಆ ಹುಡುಗಿಯನ್ನು ನೋಡಿದಾಗಲಿಲ್ಲಾ ಅವನಿಗೆ ಅನೂರಾಧನ ನೆನಪು ಒತ್ತಿ ಒತ್ತಿ ಬರುತ್ತಿತ್ತು. ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಅನೂರಾಧ ಅವನ ಹತ್ತಿರ ಇಂಗ್ಲೀಷ್ ಪಾಠವನ್ನು ಹೇಳಿಸಿ ಕೊಳ್ಳುತ್ತಿದ್ದಳು.

ನಿರ್ಮಲ ಕ್ಲಿನಿಕ್‌ಗೆ ಹೋಗಲು ಪ್ರಾರಂಭಿಸಿ, ತಿಂಗಳು ಕಳೆಯುತ್ತಾ ಬಂದರೂ,

ಅವಳು ರಂಗನಾಥನ ಕೈಗೆ ಹಣ ಕೊಡಲಿಲ್ಲ. ಅಥವಾ ಪೀಸು ಎಷ್ಟು ಸಿಕ್ಕಿತು ಎಂದು ಮನೆಯಲ್ಲಿ ಹೇಳುತ್ತಿರಲಿಲ್ಲ. ಹಣದ ಲೆಕ್ಕ ಹಾಕುತ್ತಿರ ಲಿಲ್ಲ. ಮನೆಗೆ ಎಂದೂ ಹಣ ತರಲೂ ಇಲ್ಲ. ರಂಗನಾಥ ಆ ಬಗ್ಗೆ ಕೇಳಲೂ ಇಲ್ಲ.

ಆದರೆ ಅವಳೆಂದೂ, ಮನೆಗಾಗಿ, ಒಂದೇ ಒಂದು ಬಿಡಿಗಾಸನ್ನು ಖರ್ಚು ಮಾಡಿದಂತೆ ಕಾಣಲಿಲ್ಲ ರಂಗನಾಥನಿಗೆ. ಕ್ಲಿನಿಕ್‌ಗೆ ಸ್ಕೂಟರ್‌ನಲ್ಲಿ ಬಿಟ್ಟು ಬರುತ್ತಿದ್ದ. ಮನೆಗೆ ಬೇಕಾದ ಸಾಮಾನುಗಳನ್ನು ಅವನೇ ತರುತ್ತಿದ್ದ ಮನೆ ಮುಂದೆ ತರಕಾರಿ ಗಳನ್ನು ಅಮ್ಮನೇ ತೆಗೆದುಕೊಳ್ಳುತ್ತಿದ್ದಳು. ಅವಳು ತನಗಾಗಿ ಎಂದೂ ಕಾಸ್ಮೆಟಿಕ್ಸ್ ಗಳನ್ನಾಗಲೀ, ಮನೋಜನಿಗೆಂದು ಆಟದ ಸಾಮಾನುಗಳನ್ನು ಕೊಂಡಂತೆ ಕಾಣಲಿಲ್ಲ. ಅವನಿಗೆ ಆಶ್ಚರ್ಯವಾಗಿತ್ತು. ಆದರೆ, ಅವಳನ್ನು ಅವಳ ಸಂಪಾದನೆ ಬಗ್ಗೆ ಏನನ್ನೂ ಕೇಳಬಾರದು ಎಂಬ ಅಭಿಮಾನ ಅವನನ್ನು ತಡೆದಿತ್ತು. ಅವಳಾಗಿಯೇ ಹೇಳಲಿ ಎಂದು ಕಾಯುತ್ತಿದ್ದ. ಈಗ ಮನೆಯ ಖರ್ಚು ಸ್ವಲ್ಪ ಹೆಚ್ಚಾಗಿತ್ತು. ನಿರ್ಮಲ ಮನೆಯ ಖರ್ಚಿಗೆ ಸಹಾಯ ಮಾಾಡಿದ್ದರೆ ಚೆನ್ನಾಗಿತ್ತೆನಿಸಿತ್ತು. ಯಾರಿಗಾದರೂ ಹೇಳಿದರೆ ನಗುವುದಿಲ್ಲವೇ? ಗಂಡ ಹೆಂಡತಿ ಇಬ್ಬರೂ ಸಂಪಾದಿಸುತ್ತಾರೆ,... ಆದರೆ ಮನೆ ಮಾತ್ರ ಸುಧಾಮನ ಮನೆ ಅಂತ. ನೋಡೋಣ. ನಾನಾಗಿಯೇ ಕೇಳಲಿ ಅಂತ ಅವಳೂ ಸುಮ್ಮನಿರಬಹುದು. ಒಂದಲ್ಲ ಒಂದು ದಿನ ಅವಳು ತಾನಾಗಿಯೇ ಮನೆ ಖರ್ಚಿಗೆಂದು ಹಣ ಕೊಡ ಬಹುದು ಅವಳಿಗೂ ಈ ಮನೆ ಸೇರಿದ್ದೇ ತಾನೇ. ಆದರೂ...ಈಗ, ನನಗೇ ತಿಳಿಯದಂತೆ ಹಣ ಎಷ್ಟು ಖರ್ಚಾಗಿದೆ? ಸತ್ಯನಿಗೆ ಕೊಡಬೇಡವೇ? ಅವನು ಸಹಾಯ ಮಾಡದೇ ಇದ್ದಿದ್ದರೆ ನನ್ನ ಸಾಲವೂ ಬೇಗ ತೀರುತ್ತದೆ. ನಾನಾಗಿಯೇ ಕೇಳುವುದು ಹೇಗೆ? ಅವಳಾಗಿಯೇ ತಿಳಿದುಕೊಳ್ಳಲಿ. ಗೋವಾದಲ್ಲಿ ತನಗೆ ಬೆಕೆನಿಸಿದ್ದನ್ನು ಕೊಂಡು, ನನ್ನಿಂದ ಖರ್ಚು ಮಾಡಿಸಿದಳು. ಕೇಳಿದಾಗ ಹಣವನ್ನು ತಂದೇ ಇಲ್ಲ ಎಂದಳು. ನಿಜವೋ ಸುಳ್ಳೋ. ಅಮ್ಮನಿಗೋಸ್ಕರ ಖರ್ಚು ಮಾಡಲು ಇಷ್ಟವಿಲ್ಲದಿರಬಹುದು. ಹಾಗೇ ಈ ಸಂಸಾರಕ್ಕೆ ಖರ್ಚು ಮಾಡಲು ಅವಳಿಗಿಷ್ಟ ವಿಲ್ಲದೇ ಇದ್ದರೇ...ತನ್ನ ಅನಿಸಿಕೆಗಳ ಬಗ್ಗೆ ಹೀನಾಯವೆನಿಸಿತು. ನಾನೆಂತಹ'ವನು? ಅವಳ ಸಂಪಾದನೆ ಬಗ್ಗೆ ಚಿಂತಿಸುತ್ತಿದೀನಲ್ಲ.. ಆದರೆ ಅವಳ ನಡೆವಳಿಕೆಯೂ ವಿಚಿತ್ರವಾಗಿದೆ ಅಲ್ಲವೆ? ಮದುವೆಯಾಗಿ ತಿಂಗಳು ಕಳೆಯಿತು. ಅವಳಿನ್ನು ಹೊಂದಿಕೊಂಡಿಲ್ಲ ಈ ಮನೆಗೆ. ಅಮ್ಮನಿಗೆ, ಇವಳಿಂದ ನೆರವನ್ನು ಅಪೇಕ್ಷಿಸುವುದು ತೀರಾ ಹಾಸ್ಯಾಸ್ಪದ. ಇವಳಿಗೋಸ್ಕರ ಕೆಲಸದವಳನ್ನು ಗೊತ್ತು ಮಾಡಿಕೊಂಡಾಗಿದೆ. ಆ ಖರ್ಚು ಎಕ್ಸ್ಟ್ರಾನೇ.

ಅಮ್ಮನೊಡನೆ ಏನನ್ನಾದರೂ ಮಾತನಾಡುವ ವ್ಯವಧಾನವೇ ಇಲ್ಲ ಅವಳಿಗೆ. ಅಮ್ಮನೂ ಅಷ್ಟೇ. ಮೂಗೆತ್ತಿನಂತೆ ತಾನೇ ದುಡಿಯುತ್ತಾಳೆ. ಸೊಸೆ ಡಾಕ್ಟರೆಂದೋ. ಆಸ್ತಿ ಅಂತಸ್ತಿನವಳೆಂದೋ, ಅವಳೊಡನೆ ಮಾತು ಕೂಡಾ ಆಡುವುದಿಲ್ಲ. ಅಥವಾ ತನ್ನ ಮೇಲೆ ಸಿಟ್ಟೇನಾದರೂ ಇರಬಹುದೋ?....ಛೆ ತಾನೇಕೆ ಇದನ್ನೆಲ್ಲಾ ಇಷ್ಟು ಚಿಂತಿಸುತ್ತಿದೀನಿ...ಎಂದು ತಲೆ ಕೊಡವಿಕೊಂಡ.

ದಿನಗಳು ಸರಿದವು. ಬೆಳಗಿನ ಸಮಯದಲ್ಲಿ ಎಲ್ಲರೂ ತಮ್ಮತಮ್ಮ ಕಾರ್ಯ ಗಳಲ್ಲಿ ಮಗ್ನರಾಗಿರುತ್ತಿದ್ದರು. ರಾತ್ರಿಯ ಹೊತ್ತು, ರಂಗನಾಥ, ನಿರ್ಮಲ ತಮ್ಮಿಬ್ಬರ

ನಡುವೆ ಒಮ್ಮತ ಇದೆ ಎಂಬಂತೆ ನಡೆದುಕೊಳ್ಳುತಿದ್ದರು. ಹಣ ಕಾಸು, ಆಸ್ತಿ ಅಂತಸ್ತು, ಅವರಿಬ್ಬರ ಪ್ರೀತಿ ಪ್ರೇಮಕ್ಕೆ ಅಡ್ಡಿ ಬಂದಿರಲಿಲ್ಲ.

ಮನೋಜನಿಗೆ ಒಂದು ವರ್ಷ ತುಂಬುತ್ತಾ ಬಂದಿತ್ತು. ನಿಲ್ಲುವುದನ್ನು ಕಲಿತ್ತಿದ್ದ. ಏನನ್ನಾದರೂ ಆಸರೆ ಹಿಡಿದು, ನಡೆಯಲು ಪ್ರಯತ್ನಿಸುತ್ತಿದ್ದ. ತೊದಲು ಮಾತುಗಳನಾಡುತ್ತಿದ್ದ. ಕಾವೇರಮ್ಮ ಮೊಮ್ಮಗನ ಆಟ ಪಾಠ, ಚೇಷ್ಟೆಗಳ ನಡುವೆ ತನ್ನ ಆಯಾಸವನ್ನೆಲ್ಲಾ ಮರೆತು ಬಿಡುತ್ತಿದ್ದಳು. ಸಮಯ ಸರಿದು ಹೋಗುತ್ತಿತ್ತು. ಮಲಗಿ ನಿದ್ರಿಸುವ ಮಗುವಿನ ಮುಗ್ಧ ಮುಖವನ್ನು ನೋಡುತ್ತಿದ್ದರೆ ಆತಂಕ ಮೂಡುತ್ತಿತ್ತು. ಮುಂದೆ ಈ ಮಗುವಿನ ಗತಿ ಏನು? ರಂಗನಾಥನೇನೋ ಈಗ ಖಂಡಿತಾ ಚೆನ್ನಾಗಿ ನೋಡ್ಕೋತಾನೆ. ಆದರೆ...ಆದರೆ ಈ ಮಾಯಂಗನೆ ಏನು ಜಾದು ಮಾಡುತ್ತಾಳೋ...ರಂಗನಾಥ ಎಷ್ಟೆಷ್ಟು ತರಹ ಬದಲಾಗುತ್ತಾನೋ. ಹೀಗೇ ಇರ್ತಾನೆ ಅಂತ ಏನು ಖಾತರಿ? ಮುಂದೆ ಅವನಿಗೂ ಮಕ್ಕಳಾಗಬಹುದು. ಆಗ ಬೇಧ ಬರದೇ ಇರುತ್ತದೆಯೆ? ಛೆ. ಎಂತಹ ಸ್ಥಿತಿ ಬಂದೊದಗಿತಲ್ಲಪ್ಪಾ... ಮುಂದೇನೇನು ಆಗಬೇಕೋ? ಆಗುತ್ತದೋ...ಅದನ್ನೆಲ್ಲ ನೋಡುವ ಗತಿ ನನಗೆ ಬೇಡಪ್ಪಾ ದೇವರೇ ಎಂದು ದೇವರಲ್ಲಿ ಮೊರೆ ಇಡುತ್ತಿದ್ದಳು.

ದೇವರಿಗೆ ಈ ಮೊರೆ ಕೇಳಿರಬೇಕು. ಅತಿಯಾಗಿ ಮನೆ ಕೆಲಸ ಮಾಡಿ ಸುಸ್ತಾಗಿದ್ದ ಕಾವೇರಮ್ಮ ಕುಸಿದುಬಿದ್ದಳು. ಮನೋಜ್ ಒಂದೇ ಸಮನೆ ಅಳುತ್ತಿ ದ್ದುದನ್ನು ಕೇಳಿ ಪಕ್ಕದ ಮನೆ ಹೆಂಗಸರು ಬಂದು ಇಣುಕಿದರು. ಏನೂ ಕಾಣಲಿಲ್ಲ. ಮಗುವಿನ ಅಳು ಮಾತ್ರ ಒಂದೇ ಸಮನೇ ಕೇಳಿಸುತ್ತಿತ್ತು. ಅವರ ಮನೆಯ ಹುಡುಗ ಬೇಗ ಹೋಗಿ, ರಂಗನಾಥನನ್ನು ಕರೆತಂದ. ಒಳಗಿನಿಂದ ಬಾಗಿಲನ್ನು ಹಾಕಿಕೊಂಡಿದ್ದರಿಂದ, ಚಿಲಕವನ್ನು ಒಡೆದು ತೆಗೆಸಿ ಒಳಗೆ ಬಂದ. ಅವನ ಹಿಂದೆಯೇ ಬಂದ ಪಕ್ಕದ ಮನೆಯ ಹೆಂಗಸು, ಅಳುತ್ತಿದ್ದ ಮನೋಜನನ್ನು ಎತ್ತಿಕೊಂಡು ಸಮಾಧಾನ ಮಾಡಿದರು.

ಕುಸಿದು ಬಿದ್ದಿದ್ದ ಕಾವೇರಮ್ಮನಿಗೆ ಜ್ಞಾನವಿರಲಿಲ್ಲ. ಪಕ್ಕದ ಮನೆಯವರ ಸಹಾಯದಿಂದ ಒಂದು ಟ್ಯಾಕ್ಸಿ ತಂದು ಅವರನ್ನು ಮಲಗಿಸಿ ಆಸ್ಪತ್ರೆಗೆ ಸಾಗಿಸಿದರು. ಅಲ್ಲಿ ಅಡ್ಮಿಟ್ ಮಾಡಿಕೊಂಡು, ಚೆಕ್ ಮಾಡಿ ತುರ್ತಾಗಿ ಕೆಲವು ಇಂಜೆಕ್ಷನ್‌ಗಳನ್ನು ಕೊಟ್ಟು ಚಿಕಿತ್ಸೆಯನ್ನೂ ಪ್ರಾರಂಭಿಸಿದರು.

ಇದ್ದಕ್ಕಿದ್ದಂತೆ, ಬೆಳಿಗ್ಗೆ ತಾವು ಹೊರಡುವ ಮುಂಚೆ ಚೆನ್ನಾಗಿದ್ದ ತಾಯಿಗೆ, ಮಧ್ಯಾಹ್ನದ ಹೊತ್ತಿಗೆ ಈ ಸ್ಥಿತಿ ಒದಗಿರುವುದನ್ನು ಕಂಡು ರಂಗನಾಥ ದುಃಖಿತನಾದ. ತನ್ನ ಸ್ನೇಹಿತ ಸತ್ಯನ ಕಾಲೇಜಿಗೆ ಫೋನ್ ಮಾಡಿ ಈ ವಿಚಾರವನ್ನು ತಿಳಿಸಿದ.

"ನಿರ್ಮಲ ಕ್ಲಿನಿಕ್‌ನಲ್ಲಿರ್ತಾಳೆ. ಅವಳಿಗೂ ವಿಷಯ ತಿಳಿಯದು. ಬರುತ್ತಾ ಹಾಗೇ ಅವಳನ್ನು ಕರೆದುಕೊಂಡು ಬಾ" ಎಂದು ಹೇಳಿದ.

ಸತ್ಯನ ಜೊತೆಯಲ್ಲೇ ನಿರ್ಮಲ ಆಸ್ಪತ್ರೆಗೆ ಬಂದಳು. ರಂಗನಾಥನ ವ್ಯಥೆ ಕಂಡು ಸತ್ಯ ಸಮಾಧಾನದ ನುಡಿಗಳನ್ನು ನುಡಿದ ನಿರ್ಮಲ.

"ವಯಸ್ಸಾದವರಿಗೆ, ಇದೆಲ್ಲಾ ಆಗುತ್ತೆ. ಇದಕ್ಕೆಲ್ಲಾ ಇಷ್ಟೊಂದು ಚಿಂತಿಸ ಬೇಕಾ? ಬಂದದ್ದನ್ನು ಎದುರಿಸುವ ಶಕ್ತಿ ಬೇಕು" ಎಂದಳು.

ಆ ಮಾತಿನಿಂದ ರಂಗನಾಥವ ವ್ಯಥೆ ಇನ್ನೂ ಹೆಚ್ಚಾಗಿತ್ತು. "ಎಂಥಾ ಮಾತು

ಅಂತ ಆಡ್ತೀಯ? ಅಮ್ಮನಿಗೆ ಏನಾದರೂ ಆದರೆ, ಎದುರಿಸುವ ಶಕ್ತಿ ನನಗೆ ಖಂಡಿತಾ ಇಲ್ಲ. ಅವಳಿಗೆ ಇವತ್ತೂ ಒದಗಿರುವ ಸ್ಥಿತಿಗೆ ನಾನೇ ಕಾರಣ ಅಂತನ್ನಿಸುತ್ತೆ"

"ಹಾಗೇಕೆ ಅಂದ್ಕೊಂಡು ಚಿಂತಿಸಬೇಕು? ಡಾಕ್ಟರಿದಾರೆ. ನೋಡ್ಕೋತಾರೆ. ಧೈರ್ಯವಾಗಿರು" ಮತ್ತೊಮ್ಮೆ ಸಮಾಧಾನ ಹೇಳಿ ಬೆನ್ನ ಮೇಲೆ ಕೈ ಇಟ್ಟ ಸತ್ಯ.

"ಏಕಾದಶಿ, ಸೋಮವಾರ, ಮಡಿ, ಮೈಲಿಗೆ ಅಂತ, ಹೊತ್ತಿಗೆ ಸರಿಯಾಗಿ ಊಟ ಉಪಚಾರ ಮಾಡಿಕೊಳ್ಳದಿದ್ರೆ ಹೀಗೆ ಆಗುತ್ತೆ. ಅವರಿಗೆ ಕೊಟ್ಟಿರುವ ಇಂಜೆಕ್ಷನ್‌ನಿಂದ ಅವರಿಗೆ ಸ್ಟ್ರೋಕ್ ಹೊಡೆದಿದೆ ಅಂತ ತಿಳಿಯುತ್ತೆ " ನಿರ್ಮಲಾ ನುಡಿದಾಗ, ಅವಳೆಷ್ಟು ಕಠಿಣ ಹೃದಯದವಳು ಅಂತೆನಿಸಿತ್ತು.

ನೋಡಿದ್ಯಾ ಸತ್ಯ, ಅಮ್ಮನಿಗೆ ಸ್ಟ್ರೋಕ್ ಹೊಡೆದಿರಬೇಕಾದರೆ ಏನೋ ಶಾಕ್ ಖಂಡಿತಾ ಆಗಿರಬೇಕು. ಅಥವಾ ಬಿ. ಪಿ. ಹೆಚ್ಚಿರಬೇಕು. ಸುಮ್ಮನೇ ರೆಸ್ಟ್ ಇಲ್ಲದೇ ರೆಸ್ಟ್ ಇಲ್ಲದೇ ದುಡಿದೂ ದುಡಿದು ಏನಾದಳು ನೋಡು, ಅಳಲು ಸಿದ್ದನಾಗಿದ್ದ ರಂಗನಾಥನನ್ನು ಸತ್ಯ ಆಚೆಗೆ ಕರೆತಂದ. ಹೀಗಾಗಬಾರ ದಾಗಿತ್ತು. ಆಗಿ ಹೋಯ್ತು. ಅವರಿಗೆ ಒಳ್ಳೆಯ ಟ್ರಿಟ್‌ಮೆಂಟ್ ಕೊಡಿಸಿ, ಅವರ ಆರೋಗ್ಯ ಚೆನ್ನಾಗಿ ಸುಧಾರಿಸುವ ಹಾಗೆ ಶುಶ್ರೂಷೆ ಮಾಡಬೇಕು. ಸುಮ್ಮನೇ ವ್ಯಥೆ ಪಡ್ತಾ ಕೂತ್ಕೊಂಡ್ರೆ ಆಗುತ್ತಾ?"

"ನನಗೇನೂ ತೋಚ್ತಿಲ್ಲ ಸತ್ಯ. ನೀನೇ ಡಾಕ್ಟರ ಹತ್ತಿರ ಮಾತನಾಡಿ ಅಮ್ಮನಿಗೆ ಚೆನ್ನಾಗಿ ಟ್ರಿಟ್ ಮೆಂಟ್ ಕೊಡುಕ್ಕೆ ಹೇಳು. ನನಗೆ ಮಾತೇ ಆಡುಕ್ಕೆ ಆಗುಲ್ಲವೇನೋ ಅಂತನ್ನಿಸ್ತಿದೆ.

"ಗಾಭರಿ ಯಾಕೆ? ನಿನ್ನ ಮಸೆಸ್ ಡಾಕ್ಟರ್. ಅವರ ಪರಿಚಯದ ಡಾಕ್ಟರು ಗಳು ಯಾರಾದ್ರೂ ಇದ್ದೇ ಇರ್ತಾರೆ. ಖರ್ಚು ಕಮ್ಮಿ ಬೀಳಬಹುದು. ಎಷ್ಟು ದಿನಗಳಾದರೂ ಸರಿ. ಅವರು ಚೆನ್ನಾಗಿ ಸರಿ ಹೋಗುವವರೆಗೂ ನರ್ಸಿಗ್ ಹೊಂ ನಲ್ಲೇ ಇರಲಿ." ಸತ್ಯನ ಮಾತಿಗೆ ರಂಗನಾಥ ಕೆಟ್ಟ ಮುಖ ಮಾಡಿ ತಲೆ ಆಡಿಸಿದ. ಅವನ ಚಿಂತೆ ಅವನಿಗೆ.

ಅಮ್ಮ ಆಸ್ಪತ್ರೆಯಲ್ಲಿ ಎಷ್ಟು ದಿನಗಳು ಇರಬೇಕಾಗುತ್ತದೋ ಏನೋ ಮನೆಯಲ್ಲಿ ಮನೆ ಕೆಲಸದವಳೇನೋ ಇದ್ದಾಳೆ. ಆದರೆ ಅಡಿಗೆ ಕೆಲಸವನ್ನು ಯಾರು ಮಾಡ್ತಾರೆ, ನಿರ್ಮಲಂಗೆ ಏನೂ ಬರುಲ್ಲ. ಅವಳೂ ಏನಾದರೂ ಮಾಡಿ ಕೊಂಡು ಕುಳಿತರೆ ನಾನು ಆಸ್ಪತ್ರೆಯಲ್ಲೇ ಇರಲೇ...ಅಥವಾ ಮನೆಯಲ್ಲೇ ಎಲ್ಲಾ ನೋಡಲೇ...? ಎರಡೆರಡೂ ನನ್ನ ಕೈಲಿ ಆಗುತ್ಯೇ?...ನಿರ್ಮಲೆಯ ಮೇಲಿನ ನಂಬಿಕೆ ಹೊರಟು ಹೋಗಿತ್ತು. ಅವಳದು ಹೆಲ್ಪಿಂಗ್ ನೇಚರ್ ಅಲ್ಲ. ಅನ್ನುವುದನ್ನು ಅರ್ಥ ಮಾಡಿಕೊಂಡಿದ್ದ. ಅಥವಾ ಬಲವಂತವಾಗಿ ಅವಳನ್ನು ಆಸ್ಪತ್ರೆಯಲ್ಲಿ ಅಮ್ಮನ ಜೊತೆ ಒಬ್ಬಳೇ ಹೇಗಿರುತ್ತಾಳೆ. ಸತ್ಯನ್ನ ಕೇಳಿಕೊಂಡರೆ ಒಪ್ಪಿಕೊಳ್ಳ ಬಹುದೇನೋ..ಆದರೆ ಸಹಾಯ ಮಾಡ್ತಾನೆ ಅಂತ ಎಲ್ಲಾದಕ್ಕೂ ಅವನನ್ನೇ ಹೇಗೆ ಕೇಳುವುದು?

ರಂಗನಾಥ ಒಬ್ಬನೇ ನಿಂತು ಚಿಂತಿಸುತ್ತಿದ್ದುದ್ದನ್ನು ಸತ್ಯ ಗಮನಿಸಿದ.

"ಡಾಕ್ಟರಿದಾರೆ. ನಾವೆಲ್ಲಾ ಇದೀವಿ. ಅಮ್ಮನಿಗೆ ಏನೂ ಆಗುಲ್ಲ. ಧೈರ್ಯ ವಾಗಿರು. ನಿನ್ನ ಚಿಂತೆ ನನಗೂ ಅರ್ಥವಾಗುತ್ತೆ. ನೀನು ಕಾಲೇಜಿಗೆ ರಜ ಹಾಕಿ ಇಲ್ಲೇ ಅಮ್ಮನ ಜೊತೆಯಲ್ಲಿರು. ನಿನ್ನ ಮಸೆಸ್, ಮನೆ ಕಡೆ ಯೋಗಕ್ಷೇಮ ನೋಡಿಕೊಳ್ಳಲಿ. ಕ್ಲಿನಿಕ್‌ಗೆ ಕೆಲವು ದಿನಗಳ ಮಟ್ಟಿಗೆ ಹೋಗದಿದ್ದರಾಯ್ತು."

ರಂಗನಾಥ ಪೆಚ್ಚಾಗಿ ನಕ್ಕು ಬಿಟ್ಟ ನಿರ್ಮಲೆಗೆ ಮನೆಕೆಲಸ ಬರುಲ್ಲ. ಮನೋಜನ ಬಗ್ಗೆ ಅವಳಿಗೆ ಅಕ್ಕರೆ ಇಲ್ಲ ಎಂದು ಹೇಳಿಕೊಳ್ಳಲು ಇಷ್ಟವಾಗಲಿಲ್ಲ.

"ನೀನು ನನ್ನ ಭಾಗದ ದೇವರಿದ್ದ ರಾಗೆ. ನೀನು ಇಲ್ಲದೆ ಇದ್ದಿದ್ರೆ ಇಷ್ಟು ಹೊತ್ತಿಗೆ ನಾನೂ ಕುಸಿದು ಬೀಳುತ್ತಿದ್ದೆನೋ ಏನೋ,?"

"ಛೆ. ಛೆ. ಯಾಕೆ ಹಾಗೆಲ್ಲಾ ಮಾತಾನಾಡ್ತೀಯ.. ?"ಸತ್ಯ ಲೋಚಗುಟ್ಟಿದ.

ಅಮ್ಮ ಇಲ್ಲಿ ಆಸ್ಪತ್ರೇಲಿ ಎಷ್ಟು ದಿನ ಇರಬೇಕಾಗುತ್ತೋ ಏನೋ...ಇಲ್ಲಿ ಅಮ್ಮನ ಜೊತೆಗೆ ರಾತ್ರಿ ಹೊತ್ತು ಯಾರು ಇರುವುದು ಅಂತ ಚಿಂತಿಸುತ್ತಿದ್ದೆ.

"ನನ್ನ ಹತ್ತಿರ ಈ ಮುಚ್ಚು ಮರೆ ಏಕೆ ನನಗೆ ಗೊತ್ತೂ, ನಿನಗೆ ಮನೆಯಲ್ಲಿ ನಿರ್ಮಲಳನ್ನು ಮನೋಜನ್ನ ಇಬ್ಬರನ್ನೆ ಬಿಟ್ಟು ರಾತ್ರಿ ಇಲ್ಲಿರುಕ್ಕೆ ಆಗುಲ್ಲ. ನೀನು ಇರು ಅಂತ ನನಗೆ ಹೇಳು. ನಾನು ಇಲ್ಲ ಅಂತೀನಾ?"

"ನೀನು ನನಗೆ ಹೆಲ್ಪ್ ಮಾಡ್ತೀಯ ಅಂತ ಏನೇನು ಕೆಲಸಾನಾ ನಿನಗೆ ಹಚ್ಚಲಿ ಹೇಳು?"

"ಸಾಕಾಯ್ತಾ...ನಾನು ಈಗ ಹೊರಗಿನವನಾಗಿ ಬಿಟ್ಟೆನಾ? ನಿನ್ನ ತಾಯಿ ನನಗೂ ತಾಯೀನೇ. ನೀನಿನ್ನೂ ನಿಶ್ಚಿಂತೆಯಾಗಿರು"

"ಅಲ್ಲಿಗೆ ಒಂದು ಸಮಸ್ಯೆ ಬಗೆ ಹರಿಯಿತು."

"ಹಾಗಾದ್ರೆ, ನಿರ್ಮಲನ್ನ ಮನೆಗೆ ಕಳಿಸಿ ಬಿಡೋಣ. ಇಲ್ಲಿ ಸುಮ್ನೆ ಕೂತು ಏನು ಮಾಡ್ತಾಳೆ. ನೀನೂ ಮನೆಗೆ ಸ್ವಲ್ಪ ರೆಸ್ಟ ತಗೋ. ನನ್ನ ಜತೆಗೇ ಅಷ್ಟು ಹೊತ್ನಿಂದ ಇದೀಯ?"

"ಸರಿ ಹಾಗಿದ್ರೆ. ನೀನಿಲ್ಲೇ ಇರು. ನಿರ್ಮಲನ್ನ ಮನೆಗೆ ಬಿಟ್ಟು ಹಾಗೇ ನಾನು ಹೋಗ್ತೀನಿ. ರಾತ್ರಿ ಮತ್ತೆ ಎಂಟೂವರೆ ಹೊತ್ತಿಗೆ ಬರ್ತೀನಿ. ನಿನಗೆ ಏನಾದ್ರೂ ಬೇಕಿದ್ರೆ ಸಂಕೋಚಪಟ್ಕೋ ಬೇಡ. ಕೇಳು."

"ನಂಗೇನು ಬೇಕು, ಏನೂ ಬೇಡ. ಸಧ್ಯಕ್ಕಂತೂ ಏನೂ ಬೇಡ." ಎಂದ ಎತ್ತಲೋ ನೋಡುತ್ತಾ.

ಒಂಭತ್ತು ಗಂಟೆಯ ಹೊತ್ತಿಗೆ ರಂಗನಾಥ, ಮನೆಗೆ ಬಂದಾಗ, ಮುಂಬಾಗಿಲಿಗೆ ಬೀಗ ಹಾಕಿತ್ತು. ಪಕ್ಕದ ಮನೆಯಲ್ಲಿ ವಿಚಾರಿಸಿದಾಗ, ಅವರು ಬೀಗದ ಕೈ ತಂದು ಕೊಟ್ಟು ಹೇಳಿದರು.

"ಡಾಕ್ಟರು...ಕ್ಲಿನಿಕ್‌ಗೆ ಹೋಗಿದಾರೆ. ನೀವು ಹೋಗಿ ಕರೆದುಕೊಂಡು ಬರಬೇಕಂತೆ." ಅವನಿಗೆ ಹೇಗೆ ಹೇಗೋ ಆಯಿತು. ಆತಂಕದಿಂದ ಕೇಳಿದ.

"ಮತ್ತೆ ಮನೋಜ? ಮನೋಜ ಎಲ್ಲಿ?"

"ಅವನು ನಮ್ಮ ಮನೇಲಿದಾನೆ," ಅವರು ನುಡಿದಾಗ ಸಮಾಧಾನವಾಗಿತ್ತು.

"ಅವನು ಹೊಟ್ಟೆಗೆ ಏನಾದ್ರು ತಿಂದುಕುಡಿದು ಮಾಡಿದ್ನಾ? ಅಥವಾ ಅತ್ತು ಕರೆದು ರಂಪಮಾಡಿ ತೊಂದರೆ ಮಾಡಿದ್ನಾ?"

"ಛೆ. ತೊಂದರೆ ಏನಿಲ್ಲ. ಚಿನ್ನದಂಥಾ ಮಗು. ಆಡಿಕೊಂಡು ಇತ್ತು.ಸ್ವಲ್ಪ ಹೊತ್ತಿಗೆ ಮುಂಚೆ ಊಟ ಮಾಡಿಸಿದೆವು. ಈಗ ಮಲಗಿದಾನೆ"

"ಹಾಗಾದ್ರೆ, ನಾನೀಗ ಹೋಗಿ ಬಂದು ಬಿಡ್ತೀನಿ" ಎನ್ನುತ್ತಾ ಮತ್ತೆ ಸ್ಕೂಟರನ್ನು

ಹತ್ತಿದ. ಸೀದಾ ಕ್ಲಿನಿಕ್‌ನ ಒಳಗೆ ಬಂದವನನ್ನು ವಿಚಿತ್ರವಾಗಿ ನೋಡಿದಳು ನಿರ್ಮಲಾ. ತಗ್ಗಿದ ಧ್ವನಿಯಲ್ಲಿ ಹೇಳಿದ.

"ಉಳಿದಿರೋರನ್ನೆಲ್ಲಾ ನಾಳೆ ಬನ್ನಿ ಅಂತ ಹೇಳಿ ಕಳಿಸಿಬಿಡು. ಈಗಾಗಲೇ ಎಷ್ಟು ಹೊತ್ತಾಗಿ ಹೋಗಿದೆ.?"

"ಬೇಗ ಬೇಗ ಕಳಿಸಿ ಬಿಡ್ತೀನಿ. ನೀವು ಹೊರಗೆ ಇರಿ" ಎಂದಳು. ಅವಳು ಬೇಗ ಎಂದರೂ, ಇಪ್ಪತ್ತು ನಿಮಿಷದ ಮೇಲೆ ಆಯಿತು. ಅವಳಿಗಾಗಿ ಕಾಯು ತ್ತಿದ್ದವನ ತಾಳ್ಮೆ ತಪ್ಪುತ್ತಿತ್ತು. ಕಡೆಗೂ, ಕ್ಲಿನಿಕ್‌ನ ಬಾಗಿಲನ್ನು ಮುಚ್ಚಿ, ಅವಳು ಆಚೆಗೆ ಬಂದಳು.

ಬಾಗಿಲಿಗೆ ಹಾಕಿದ್ದ ಬೀಗವನ್ನು ತೆಗೆದು ಒಳಗೆ ಕಾಲಿಟ್ಟ ಕೂಡಲೇ ಸಿಡುಕಿದ.

"ಇವತ್ತೂ ಕ್ಲಿನಿಕ್‌ಗೆ ಹೋಗದಿದ್ರೆ ಆಗ್ತಾ ಇರಲಿಲ್ವಾ?"

"ಯಾಕೆ ಏನಾಯ್ತು? ಏನಾಯ್ತೀಗ?" ಮರು ಪ್ರಶ್ನಿಸಿದಳು.

"ಏನಾಯಿತು ಅಂತ ಗೊತ್ತಿಲ್ವಾ? ಅಮ್ಮ ಮನೇಲಿಲ್ಲ. ನೀನು ಮನೇಲೇ ಇದ್ದಿದ್ರೆ ಚೆನ್ನಾಗಿರ್ತಿತ್ತಲ್ಲಾ?"

"ಸುಮ್ಸುಮ್ನೆ ಕ್ಲಿನಿಕ್ ಮುಚ್ಚಿದರೆ, ಬರುವ ಪೇಶೆಂಟ್ಸ್‌ಗೆಲ್ಲಾ ತೊಂದರೆ ಆಗುಲ್ವಾ? ಅಲ್ಲದೇ ಮನೇಲಿ ಕೂತು ಏನು ಮಾಡಬೇಕಾಗಿತ್ತು?"

"ಹೋಗಲಿ ಬಿಡು. ನಿನಗೆ ಅರ್ಥವಾಗ್ತಿಲ್ಲ. ಮನೋಜ ಪಕ್ಕದಮನೇಲಿದಾನೆ. ಕರಕೊಂಡು ಬರ್ತೀನಿ."

ನಿದ್ರಿಸುತ್ತಿದ್ದ ಅವನನ್ನು ಎತ್ತಿಕೊಂಡು ಬಂದು ಮಲಗಿಸಿದ. ಅಡಿಗೆ ಮನೆಗೆ ಬಂದು ಏನಿದೆ ಏನಿಲ್ಲ ಅಂತ ನೋಡಿದ. ಮಧ್ಯಾಹ್ನದಿಂದ ಹೊಟ್ಟೆಗೆ ಏನೂ ಹಾಕಿಕೊಂಡಿರಲಿಲ್ಲ ಅವನು. ಆದರೂ ಅವನಿಗೆ ಊಟ ಮಾಡಬೇಕೆನಿಸಲಿಲ್ಲ. ಇದುವರೆಗೂ ಒಂದು ದಿನವೂ ತಾಯಿ ಮಗನಿಗೆ ಬಡಿಸಿದ್ದು ತಪ್ಪಿರಲಿಲ್ಲ. ತಾಯಿ ಇಲ್ಲದ ಅಡಿಗೆ ಮನೆ ಬಿಕೋ ಎನಿಸುತ್ತಿತ್ತು. ಒಂದಿಷ್ಟು ಹುಳಿ ಅನ್ನ ಮೋಸರನ್ನ ಕಲೆಸಿ, ತಟ್ಟೆಗೆ ಹಾಕಿ, ನಿರ್ಮಲೆಗೆ ತಂದುಕೊಟ್ಟ.

ನ್ಯಾಯವಾಗಿ ಇದೆಲ್ಲ ನೀನು ಮಾಡಬೇಕಾದ ಕೆಲಸ ಎಂದು ಹೇಳಬೇಕೆಂದು ಕೊಂಡ. ಆದರೆ ಈ ಸಮಯದಲ್ಲಿ ಆ ಮಾತು ಹಂಗಿಸಿ ಹೇಳಿದಂತಾಗುತ್ತದೆ ಎಂದುಕೊಂಡು ಸುಮ್ಮನಾದ.

"ನೀವು ಊಟ ಮಾಡುಲ್ವಾ?" ನಿರ್ಮಲಾ ಕೇಳಿದಳು.

"ಯಾಕೋ ಮಾಡಬೇಕೂಂತ ಅನ್ನಿಸ್ತಿಲ್ಲ. ಅಮ್ಮ ಮನೇಲಿಲ್ಲದ್ದು ತುಂಬಾ ಬೇಜಾರಾಗ್ತಿದೆ"

"ಅಮ್ಮನ್ನ ತುಂಬಾ ಹಚ್ಚಿಕೊಂಡು ಬಿಟ್ಟಿದೀರ. ಅದಕ್ಕೆ ಹಾಗೆನ್ನಿಸ್ತಿದೆ"

"ಎಲ್ಲರಿಗೂ ಅವರ ಅಮ್ಮ ಅಪ್ಪ ಅಂತಂದ್ರೆ ಪ್ರೀತಿ ಅತಿಶಯವಾಗಿರುತ್ತೆ. ನಿನಗೂ ಅಷ್ಟೇ ತಾನೇ...?"

ನಿರ್ಮಲ ಉತ್ತರಿಸಲಿಲ್ಲ. ಮೊದಲೇ ಅವಳಿಗೆಂದೂ, ತನ್ನ ತಾಯಿಯ ಬಗ್ಗೆ ಪ್ರೀತಿಯಾಗಲೀ, ವಿಶ್ವಾಸವಾಗಲೀ ಇರಲಿಲ್ಲ. ಈಗ ಅವಳು ಮಲತಾಯಿ ಅಂತ ತಿಳಿದ ಮೇಲಂತೂ, ನನ್ನನ್ನೂ ಸಾಕಿದವಳು ಅನ್ನೋ ಮಮಕಾರ ಕೂಡಾ ಉಳಿಯ ಲಿಲ್ಲ. ಇನ್ನು ತಂದೆ, ಈಚೆಗೆ ಅವಳಿಗೆ ತಂದೆಯ ಮೇಲಿನ ಗೌರವವೂ ಬತ್ತಿ ಹೋಗಿತ್ತು.

ಮದುವೆಯ ನಂತರ, ಮತ್ತೆ ಆ ಮನೆಯ ಒಳಗೆ ಎಂದೂ ಹೋಗಿರಲಿಲ್ಲ. ಕ್ಲಿನಿಕ್‌ಗೇ ಬಂದು ಒಂದೆರಡು ಸಲ ತಂದೆ ಮಾತನಾಡಿಸಿ ಹೋಗಿದ್ದರು. ಮನೆಗೆ ಬಾ ಎಂದು ಅವರೂ ಕರೆಯಲಿಲ್ಲ. ಹಾಗಾಗಿ ಯಾವ ಅಟ್ಯಾಚ್‌ಮೆಂಟ್ ಉಳಿದಿರಲಿಲ್ಲ. ಆದರೆ ಅದನ್ನು ಗಂಡನೊಡನೆ ಎಂದೂ ಹೇಳಿರಲಿಲ್ಲ. ತಿಳಿಸುವ ಇಷ್ಟವಿರಲಿಲ್ಲ.

ಏಕೋ ಏನೋ ರಂಗನಾಥನೂ ಎಂದೂ ಅವರ ತಂದೆ ತಾಯಿಯ ಬಗ್ಗೆ ಕೇಳಿದವನಲ್ಲ. ಅಳಿಯನನ್ನು ಕಂಡು ಮಾತನಾಡಿಸಿದ., ಗೌರವದಿಂದ, ತಮ್ಮ ಮನೆಗೆ ಕರೆಯದೇ ಇದ್ದವರ ಬಗ್ಗೆ ಅವನಿಗೆ ಯಾವ ಭಾವನೆಯೂ ಇರಲಿಲ್ಲ. ಆದರೆ ಅದನ್ನೂ ಎಂದೂ ಎತ್ತಿ ಆಡಿದವನಲ್ಲ. ತಾನು ಮೆಚ್ಚಿದ್ದು. ಪ್ರೀತಿಸಿದ್ದು ನಿರ್ಮಲೆಯನ್ನು ಅವಳು ಸಿಕ್ಕಿದಳು. ಅಷ್ಟು ಸಾಕು ಎಂಬಂತೆ ಸುಮ್ಮನಾಗಿದ್ದ.

ರಂಗನಾಥ ಹೊರಗಡೆ ಹಾಲಿನಲ್ಲಿ ಮನೋಜನ ಜೊತೆಯಲ್ಲಿ ಮಲಗಿದಾಗ ನಿರ್ಮಲಳಿಗೆ ಬೇಸರವೆನಿಸಿತು. ನಿದ್ದೆ ಬಂದಿರುವ ಹುಡುಗನಿಗೆ ಏನು ಗೊತ್ತಾಗುತ್ತೆ, ಇಲ್ಲಿ ಬಂದು ಮಲಗಬಾರದೆ..? ನಾನು ಹೇಗೆ ಕರೆಯಲಿ? ಇವತ್ತು ಇವನ ಮೂಡ್ ಚೆನ್ನಾಗಿಲ್ಲ, ಕರೆದರೂ ಬರಲಾರ" ಎಂದುಕೊಂಡು ಸುಮ್ಮನಾದಳು.

ರಂಗನಾಥನಿಗೆ ನಿದ್ದೆ ಬರಲಿಲ್ಲ. ಅಮ್ಮನಿಗೆ ಮೈ ಸರಿಯಿಲ್ಲದಿದ್ದರೂ, ಎಲ್ಲಾ ನಿಭಾಯಿಸಿಕೊಳ್ಳುತ್ತಿದ್ದಳು. ಅವಳು ಮತ್ತೆ ಮನೆಗೆ ಬರುವವರೆಗೂ ನಮ್ಮಗಳ ಗತಿ ಏನು? ಅಥವಾ ಬಂದ ಮೇಲೂ ಎಷ್ಟು ದಿನ ರೆಷ್ಟು ತಗೋಬೇಕೋ ಮನೆಗೆ ಬಂದು ಆಯಾಸ ಮಾಡಿಕೊಳ್ಳುವುದಕ್ಕಿಂತಲೂ, ನರ್ಸಿಗ್ ಹೊಂನಲ್ಲಿರು ವುದೆ ಸರಿ. ಆದರೆ ಎಷ್ಟು ಖರ್ಚಾಗುತ್ತೇ, ಈಗಾಗಲೇ ಸಾಲಗಾರ ನಾಗಿದ್ದೇನೆ. ಸತ್ಯನ್ನ ಮತ್ತೆಮತ್ತೆ ಕೇಳುವುದು ಹೇಗೆ, ಈಗಲಾದರೂ ನಿರ್ಮಲ ಹಣಕೊಟ್ಟರೇ..?

ಬಾಯಿ ಮಾತಿಗಾದರೂ, ನನ್ನಿಂದ ಏನಾದರೂ ಸಹಾಯ ಬೇಕಾ ಅಂತ ಸಹ ಕೇಳಲಿಲ್ಲವಲ್ಲ. ಸತ್ಯನೇ ಎಷ್ಟೋ ವಾಸಿ. ಹಣವಂತರ ಬುದ್ದಿ ಎಲ್ಲಾ ಹೀಗೇ ಎಲ್ಲಾ ಸರಿ. ಮನೋಜನ್ನ ಕಂಡರೆ ಮಮತೆ ಏಕಿಲ್ಲಇವಳಿಗೆ. ಅವನಿಂದಲೇ ಅಲ್ಲವೇ ನಮ್ಮಿಬ್ಬರ ಪ್ರೀತಿ ಶುರುವಾದದ್ದು ಆದರೆ ಒಂದು ದಿನವೂ ಎತ್ತಿಕೊಂಡಿಲ್ಲ. ಆಡಿಸಿಲ್ಲ. ಮಾತನಾಡಿಸಿಲ್ಲ. ಇನ್ನೂ ಇವನ ಊಟ ತಿಂಡಿ ನಿದ್ರೆ ಎಲ್ಲಾ ನೋಡಿ ಕೊಳ್ತಾಳೆ ಅಂತ ಹೇಗೆ ನಂಬುವುದು. ಎಂಥಾ ಸ್ಥಿತಿ ಒದಗಿ ತಲ್ಲ. ಎಂದು ಮಮ್ಮಲ ಮರುಗಿದ. ಆಸ್ಪತ್ರೆಯಲ್ಲಿ ಜ್ಞಾನವಿಲ್ಲದೇ ಮಲಗಿರುವ ಅಮ್ಮನ ಸ್ಥಿತಿಯ ಬಗ್ಗೆ ಚಿಂತಿಸಿದ. ಒಂದು ವೇಳೆ ಅವಳಿಗೆ ವಾಸಿಯಾಗದೇ ಏನಾದರೂ ಆಗಿಹೋದರೆ.. ಎಂದೆನಿಸಿದಾಗ ಎದೆ ಢವ ಢವ ಗುಟ್ಟಿತು.

ಬೆಳಿಗ್ಗೆ ಎಚ್ಚರವಾದ ಕೂಡಲೇ, ಅಮ್ಮನನ್ನೂ ನೋಡಿಕೊಂಡು ಬರೋಣ ವೆಂದನಿಸಿತು. ರಾತ್ರಿಯೆಲ್ಲಾ ನಿದ್ದೆ ಬಾರದೇ ಹೊರಳಾಡಿ, ಆಗಾಗ್ಗೆ ಮನೋಜನ ಕಡೆ ಗಮನ ಹರಿಸಿ ಸಮಯ ಕಳೆದಿದ್ದ. ಬೆಳಗಿನ ಝಾವದಲ್ಲಿ ಅವನಿಗೆ ಅರಿವಿಲ್ಲ ದಂತೆಯೇ, ನಿದ್ದೆ ಎಳೆದಿತ್ತು...ಆದರೆ ಈಗ ಇನ್ನೂ ಸ್ವಲ್ಪ ಹೊತ್ತು ಮಲಗುವಂತಿಲ್ಲ. ಮನೆಯ ಎಷ್ಟೋ ಕೆಲಸಗಳನ್ನು ಮಾಡಲೇ ಬೇಕಾಗಿತ್ತು. ಒಂದೊಂದಾಗಿ ಮಾಡಿ ಮುಗಿಸುವ ಹೊತ್ತಿಗೆ ಎಂಟು ಗಂಟೆಯಾಗಿ ಹೋಗಿತ್ತು. ನಿರ್ಮಲಂಗೆ ಅಡಿಗೆ ಮಾಡಲು ಬರುತ್ತದೆಯೋ ಇಲ್ಲವೋ, ಈಗ ಪರೀಕ್ಷಿಸುವ ಸಮಯವಲ್ಲ ಎಂದು ಕೊಂಡು,

ಬರೀ ಅನ್ನ ಮಾಡಿದ. ಅಮ್ಮನಿಗೆ ಏನನ್ನೂ ತೆಗೆದುಕೊಂಡು ಹೋಗುವ ಚಿಂತೆ ಇರಲಿಲ್ಲ.

"ನಾನು ನರ್ಸಿಗ್ ಹೊಂಗೆ ಹೋಗ್ತಿದೀನಿ. ನೀನೂ ಬರುವ ಹಾಗಿದ್ರೆ ಬೇಗ ರೆಡಿಯಾಗು." ನಿರ್ಮಲಂಗೆ ಹೇಳಿದ.

"ಈಗ ಆಗುಲ್ಲ. ನನಗ್ಯಾಕೋ ತಲೆ ನೋಯ್ತಿದೆ. ನೀವು ಹೋಗಿಬನ್ನಿ" ಅವಳ ಕಡೆ ತಿರುಗದೇ ನುಡಿದ."ಹಾಗಾದ್ರೆ ಕ್ಲಿನಿಕ್‌ಗೂ ಹೋಗಬೇಡ. ಮನೋಜನ್ನ ಪಕ್ಕದ ಮನೆಯಲ್ಲಿ ಬಿಟ್ಟು ಹೋಗ್ತೀನಿ. ನೀನು ರೆಸ್ಟ್ ತಗೋ. ಬ್ರೆಡ್ ಬೇಕಾದ್ರೆ ಪಕ್ಕದ ಮನೆ ಹುಡುಗರ ಹತ್ತಿರ ತರಿಸ್ಕೋ."

"ಏನೂ ತಿನ್ನಬೇಕು ಅಂತನ್ನಿಸ್ತಿಲ್ಲ. ನಂಗೆ ಏನೂ ಬೇಡ ಎಂದಳು. ರಂಗನಾಥ ಹೊರಟು ಹೋದ. ಮಲಗಲು ಬೇಜಾರೆನಿಸಿ, ತಲೆ ನೋವಿಗೆ ಒಂದು ಮಾತ್ರೆ ನುಂಗಿ ಕ್ಲಿನಿಕ್‌ಗೆ ಹೊರಟಳು. ಯಾಕೋ ಏನೋ ಕ್ಲಿನಿಕ್‌ನಲ್ಲೂ ಕುಳಿತಿರಲು ಆಗಲಿಲ್ಲ. ಅಲ್ಲಿಂದ ಸೀದಾ ಒಬ್ಬ ಗೈನಕಾಲ ಜಿಸ್ಟ್ ಬಳಿಗೆ ಹೋದಳು. ಮಾತಾಡಿದ ನಂತರ ಅವಳ ಅನುಮಾನ ದೃಢಪಟ್ಟಿತ್ತು. ಮತ್ತೆ ಮತ್ತೆ ಹೇಳಬೇಕಾಗಿರಲಿಲ್ಲ. ನಿರ್ಮಲ ತಾಯಿಯಾಗು ವವಳಿದ್ದಳು. ಅವಳಿಗೆ ಸಂತೋಷವಾಗಿತ್ತು. ಒಬ್ಬ ಹೆಣ್ಣಿಗೆ ದಾಂಪತ್ಯದ ಸುಖದಷ್ಟೇ ಆನಂದ ನೀಡುವ ವಿಷಯವೆಂದರೆ, ತಾಯಿಯಾಗುವುದು. ಈ ಆನಂದವೂ ಹೆಣ್ಣಿಗೆ ಬೇಕೇ ಬೇಕು ಎನ್ನುವ ಅಭಿಲಾಷೆಯವಳು. ತಾನು ಮೊದಲು ಈ ಆನಂದವನ್ನು ರಂಗನಾಥನೊಡನೆ ಹಂಚಿಕೊಳ್ಳ ಬೇಕೆಂದು ಬಯಸಿದಳು. ಆದರೆ ನರ್ಸಿಂಗ್ ಹೋಂಗೆ ಹೋಗುವ ಮನಸ್ಸಾಗಲಿಲ್ಲ. ಸೀದಾ ಮನೆಗೆ ಬಂದು ಸೇರಿದಷ್ಟು ಊಟವನ್ನು ಮಾಡಿ ಮಲಗಿದಳು.

ಮಧ್ಯಾಹ್ನ ಒಂದು ಹೊತ್ತಿನಲ್ಲಿ ಸತ್ಯ ಬಂದು ಅವಳ ಆರೋಗ್ಯದ ಬಗ್ಗೆ ವಿಚಾರಿಸಿದ.

"ಈಗ ಹೇಗಿದೀರಿ? ಬೆಳಿಗ್ಗೆ ತಲೆ ನೋವು ಅಂತ ಅಂದ್ರಂತೆ. ನೀವೂ ಮಲಗಿ ಬಿಟ್ಟರೇ ಅಂತ ಗಾಭರಿ ಅವನಿಗೆ." ಮುಗುಳ್ನಕ್ಕು ನುಡಿದ.

ನಿರ್ಮಲೆಗೆ ಅವನ ಮುಗುಳ್ನಗೆಯಾಗಲೀ, ಅವನು ವಿಚಾರಿಸಿದ್ದಾಗಲೀ ಇಷ್ಟವಾಗಲಿಲ್ಲ. ರಂಗನಾಥ'ನೇ ಬಂದು ತನ್ನ ಯೋಗಕ್ಷೇಮವನ್ನು ವಿಚಾರಿಸಿದ್ದರೇ...ತಾನು ಅವನನ್ನು ಸಂತಸದಿಂದ ತಬ್ಬಿ, ಅವನ ಕಿವಿಯಲ್ಲಿ ಈ ಸಂತಸದ ಸುದ್ದಿಯನ್ನು ತಿಳಿಸಬಹುದಾಗಿತ್ತು...ಎನಿಸಿ ಬೇಜಾರಿನಿಂದ ನುಡಿದಳು.

"ಈಗ ಪರವಾಗಿಲ್ಲ ಅಂತ ನಿಮ್ಮ ಸ್ನೇಹಿತರಿಗೆ ಹೇಳಿಬಿಡಿ"

"ಮನೋಜ ಪಕ್ಕದ ಮನೇಲೇ ಇದಾನಾ?"

"ಹೂಂ, ಎಂದಳು ನೀರಸವಾಗಿ ಅವಳ ಧ್ವನಿಯಲ್ಲಿನ ಉದಾಸೀನತೆ ಯನ್ನು ಸತ್ಯ ಗುರುತಿಸಿದ. ಅವನು ಹೊರಡ್ತೀನಿ ಅಂತ ಅಂದಾಗ ಏನೂ ಹೇಳಲಿಲ್ಲ. ಅಮ್ಮ ಹೇಗಿದ್ದಾರೆ ಅಂತ ಕೂಡಾ ಕೇಳಲಿಲ್ಲ. ಅವಳಿಗೆ ಅತ್ತೆ ಬೇಡ, ಮನೋಜಬೇಡ. ರಂಗನಾಥ ಮಾತ್ರ ಬೇಕು. ರಂಗನಾಥ ನಂತಹವನನ್ನು ಅವಳು ಕೇವಲ ಅವನಿಂದ ಸಿಗುವ ಸುಖದ ಆಸೆಗಾಗಿ ಮದುವೆಯಾಗಿರಬೇಕು ಅಂತ ಅಂದುಕೊಂಡಾಗ, ಆ ಕ್ಷಣದಲ್ಲಿ ಅವನಿಗೆ ತನ್ನ ಹೆಂಡತಿಯ ನೆನಪಾಗಿತ್ತು. ಅವಳಿಗೆ ಇನ್ನು ಹೆರಿಗೆ ಆಗಿಲ್ಲ.

ಒಂದು ಸಲ ಹೋಗಿ ನೋಡಿಕೊಂಡು ಬರಬೇಕು ಎಂದುಕೊಂಡ.

ಎರಡನೇ ದಿನ ತಾಯಿಯ ಆರೋಗ್ಯ ಇನ್ನೂ ಹದಗೆಟ್ಟಿತ್ತು. ಡಾಕ್ಟರು ಕೊಡುವ ಇಂಜೆಕ್ಷನ್, ಔಷಧ, ಯಾವುದೂ ಅವಳ ಮೇಲೆ ಪರಿಣಾಮ ಬೀರಿರಲಿಲ್ಲ. ತಲೆಯ ಮೇಲೆ ಕೈ ಹೊತ್ತು ಅಲ್ಲಿಯೇ ಕುಳಿತುಬಿಟ್ಟಿದ್ದ ರಂಗನಾಥ ಮನೆಯ ಯೋಚನೆಯೂ ಅವನಿಗಿರಲಿಲ್ಲ.

ಏಳು ಗಂಟೆಯ ಹೊತ್ತಿಗೆ ಸತ್ಯ ಬಂದ. ಡಾಕ್ಟರನ್ನು ಕಂಡು ಮಾತ ನಾಡಿದ. ಅವರು ಭರವಸೆಯ ಮಾತುಗಳನ್ನಾಡಲಿಲ್ಲ. ವಯಸ್ಸಾಗಿದೆ ಕೋಮಾ ಸ್ಟೇಜ್‌ನಲ್ಲಿದಾರೆ. ಹೀಗೇ ಅಂತ ಹೇಳುಕ್ಕಾಗುಲ್ಲ. ಹೀಗೇ ಮುಂದುವರೆದರೆ ಬದುಕುಳಿಯುವ ಸಾಧ್ಯತೆಯೂ ಕಡಿಮೆ.

ಈ ಮಾತನ್ನು ರಂಗನಾಥನೊಡನೆ ಹೇಳಲು ಹಿಂಜರಿದ, "ನೀನು ಮನೆಗೆ ಹೋಗು. ನಿನ್ನ ಮಿಸೆಸ್ ಒಬ್ಬರೇ ಇರ್ತಾರೆ. ಅವರಿಗೂ ಬೇಜಾರಾಗ್ತಾ ಇರುತ್ತೆ. ನೀನೂ ಬೆಳಗ್ನಿಂದ ಏನನ್ನು ತಿಂದಿಲ್ಲ ಅಂತ ಅನ್ನಿಸುತ್ತೆ. ಮನೆಗೆ ಹೋಗಿ ಊಟ ಮಾಡಿ ಮಲಗು." ಸ್ನೇಹಿತನ ವಿಶ್ವಾಸದ ಮಾತುಗಳಿಗೆ ಮಣಿದು ಅಲ್ಲಿಂದ ಹೊರಟ.

ಏನೋ ಅನುಮಾನ ಬಂದುದರಿಂದ ಕ್ಲಿನಿಕ್ ಬಳಿನಿಂತ. ಕ್ಲಿನಿಕ್‌ನ ದೀಪ ಉರಿಯುತ್ತಿತ್ತು. ಬಾಗಿಲು ತೆಗೆದಿತ್ತು. ಅವನಿಗೆ ರೇಗಿ ಹೋಯ್ತು. ಸೀದಾ ಒಳಗೇ ಬಂದ. ಒಳಗಿದ್ದ ಪೇಶೆಂಟ್ ಹೊರಗೆ ಹೋಗುವವರೆಗೂ ಕಾದ ಅವರು ಹೊರಗೆ ಹೊರಟ ಕೂಡಲೇ ರೇಗಿದ, ಅವಳ ಮೇಲೆ.

"ಏನಿದು ನಿನ್ನ ಆಟ? ಬೆಳಿಗ್ಗೆ ತಲೆ ನೋವು ಅಂತ ಹೇಳಿದೆ. ಈಗ ಇಲ್ಲಿದೀಯ. ಒಂದು ದಿನ ಕ್ಲಿನಿಕ್ ಬಾಗಿಲು ತೆಗೆಯದಿದ್ದರೆ ಏನೂ ನಷ್ಟವಿಲ್ಲ, ನಡೀ ಮನೆಗೆ"

''ಈಗ ಬಂದ್ಬಿಡ್ತಿನಿ. ಇನ್ನೊಂದು ನಾಲ್ಕು. ಜನ ಪೇಶೆಂಟ್ಸ್ ಇದಾರೆ ಅಷ್ಟೇ..."

"ಅವರಿಗೆಲ್ಲಾ ಈಗ ನೋಡೋಕಾಗುಲ್ಲ ಅಂತ ಹೇಳಿ ಕಳಿಸಿ ಬಿಡು. ನೀನು ಹೇಳ್ತೀಯೋ, ನಾನು ಹೇಳಲೋ...?"

"ಛೆ...ಇಲ್ಲಿ ಯಾಕೆ ಹೀಗೆ ರೇಗ್ತಾ ಇದೀರಿ. ಯಾರಿಗಾದ್ರೂ ಕೇಳಿಸಿದರೆ ನಗುಲ್ವಾ?"

"ನಕ್ಕರೆ ನಗಲಿ. ನನ್ನ ಕಷ್ಟ ನನಗೆ ತಲೆ ನೋವು ಜ್ವರ ಅಂತ ನೀನೂ ಮಲಗಿಬಿಟ್ಟರೆ ಮಾಡೋರ್‍ಯಾರು? ಸುಮ್ಮನೇ ಕ್ಲಿನಿಕ್ ಮುಚ್ಚಿ ನಡಿ ಮನೆಗೆ" ಅವನು ಒರಟಾಗಿ ನುಡಿದಾಗ ಮುಜುಗರವೆನಿಸಿತು.

"ಸ್ವಲ್ಪ ಮೆತ್ತಗೆ ಮಾತನಾಡಿ. ಪ್ಲೀಸ್..."ಕೇಳಿಕೊಂಡಳು.

"ಆಯ್ತು. ನಾನು ಹೊರಗೆ ಕಾಯ್ತಿರ್ತೀನಿ..ಅವರನ್ನೆಲ್ಲ ಕಳಿಸಿ ಬಂದು ಬಿಡು" ಎನ್ನುತ್ತಾ ದುಡುದುಡು ಹೊರನಡೆದ. ಕಾಂಪೌಂಡರೇ ಬೆರಗಾಗಿ ಡಾಕ್ಟರನ್ನು ನೋಡಿದಳು.

"ಕಾಂತಮ್ಮ ನನಗೆ ಮೈ ಚೆನ್ನಿಲ್ಲ ಅಂತ ಹೇಳಿ ಎಲ್ಲರನ್ನೂ ಕಳಿಸಿಬಿಡಿ ನಾಳೆ ಬೇಕಾದರೆ ಬರಲಿ.. ನಾನು ಹೊರಗೆ ಹೋಗಿರ್ತೀನಿ ಕ್ಲಿನಿಕ್‌ಗೆ ಬೀಗ ಹಾಕಿ ಬೀಗದ ಕೈ ತಂದು ಕೊಡು."

ರಂಗನಾಥನಿಗೆ ಸಿಟ್ಟು ಬಂದಿದೆಯೆಂದು, ಏನೂ ಮಾತನಾಡದೆ ಸುಮ್ಮನಿದ್ದಳು.

ಮನೆಗೆ ಬಂಗವನೇ ಮತ್ತೆ ರೇಗಿದ. "ಕ್ಲಿನಿಕ್ ಒಂದೇ ಮುಖ್ಯಾನಾ ನಿನಗೆ? ಮನೆಯಲ್ಲೇ ಮನೋಜನ ಜೊತೆಗೆ ಇದ್ದಿದ್ದರೆ ಆಗ್ತಿರಲಿಲ್ವಾ? ಅಮ್ಮ ಹುಶಾರಾಗಿ ಮನೆಗೆ ಬರುವವರೆಗೂ ನೀನು ಕ್ಲಿನಿಕ್‌ಗೆ ರಜ ಕೊಡು"

'' ಆಗುಲ್ಲ..ಮನೇಲಿದ್ದು ನಾನೇನು ಮಾಡಬೇಕಾಗಿದೆ?"

"ಅಡಿಗೆ ಮಾಡಿ ಮನೋಜನ್ನ ನೋಡಿಕೋ"

"ನನಗೆ ಅಡಿಗೆ ಮಾಡುಕ್ಕೆ ಬರುಲ್ಲ ಅಂತ ನಿಮಗೆ ಚೆನ್ನಾಗಿ ಗೊತ್ತು. ಮನೋಜನ್ನ ಪಕ್ಕದ ಮನೆಯವರು ನನಗಿಂತ ಚೆನ್ನಾಗಿ ನೋಡ್ಕೋತಾರೆ."

"ಈ ವಿಚಾರ ಅಮ್ಮನಿಗೆ ತಿಳಿದರೆ ನೊಂದ್ಕೋತಾಳೆ. ಮೊದಲೇ ಅವಳಿಗೆ ಏನೋ ಕೊರಗು..ಅದೇ ಅವಳನ್ನು ಈ ಸ್ಥಿತಿಗೆ ತಂದಿದೆ."

"ಅದಕ್ಕೇ...? ನಾನು ರಜ ತಗೊಂಡು, ಮನೆ ಕೆಲಸ ಮಾಡ್ಕೊಂಡು ಇರು ಅಂತೀರಾ? ಇಂಪಾಸಿಬಲ್. ನಾನು ಡಾಕ್ಟರಾಗಿರುವುದು ಜನಸೇವೆ ಮಾಡುಕ್ಕೆ. ಮನೆಯವರ ಸೇವೆ ಮಾಡಕ್ಕಲ್ಲ."

"ಆ ಏನಂದೆ? ನನ್ನಂತಹವನನ್ನು ಮದುವೆ ಆದಮೇಲೆ ನಮ್ಮ ಮನೇ ಕಡೆಗೂ ಗಮನ ಕೊಡಬೇಡವೇ? ಇದೂ ನಿನ್ನ ಕರ್ತವ್ಯ ಅಲ್ಲವೇ?

" ಅಡಿಗೆಯವರನ್ನು ಇಟ್ಟುಕೊಂಡರಾಯ್ತು."

" ತಮಾಷೆ ಮಾಡಬೇಡ ನಿರ್ಮಲಾ. ಇದು ನಿಮ್ಮ ತಂದೆಯ ಮನೆಯಲ್ಲ. ಇರೋ ಮೂರು ಮತ್ತೊಂದು ಜನಕ್ಕೆ ಅಡಿಗೆಯವರ್‍ಯಾಕೆ?"

"ಹಾಗಾದ್ರೆ..ನನಗೆ ಮತ್ತೆ ಮತ್ತೆ ಇದೇ ಮಾತನ್ನು ಹೇಳಬೇಡಿ. ನನಗೆ ಈ ಮನೆ ಕೆಲಸಗಳಲ್ಲಿ ಆಸಕ್ತಿ ಇಲ್ಲ. ಕಲಿತು ಮಾಡುವ ಮಾತಂತೂ ಖಂಡಿತಾ ಸುಳ್ಳು. ಇನ್ನು ನಿಮ್ಮ ಇಷ್ಟ. ನಿಮಗಾದರೆ ಮಾಡಿ. ಅಥವಾ ಅಡಿಗೆಯವರನ್ನಿಟ್ಟುಕೊಳ್ಳಿ."

ಇವಳೊಂದು ತರಹ ಮೂರ್ಖೆ. ಇವಳ ಹತ್ತಿರ ಮಾತನಾಡಿ ಪ್ರಯೊಜನ ವಿಲ್ಲವೆಂದುಕೊಂಡ. ಎಲ್ಲಾ ಗೊತ್ತಿದ್ದೂ ತಾನು ಇಷ್ಟು ಮಾತ ನ್ನಾಡ ಬಾರದಾಗಿತ್ತೆ ನಿಸಿತು. "ಸಾರಿ. ನಿರ್ಮಲಾ. ನನ್ನ ಮೂಡ್ ಕೆಟ್ಟು ಹೋಗಿದೆ. ನೀನು ಹೇಳುವುದು ಸರಿ. ಮತ್ತೆ ಮತ್ತೆ ಇದೇ ಮಾತುಗಳನ್ನಾಡಿ ಪ್ರಯೋಜನವಿಲ್ಲ."

ಇಬ್ಬರೂ ತಮಗೆ ಸೇರಿದಷ್ಟು ಊಟ ಮಾಡಿದರು. ಮನೋಜನ್ನ ಪಕ್ಕದ ಮನೆಯ ಹುಡುಗಿ ಕರೆತಂದಳು. ಅವನಿಗೆ ಹಾಲು ಕುಡಿಸಿ ಮಲಗಿಸಿದ. ಅವನ ಪಕ್ಕ ತಾನೂ ಉರುಳಿಕೊಂಡ. ನಿದ್ದೆಯ ಪಾಶ ಎಳೆಯುನನರೆಗೂ ತಾಯಿಯದೇ ಧ್ಯಾನ.

ನಿರ್ಮಲ ರಂಗನಾಥನಿಗಾಗಿ ಕಾದು ಕಾದು ನಿದ್ದೆ ಹೋದಳು. ತಾನು ತಾಯಿಯಾಗುವ ಸುದ್ದಿಯನ್ನು ಗಂಡನಿಗೆ ಹೇಳುವ ಸಮಯವೇ ಒದಗಲಿಲ್ಲವಲ್ಲ. ಅವನ ಮೂಡ್ ಚೆನ್ನಾಗಿಲ್ಲ. ಮನೆಯ ವಾತಾವರಣ ಚೆನ್ನಾಗಿಲ್ಲ. ಅವನ ತಾಯಿ, ಈಗಲೇ ಖಾಯಿಲೆ ಮಲಗಬೇಕೆ? ಅವನು ಈಗ ಇಲ್ಲಿ..ನನ್ನ ಬಳಿಗೆ ಬಂದಿದ್ದರೆ ಎಲ್ಲವನ್ನು ಮರೆತು..ಈ ಸುದ್ದಿಯನ್ನು ಹೇಳಬಹುದಾಗಿತ್ತು. ನನಗಿಂತ ಅವನಿಗೆ ಮನೋಜನೇ ಹೆಚ್ಚು... ನಾನಾಗಿಯೇ ಅವನಿಗೆ ಹೇಳುವುದಿಲ್ಲ. ಎಂದು ನಿಶ್ಚಯಿಸಿ ಮಲಗಿದಳು.

ಒಂದುವಾರ ಕಳೆಯಿತು. ಕಾವೇರಮ್ಮನಿಗೆ ಗುಣವಾಗಲಿಲ್ಲ. ರಂಗನಾಥನ ಕೈಲಿದ್ದ

ಹಣವೆಲ್ಲಾ ಖರ್ಚಾಗಿಹೋಗಿತ್ತು. ಅವನು ಸೋತು ಹೋಗಿದ್ದ. ಒಂದು ವಾರದಿಂದೀಚೆಗೆ ಅವನೇ ಖಾಯಿಲೆ ಮಲಗಿದವ ನಂತಾಗಿದ್ದ.

ನರ್ಸಿಂಗ್ ಹೋಂನಿಂದ ಕ್ಲಿನಿಕ್‌ಗೆ ಬಂದಾಗ, ಅಲ್ಲಿ ನಿರ್ಮಲ ಇರಲಿಲ್ಲ. "ಅವರು ಲೇಡಿ ಡಾಕ್ಟ್ರಹತ್ತಿರ ಹೋಗಿದಾರೆ. ಇನ್ನೇನು ಬಂದು ಬಿಡ್ತಾರೆ,ಕೂತ್ಕೊಳ್ಳಿ" ಎಂದಳು ಕಾಂತಮ್ಮ. ರಂಗನಾಥನಿಗೆ ಗಾಭರಿ ಯಾಯ್ತು.

"ಯಾಕೆ? ಅವರಿಗೇನಾಯ್ತು?" ಕೇಳಿದ.

"ಏಕೆ ನಿಮಗೆ ಗೊತ್ತಿಲ್ವಾ ಸಾರ್ ..ಈಚೆಗೆ ಅವರಿಗೆ ಊಟ ಸರಿಯಾಗಿ ಸೇರ್ತಿಲ್ಲವಂತೆ. ತಲೆನೋವು ಸುಸ್ತಂತೆ. ವಾಕರಿಕೆ ಬರುತ್ತೆ ಅಂತ ಹೇಳ್ತಿದ್ದರು."

"ಹೌದಾ ಕಾಂತಮ್ಮ, ನನಗೆ ಹೇಳಲೇ ಇಲ್ಲವಲ್ಲ. ಅವರು?"

"ನೀವು ಅವರನ್ನು ಗಮನಿಸಿಲ್ಲ ಅಂತ ಕಾಣಿಸುತ್ತೆ"

"ಹೌದು..ನಮ್ಮ ತಾಯಿಗೆ ಹುಶಾರಿಲ್ಲ...ನರ್ಸಿಗ್ ಹೋಂನಲ್ಲಿದಾರೆ. ನನಗೆ ಅದೇ ಓಡಾಟ."

"ಓ..ಹಾಗಾ? ನಂಗೆ ಗೊತ್ತಿರಲಿಲ್ಲ...ಹಾಗಾದರೆ ಡಾಕ್ಟರಮ್ಮನಿಗೆ ಏನಾಗಿದೆ ಅಂತ ನಮಗೆ ತಿಳಿದಿಲ್ಲ ಅನ್ನಿ." ನಸುನಕ್ಕು ನುಡಿದಳು.

ಅವಳ ಮಾತು ಅಸಹನೀಯವೆನಿಸಿತು. ಚಿಂತೆಯ ಧ್ವನಿಯಲ್ಲಿ ಕೇಳಿದ. "ನಂಗೇನೂ ತಿಳೀದು. ಏನಾಗಿದೆ ಅವರಿಗೆ? ಅಮ್ಮ ಮಲಗಿರುವುದೇ ಸಾಕಾಗಿದೆ. ಎಲ್ಲರೂ ಹುಶಾರಾಗಿದ್ರೆ ಸಾಕು"

" ಎಯ್..ಅಂಥಾದ್ದೇನಾಗಿಲ್ಲ ಬಿಡಿ. ಇದು ಸಂತೋಷದ ವಿಷಯ ಡಾಕ್ಟ್ರಮ್ಮ ಗರ್ಭಿಣಿಯಾಗಿದಾರೆ." ಈ ಮಾತಿಗೆ ರಂಗನಾಥ ಕೆಂಪಾದ. ನಾಚಿಕೆ ಸಂತೋಷ ಏಕಕಾಲದಲ್ಲಾಯ್ತು. ನಿರ್ಮಲ ತನಗೇಕೆ ಈ ವಿಚಾರ ವನ್ನು ತಿಳಿಸಲಿಲ್ಲವೆಂದು ಚಿಂತಿಸಿದ.

" ನನಗೆ ಗೊತ್ತಿರಲಿಲ್ಲ. ನೀವು ಹೇಳಿದ್ದು ಒಳ್ಳೆಯದಾಯ್ತು. ನನ್ನ ಹತ್ತಿರ ಹೇಳುಕ್ಕೆ ಅವರಿಗೆ ಸಂಕೊಚವಾಗಿರಬಹುದು."

"ಇರಬಹುದು. ಅವರನ್ನು ಚೆನ್ನಾಗಿ ವಿಚಾರಿಸಿಕೊಳ್ಳಿ ಸಾರ್. ಬಸಿರಿಯ ಬಯಕೆ ಪೂರೈಸಬೇಕು."

"ಅಂದ್ರೆ..ಬಸಿರಿಯ ಆಸೆ ಪೂರೈಸಬೇಕು" ಮನದಲ್ಲೇ ಅಂದುಕೊಳ್ಳು ವಷ್ಟರಲ್ಲಿ ಆಟೋ ನಿಂತ ಸದ್ದಾಯಿತು. ಇಬ್ಬರೂ ಒಬ್ಬರನ್ನೊಬ್ಬರು ನೋಡಿದರು. ನಾನು ಹೇಳಿದೆ ಅಂತ ಹೇಳ್ಬೇಡಿ ಸಾರ್. ಅವರು ತುಂಬಾ ಸ್ಟ್ರಿಕ್ಟು...ಅವಳು ಕೋರಿಕೆಯ ಧ್ವನಿಯಲ್ಲಿ ಹೇಳಿದಾಗ, ಹುಂ ಆಗಲಿ. ಎಂದು ತಲೆಯಾಡಿಸಿದ. ಎಷ್ಟೋ ದಿನಗಳಿಂದ ಅವಳನ್ನೂ ನೋಡಿಯೇ ಇಲ್ಲವೇನೋ ಎಂಬಂತೆ ಒಳಗೆ ಬಂದವಳನ್ನೇ ಗಮಸಿದ. ಹೌದು. ಕಂಗೆಟ್ಟಿದಾಳೆ. ಮುಖದ ಕಳೆಯೇ ಬದಲಾಗಿ ಹೋಗಿದೆ. ಆದರೂ ನೋಡೋಕೆ ಮುಂಚಿನಂತೆಯೇ ಚೆನ್ನಾಗಿಯೇ ಇದಾಳೆ. ಈಚೆಗೆ, ಅವಳನ್ನು ಸರಿಯಾಗಿ ನೋಡಿಲ್ಲ. ಮಾತನಾಡಿಸಿಲ್ಲ...ಆವಳೊಂದಿಗೆ ಮಲಗಿಲ್ಲ. ಏನಂದುಕೊಂಡಿರಬಹುದು ಅವಳು.?"

ಅವನ ನೇರ ದೃಷ್ಟಿಯನ್ನು ಗಮನಿಸಿ ಕೆಂಪಾದಳು. ಹೀಗೇಕೆ ನೋಡ್ತಿದಾನೆ ಎಂದೂ ನೋಡದವನಂತೆ ...ಎಂದು ಕೊಂಡಳು. ಬರ್ತೀಯಾ? ಮನೆಗೆ

ಹೋಗೋಣ..ಅವನ ಮಾತಿನಲ್ಲಿನ ಮೃದುತ್ವವನ್ನು ಗಮನಿಸಿದಳು. ಏನಾಯ್ತು ಇವನಿಗೆ ಇವತ್ತು? ಎಂದುಕೊಂಡು, ಅವನನ್ನು ಹಿಂಬಾಲಿಸಿದಳು. ಕ್ಲಿನಿಕ್‌ಗೆ ಬೀಗಹಾಕಿ ಕಾಂಪೌಂಡ್‌ರ ಹೊರಟು ಹೋದಳು.

ಮನೆಗೆ ಬಂದ ಮೇಲೂ ಎಷ್ಟೋ ಹೊತ್ತಿನವರೆಗೂ, ಅವಳೇ ಹೇಳುತ್ತಾಳೇನೋ ಎಂದು ಕಾದ. ನಿರ್ಮಲ ಸರಿಯಾಗಿ ಊಟ ಮಾಡದೇ ಇದ್ದಾಗ ಕೇಳಿದ.

"ಏನಾಗಿದೆ ನಿನಗೆ? ಸರಿಯಾಗಿ ಊಟ ಮಾಡ್ತಿಲ್ಲವಲ್ಲ. ಅಡಿಗೆ ರುಚಿಯಾಗಿಲ್ವಾ?"

"ಯಾಕೋ ಸೇರುತ್ತಿಲ್ಲ.," ತುತ್ತನ್ನು ಕೈಯಲ್ಲಿ ಹಾಗೇ ಹಿಡಿದಿದ್ದಳು.

"ಏನಾಗಿದೆ ಅಂತ ನಿನಗೇ ತಿಳಿದಿರಬೇಕಲ್ಲ. ನೀನೇ ಡಾಕ್ಟರು."

"ಅಂಥಾದ್ದೇನಾಗಿಲ್ಲ, ಎಲ್ಲಾ ಸರಿಯಾಗಿದೆ."

" ನನಗೂ ಹೇಳಬಾರದಾ? ಹೇಳು" ಒತ್ತಾಯ ಮಾಡಿದ.

"ನಿಮ್ಮ ಮೂಡ್ ಚೆನ್ನಾಗಿಲ್ಲವಲ್ಲ ಅಂತ ನಾನು ಹೇಳಲಿಲ್ಲ. ನಾನೀಗ ಮೂರು ತಿಂಗಳ ಪ್ರೆಗ್ನೇಂಟ್..."

"ನನಗೇಕೆ ಈ ಮೊದಲೇ ತಿಳಿಸಲಿಲ್ಲ..?"

" ಈಗ ಹೇಳಿದ್ನಲ್ಲ. ಇನ್ನೇನು ಬಿಡಿ ಉದಾಸೀನವಾಗಿ ನುಡಿದಳು.

"ಆ ಮಾತು ಬೇರೆ. ಇರಲಿ. ನಿನ್ನನ್ನು ಕೂರಿಸಿ ಉಪಚಾರ ಮಾಡುಕ್ಕೆ ನನಗೆ ಬರುಲ್ಲ. ಅಮ್ಮ ಮನೆಯಲ್ಲಿಲ್ಲ. ನಿನಗೇನು ಬೇಕೋ ಅದನ್ನ ನೀನೇ ಕೇಳಬೇಕು"..ಕಳಕಳಿಯಿಂದ ನುಡಿದ.

"ನಿಮಗೆ ಸಂತೋಷ ಆಗ್ಲಿಲ್ವಾ?"

"ಸಂತೋಷವಾಗದೇ ಇರುತ್ತಾ? ಆದರೆ ಅಮ್ಮ ಖಾಯಿಲೆ ಮಲಗಿದಾಳಲ್ಲ. ಮನಸಿಗೆ ಅದೇ ಬೇಜಾರು. ನೆಮ್ಮದೀನೇ ಇಲ್ಲ."

"ನಿಮಗೇ ನಿಮ್ಮಮ್ಮನದೇ ಚಿಂತೆ. ಜಾಸ್ತಿ. ಅದಕ್ಕೇ ನಾನು ಸುಮ್ಮನಿದ್ದೆ. ಅಲ್ಲದೇ ಇದೇನು ಹೆಚ್ಚುಗಾರಿಕೆಯ ವಿಷಯ? ಹೆಂಗಸರಿಗೆ ಇದು ಕಾಮನ್"

"ಇದೆಲ್ಲಾ. ವ್ಯಂಗ್ಯದ ಮಾತು. ಆದಿರಲಿ. ನನಗೆ ಈ ವಿಷಯದಲ್ಲಿ ಹೆಚ್ಚಿಗೆ ಏನೂ ತಿಳಿಯದು. ನಿನಗೆ ಬೇಕಾದ ಔಷಧ ಪಥ್ಯ ಎಲ್ಲಾ ನೀನೇ ನೋಡ್ಕೋಬೇಕು. ಹೀಗೆ ಮಾಡು ಹಾಗೆ ಮಾಡಬೇಡ ಅಂತ ಹೇಳುವವ ರ‍್ಯಾರೂ ಇಲ್ಲ. ನಿನಗೇನು ಬೇಕೋ ಅದನ್ನು ತಗೋ. ನಿಂಗೇನು ತಿನ್ನಬೇಕು ಅಂತನ್ನಿಸುತ್ತೋ ಅದನ್ನು ತಿನ್ನು...ಇದಿಷ್ಟನ್ನು ಹೇಳಬಲ್ಲೆ ಅಷ್ಟೆ."

"ನನಗೇನು ಬೇಕೋ ಅದನ್ನು ನಾನೇ ಮಾಡಿಕೊಂಡರೆ ಏನು ಮಜಾ ಇರುತ್ತೇ ನೀವು ನನ್ನ ಗಂಡ ನನಗೆ ಬೇಕಾದ್ದನ್ನು ಕೊಡಿಸಬೇಕು. ತಿನ್ನಿಸ ಬೇಕು. ಅದರಲ್ಲೆ ಮಜಾ.."

"ಸಾರಿ. ನಿರ್ಮಲಾ..ನನ್ನ ಕೈಲಿ..ಈಗ ಅದೆಲ್ಲಾ ಸಾಧ್ಯವಿಲ್ಲ."

" ಏಕೆ ಸಾಧ್ಯವಿಲ್ಲ? ಹೆಂಡತಿಯ ಆಸೆಯನ್ನು ಪೂರೈಸುಕ್ಕೆ ಸಾಧ್ಯ ವಿಲ್ಲವಾ? ಯಾಕೆ ಸುಮ್ಮನೇ ಖರ್ಚಾಗುತ್ತೆ ಅಂತಲೋ...ಅಥವಾ ಅಮ್ಮ ಬಿದ್ದಿರುವಾಗ ಇವಳಿಗೇನು ಉಪಚಾರ ಮಡೋದು ಅಂತಲೋ...?"

"ಷಟಪ್ ನಿರ್ಮಲಾ..ನಿನಗೆ ದುರಹಂಕಾರ, ನನ್ನ ಸ್ಥಿತೀನ ಅರ್ಥ ಮಾಡ್ಕೋ...ನಾನು ಆಡುವ ಮಾತಿಗೆಲ್ಲ ಒಂಥರ ಏನೇನೋ ಆಡಬೇಡ?" ಅವನಿಗೆ ಅವಳ ವ್ಯಂಗ್ಯದ ಮಾತು ಕೋಪವನ್ನು ಬರಿಸಿತ್ತು.

"ಒಂಥರ ಏನು, ನೀವು ಆಡುವುದೇ ಹಾಗೆ. ಮಾಡ್ತಿರುವುದೇ ಹಾಗೇ. ಈಗ ನನ್ನ ಆಸೆ ಪೂರೈಸಬೇಕು ಅಂತ, ನಾನು ಕೇಳಿದರೆ, ನನ್ನನ್ನು ಸಿನಿಮಾಕ್ಕೆ ಕರೆದುಕೊಂಡು ಹೊಗ್ತೀರಾ? ಹೋಟೆಲ್ಲಿಗೆ ಕರೆದುಕೊಂಡು ಹೋಗ್ತೀರಾ? ಹೊಸ ಸೀರೆ ಕೊಡ್ತಿಸ್ತೀರಾ?"

"ಅಮ್ಮಂಗೆ ಹುಶಾರಿಲ್ಲದಿರುವಾಗ ಇದೆಲ್ಲ ಸರೀನಾ? ಏನು ಚೆನ್ನ ನೀನೇ ಹೇಳು. ಎರಡು ಹೊಸ ಸೀರೆಗಳಿವೆಯಲ್ಲ. ಅದನ್ನೇ ಉಟ್ಕೋ..."

"ಅದನ್ನೇ ಬ್ಯಾಡ್‌ಲಕ್ ಎಂದಿದ್ದು. ನಿಮ್ಮಮ್ಮನಿಗೆ ಸೀರೆಗಳನ್ನು ತರಲಿಲ್ಲ ಅಂತ. ಆ ಸೀರೆಗಳನ್ನು ಹೊರಗೇ ತೆಗೆಯಲಿಲ್ಲ. ಈಗ ನಿಮ್ಮ ತಾಯಿಗೆ ಹುಶಾರಿಲ್ಲ ಅಂತ ನನ್ನ ಬಯಕೆಗಳನ್ನು ಅದುಮಿಟ್ಟುಕೊಳ್ಳಬೇಕು. ಈಗಲೇ ಖಾಯಿಲೆ ಮಲಗಬೇಕಾ ಆ ಮಹಾತಾಯಿ?"

"ನಿರ್ಮಲಾ..ಅಮ್ಮನ ಬಗ್ಗೆ ಮರ್ಯಾದೆಯಿಂದ ಮಾತನಾಡು.. ಅವಳು ನಿನಗೆ ಏನು ಕೆಡಕು ಮಾಡಿದ್ದಾಳೆ? ಜ್ಞಾನವಿಲ್ಲದೇ ಸಾಯ್ತು ಬಿದ್ದಿದಾಳೆ" ಎನ್ನುತ್ತಾ ದುಡುದುಡು ಆಚೆಗೆ ಬಂದು ಬಿಟ್ಟ. ಆ ಕ್ಷಣದಲಿ ಅವನಿಗೆ ಅಮ್ಮನಾಡಿದ್ದ ಮಾತುಗಳು ನೆನೆಪಾದವು. ಆಸ್ತಿ ಅಂತಸ್ತು ಹಣ ಇರುವವಳಿಗೆ ದುರಹಂಕಾರ ಇರುತ್ತೆ. ನಮ್ಮಂಹವರ ಜೊತೆ ಅವಳಿಗೆ ಸರಿ ಹೋಗುತ್ತಾ ಆ ಮಾತು ನಿಜ ಅಂತ ಅನ್ನಿಸತೊಡಗಿತ್ತು.

ಛೆ..ಹೀಗಾಗಬಾರದಾಗಿತ್ತು. ಸೊಸೆ ಬಸಿರಿ ಅಂತ ತಿಳಿದರೆ ಅಮ್ಮ ನಿಜಕ್ಕೂ ಸಂತೋಷಪಡುತ್ತಿದ್ದಳು. ಆದರೆ..ಇವಳು ಹೇಗೆ ಮತನಾಡುತ್ತಾಳೆ ಇವಳಿಗೆ ಅಮ್ಮನ್ನ ಕಂಡರೆ ವಿಶ್ವಾಸವಿಲ್ಲ. ಮನೋಜನ್ನ ಕಂಡರೆ ಪ್ರೀತಿ ಇಲ್ಲ. ಈಗಲೇ ಹೀಗೆ..ಇನ್ನು ನಾಳೆ ಇವಳಿಗೇ ಒಂದು ಮಗುವಾದ ಮೇಲೆ, ಮನೋಜನ್ನ ಮನೆಯಿಂದ ಆಚೆ ಕಳಿಸುವುದಕ್ಕೂ ಹಿಂಜರಿಯುವುದಿಲ್ಲ. ಇದ್ದಕ್ಕಿಂತೆ ಹೀಗನ್ನಿಸಿದ ಕೂಡಲೇ ...ಉಸಿರು ಸಿಕ್ಕಿಕೊಂಡಂತಾಯಿತು..... ಮೈ ಬಿಗಿಯಿತು...ಇಲ್ಲ, ಹಾಗಾಗುವುದಕ್ಕೆ ಮಾತ್ರ ಬಿಡ ಬಾರದು... ಖಂಡಿತಾ ಹಾಗಾಗಬಾರದು. ಇವಳಿಗೆ ಈಗಲಿಂದಲೇ ತಿಳುವಳಿಗೆ ಹೇಳಬೇಕು. ಅಮ್ಮ ಮನೆಗೆ ಬಂದ ಮೇಲೆ, ಪ್ರೀತಿಯಿಂದ ತಿಂಡಿ ತಿನಿಸುಗಳನ್ನು ಮಾಡಿಕೊಟ್ಟರೆ ಇವಳ ಮನಸ್ಸು ಬದಲಾಯಿಸಬಹುದು. ಮೊದಲಿನಿಂದ ಒಂಟಿಯಾಗಿ ತನ ಪಾಡಿಗೆ ತಾನು ಇದ್ದೂ ಇದ್ದೂ ಅದೇ ಅಭ್ಯಾಸವಾಗಿರಬಹುದು. ಯಾರೂ ಬೇಕಿಲ್ಲದಿರಬಹುದು...ಈಗಿನ್ನೂ ಈ ಮನೆಗೆ ಬಂದು ಮೂರು ನಾಲ್ಕು ತಿಂಗಳು ಕಳೆದಿದೆ ಅಷ್ಟೇ. ಅವಳೇ ತಾಯಿಯಾದ ಮೇಲೆ ಅವಳ ಮನಸ್ಸು ಬದಲಾಯಿಸಬಹುದು ಅಂತನ್ನಿಸಿದಾಗ, ಮಲಗಿದ್ದವನು ಎದ್ದು ಅವಳ ಬಳಿಗೆ ಬಂದ. ಗಾಢ ನಿದ್ರೆ ಯಲ್ಲಿದ್ದ ವಳನ್ನು ಎಬ್ಬಿಸುವ ಮನಸ್ಸಾಗದೇ ಮತ್ತೆ ಹೊರಗೆ ಬಂದು ಮಲಗಿದ.

ಬೆಳಗಿನ ಝಾವದಲ್ಲಿ ಸತ್ಯ ಬಂದು ಕರೆದು ಎಚ್ಚರಿಸಿದಾಗ, ದಿಗಿಲಿನಿಂದೆದ್ದ. ನಿಮ್ಮಮ್ಮನಿಗೆ ಸೀರಿಯಸ್ ಆಗಿದೆ ನೀನು ಬಾ.. ಎನ್ನುತ್ತಾ ಬೆಪ್ಪನಂತೆ ನಿಂತಿದ್ದವನನ್ನು ಕರೆದೊಯ್ದ. ನಿರ್ಮಲ ಬಾಗಿಲನ್ನು ಹಾಕಿ ಕೊಂಡು ಮತ್ತೆ ಮಲಗಿದಳು.

ರಂಗನಾಥ ನರ್ಸಿಂಗ್ ಹೋಂಗೆ ಬಂದಾಗ ಅಳುವುದೊಂದು ಬಾಕಿ. ನಿಶ್ಚಿಂತೆಯಿಂದ ಮಲಗಿದ್ದ ಅಮ್ಮನನ್ನು ಕಂಡು ಅವನಿಗೆ ಎಲ್ಲಾ ಅರ್ಥವಾಗಿತ್ತು. ಸತ್ಯನ ಮುಖ ನೋಡಿದ. ಸತ್ಯ ಸ್ನೇಹಿತನನ್ನು ತಬ್ಬಿಕೊಂಡು ತಲೆಯಾಡಿಸಿದ. ಅಮ್ಮ ಹೊರಟೇ ಹೋದಳು ಎನ್ನುವ ದುಃಖವನ್ನು ತಡೆಯಲಾರದೇ ಬಿಕ್ಕಿ ಬಿಕ್ಕಿ ಅತ್ತ.... ಅತ್ತು ಸಮಾಧಾನವಾದ ಮೇಲೆ ಸತ್ಯನ್ನ ತಾನೇ ಕೇಳಿದ. ಈಗ ಮುಂದೇನು?"

"ಬಾಡೀನ ನಿಮ್ಮ ಮನೆಗೆ ತಗೊಂಡು ಹೋಗೋಣ್ವಾ? ಅದಕ್ಕೆ ಮುಂಚೆ ನರ್ಸಿಂಗ್ ಹೋಂನ ಬಿಲ್ ಪೇ ಮಾಡಬೇಕು."

" ನನ್ನ ಹತ್ತಿರ ಹಣ ತುಂಬಾ ಇಲ್ಲ. ಎಷ್ಟಾಗುತ್ತೋ ಏನೋ? ಈಗ ನೀನೇ ಸಹಾಯ ಮಾಡಬೇಕು ನನಗೆ."

"ನನ್ನ ಹತ್ತಿರವೂ ಸದ್ಯಕ್ಕೆ ಸಾಕಷ್ಟಿಲ್ಲ. ನೋಡೋಣ, ಈಗ ಡಾಕ್ಟರು ಬಂದಿದ್ದರೆ, ಮೊದಲು ಡೆತ್ ಸರ್ಟಿಪಿಕೇಟ್ ತಗೋಬೇಕು."

ಡಾಕ್ಟರು ಸರ್ಟಿಫಿಕೇಟ್ ಮಾಡಿಸಿಕೊಟ್ಟರು. ವಾರ್ಡ್ ಚಾರ್ಜ್ ಔಷದಿ. ಇಂಜೆಕ್ಷನ್ ಅದೂ ಇದೂ ಅಂತ ಎರಡು ಸಾವಿರದಷ್ಟು ಖರ್ಚಾಗಿತ್ತೂ ರಂಗ ಹುಬ್ಬೇರಿಸಿದ.

"ಎಲ್ಲಿಂದ ತರೂದಪ್ಪಾ..ಇಷ್ಟೊಂದಾಗಿದೆ...?"ಎಂದ

ಪ್ರೈವೇಟ್ ನರ್ಸಿಂಗ್ ಹೋಂ ಅಂದರೆ ಹೀಗೇನೇ..ಈಗ ಖರ್ಚಾಗಿದೆ, ಕೊಡಲೇ ಬೇಕು. ನಿನ್ನ ಮಿಸೆಸ್ ಬಂದು ಮಾತಾಡಿದ್ದರೆ, ಬಿಲ್‌ನಲ್ಲಿ ಕಮ್ಮಿ ಮಾಡಿಸ ಬಹುದಾಗಿತ್ತು. ಎಷ್ಟಾಗಲಿ, ಡಾಕ್ಟರ್ ಡಾಕ್ಟರ್ಸ್‌ಗೆ ಪರಿಚಯ ವಿರುತ್ತೆ. ಅವರನ್ನು ಕಂಡೇ, ನಿರ್ಮಲಾ ಏನಾಗಿರಬಹುದೆಂದು ಊಹಿಸಿದಳು. ಆದರೆ ತಾನಾಗಿಯೇ ಕೇಳಲಿಲ್ಲ. ರಂಗನಾಥನೇ, "ಅಮ್ಮಾ...ನಿರ್ಮಲಾ..ಅಮ್ಮಾ ಹೋಗಿ ಬಿಟ್ಟಳು." ದುಃ ಖಿತನಾಗಿ ಹೇಳಿದಾಗ ನಿರ್ಮಲ ಯಾವ ಪ್ರತಿಕ್ರಿಯೆಯನ್ನು ತೋರಿಸದೇ ನಿರ್ವಿಕಾರ ವಾಗಿ ನುಡಿದಳು.

"ನಂಗೆ ಈ ಮುಂಚೇನೇ ಗೊತ್ತಿತ್ತು. ಆದರೆ ನಾನಾಗಿಯೇ ಹೇಳ ಬಾರದು ಅಂತ ಸುಮ್ಮನದ್ದೆ. ನರ್ಸಿಂಗ್ ಹೋಂಗೆ ಸಿಕ್ಕಾ ಬಟ್ಟೆ ಖರ್ಚಾಗಿರ ಬಹುದಲ್ವಾ?"

"ಈಗ ಖರ್ಚಾಗಿದೆ ಅಂತ, ಮನೇಲೇ ಇಟ್ಟುಕೊಳ್ಳೊಕ್ಕೆ ಆಗ್ತಿತ್ತಾ? ಏನೂ ಮತೂಂತ ಆಡ್ತೀಯ.? ನನ್ನ ಕರ್ತವ್ಯ ನಾನು ಮಾಡಿದೇನೆ. ಬಿಲ್ ಸ್ವಲ್ಪ ಹೆಚ್ಚಾಗಿರ ಬಹುದು. ನೀನು ಬಂದು ನರ್ಸಿಗ್ ಹೋಂನವರ ಬಳಿ ಮಾತನಾಡಿದರೆ, ಸ್ವಲ್ಪ ಕಮ್ಮಿ ಮಾಡಬಹುದೇನೋ.. ಬರ್ತಿಯಾ..ಹಾಗೇ ಅಮ್ಮನ್ನ ಕಡೇಸಲ ನೋಡಿದ ಹಾಗಾಗುತ್ತೆ.. ಬರ್ತಿಯಾ.. ಹೊರಡೋಣ.?"

ನಿರ್ಮಲ ಕೆಟ್ಟ ಮುಖ ಮಾಡಿದಳು. ನಾನು ಅಮ್ಮನ್ನ ನೋಡುವುದರ ಜತಗೆ, ಇವರಿಗೆ ಸಹಾಯವೂ ಆಗಬೇಕು...ಪರವಾಗಿಲ್ವೇ..ಲೆಖ್ಖಾಚಾರ ಚೆನ್ನಾಗಿದೆ ಎಂದುಕೊಂಡಳು.

"ಬಿಲ್ ಹಾಕುಕ್ಕೆ ಮುಂಚೇಲೇ ಮತನಾಡಿದ್ರೆ ಚೆನ್ನಾಗಿತ್ತೇನೋ ಈಗ ಹೇಗೆ ಕೇಳುವುದು? ಚೌಕಾಸಿ ಮಾಡ್ತಿದಾರೆ ಅಂತ ನಗುಲ್ವೇ?"

"ಚೌಕಾಸಿ ಯಾರು ಮಾಡುಲ್ಲ? ಈಗ ಆ ಮಾತು ಬೇಡ. ಬೇಗ ಹೊರಡು.

ಮನೋಜನ್ನ ಕರೆದುಕೊಂಡು ಬರ್ತೀನಿ"

"ಅವನ್ಯಾಕೆ ಚಿಕ್ಕಮಕ್ಕಳನ್ನು ಆಸ್ಪತ್ರೆಗೆ ಸುಮ್ಸುಮ್ನೆ ಯಾಕೆ ಕರೆದು ಕೊಂಡು ಹೋಗಬೇಕು ಅವನಿಗೆ ಏನು ಗೊತ್ತಾಗುತ್ತೆ? ಅಜ್ಜಿಯ ಮುಖ ನೋಡಿ ಅಳ್ತಾ ಕೂತರೆ ಏನು ಮಾಡ್ತಿರಿ?"

"ಹೌದು. ಅದೂ ಸರಿ. ಹಾಗಾದ್ರೆ ಅವನು ಅಲ್ಲೇ ಇರಲಿ. ಹಾಗೇ ಸ್ವಲ್ಪ ದುಡ್ಡಿದ್ರೆ ತಗೋ. ನನ್ನ ಹತ್ತಿರ ಸಾಕಷ್ಟಿಲ್ಲ."

"ನನ್ನ ಹತ್ತಿರವೂ ಇಲ್ಲ...ತಕ್ಷಣವೇ ನುಡಿದಳು

"ತಮಾಷೆಗೆ ಸಮಯವಿಲ್ಲ ಎಷ್ಟಿದೆಯೋ ಅಷ್ಟನ್ನೇ ತಗೋ..."

"ಹೇಳಿದ್ನಲ್ಲ. ನನ್ನ ಹತ್ತಿರ ಇಲ್ಲ ಅಂತ. ನಿಜವಾಗಿಯೂ ಇಲ್ಲ.?"

"ನನಗೆ ಕೊಡುಕ್ಕೆ ಇಷ್ಟವಿಲ್ಲದಿದ್ದರೆ ಹಾಗೇ ಹೇಳಿ ಬಿಡು.. ಸುಳ್ಳು ಮಾತ್ರ ಹೇಳಬೇಡ. ನನಗೆ ಇಂಥಾ ಮಾತು ಇಷ್ಟವಾಗುವುದಿಲ್ಲ."

"ಹಾಗೆ ತಿಳಿದು ಕೊಳ್ಳಿ..ನನ್ನ ಹತ್ತಿರ ಇಲ್ಲದ ಹಣವನ್ನು ಕೊಡುವುದು ಎಲ್ಲಿಂದ ಬಂತು?"

"ಸರಿ ಹಾಗಾದ್ರೆ...ನೀನು ಸಂಪಾದಿಸಿದ ಹಣಾನೆಲ್ಲ ಏನು ಮಾಡ್ತೀಯ ಅಂತ ನಾನು ಕೇಳುಲ್ಲ. ನನಗೆ ಕೊಡುಕ್ಕೆ ಇಷ್ಟವಿಲ್ಲದ ಮೇಲೆ, ಅದನ್ನು ಕಟ್ಟಿಕೊಂಡು ನನಗೇನಾಗಬೇಕಾಗಿದೆ? ಈಗ ನಾನು ಹೊರಟೆ.. ಬರುವು ದಾದರೆ ಬಾ..."

ಉರಿ ಉರಿಯುತ್ತಾ ಹೊರಟವನನ್ನು ಹಿಂಬಾಲಿಸಿದಳು. ಅವಳಿಗೆ ಅವಮಾನ ವಾದಂತಾಗಿತ್ತು. ಹಣದ ಮಾತು ಮತ್ಯಾಕೆ ಬಂತೋ ಎಂದು ಚಿಂತಿಸುತ್ತಿದ್ದಳು. ಸ್ಕೂಟರ್ ನಿಲ್ಲಿಸಿ ತನ್ನ ಪಾಡಿಗೆ ತಾನು ಇಳಿದುಹೋದ. ನಿರ್ಮಲ ನಿಧಾನವಾಗಿ ಅವನನ್ನು ಹಿಂಬಾಲಿಸಿದಳು. ವಾರ್ಡಿನಿಂದ ಹೊರಗೆ ಸಾಗಿಸುತ್ತಿದ್ದ ಶವವನ್ನು ದೂರದಿಂದ ನೋಡಿದಳು. ಸತ್ಯ ಅವಳ ಬಳಿಗೆ ಬಂದು ಮಾತಾನಾಡುತ್ತಾ ನಿಂತ. ಅವರಿಬ್ಬರನ್ನು ಅಲ್ಲಿಯೇ ಬಿಟ್ಟು ರಂಗನಾಥ ಡಾಕ್ಟರನ್ನು ಕಾಣಲು ಹೋದ.

" ಸಧ್ಯಕ್ಕೆ ನನ್ನ ಪರಿಸ್ಥಿತಿ ಹೀಗಿದೆ. ನನ್ನ ಹತ್ತಿರ ಐದು ನೂರು ರೂಪಾಯಿ ಮಾತ್ರ ಇದೆ. ಉಳಿದದ್ದನ್ನು ನಾಳೆ ಕೊಡ್ತೀನಿ. ಇದು ನನ್ನ ರಿಕ್ವೆಸ್ಟ್. ನಿಮಗೆ ಅನುಮಾನವಿದ್ರೆ. ಈ ರಿಸ್ಟ್‌ವಾಚನ ಇಲ್ಲಿ ಬಿಟ್ಟಿರ್ತಿನಿ. ನನ್ನ ಮನೆ ಅಡ್ರೆಸ್, ಕಾಲೇಜಿನ ಅಡ್ರೆಸ್ ಕೊಡ್ತೀನಿ"

"ಪರವಾಗಿಲ್ಲ. ಅದೆಲ್ಲಾ ಏನೂ ಬೇಡಪ್ಪಾ..ನನ್ನ ಮಗಳು ನಿಮ್ಮ ಮಿಸೆಸ್ ಇಬ್ಬರೂ ಕ್ಲಾಸ್‌ಮೇಟ್ಸ್ ಅಂತ ಗೊತ್ತು. ನನ್ನ ಮಗಳು ಈ ಊರಿನಲ್ಲಿಲ್ಲ. ನಿಧಾನವಾಗಿ ತಂದು ಕೊಡಿ ಪರವಾಗಿಲ್ಲ."

ಡಾಕ್ಟರು ಅಷ್ಟು ಹೇಳಿದ್ದೇ ಸಾಕು ಎಂಬಂತೆ. "ಥ್ಯಾಂಕ್‌ಯೂ ಡಾಕ್ಟರ್" ಎಂದು ಗೌರವದಿಂದ ಕೈ ಮುಗಿದ. ನಿರ್ಮಲೆಗೆ ತಿಳಿಸಬಾರದು ಎಂದು ಕೊಂಡು ಹೊರಗೆ ಬಂದ. ಸತ್ಯ ನಿರ್ಮಲ ಅಲ್ಲೇ ಮಾತನಾಡುತ್ತಾ ನಿಂತಿದ್ದರು.

"ಎಲ್ಲಾ ಸೆಟ್ಲ್ ಆಯ್ತು. ಬಾಡೀನ ತೆಗೆದುಕೊಂಡು ಹೋಗಬಹುದು ಅಂದ್ರು. ನಿರ್ಮಲ ನೀನು ಮನೆಗೆ ಹೋಗು. ನಾನು ಸತ್ಯ ಇಲ್ಲಿಂದಲೇ ಸ್ಮಶಾನಕ್ಕೆ ಹೋಗ್ತೀವಿ. ವಾಪಸ್ಸು ಬರೋದು ಎಷ್ಟು ಹೊತ್ತಾಗುತ್ತೋ ಏನೋ?" ಎಂದು ಹೇಳಿ ಮತ್ತೆ

ಹೊರಟು ಹೋದ.

ನಾನು ಡಾಕ್ಟರನ್ನು ಕಂಡು ಮಾತನಾಡಿಸಿಕೊಂಡು ಬರ್ತೀನಿ ಎಂದು ನಿರ್ಮಲ ನಡೆದಳು. ಸತ್ಯ ಅಲ್ಲೇ ಇದ್ದ ಬೆಂಚಿನ ಮೆಲೆ ಕುಳಿತಿದ್ದ, ಬೆಳಗಿನಿಂದ ಒಂದು ಲೋಟ ಕಾಫಿ ಸಹ ಕುಡಿಯದೇ ಅವನಿಗೆ ತಲೆ ನೋಯುತ್ತಿತ್ತು.

ಹಿರಿಯ ಡಾಕ್ಟರು ನಿರ್ಮಲೆಯನ್ನು ವಿಶ್ವಾಸದಿಂದ ಮಾತನಾಡಿಸಿದರು. ಬಿಲ್ ತುಂಬಾ ಹೆವಿಯಾಗಿ ಬಿಟ್ಟಿದೆ. ಸ್ವಲ್ಪ ಕನ್ಸೇಷನ್ ಮಾಡಿಸಿಕೊಡಿ ಕೇಳಿದಳು.

"ನಿಮ್ಮ ಅತ್ತೆ ಅಂತ ತಿಳಿದ ಮೇಲೆ, ನಾನು ಎಲ್ಲಾ ಮಾಡಿಸಿಬಿಟ್ಟಿದೀನಿ. ಆದರೆ ಮೆಡಿಸಿನ್‌ದೆಲ್ಲಾ ಕೂಡಲೇ ಬೇಕಲ್ವಾ? ಈಗ ತಾನೇ ನಿನ್ನ ಗಂಡನ ಹತ್ತಿರಾನೂ ಇದನ್ನೇ ಹೇಳಿದೆ. ನಿಧಾನಕ್ಕೆ ತಂದು ಕೊಡಿ ಪರವಾಗಿಲ್ಲ. ಇದಕ್ಕಿಂತ ಹೆಚ್ಚಿನ ಫೇವರ್ ನಾನು ಏನು ಮಾಡುಕ್ಕಾಗುತ್ತಮ್ಮ? ಮೆಡಿಸಿನ್ಸ್ ಸಿಕ್ಕಪಟ್ಟೆ ಕಾಸ್ಟ್ಲೀ ನಿಂಗೆ ಗೊತ್ತಲ್ವಾ...?" ಅವರು ಹೇಳುತ್ತಲೇ ಇದ್ದರು.

ನಿರ್ಮಲೆಗೆ ಕಪಾಳಕ್ಕೆ ಹೊಡೆದಂತಾಗಿತ್ತು. ಈಗ ತಾನೇ ಇಲ್ಲಿಂದ ಹೋಗಿದಾನೆ ನನಗೆ ಒಂದು ಮಾತು ತಿಳಿಸಲಿಲ್ಲ. ಛೆ..ಸುಮ್ಮನೇ ಮತ್ತೆ ಮಾತನಾಡಿ ಅವಮಾನವಾಯ್ತು. ತಾನೇ ಎಲ್ಲಾ ಮಾಡಿದ ಪಕ್ಷಕ್ಕೆ ನನಗೇಕೆ ಹೇಳಬೇಕಾಗಿತ್ತು ಸಿಟ್ಟಿನಿಂದ ಹಲ್ಲು ಕಚ್ಚಿದಳು,

"ಥ್ಯಾಂಕ್‌ಯೂ ಸಾರ್" ಎಂದು ಸೌಜನ್ಯಕ್ಕೆ ಹೇಳಿ ಆಚೆ ಬಂದಳು ಸತ್ಯನ ಬಳಿ ಬಂದವಳೇ, ನಾನು ಮನೆಗೆ ಹೋಗ್ತಿದೀನಿ. ಹಾಗಂತ ನಿಮ್ಮ ಪ್ರೆಂಡ್‌ಗೆ ಹೇಳಿಬಿಡಿ ಎನ್ನುತ್ತಾ ಮೆಟ್ಟಲಿಳಿದಳು. ನಾನು ಡ್ರಾಪ್ ಕೊಡಬಹುದಾಗಿತ್ತು. ಈ ರಂಗನಾಥ ಎಲ್ಲಿ ಹೋದನೋ ಗೊತ್ತಾಗಲಿಲ್ಲ ವಲ್ಲ. ಪೇಚಾಡಿದ.

"ಪರವಾಗಿಲ್ಲ. ಥ್ಯಾಂಕ್ಸ್." ಎಂದು ಮುಂದುವರೆದಳು. ಸತ್ಯ ಬೆಪ್ಪನಂತೆ ಮತ್ತೆ ಅಲ್ಲಯೇ ಕುಳಿತ. ಎಷ್ಟೋ ಹೊತ್ತಿನ ಮೇಲೆ ರಂಗನಾಥ ಬಂದ. ಸತ್ಯ ತಾನಾಗಿಯೇ ನಿರ್ಮಲ ಮನೆಗೆ ಹೊರಟ ವಿಷಯವನ್ನು ತಿಳಿಸಿದ. ರಂಗನಾಥ ಸರಿ ಎನ್ನುತ್ತಾ,"ಟ್ಯಾಕ್ಸಿ ತಂದಿದೀನಿ. ಬಾಡಿ ಸಾಗಿಸೋಣ ನಡಿ ಎಂದ"

ಆಸ್ಪತ್ರೆಯ ಸಿಬ್ಬಂದಿಯವರ ಸಹಾಯದಿಂದ ಬಾಡಿಯನ್ನು ಟ್ಯಾಕ್ಸಿಯ ಹಿಂದಿನ ಸೀಟಿನಲ್ಲಿ ಮಲಗಿಸಿದರು. ರಂಗನಾಥ ತಾಯಿಯ ತಲೆಯನ್ನು ತನ್ನ ತೊಡೆಯ ಮೇಲಿರಿಸಿಕೊಂಡು ಕೂತ. ಸತ್ಯ ಮುಂದೆ ಕುಳಿತ.

ಇವರಿಬ್ಬರೂ ಸ್ಮಶಾನ ತಲಪುವ ಹೊತ್ತಿಗೆ ರಂಗನಾಥ ಹೇಳಿ ಬಂದಿದ್ದ ಶಾಸ್ತ್ರಿಗಳು ಹಾಜರಾಗಿದ್ದರು. ಅವರ ನೇತೃತ್ವದಲ್ಲಿ ರಂಗನಾಥ ತನ್ನ ತಾಯಿಯ ಅಂತಿಮ ಕ್ರಿಯೆಗಳನ್ನು ಮುಗಿಸಿದ. ಅವರಿಗೆ ಕೊಡಬೇಕಾದ ಶುಲ್ಕವನ್ನು ಕೊಟ್ಟ. ಇಬ್ಬರೂ ಆಟೋ ಮಾಡಿಕೊಂಡು ರಂಗನಾಥನ ಮನೆಗೆ ಬಂದರು.

ರಂಗನಾಥ ಸ್ನಾನ ಮಾಡಿ ಕುಕ್ಕರಿನಲ್ಲಿ ಅನ್ನಕ್ಕೆ ಇಟ್ಟ. ಸತ್ಯನೂ ಅಲ್ಲೇ ಸ್ನಾನ ಮಾಡಿಸಿದ. ನಿರ್ಮಲಳೂ ಸ್ನಾನ ಮಾಡಿ ಬಂದ ಮೇಲೆ ಎಲ್ಲರೂ ಒಟ್ಟಿಗೇ ಊಟ ಮುಗಿಸಿದರು. ಮನೋಜನಿಗೆ ತುತ್ತು ತಿನ್ನಿಸುವಾಗ,

ಮನೋಜ, ಇವತ್ತು ಮತ್ತೊಮ್ಮೆ ಅನಾಥನಾಗಿಬಿಟ್ಟ ಎಂದು ಕಣ್ಣೊರಿಸಿಕೊಂಡ.

"ಛೆ..ಬಿಡ್ತು ಅನ್ನು. ನಿನ್ನಂತಹ ಮಾವ ಇರುವಾಗ ಅವನೇಕೆ ಅನಾಥನಾಗ್ತಾನೆ?"

ಸತ್ಯ ಸಮಾಧಾನ ಹೇಳಿದ.

"ಅಂತೂ ನಮ್ಮಿಬ್ಬರಿಗೂ ಅನ್ಯಾಯವಾಯಿತು. ಅಮ್ಮ ಮೋಸ ಮಾಡಿ ಹೋಗಿಬಿಟ್ಟಳು."

ನಿರ್ಮಲ ಅವರಿಬ್ಬರನ್ನು ಅಲ್ಲಿಯೇ ಬಿಟ್ಟು ರೂಮನ್ನು ಸೇರಿ ಕೊಂಡಳು.

"ನಾನು ಬೆಳಗ್ನಿಂದಕಾಫಿ ಕುಡಿದಿಲ್ಲ. ಅದಕ್ಕೇ ಏನೋ ತಲೆ ನೋವು. ಒಂದು ಮಾತ್ರೆ ಇದ್ದರೆ ಕೊಡು ನುಂಗ್ತೀನಿ"

"ತಡೀ ಸ್ಟ್ರಾಂಗ್ ಕಾಫಿ ಕೊಡ್ತೀನಿ. ಮಾತ್ರೆನೂ ನುಂಗೂವಂತೆ. ಆಮೇಲೆ ನೀನು ನನಗೊಂದು ಹೆಲ್ಪ್ ಮಾಡಬೇಕಾಪ್ಪಾ. ಮೊದಲು ರೆಸ್ಟ್ತಗೋ. ನನ್ನ ಸ್ಕೂಟರ್ನ ಅಲ್ಲೇ ಆಸ್ಪತ್ರೆಯ ಪಾರ್ಕಿಂಗ್ ಜಾಗದಲ್ಲಿ ನಿಲ್ಲಿಸಿದೀನಿ. ತಂದು ನಮ್ಮ ಮನೆಗೆ ತಲುಪಿಸುತೀಯ..?

ರಂಗನಾಥ ಬಿಸಿಬಿಸಿ ಸ್ಟ್ರಾಂಗ್ ಕಾಫಿ ಮಾಡಿ ತಂದ. ನಿರ್ಮಲೆಯ ಬಳಿ ಇದ್ದ ಎರಡು ತಲೆ ನೋವು ಮಾತ್ರೆಯನ್ನು ಸತ್ಯನಿಗೆ ತಂದು ಕೊಟ್ಟ. ಇಬ್ಬರೂ ಸ್ವಲ್ಪ ಹೊತ್ತು ಮಾತಾನಾಡುತ್ತಾ ಕುಳಿತಿದ್ದರು.

ಸತ್ಯ ತನ್ನ ಮನೆಗೆ ಹೋಗಿ, ಬೇರೆ ಬಟ್ಟೆಗಳನ್ನು ಹಾಕಿಕೊಂಡು ಆಸ್ಪತ್ರೆಯ ಬಳಿಗೆ ಬಂದು, ಅಲ್ಲಿ ನಿಲ್ಲಿಸಿದ್ದ ಸ್ಕೂಟರನ್ನು ಮತ್ತೆ ರಂಗನಾಥನ ಮನೆಯ ಮುಂದೆ ತಂದು ನಿಲ್ಲಿಸಿದ.

" ಇಲ್ಲೇ ಊಟ ಮಾಡಿಕೊಂಡು ಹೋಗಯ್ಯ......"

ಪರವಾಗಿಲ್ಲಪ್ಪಾ..ಬೆಳಿಗ್ಗೆ ತಿಂದಿದ್ದು ಹಾಗೇ ಇದೆ.. ಎಂದರೂ ಬಿಡದೇ ಅವನನ್ನು ಉಳಿಸಿಕೊಂಡ. ಇವತ್ತು ಮಾತ್ರ ನನ್ನ ಮಾತು ಮೀರಬೇಡ. ಸ್ವಲ್ಪ ಹೊತ್ತುಸತ್ಯ, ನಿರ್ಮಲಾ, ರಂಗನಾಥ ಮೂರು ಜನವೂ ಒಟ್ಟಿಗೆ ಕುಳಿತು ಮಾತನಾಡುತ್ತಿದ್ದರು. ರಂಗನಾಥ ಮತ್ತೆ ಬಿಸಿ ಅನ್ನಾ ಹುಣಿಸೇ ಸಾರು ಮಾಡಿ, ಮೊದಲು ಮನೋಜನಿಗೆ ತಿನ್ನಿಸಿದ. ನಂತರ ತಾನೇ ತಟ್ಟೆಗೆ ಹಾಕಿ, ಎಲ್ಲರಿಗೂ ಬಡಿಸಿದಾಗ., ಸತ್ಯ ಕಣ್ಣರಳಿಸಿದ. ನಿರ್ಮಲಾ ಎದ್ದು ಹೋಗದೇ ಅಲ್ಲಿಯೇ ಕುಳಿತಿದುದನ್ನು ಗಮನಿಸಿದ್ದ. ರಂಗನಾಥ ಊಟಕ್ಕೆ ಎಬ್ಬಿಸಿದಾಗ ತಮಾಷೆಯಿಂದ ಕೇಳಿದ.

"ಏನಯ್ಯಾ ಯಾವ ಹೋಟೆಲ್ಲಿಂದ ಊಟ ತರಿಸಿದೆ?"

"ಹೋಟೆಲ್ಲಿಂದ ತಂದಿದ್ದಲ್ಲ. ಇದು ನಿಮ್ಮ ಸ್ನೇಹಿತರ ಕೈಯ ಅಡಿಗೆ ನಳಪಾಕ "ಎಂದಳು ನಗುತ್ತಾ ನಿರ್ಮಲಾ.

" ಓ..ಎಂದ ಸತ್ಯ ಬೆಪ್ಪಾಗಿ."

"ಯಾಕ್ರೀ..ರಾಗ ಏಳೀತೀರಿ?.....ನಳನಿಗಿಂತ, ಭೀಮ ಸೇನನಿಗಿಂತ ಚೆನ್ನಾಗಿ ಮಾಡ್ತಾರೆ ನಿಮ್ಮ ಸ್ನೇಹಿತರು. ಅದಕ್ಕೇ ಅವರೇ ಅಡಿಗೆ ಮಾಡೋದು" ಎಂದಳು ಮತ್ತೆ ನಗುತ್ತಾ ಸತ್ಯ ನಕ್ಕಂತೆ ಮಾಡಿದ. ರಂಗನಾಥ ನಗಲಿಲ್ಲ.

ಈಗ ಈ ತಮಾಷೆ ಯಾರಿಗೆ ಬೇಕಾಗಿದೆ ಅಂತನಿಸಿತ್ತು. ಊಟ ಮುಗಿಯಿತು. ಕೈ ತೊಳೆದು ಹೊರಟಾಗ ಸತ್ಯ ಹೇಳಿದ್ದ.

"ನಾಡಿದ್ದು ಬೆಳಿಗ್ಗೆ ಆರು ಗಂಟೆಯ ಹೊತ್ತಿಗೆ ಬರ್ತೀನಿ. ಪಶ್ಚಿಮ ವಾಹಿನಿಗೆ ಕಾರಿನಲ್ಲಿ ಹೋಗಿ ಬರೋದು. ಹೋಗ್ತಾ ಹಾಗೇ ಶಾಸ್ತ್ರಿಗಳನ್ನು ಕರೆದುಕೊಂಡು

ಹೋಗೋಣ."

"ತುಂಬಾ ಥ್ಯಾಂಕ್ಸ್ ಕಣಪ್ಪಾ..ಇದುವರೆಗೂ ಅಮ್ಮನ ಜೊತೆ ದಿನಾ ಮಲಗ್ತಿದ್ದೆ ಇವತ್ನಿಂದ ಆ ಕೆಲಸವೂ ಇಲ್ಲ. ಹಾಯಾಗಿ ನಿದ್ದೆ ಮಾಡು."

"ಛೆ ಅದ್ಯಾವ ಮಹಾ ಕೆಲಸ? ನನ್ನ ತಾಯಿ ಅಂತ ತಿಳಕೊಂಡು ಮಾಡಿದೀನಿ. ಅದರಲ್ಲಿ ಉಪಕಾರ ಏನು ಬಂತು?"

"ಕೇಳಿದ್ಯಾ?" ಎನ್ನುವಂತೆ ರಂಗನಾಥ ನಿರ್ಮಲೆಯ ಮುಖವನ್ನು ನೋಡಿದ. ಅವಳು ಅವನ ಕಣ್ಣು ತಪ್ಪಿಸಿದಳು.

ರಂಗನಾಥನಿಗೆ ತುಂಬಾ ಆಯಾಸವಾಗಿತ್ತು ಮಂಚದ ಮೇಲೆ ಉರುಳಿಕೊಂಡ. ನಿರ್ಮಲ ಬಂದು ನಿಂತು, ತಾನಾಗಿಯೇ ಮಾತು ತೆಗೆದಳು

"ಡಾಕ್ಟರ ಹತ್ತಿರ ನೀವೇ ಎಲ್ಲಾ ಮಾತನಾಡಿ ಆಗಿತ್ತಲ್ಲ. ಮತ್ತೆ ನನಗ್ಯಾಕೆ ಮಾತನಾಡು ಅಂತಂದ್ರಿ? ಒಂದ್ಮಾತು ಹೇಳಬಾರದಾಗಿತ್ತಾ?"

"ಏನಾಯ್ತೀಗ ನಿನಗೇನು ನಷ್ಟವಾಯ್ತು?"

"ನಾನು ಎಂದೂ ಹಾಗೆಲ್ಲಾ ಯಾರನ್ನೂ ಏನು ಕೇಳಿಕೊಂಡವಳಲ್ಲ. ಆದರೆ ಇವತ್ತು...ಅದೂ ನಿಮಗಾಗಿ, ನಿಮ್ಮ ಖರ್ಚು ಕಡಿಮೆ ಮಾಡುಕ್ಕೆ ಅಂತ ಮಾತಾಡೋಕೆ ಹೋದ್ರೆ..ಅವರು ನೀವುಗಳು ಮಾತನಾಡಿದುದನ್ನು ಹೇಳಿದರು..ನನಗೆ ಸರಿ ಹೋಗ ಲಿಲ್ಲ... ನೀವ್ಯಾಕೆ ಮೊದಲೇ ಹೇಳಲಿಲ್ಲ.?"

"ಹಾಗಂತ ಮನೇಲೇ ಹೇಳಬಹುದಾಗಿತ್ತಲ್ಲ. ನಾನು ನಿನ್ನನ್ನು ಖಂಡಿತಾ ಬಲವಂತ ಮಾಡುತ್ತಿರಲಿಲ್ಲ. ಮನೆಯವರು ಮನೆಯವರಿಗೆ ಅಂತ ಕೆಲವು ಸಲ ಇಷ್ಟವಿಲ್ಲದಿದ್ದರೂ ಮಾತಾನಾಡಬೇಕಾಗುತ್ತೆ. ಆದರಿಂದ ಹೋದದ್ದೇನು?"

"ಏ..ನಿಲ್ಲ ಏನೂ ಹೋಗಲಿಲ್ಲ." ಗೊಣಗುಟ್ಟಿದಳು. ಅವಳಿಗೆ ಅಸಮಾಧಾನ ವಾಗಿದೆ ಎಂದರಿತ. ಒಂಥರ ಮುಯ್ಯಿಗೆ ಮುಯ್ಯಿ ಅಂತೆಸಿಸಿತು.

"ಹೋಗಲಿ ಬಿಡು. ಎಲ್ಲಾ ಮುಗೀತಲ್ಲ. ಯಾವುದೋ ಮಾತಿಗೆ ನೀನೇಕೆ ಅಪ್ಸೆಟ್ ಆಗ್ತೀಯ? ಈಗ ನೀನು ಕೂಲ್ ಆಗಿರಬೇಕು, ಮಾತು ಮಾತಿಗೆ ಅಪ್ಸೆಟ್ ಆಗಬಾರದು ಅಂತ ನಿನಗೆ ಯಾರೂ ಅಡ್ವೈಸ್ ಮಾಡಿಲ್ವಾ?"

" ನಾನು ಹೇಗಿದ್ರೇನು? ನನ್ನ ಚಿಂತೆ ಯಾರಿಗಿದೆ ಈಗ?"

"ನಿರ್ಮಲಾ...ನನ್ನನ್ನ ಬೇಕೂಂತ ರೇಗಿಸ್ತೀದೀಯ. ಏನಾಗಿದೆ ನೀನಗೆ? ನಿನ್ನ ಚಿಂತೆ ನನಗಿಲ್ಲವಾ?..ಇವತ್ತೂ ನನಗೆಷ್ಟು ಅನ್ಯಾಯವಾಗಿದೆ ಅಂತ ತಿಳಿದಿದ್ದೂ ನನ್ನ ಹತ್ತಿರ ಹೀಗೆ ಮಾತನಾಡ್ತೀಯಲ್ಲ. ಸುಮ್ಮನೇ ಹೋಗಿ ಮಲಕ್ಕೋ ನನಗೂ ಮಲಗಲು ಬಿಡು." ಎಂದು ಒರಟಾಗಿ ನುಡಿದ.

" ಹೀಗೆ ಮಾತನಾಡಿದರೆ ನನಗೆ ಅಪ್ಸೆಟ್ ಆಗದೇ ಇರುತ್ತಾ?"ಎಂದು ಮುನಿಸಿನಿಂದ ನುಡಿದು ಎದ್ದು ಹೋದಳು. ರಂಗನಾಥನಿಗೆ ನಿದ್ದೆ ಬರಲಿಲ್ಲ. ಇವಳ್ಯಾಕೆ ಹೀಗಾಡ್ತಾಳೆ ಅವಳದೇ ತಪ್ಪು ಅಧಿಕ ಎನಿಸತೊಡಗಿತು.

ನನಗೆ ಹಣ ಸಹಾಯ ಮಾಡುವ ಶಕ್ತಿ ಇರುವವಳು. ತಾನಾಗಿಯೇ ಮಾಡುವುದಿರಲಿ. ಕೇಳಿದರೂ ಇಲ್ಲವೆಂದವಳು. ಈಗ ಮಾತು ಮಾತಿಗೆ ನನ್ನನ್ನೇ ದೂಷಿಸಿ ಅನ್ನುತ್ತಾಳಲ್ಲ. ಅಮ್ಮ ಹೇಳಿದ ಹಾಗೆ ಇವಳಿಗೇ ದುರಹಂಕಾರ... ಅಮ್ಮನ

ಮಾತನ್ನು ಗಣನೆಗೆ ತಂದುಕೊಳ್ಳದೇ ಇವಳನ್ನು ಮದುವೆಯಾಗಿ ತಪ್ಪು ಮಾಡುಬಿಟ್ಟೆನೋ ಏನೋ... ಆದ್ದರಿಂದಲೇ ಅಮ್ಮನನ್ನು ಕಳೆದುಕೊಂಡೆನೋ ಏನೋ...ಆದರೆ ಹಾಗಂತ ಇವಳನ್ನೇ ದೂಷಿಸುತ್ತಾ ಇರೋಕೆ ಆಗುತ್ತಾ ನಾನು?

ಇವಳು ಗರ್ಭಿಣಿ ಅಂತ ಅಮ್ಮನಿಗೆ ತಿಳಿದಿದ್ದರೆ. ಖುಷಿಯಾಗು ತ್ತಿತ್ತೋ ಅಥವಾ ಆತಂಕವಾಗುತ್ತಿತ್ತೋ...ಇವಳಿಗೂ ಅಷ್ಟೇ ಮೊದಲೇ ಮನೋಜನ ಕಂಡರೆ ಅನಾದರಣೆ. ಇನ್ನು ತನ್ನದೇ ಮಗು ಹುಟ್ಟಿದ ಮೇಲೆ ಏನು ಮಾಡ್ತಾಳೋ. ಸ್ವಂತ ಮಗುವಿನ ಮೇಲಿನ ಪ್ರೀತಿ ಹೆಚ್ಚು ಇದ್ದೇ ಇರುತ್ತೆ. ಮನೋಜನ ಬಗ್ಗೆ ಮಲತಾಯಿ ಧೋರಣೆ ಖಂಡಿತಾ...ಇದುವರಿಗೆ ಮನೋಜನ್ನ ಪ್ರೀತಿಯಿಂದ ಮಮತೆಯಿಂದ ನೋಡದಿದ್ದರೂ, ಸಧ್ಯ ದ್ವೇಷಿಸುತ್ತಿಲ್ಲ. ಆದರೆ ಮುಂದೆ? ಏನಾಗ ಬಹುದು? ಹೇಗಾಗಬಹುದು ಅಂತ ಹೇಗೆ ಊಹಿಸಲಿ.? ಮನೋಜನೂ ನನ್ನಿಂದ ದೂರವಾಗುವಂತಾದರೇ...? ಆ ಆಲೋಚನೆಯೇ ಅವನ ಸ್ಥಿಮಿತವನ್ನು ಕೆಡಿಸಿತು. ಥೂ. ಹಾಳು ಆಲೋಚನೆಗಳು. ನೆಮ್ಮದೀನೇ ಇಲ್ಲವಾಯಿತು...ಎಂದು ಕೊಂಡು ಮಗ್ಗುಲು ಬದಲಾಯಿಸಿದ.

ಬೆಳಿಗೆ, ಕೊರಡಿನಂತಾಗಿದ್ದ ತಾಯಿಯ ದೇಹಕ್ಕೆ ಕೊಳ್ಳಿ ಇಟ್ಟು ಉರಿಸಿದ್ದ. ಕಣ್ಣೆದುರೇ ಆ ದೃಶ್ಯ ಬಂದಂತಾಗಿ ದಿಗ್ಗನೆ ಎದ್ದು ಕುಳಿತ.

ಅಮ್ಮಾ.... ಅಮ್ಮನಿಗೇನಾಯಿತು! ನನ್ನ ಮದುವೆಯಿಂದ ಅವಳಿಗೆ ಘಾಸಿ ಆಗಿರಬಹುದೆ? ಖಂಡಿತಾ ಅವಳಿಗೆ ಏನೋ ಕೊರಗು ಹತ್ತಿರಲೇ ಬೇಕು. ನನ್ನ ರೀತಿ ನೀತಿ, ಇರುವಿಕೆ ಯಾವದಕ್ಕು ಸರಿಹೋಗದೇ ಸಾಕಷ್ಟು ನೊಂದಿರಬೇಕು. ನನ್ನ ಮೇಲಿನ ನಂಬಿಕೆ ಹೊರಟು ಹೋಗಿರಬೇಕು. ಮನೋಜನಿಗೆ ನನ್ನಿಂದ ಪೋಷಣೆ ಸಿಗುವುದಿಲ್ಲ ಎಂದೇ ಅನ್ನಿಸಿರಬೇಕು. ಖಂಡಿತಾ ಅದೇ ಕಾರಣವಿರಬೇಕು. ಅಮ್ಮ ನನ್ನ ಹತ್ತಿರ ಯಾಕೆ ಏನನ್ನೂ ಹೇಳಲಿಲ್ಲ. ನಿರ್ಮಲ ಗರ್ಭಿಣಿ ಎನ್ನುವ ವಿಷಯ ಹೆಂಗಸಾದ ಅವಳಿಗೆ ಈ ಮುಂಚೆಯೇ ಖಂಡಿತಾ ಗೊತ್ತಾಗಿರಬೇಕು. ಆ ವಿಷಯ ಅವಳ ಆತಂಕವನ್ನು ಹೆಚ್ಚಿಸಿರಬೇಕು.. ಹೀಗೇ ತನ್ನಲ್ಲಿಯೇ ತರ್ಕಿಸುತ್ತಿದ್ದ...

ರೂಮಿನಲ್ಲಿ ಒಂಟಿಯಾಗಿ ಮಲಗಿದ್ದ ನಿರ್ಮಲೆಗೂ ನಾನಾ ಚಿಂತೆಗಳು. ಒಂಟಿಯಾಗಿರಲು ಆಶಿಸದೆ, ಇವನ ನಡೆ ನುಡಿಯನ್ನು ಮೆಚ್ಚಿ, ಆಸೆಯಿಂದ ಮದುವೆಯಾದೆ. ಇವನಿಗಾಗಿ ನನ್ನ ಮನೆಯವರಿಂದ ಸಿಕ್ಕಿದಾ ಕ್ಷೇಪಣೆಯನ್ನು ಲೆಖ್ಖಿಸಲಿಲ್ಲ.

ಇವನು ಕಾಲೇಜಿನಲ್ಲಿ ಲೆಕ್ಚರರ್ ಎಂದು ತಿಳಿದಿತ್ತೇ ಹೊರತು ಎಷ್ಟು ಸಂಬಳ ಬರುತ್ತೆ ಅಂತ ಎಂದೂ ವಿಚಾರಿಸಿರಲಿಲ್ಲ. ಆಗ ನನಗೆ ಅದು ಮುಖ್ಯವಾಗಿ ಕಾಣಲಿಲ್ಲ. ಅಲ್ಲದೇ... ಆಗ ತಾನಿನ್ನು ತನ್ನವರಿಗೆ ತನ್ನ ನಿರ್ಧಾರ ತಿಳಿಸಿರಲಿಲ್ಲ. ನನ್ನ ಸಂಪಾದನೆಯ ಮೇಲೆ, ಆ ಒಂದು ಕಾರಣ ದಿಂದ ತನ್ನ ನಿರ್ಧಾರವನ್ನು ಬದಲಾಯಿಸಬೇಕು ಎಂದ್ವೇನೂ ಅನ್ನಿಸಲಿಲ್ಲ.

ಮನೆಯಲ್ಲಿ ಅವನು, ಅವನ ತಾಯಿ ಇಬ್ಬರೇ..ನಾನೊಬ್ಬಳು ಹೆಚ್ಚಾಗಲಾರದು. ಅಲ್ಲದೇ ಮದುವೆ ಮಾಡಿಕೊಂಡ ಮೇಲೆ, ಹೆಂಡತಿಯ ಜವಾಬ್ದಾರಿ ಗಂಡನದೇ ತಾನೇ...ನಾನೇನು ಒಡವೆ ಕೇಳಿದೇನೆ? ವಸ್ತು ಬೇಕೆಂದನೆ? ಹನಿ ಮೂನ್‌ಗೆ ಹೋದಾಗ

ಆಸೆಯಿಂದ ತೆಗೆದುಕೊಂಡದ್ದು ಎರಡು ಸೀರೆಗಳು..ಅದೂ ಏನೋ ಹಗರಣ ನಡೆದುಹೋಯಿತು. ಅದಾದ ಮೇಲೆ ತಾನು ಏನನ್ನು ತಗೊಂಡೇ ಇಲ್ಲ. ಹೋಟೆಲ್ಲಿಗಾಗಲೀ, ಸಿನಿಮಾಕ್ಕಾಗಲೀ ಕರೆದುಕೊಂಡು ಹೋಗಿ ಅಂತ ಪೀಡಿಸಿಲ್ಲ. ನನಗೆ ಬೇಕಾಗಿರುವುದು ಅವನ ಒಡನಾಟ. ಅವನ ಪ್ರೀತಿ...ಆದರೂ ಎಲ್ಲೋ ಅಪಸ್ವರ! ಇದರ ಕಾರಣ ನನಗೆ ಗೊತ್ತು.. ನನ್ನ ಸಂಪಾದನೆ.

ಆದರೆ ನನ್ನ ಸಂಪಾದನೆಯ ಹಣವೆಂದೂ ನನ್ನದಾಗಿರಲಿಲ್ಲ. ನನಗೋ ಸ್ಕರ ಹಣ ಕೂಡಿಸಿ ಇಡುವ ಅವಶ್ಯಕತೆ ನನಗಿರಲಿಲ್ಲ. ನನಗೆ ಆ ಆಸೆಯೂ ಇರಲಿಲ್ಲ. ಆದರೂ ಏನಾಗಿಹೋಯಿತು? ತಾಯಿಯ ಸ್ವಾರ್ಥಕ್ಕೆ ಮುನಿದು. ಮಾತುಕೊಟ್ಟಿದ್ದು ಈಗ ನನಗೆ ಅಪಮಾನ ಮಾಡುತ್ತಿದೆ. ನನ್ನನ್ನು ಕಾಡುತ್ತಿದೆ. ಇದನ್ನೆಲ್ಲಾ ಕಿತ್ತುಕೊಳ್ಳುತ್ತಿದಾಳೆ ಎಂದು ನಾನಾಗಿಯೇ ಹೇಗೆ ಹೇಳಲಿ? ಹೇಳಿದರೂ ಅದೂ ಅಪಹಾಸ್ಯವಾಗುತ್ತದೆ. ಅವನು ಖಂಡಿತಾ ನನ್ನ ಮಾತನ್ನು ನಂಬುವುದಿಲ್ಲ... ಆದರೆ ಈಗ ನಾನು ಮಾಡುತ್ತಿರುವುದು ನ್ಯಾಯವೇ? ಮದುವೆಯಾದ ಮೇಲೆ ನನ್ನ ಸಂಪಾದನೆಯ ಹಣವನ್ನೆಲ್ಲಾ ಇವನ ಕೈಗೆ ಕೊಟ್ಟುಬಿಡ್ತೀನಿ ಅಂತ ಭಾನಿಸಿದ್ದನೇನೋ.. ಆದರೆ ನಾನೋ... ಈ ಮನೆಗಾಗಿ ಏನನ್ನು ಖರ್ಚು ಸಹ ಮಾಡುತ್ತಿಲ್ಲ. ಆದರೆ ನನಗೆಂದೂ ಈ ಭಾವನೆಗಳಿರಲಿಲ್ಲ. ಮದುವೆಗೆ ಮೊದಲೇ ಗೊಂದಲಗಳು ಪ್ರಾರಂಭ ವಾದವು. ಪರಿಸ್ಥಿತಿಗಳು ನನ್ನನ್ನು ಇಕ್ಕಟ್ಟಿಗೆ ಸಿಕ್ಕಿ ಸಿದವು. ಇದನ್ನೆಲ್ಲ ಮದುವೆಗೆ ತಿಳಿಸಿ ಬಿಡಬೇಕಾಗಿತ್ತು. ನಾನು? ಆಗ ಸ್ವಾಭಿಮಾನ ಅಡ್ಡಬಂತು. ಆದರೆ...ಇಂಥ ಸ್ಥಿತಿ, ಬರಬಹುದು ಎಂದು ನಾನು ಖಂಡಿತಾ ಭಾವಿಸಿರಲಿಲ್ಲ. ಈಗ ನಾನಾಗಿಯೇ ಪರಿಸ್ಥಿತಿ ಹೀಗಿದೆ ಅಂತ ಹೇಗೆ ತಿಳಿಸಲಿ? ಈಗ ಇವನನ್ನು ನಂಬಿಸಲು ಸಾಧ್ಯವೇ ಇಲ್ಲ.

ಅಥವಾ ನನ್ನ ತಂದೆಗೇ ಎಲ್ಲಾ ವಿಚಾರವನ್ನು ತಿಳಿಸಿ, ಅರ್ಧದಷ್ಟು ಸಂಪಾದನೆಯನ್ನಾದರೂ ಇಲ್ಲಿಗೆ ಕೊಡಬಹುದು...ಆದರೆ ಅಮ್ಮ? ಹೇಗೆ ಎಂತೆಂತಹ ಮಾತುಗಳನ್ನಾಡಿದ್ದಳು? ಜುಜುಬಿ ಮೇಷ್ಟ್ರು ನನ್ನ ಸಂಪಾದನೆಯ ಮೇಲಿನ ಆಸೆಗಾಗಿ ಮದುವೆ ಆಗ್ತಿದಾನೆಂದು ಹೇಳಿರ ಲಿಲ್ಲವೆ? ಈಗ ಈ ವಿಷಯ ತಿಳಿಸಿದರೆ ಖಂಡಿತಾ ಹಂಗಿಸಿ ಮಾತನ್ನಾಡು ತ್ತಾಳೆ. ಏನೇ ಆದರೂ ಸರಿ. ಅವಳಿಗೆ ಈ ವಿಷಯಗಳೊಂದೂ ತಿಳಿಯ ಕೂಡದು. ಅಪ್ಪ ಸಹ ಏನಂದುಕೊಳ್ಳಬಹುದು? ಯಾವುದೋ ಆಸೆಗೆ ಬಲಿಯಾಗಿ, ಮದುವೆಯಾದವಳು, ಈಗ ಪರಿಸ್ಥಿತಿ ಅರ್ಥವಾಗ್ತಿದೆ ಎಂದು ಭಾವಿಸಿ ನನಗೆ ಉಪದೇಶ ಮಾಡಬಹುದು. ಅದು ಕೂಡದು. ಅವರ್ಯಾಗೂ ಇಲ್ಲಿಯ ವಿಚಾರಗಳು ತಿಳಿಯಲೇ ಬಾರದು.

ಬೇಕಾದರೆ ಸಮಯ ಬಂದಾಗ, ಇವನಿಗೇ ಎಲ್ಲಾ ವಿಷಯವನ್ನು ತಿಳಿಸಬಹುದೇನೋ..ಆದರೆ ತಿಳಿದರೆ ಪರಿಣಾಮ ಏನಾಗಬಹುದೋ....? ಒಂದು ವೇಳೆ ಅಮ್ಮ ಆಡಿದ್ದಂತೆ, ಇವನು ನನ್ನ ಸಂಪಾದನೆಯ ಆಸೆ ಗೋಸ್ಕರ ನನ್ನನ್ನು ಮದುವೆಯಾಗಿದ್ದರೆ...ಇದ್ದರೂ ಇರಬಹುದು... ಇಲ್ಲ ದಿದ್ದರೆ ನನ್ನಂತಹ ಕುಂಟಿಯನ್ನು ಯಾವ ಆಸೆಗಳಿಲ್ಲದೇ ಮದುವೆ ಆಗ್ತಿದ್ದಾನೇ? ಛೆ...ನಾನು ಎಂಥಾ ಮೋಸ ಹೋದೆ ತಾಯಿಯ ಸ್ವಾರ್ಥ ದಿಂದ ನನ್ನ ಜೀವನದಲ್ಲಿ ಒಡಕು ಮೂಡಿತಲ್ಲ...ಮನಸ್ಸು ಕಹಿಗೊಂಡರೂ ಏನೋ ಸಮಾಧಾನ..

ರಂಗನಾಥ ನನ್ನನ್ನು ಪ್ರೀತಿಸಿಯೇ ಮದುವೆ ಆಗಿದ್ದು. ಆ ಪ್ರೀತಿ ಕಡಿಮೆ ಆಗಿದೆ ಎಂದು ಹೇಗೆ ಹೇಳಲಿ? ಅವನ ಬಾಹುಗಳಲ್ಲಿರುವಾಗ ನನಗೆಂದೂ ಮೋಸದ ಅರಿವಾಗಿಲ್ಲ. ನಿಷ್ಕಳಂಕ ಪ್ರೀತಿಯನ್ನು ಕಂಡಿದೀನಿ. ನಿಸ್ವಾರ್ಥ ಪ್ರೇಮವನ್ನು ಅನುಭವಿಸಿದ್ದೀನಿ. ಪ್ರೀತಿಯಿಂದ ಒಂದಾಗಿ ಕೂಡಿ ಬಾಳಬೇಕಾದ ಸಮಯದಲ್ಲಿ ಈ ಹಣದ ಮಾತೇಕೆ ಬಂತು! ಇದಕ್ಕೆ ಈಗಲೇ ಏನಾದರು ಉಪಾಯವನ್ನು ಕಂಡು ಹಿಡಿಯಬೇಕು. ನನ್ನ ಸಂಪಾದನೆ ನಮ್ಮಿಬ್ಬರ ಪ್ರೀತಿಯ ಮದ್ಯೆ ಬರಬಾರದು...ನಾನು ಸೋಲ ಬಾರದು. ಸೋತು ಅಮ್ಮನ ಹೀಯಾಳಿಕೆಯ ಮಾತುಗಳನ್ನು ಮತ್ತೆ ಮತ್ತೆ ಕೇಳಬಾರದು...ನಿದ್ದೆ ಅವಳಿಂದ ದೂರವಾಗಿತ್ತು.

ಬೆಳಿಗ್ಗೆ ಇಬ್ಬರೂ ಎದ್ದದ್ದು ತಡವಾಗಿಯೇ. ಬೆಳಗಿನ ಕೆಲಸಗಳೆಲ್ಲ ಮುಗಿದ ಮೇಲೆ ರಂಗನಾಥ ಹೊರಗೆ ಹೊರಟ. ಮನೋಜನನ್ನು ಸಿದ್ದಮಾಡಿ, ಪಕ್ಕದ ಮನೆಯ ಹುಡುಗಿಯ ಕೈಗೆ ಕೊಟ್ಟ.

"ನಿರ್ಮಲಾ ರೆಡಿಯಾಗಿದ್ದರೆ ಹೊರಡು. ನಿನ್ನನ್ನ ಕ್ಲಿನಿಕ್ ಹತ್ತಿರ ಬಿಟ್ಟು ಬಿಡ್ತೀನಿ"ಹೇಳಿದ.

"ಇವತ್ತು ನಾನು ಕ್ಲಿನಿಕ್‌ಗೆ ಹೋಗುತ್ತಿಲ್ಲ"

"ಯಾಕೆ?" ಅಶ್ಚರ್ಯದಿಂದ ಕೇಳಿದ.

"ನನಗೇಕೋ ಮೂಡ್ ಇಲ್ಲ. ನಂಗೂ ರೆಸ್ಟ್ ಬೇಕು." ವೈಯ್ಯಾರವಾಗಿ ಅವಳು ಹೇಳಿದಾಗ ಅವನಿಗೆ ಇಷ್ಟವಾಗಲಿಲ್ಲ.

" ನಾನು ಹೋಗಬೇಡ ಅಂದಾಗೆಲ್ಲಾ ಹೋಗಿದೀಯ...ನಿನ್ನಿಷ್ಟ. ನಿಂಗೆ ಹೇಗೆ ಬೇಕೋ ಹಾಗೇ ಮಾಡು ನಂಗೆ ಹೊರಗೆ ಸ್ವಲ್ಪ ಕೆಲಸವಿದೆ. ನಾನು ಹೋಗ್ತೀದೀನಿ. ಮನೇಲಿ ಒಬ್ಬಳೇ ಕೂತು ಏನ್ಮಾಡ್ತೀಯ? ಒಬ್ಬಳೆ ಕೂತಿದ್ರೆ ಏನೇನೋ ಚಿಂತೆಗಳು ಬರಬಹುದು. ಅದಕ್ಕೇ ಹೇಳಿದೆ ಹೋಗುವುದಾದರೆ ಹೋಗು "

ನಿರ್ಮಲ ದಂಗಾದಳು. ರಾತ್ರಿ ತಾನು ಚಿಂತಿಸುತ್ತಿದ್ದೆ ಅಂತ ಇವನಿಗೆ ಹೇಗೆ ತಿಳಿಯಿತು. ಕ್ಲಿನಿಕ್‌ಗೆ ಹೋಗು ಅಂತ ವ್ಯಂಗವಾಗಿ ಹೇಳುತ್ತಿದ್ದಾನೇ ನೋ ಎಂದು ಕೊಂಡು ಅವನ ಕಡೆ ನೋಡಿದಳು ಅವನ ಗಮನ ಎಲ್ಲೋ ಇತ್ತು.

ಅವನೇ ಹೇಳಿದ ಮೇಲೆ, ನಾನು ಹೋದರೆ ತಪ್ಪೇನು ಎಂದುಕೊಂಡು, ಬೇಗ ಬೇಗ ಸಿದ್ದಳಾದಳು. ರಂಗನಾಥ ಅವಳನ್ನು ಕ್ಲಿನಿಕ್ ಬಳಿ ಇಳಿಸಿ ಎಲ್ಲಿಯೋ ಹೊರಟು ಹೋದ. ಅವನು ವಾಪಸ್ಸು ಮನೆಗೆ ಬಂದಾಗ ಸಾಕಷ್ಟು ಹೊತ್ತಾಗಿತ್ತು. ಅವನಿಗಾಗಿ ಕಾದು ಕಾದು ಬೇಸತ್ತು ನಿರ್ಮಲ ಮನೆಗೆ ಬಂದು ಬಿಟ್ಟಿದ್ದಳು. ಒಳ್ಳೆಯದೇ ಆಯ್ತು ಅಂತಂದುಕೊಂಡ. ಅವನೂ ಸಹ ಆಟೋದಲ್ಲಿ ಬಂದುದನ್ನು ಗಮನಿಸಿ ಕೇಳಿದಳು. ಸ್ಕೂಟರ್ ಎಲ್ಲಿ? ಕೆಟ್ಟು ಹೋಯ್ತಾ?"

" ಹೂಂ. ರಿಪೇರಿಗೆ ಕೊಟ್ಟು ಬಂದಿದೀನಿ..ಎಂದಷ್ಟೇ ಹೇಳಿದ. ಆ ದಿನ ಕಳೆಯಿತು. ಮಾರನೇ ದಿನ ಬೆಳಗೂ ಆಯಿತು. ಆರುಗಂಟೆಯ ಹೊತ್ತಿಗೆ ಸತ್ಯಬಂದ. ಬರುವಾಗ ಒಂದು ಟ್ಯಾಕ್ಸಿಯನ್ನು ಗೊತ್ತುಮಾಡಿ ಕೊಂಡು ಬಂದಿದ್ದ.

ಮನೋಜ ಎದ್ದ ಮೇಲೆ ಪಕ್ಕದ ಮನೆ ಹುಡುಗರಿಗೆ ಹೇಳು, ಅವರು ನೋಡ್ಕೋತಾರೆ. ನಿನ್ನ ಪಾಡಿಗೆ ನೀನು ಕ್ಲಿನಿಕ್‌ಗೆ ಹೋಗು. ಎಂದು ಹೇಳಿದ. ನಿರ್ಮಲೆಗೆ

ಸಲೀಸಾಯಿತು. ಮನೋಜನ್ನ ನೋಡಿಕೊಳ್ಳುವುದು ತಪ್ಪಿತು. ಅಂತೆನಿಸಿದರೂ, ಇವನೇಕೆ ತಾನೇ ಹೀಗೆ ಹೇಳುತ್ತಿದಾನೆ? ನನ್ನ ಮೇಲೆ ನಂಬಿಕೆ ಇಲ್ಲವೆ? ಮನೋಜನ್ನ ಹಚ್ಚಿಕೊಳ್ಳುವುದು ನನಗೂ ಬೇಕಿಲ್ಲ.... ಒಂಥರಕ್ಕೆ ಒಳ್ಳೇಯದೇ ಆಯ್ತು ಎಂದುಕೊಂಡು ಸುಮ್ಮನಾದಳು.

ರಂಗನಾಥನಿಗೂ ಅಷ್ಟೇ. ಮನೋಜನ್ನ ಅವಳು ಕೀಳಾಗಿ ಕಾಣುವುದು ಬೇಕಿಲ್ಲ. ನಾನಿರುವಾಗ, ಅವಳೇಕೆ ಅವನನ್ನು ಕೀಳರಿಮೆಯಿಂದ ನೋಡ ಬೇಕು? ಆದರೆ ನಿರ್ಮಲೆಯ ಹತ್ತಿರ ಜಬರ್ದಸ್ತಿನಿಂದ ಹಾಗೆ ಮಾಡು... ಹೀಗೆ ಮಾಡು ಎಂದು ಹೇಳುವುದು ಅವನಿಂದ ಸಾಧ್ಯವಿರಲಿಲ್ಲ. ಅವನನ್ನು ನಾನು ನೋಡಿಕೊಳ್ಳುವುದಿಲ್ಲ ನನಗೂ ಅವನಿಗೂ ಏನು ಸಂಬಂಧ ಎಂದು ಕೇಳಿಬಿಟ್ಟರೆ ಎಂಬ ಹಿಂಜರಿಕೆ ಬೇರೆ. ಹಾಗಾಗಿ ಆ ಪ್ರಸ್ತಾಪವೇ ಬರದಂತೆ ಜಾಗ್ರತೆ ವಹಿಸಿದ.

ಪಶ್ಚಿಮ ವಾಹಿನಿಯಲ್ಲಿ ಆಸ್ತಿ ವಿಸರ್ಜನೆ ಮಾಡಿ, ಸ್ನಾನ ಮುಗಿಸಿ ಕೊಂಡು ಮನೆಗೆ ವಾಪಸ್ಸು ಬರುವ ಹೊತ್ತಿಗೆ ಮಧ್ಯಾಹ್ನ ಮೀರಿತ್ತು. ನಿರ್ಮಲ ಪಕ್ಕದ ಮನೆಯವರಿಗೆ ಹೇಳಿ. ಅನ್ನ ಸಾರು ಮಾಡಿಸಿದ್ದಳು. ಸತ್ಯನೂ ಊಟ ಮಾಡುವುದಾದ್ದರಿಂದ ಅವರ ಹತ್ತಿರ ಮಾಡಿಸಿದೆ ಎಂದು ಹೇಳಿದರಾಯ್ತು ಎಂದುಕೊಂಡಿದ್ದಳು.

ಆದರೆ ಆ ಕಾರಣವನ್ನು ಯಾರೂ ನಂಬುವಂತಿರಲಿಲ್ಲ ಸತ್ಯ ಅಷ್ಟೇನೂ ಮಡಿಮಡಿಕೆಯವನಲ್ಲ. ಮೊನ್ನೆ ಸಹ ರಂಗನಾಥ ಮಾಡಿದ ಅಡಿಗೆಯನ್ನು ಊಟ ಮಾಡಿದ್ದ. ಈಗ ಏನೂ ಪ್ರಶ್ನೆ ಏಳುವಂತಿರಲಿಲ್ಲ. ಆದರೆ ಸತ್ಯ ಅತ್ತ ಹೋದ ಕೂಡಲೇ ರಂಗನಾಥ ಟೀಕೀಸಿದ್ದ.

"ನಿಂಗೆ ನಿಜವಾಗಲೂ, ಒಂದು ಅನ್ನ ಸಹ ಮಾಡುಕ್ಕೆ ಬರುಲ್ವಾ?"

"ನಾನು ಇದುವರಿಗೂ ಎಂದೂ ಮಾಡಿಲ್ಲ. ಕೆಟ್ಟು ಹೋದರೆ ಸತ್ಯ ಏನಂದುಕೊಳ್ತಾರೋ ಅಂತ ಮಾಡಲಿಲ್ಲ."

"ಹಾಗಾದರೆ ನೀನು ಕಲಿತು ಕೊಳ್ಳುವುದು ಯಾವಾಗ?"

"ನಾನು ಕಲಿಯಲೇ ಬೇಕಾ?" ಈ ಪ್ರಶ್ನೆಗೆ ಅವನು ಉತ್ತರಿಸಲಿಲ್ಲ. ಅದು ಅವಳಿಗೆ ಇಷ್ಟವಿಲ್ಲದ ಕೆಲಸ ಎಂದು ಅರ್ಥವಾಗಿತ್ತು.

"ಒಬ್ಬರು ಅಡಿಗೆಯವರನ್ನು ಗೊತ್ತು ಮಾಡಿಕೊಂಡರೆ ಆಗುಲ್ವಾ?"

ರಂಗನಾಥ ನಕ್ಕು ಬಿಟ್ಟ. ನಾನು ಅಷ್ಟು ದೊಡ್ಡ ಮನುಷ್ಯನಲ್ಲ ನಿರ್ಮಲಾ. ನಂಗೆ ಬರುತ್ತಲ್ಲ. ನಾವಿರುವವರೆಗೂ ನಾನೇ ಮಾಡ್ತೀನಿ. ಕೆಟ್ಟ ನಗೆ ನಕ್ಕ.

ಈ ಮಾತಿನರ್ಥ ಅವಳಿಗಾಗಲಿಲ್ಲ. ನೀನು ಕೊಡ್ತೀಯಾ ಸಂಬಳಾನಾ ಅಡಿಗೆಯವಳಿಗೆ, ಅಂತ ಸದ್ಯ ಕೇಳಲಿಲ್ಲ. ಎಂದುಕೊಂಡು ಸುಮ್ಮನಾದಳು.

ಒಂದು ವಾರ ಕಳೆಯಿತು. ನಿರ್ಮಲ ಯಥಾಪ್ರಕಾರ ಕ್ಲಿನಿಕ್‌ಗೆ ಹೋಗಿ ಬರುತ್ತಿದ್ದಳು. ಒಂದೆರಡು ಸಲ ಸ್ಕೂಟರ್ ಇಲ್ಲವಲ್ಲ. ಎಂದು ವಿಚಾರಿಸಿ ದ್ದಳು. ಹೂಂ ಇನ್ನೂ ರಿಪೇರಿಯಾಗಿಲ್ಲವೆಂದೇ ಹೇಳಿದ್ದ ಒಂದು ಸಲವಂತೂ ಮನೆಯಲ್ಲಿದ್ದ ರಂಗನಾಥನ ಬಳಿ ಆಟೋದವನಿಗೆ ಚಾರ್ಜು ಕೇಳಿ ಪಡೆದಿದ್ದಳು. ಆಟೋದವನು ಹೋದ ಮೇಲೆ ಕೇಳಿದ್ದ.

"ಆಟೋಕ್ಕೆ ಕೊಡೋಕೆ ದುಡ್ಡು ತಂದಿರಲಿಲ್ವಾ?" ವಿಚಿತ್ರವಾಗಿ ಅವನನ್ನೇ ನೋಡಿ

ನುಡಿದಿದ್ದಳು.

"ಪರ್ಸನ್ನು ಕ್ಲಿನಿಕ್‌ನಲ್ಲೇ ಬಿಟ್ಟು ಬಂದು ಬಿಟ್ಟಿದೀನಿ..." ಸಮಜಾಯಿಸಿ ಹೇಳಿದ್ದಳು.

"ಈಗ ನನ್ನ ಹತ್ತಿತರವೂ ಹಣವಿಲ್ಲದಿದ್ದರೆ ಏನು ಮಾಡ್ತಿದ್ದೆ?" ಎಂದು ಕೇಳಬೇಕೆಂದು ಕೊಂಡವನು ಏಕೋ ಏನೋ ಸುಮ್ಮನಾದ. ಈಗ ಅವನ ಹತ್ತಿರ ಸ್ವಲ್ಪ ಹಣವಿತ್ತು. ತಾಯಿಯ ಕರ್ಮಾಂತರಗಳಿಗೆ ಯಾರ ಹತ್ತಿರವೂ ಹಣ ಕೇಳಬಾರದೆಂಬ ಸ್ವಾಭಿಮಾನ ಅಡ್ಡ ಬಂದಾಗ, ಹಿಂದೆ ಮುಂದೆ ಯೋಚಿಸದೇ, ಸ್ಕೂಟರನ್ನು ಅಡವಿಡಲು ಹೋದ. ಆಗ ಆ ಸಾಹುಕಾರ ತಾನೇ ಕೊಳ್ಳುವುದಾಗಿ ಹೇಳಿ, ಈಗಿನ ಬೆಲೆಯ ಅರ್ಧಕ್ಕಿಂತ ಹೆಚ್ಚಿನ ಹಣವನ್ನು ಕೊಟ್ಟು ಸ್ಕೂಟರನ್ನು ಕೊಂಡು ಉಪಕಾರಮಾಡಿದ್ದ. ಸ್ಕೂಟರಿಲ್ಲದುದು ಕೈ ಮುರಿದಂತಾಗಿದ್ದರೂ, ಕರ್ಮಾಂತರಗಳಿಗೆ ಹಣ ಹೊಂದಿಸಿದ್ದು ಸಮಾಧಾನವನ್ನು ನೀಡಿತ್ತು.

ಸತ್ಯ ದಿನಾ ಬಂದು ಬೇಟಿಯಾಗುತ್ತಿದ್ದ. ಅವನಿಗೆ ಸಹ ಸ್ಕೂಟರನ್ನು ಮಾರಿರುವ ವಿಚಾರವನ್ನು ತಿಳಿಸಿರಲಿಲ್ಲ. ಅವರೆಲ್ಲಾ ಆಡಿಕೊಂಡು ನಗುಲ್ವೇ? ಕೈ ತುಂಬಾ ಸಂಪಾದಿಸುವ ಹೆಂಡತಿ ಇರುವಾಗ ಇವನಿಗೇನು ಕಮ್ಮಿ ಎಂಬ ಭಾವನೆ ಇದ್ದೇ ಇರುತ್ತೆ ಎಂದುಕೊಂಡು ಯಾರಿಗೂ ತಿಳಿಸಿರಲಿಲ್ಲ.

ನಿರ್ಮಲಂಗೆ ತಿಳಿದ್ರೆ, ಅದನ್ಯಾಕೆ ಮಾರಿದ್ರಿ. ನನ್ನನ್ನು ಕೇಳಿದ್ರೆ ಕೊಡುತ್ತಿರಲಿಲ್ಲವೇ ಅಂತ ಅನ್ನ ಬಹುದೇನೋ ಅಂತ ಒಂದೊಂದು ಸಲ ಅನ್ನಿಸಿದರೂ, ಇದುವರೆಗೂ ತಾನು ಸಂಪಾದಿಸಿದುದರಲ್ಲಿ ನನಗೆ ಹತ್ತು ರೂಪಾಯಿ ತಂದು ಕೊಡದಿದ್ದವಳು. ಹಾಗೆ ಹೇಳಲಾರಳು ಎಂಬ ಅನುಮಾನವು ಒಡನೆಯೇ ಬರುತ್ತಿತ್ತು. ನನ್ನ ಸ್ಕೂಟರು ನಾನು ಮಾರಿದೆ. ಈಗ ಯಾರ ಹಂಗೂ ನನಗಿಲ್ಲವಲ್ಲ ಅಂತನ್ನಿಸಿದಾಗ, ಮನಸ್ಸಿಗೆ ನಿರಾಳವೆನಿಸುತ್ತಿತ್ತು.

ನಾನು ಇವಳನ್ನು ಮದುವೆಯಾಗಿ ತಪ್ಪು ಮಾಡಿದೆ. ಅಮ್ಮ ಹೇಳಿದ್ದು ಸರಿ. ನಾನೇಕೆ ಆ ಬಗ್ಗೆ ಚಿಂತಿಸಲಿಲ್ಲ? ಅವಳು ಸಂಪಾದಿಸಿದುದನ್ನು ನಾನು ನಾನಾಗಿಯೇ ಕೇಳದಿದ್ದರೂ, ಅವಳಾಗಿಯೇ ಕೊಡಬಹುದೇನೋ ಅಂತ ಕೆಲವು ಸಾರಿ ಅಂದುಕೊಂಡಿದ್ದು ನಿಜ. ಆದರೆ ಆ ಸುಳಿವನ್ನೇ ತೋರಿಸಲಿಲ್ಲ. ಏನು ಮಾಡುತ್ತಾಳೋ ಹಣವನ್ನೆಲ್ಲ? ಇರುವುದು ನಮ್ಮ ಜೊತೆಯಲ್ಲಿ, ಒಂದು ದಿನವಾದರೂ, ಮಗು ಅಂತ ಮನೋಜನಿಗೆ ಚಾಕ್ ಲೇಟ್ಸ್ ಆಗಲೀ, ಅಮ್ಮ ವಯಸ್ಸಾದವಳು ಅಂತ ಎಂದಾದರೂ ಒಂದು ನಾಲ್ಕು ಹಣ್ಣು, ಹು. ಹುಂ. ಹೋಗಲಿ. ತನಗೂ ಏನನ್ನು ತಂದುಕೊಂಡಂತೆ ಅನ್ನಿಸುವುದಿಲ್ಲ. ಏನು ಮಾಡುತ್ತಾಳೋ ಎಲ್ಲಾ ಕೂಡಿಡುತ್ತಾ ಇದಾಳೋ... ಏಕಿರಬಹುದು ನನ್ನ ಮೇಲೆ ನಂಬಿಕೆ ಇಲ್ಲವೇ? ಕೇವಲ ತನಗೋಸ್ಕರ ಕೂಡಿಡವುದಾದರೆ..ಎಂಥಾ ಸ್ವಾರ್ಥ ಹೆಂಗಸು. ಇದಕ್ಕೆಲ್ಲಾ ಅವರ ಅಮ್ಮ ಅಪ್ಪನ ಚಿತಾವಣೆನೂ ಇರಬಹುದು. ನಿನ್ನ ದುಡ್ಡಿನಲ್ಲಿ ಅವನು ಮಜಾ ಮಾಡ್ತಾನೆ, ಅವನಿಗೆ ಏನೂ ಕೊಡಬೇಡ ಅಂತ ಹೇಳಿಕೊಟ್ಟಿರ ಬಹುದು.... ಅದೇ ಇರಬೇಕು, ನಾನು ಇದುವರೆಗೂ ಅವಳ ತಾಯಿಯ ಮುಖವನ್ನೇ ನೋಡಿಲ್ಲ. ಅಳಿಯ ಅನ್ನೋ ಭಾವನೆ ಅವರಿಗಿಲ್ವಲ., ಆ ತಂದೆಯೋ ಮದುವೆಗೆ ಸಾಕ್ಷಿಯಾಗಿ ಮಾತ್ರ ಬಂದಿದ್ದರು. ಇವಳೂ

ಸಹ ಎಂದೂ ನಮ್ಮಪ್ಪ ಹೀಗೆ ನಮ್ಮಮ್ಮ ಹಾಗೆ, ನಮ್ಮಮ್ಮನ ಮನೇಲಿ ಹಾಗೆ ಹೀಗೆ ಅಂತ ಏನನ್ನೂ ಹೇಳಿಕೊಂಡಿಲ್ಲ. ಕಾರಣ ಏನಿರಬಹುದು ಏನೋ ರಹಸ್ಯವಿರಲೇ ಬೇಕು. ಒಟ್ಟಿನಲ್ಲಿ ಏನೋ ವಿಚಿತ್ರ... ಕೇಳಿದರೆ ಹೇಳು ತ್ತಾಳೋ ಇಲ್ಲವೋ...ಸುಮ್ಮನೇ ಕೈ ತೋರಿಸಿ ಅವಲಕ್ಷಣ ಅಂತ ಅನ್ನಿಸಿಕೊಳ್ಳು ವುದಕ್ಕಿಂತ ಸುಮ್ಮನಿರುವುದೇ ಸರಿ.

ಇವಳ ಮನಸ್ನಲ್ಲೂ ಏನಿದೆಯೋ ಹೇಗೂ ಇವರ ಮನೆಯಲ್ಲಿ ಅನುಕೂಲವಿಲ್ಲ. ಹೀಗೇ ಇದ್ದು ಅಭ್ಯಾಸ ಇವರಿಗೆ. ನಾನೇಕೆ ಇವರ ಮನೆಯವರಿಗೆ, ಅದರಲ್ಲೂ ಮುದಿ ಅತ್ತೆಗೆ, ತಂಗಿ ಮಗು ಮನೋಜನಿಗೆ ನನ್ನ ಹಣವ್ನೇಕೆ ಖರ್ಚು ಮಾಡಬೇಕು ಅಂತನ್ನಿಸಿರಲೇ ಬೇಕು. ಅದಕ್ಕೆ ಪರ್ಸು ಬಿಚ್ಚಿಲ್ಲ. ಇವಳು ಬಂದದ್ದೇ ನೆಪ, ಅಮ್ಮ ಸತ್ತು ಹೋದಳು. ಅಮ್ಮನೂ ಇಲ್ಲವಾದ ಮೇಲೆ, ಇನ್ನು ಮನೋಜನ ಮೇಲೆ ಕಣ್ಣು. ಹೇಗಾದರೂ ಅವನನ್ನು ಮನೆಯಿಂದ ಆಚೆ ಕಳಿಸುವ ಆಲೋಚನೆ ಮಾಡಿಯೇ ಇರುತ್ತಾಳೆ. ಅನಾಥ ಮಗು, ಸುಖವಾಗಿ ಬೆಳೆಯಲಿ ಎಂಬ ಉದಾರಭಾವನೆ ಇದ್ದಂತೆ ಕಾಣುವ್ರದಿಲ್ಲ. ನನ್ನ ಮನಸ್ಸನ್ನು ಕೆಡಿಸಿ ಮನೋಜನನ್ನೂ ಮನೆಯಿಂದಾಚೆ ಕಳಿಸುವಂತೆ ಮಾಡಿಬಿಟ್ಟರೇ...? ಆಗ ಮನೋಜ ಖಂಡಿತಾ ಅನಾಥನಾಗಿ ಬಿಡುತ್ತಾನೆ..ಆಗ ನಾನು ಅನೂರಾಧಳಿಗೆ ಕೊಟ್ಟ ಭಾಷೆ ಮುರಿದಂತಾಗುವುದಿಲ್ಲವೆ ನನ್ನ ತಂಗಿಯ ಮಗನ ಬಾಳು ಹಾಳಾಗುವುದಿಲ್ಲವೇ ಹಾಗಾಗಾಬಾರದು. ಖಂಡಿತಾ ಹಾಗಾಗಬಾರದು. ಅಂಥ ವಚನಭ್ರಷ್ಟನಾಗಬಾರದು. ಹೀಗೇ ಯೋಚಿಸುತ್ತಿದ್ದವನ ಮನದಲ್ಲಿ ಕೋಲಾಹಲ. ರಾತ್ರಿಯೆಲ್ಲಾ ನಿದ್ದೆಯಿಲ್ಲದೇ ಹೊರಳಾಡಿದ. ಮತ್ತೆ ಮತ್ತೆ ಅದೇ ಚಿಂತೆಗಳು. ಅಷ್ಟರಲ್ಲಿ ಬೆಳಗಾಗಿತ್ತು.

ಸತ್ಯ ಒಪ್ಪಬಹುದಾದ ಒಂದು ಸಲಹೆಯನ್ನು ಕೊಟ್ಟ.

"ನಿಮ್ಮ ತಾಯಿ ನೊಂದ ಜೀವಿ. ಅವರ ಆತ್ಮಕ್ಕೆ ಖಂಡಿತಾ ಶಾಂತಿ ಸಿಗಲೇಬೇಕು. ಯಾವುದಾದರೂ ಪುಣ್ಯಕ್ಷೇತ್ರದಲ್ಲಿ ಅವರ ಕರ್ಮಾಂತರ ಗಳನ್ನು ಮಾಡಿದರೆ ಸರಿ ಅಂತನ್ನಿಸುತ್ತೆ ನನಗೆ."

"ನೀನು ಹೇಗೆ ಹೇಳಿದರೆ ಹಾಗೆ. ಪುಣ್ಯಕ್ಷೇತ್ರ ಯಾವುದು ಅಂತಲೂ ನೀನೇ ಹೇಳಿ ಬಿಡು"

"ಕಾಶಿ, ಗಯ್ಯಾ, ಎಲ್ಲಾ ಈಗ ಅಸಾಧ್ಯದ ಮಾತು. ಗೋಕರ್ಣಕ್ಕೆ ಹೋಗಿ ಮಾಡುವುದಾದರೆ ಹೇಳಪ್ಪಾ. ನಿನ್ನ ಹತ್ತಿರ ಹಣವಿಲ್ಲದಿದ್ದರೆ ಸಂಕೋಚ ಪಟ್ಕೋಬೇಡ. ನಾನು ಏರ್ಪಾಡು ಮಾಡ್ತಿನಿ"

"ನಿನ್ನ ಹತ್ತಿರ ನನಗೆ ಸಂಕೋಚವೇ, ಖಂಡಿತಾ ಇಲ್ಲ. ನಿನ್ನನ್ನಲ್ಲದೇ ಇನ್ಯಾರನ್ನು ಕೇಳಲಿ? ನಾಳೆಗೆ ಒಂಭತ್ತನೇ ದಿನ, ನಾಳೇನೇ ಹೋಗೋಣ್ವಾ? ನೀನೂ ಬರ್ತೀಯ ತಾನೇ?"

"ಬರ್ತೀನಿ. ನಾಳೆ ಬೆಳಿಗ್ಗೇನೇ ಹೊರಟು ಬಿಡೋಣ. ಕಾಲೇಜಿಗೆ ನಾಲ್ಕೈದು ದಿನಕ್ಕೆ ರಜ ಹಾಕ್ತೀನಿ...ನೀನು ನಿರಾತಂಕವಾಗಿರು" ಎಂದು ಹಾಗೆ ಹೇಳಿ ಹೋದವನು, ಮತ್ತೆ ಎರಡು ಗಂಟೆಯ ಹೊತ್ತಿಗೆ ಆತುರಾತುರ ವಾಗಿ ಬಂದ.

ನಮ್ಮ ತಂದೆಗೆ ಹುಶಾರಿಲ್ವಂತೆ. ಆಸ್ಪತ್ರೆಗೆ ಸೇರಿಸಿದಾರಂತೆ. ದಾವಣಗೆರೆಗೆ

ನಾನೀಗಲೇ ಹೊರಡಬೇಕು. ಎಲ್ಲಾ ಸರಿಯಾಗಿದ್ದರೆ, ನಾನು ಅಲ್ಲಿಂದಲೇ ಗೋಕರ್ಣಕ್ಕೆ ಬರ್ತಿನಿ ಇದನ್ನು ಇಟ್ಟುಕೋ ಎಂದು ಹೇಳಿ ಐನೂರು ರುಪಾಯಿಗಳನ್ನು ಎಣಿಸಿಕೊಟ್ಟ.

ಸ್ನೇಹಿತನ ವಿಶ್ವಾಸಕ್ಕೆ ಅವನ ಕಣ್ಣುಗಳು ಹನಿಗೂಡಿದವು. ಬೇಡ ಎಂದು ಹೇಳಿ ಅವನಿಗೆ ಅವಮಾನ ಮಾಡುವ ಇಚ್ಛೆಯಾಗಲಿಲ್ಲ. ನಿರ್ಮಲನ್ನ ಕೇಳ್ತೀನಿ ಎಂದು ಸುಳ್ಳು ಹೇಳುವ ಮನಸ್ಸಾಗವಲಿಲ್ಲ. ಸ್ಕೂಟರನ್ನು ಮಾರಿ ಬಂದ ಹಣ ನನ್ನ ಹತ್ತಿರ ಇದೆ ಎಂದು ಹೇಳಿಕೊಳ್ಳುವ ಮನಸ್ಸಲಾಗಲಿಲ್ಲ.

ಸರಿಯಪ್ಪಾ ಹೋಗ್ಬಾ...ನಿಮ್ಮ ತಂದೆಗೆ ಬೇಗ ಹುಶಾರಾಗಲಿ...ಎಂದು ಹಾರೈಸುತ್ತೀನಿ ಎಂದು ಸ್ನೇಹಿತನ ಕೈ ಕುಲಕಿದ. ಸತ್ಯ ಗಿಡಿಬಿಡಿಯಿಂದ ಹೊರಟು ಹೋದ.

ನಿರ್ಮಲ ಮನೆಯಲ್ಲಿಲ್ಲದ ಸಮಯದಲ್ಲಿ ರಂಗನಾಥ ತನ್ನ ಮತ್ತು ಮನೋಜನ ಬಟ್ಟೆಗಳನ್ನು ಪ್ಯಾಕ್ ಮಾಡಿಕೊಂಡ. ಅನೂರಾಧಳ ಮದುವೆ ಸಮಯದಲ್ಲಿ ತೆಗೆದಿದ್ದ ಒಂದು ಗ್ರೂಪ್ ಫೋಟೋ ಇತ್ತು. ಅದನ್ನು ಸೂಟ್‌ಕೇಸಿನೊಳಕ್ಕೆ ಸೇರಿಸಿದ.

ರಾತ್ರಿಯಾಗುತ್ತಿದ್ದಂತೇ ರಂಗನಾಥನ ತಳಮಳ ಹೆಚ್ಚಾಗಿತ್ತು ಮನದಲ್ಲಿ ತುಂಬಿಕೊಂಡ ದುಗುಡವನ್ನೆಲ್ಲ ಯಾರ ಹತ್ತಿರವಾದರೂ ಹೇಳಿಕೊಂಡು ಹೃದಯವನ್ನು ಹಗುರಮಾಡಿಕೊಳ್ಳೋಣವೆಂದರೆ ಅದೂ ಸಾಧ್ಯವಿರಲಿಲ್ಲ. ಸತ್ಯ ಆತ್ಮೀಯನಾದರೂ, ನಿರ್ಮಲ ಸ್ವಂತದವಳೇ ಆದರೂ, ಅವನು ಅವರಿಬ್ಬರೊಡನೆ ತನ್ನ ದುಗುಡವನ್ನು ಹಂಚಿಕೊಳ್ಳಲು ಸಿದ್ಧನಿರಲಿಲ್ಲ.

ನಿರ್ಮಲಾ ಮಧ್ಯಾಹ್ನ ಎರಡು ಗಂಟೆಯ ನಂತರ ಕ್ಲಿನಿಕ್‌ನಿಂದ ಮನೆಗೆ ಬಂದಳು. ರಂಗನಾಥ ನಿತ್ಯದಂತೆ ಅಡಿಗೆ ಕೆಲಸ ಮುಗಿಸಿ, ಅವಳಿಗಾಗಿ ಕಾಯುತ್ತಿದ್ದ. ಮನೋಜ. ನಿದ್ರಿಸಿದ್ದ.

ಊಟ ಮಾಡುತ್ತಾ ರಂಗನಾಥ ಹೇಳಿದ್ದ.

"ನಾನು ನಾಳೆ ಬೆಳಿಗ್ಗೆ ಬಸ್ಸಿಗೆ ಗೋಕರ್ಣಕ್ಕೆ ಹೋಗ್ತಾ ಇದೀನಿ. ಅಮ್ಮನ ದಿನಕರ್ಮ ಅಲ್ಲೇ ಮಾಡ್ತೀನಿ. ಕ್ಲಿನಿಕ್‌ಗೆ ಇವತ್ತು ಸಾಯಂಕಾಲ ಹೋಗದೇ ಇದ್ದರೆ ಆಗುತ್ತಾ ನೋಡು."

"ನೋಡೋಣ ಯೋಚಿಸ್ತೀನಿ. ಒಬ್ಬರೇ ಹೋಗ್ತಿದೀರಾ ನಾನೂ ಬರಬೇಕಾ ಬರಬೇಕೂಂತ ಇದ್ರೆ ಬರ್ತಿನಿ...ಬರಲಾ?"

ರಂಗನಾಥ ಸುಮ್ಮನೇ ಒಂದು ಗಳಿಗೆ ಅವಳನ್ನೇ ನೋಡಿದ.

"ಏನು ಈ ಸಮಯದಲ್ಲಿ ನೀನು ಪ್ರಯಾಣ ಮಾಡ್ತೀಯಾ? ಅಲ್ಲದೇ ನಾವೇನು ಸುತ್ತಾಡುಕ್ಕೆ ಹೋಗ್ಬೇಕೆ? ನೀನು ರೆಸ್ಟ್ ತಗೋ. ನಿನ್ನನ್ನ ನೀನು ಚೆನ್ನಾಗಿ ನೋಡ್ಕೋ..ನಿನಗೊಬ್ಬಳಿಗೇ ಇರುಕ್ಕೆ ಆಗುಲ್ಲ ನಿಮ್ಮ ತಂದೆ ಮನೇಲೇ ಇರು ಬೇಕಾದರೆ."

"ಮನೋಜ, ಅವನನ್ನೆಲ್ಲಿ ಬಿಡ್ತೀರಿ?"

ನಾನು ಅವನನ್ನು ನೋಡ್ಕೋತೀನಿ. ಎಂದು ಅವಳು ಹೇಳಲಿಲ್ಲ ವೆನ್ನುವುದು ಅವನ ಗಮನಕ್ಕೆ ಬಂತು.

"ಅವನ ಚಿಂತೆ ನಿನಗೆ ಬೇಡ. ಅವನನ್ನು ನನ್ನ ಜೊತೆ ಕರಕೊಂಡು ಹೋಗ್ತಾ

ಇದೀನಿ"

" ಚಿಕ್ಕವನು, ತೊಂದರೆ ಆಗುಲ್ವಾ?"

"ನೀನು ನೋಡ್ಕೊಳ್ಳುವುದಾದರೆ ಹೇಳು. ಬಿಟ್ಟು ಹೋಗ್ತೀನಿ" ವಕ್ರವಾಗಿ ನಗುತ್ತಾ ಹೇಳಿದ್ದ. ಅವಳಿಗೆ ಒಪ್ಪಿಗೆಯಾಗುವುದಿಲ್ಲವೆಂದು ಅವನಿಗೆ ತಿಳಿದಿತ್ತು.

"ನಾನಾ? ನನ್ನ ಕೈಲಿ ಎಲ್ಲಿ ಆಗುತ್ತೆ? ನನ್ದೇ ಸ್ಥಿತಿ ಈಗ ಹೀಗೆ."

"ಹೋಗಲಿ ಬಿಡು. ನೀನು ಅವನಿಗೆ ಹೊಂದಿಕೊಂಡಿಲ್ಲ. ಅವನೂ ಅಷ್ಟೆ. ಅವನಿಗೆ ನನ್ನ ಜೊತೆಯಲ್ಲೇ ಇದ್ದು ಅಭ್ಯಾಸ. ಅವನು ನನ್ನ ಸಾಕು ಮಗ. ನನಗೆ ಸರಿ ಹೋಗುತ್ತೇ. ನಿನಗೆ ತೊಂದರೇನೇ ಅದು ಸರಿ. ನಿನಗೆ ಏನೂ ಗೊತ್ತಿಲ್ಲವಲ್ಲ. ನಾಳೆ ನಿನಗೆ ಹುಟ್ಟುವ ಮಗೂನ ಹೇಗೆ ನೋಡ್ಕೋತೀಯ?"ಅವಳನ್ನೇ ವಿಚಿತ್ರವಾಗಿ ನೋಡುತ್ತಾ ಕೇಳಿದ.

" ಅದು ನನ್ನದೇ ಸ್ವಂತ ಅಲ್ಲವಾ? ಎಲ್ಲಾ ತಾನಾಗಿಯೇ ಸರಿ ಹೋಗುತ್ತೆ." ಎಂದಳು ನಗುತ್ತಾ.

"ಸ್ವಾರ್ಥಿ." ಒಂದು ಬೈದುಕೊಂಡ ತನ್ನಲ್ಲಿಯೇ... "ರೂಪಕ್ಕೆ ತಕ್ಕಗುಣವಿಲ್ಲ. ವಿದ್ಯೆಗೆ ತಕ್ಕ ದೊಡ್ಡ ಬುದ್ದಿ ಇಲ್ಲ. ಛೀ.. ಎಲ್ಲಾ ಬಿಟ್ಟು ಇವಳಂತಹವಳನ್ನು ನನ್ನ ಬಾಳ ಸಂಗಾತಿಯನ್ನಾಗಿ ಆರಿಸಿಕೊಂಡೆನಲ್ಲ. ಇದರ ಬದಲು ಹಾಗೇ ಬ್ರಹ್ಮಚಾರಿಯಾಗಿದ್ದಿದ್ರೇ ಚೆನ್ನಾಗಿತ್ತೇನೋ" ಅಂತ ಎನಿಸಿತ್ತು.

ನಿತ್ಯದಂತೆ, ನಾಲ್ಕೂವರೆಯ ಹೊತ್ತಿಗೆ ಸಿದ್ದಳಾಗಿ ಅವಳು ಕ್ಲಿನಿಕ್‌ಗೆ ಹೊರಟಾಗ, ಅವನು ಬೇಡವೆನ್ನಲಿಲ್ಲ. ನಾನಾಗಲೇ ಹೋಗಬೇಡವೆಂದು ಹೇಳಿಯಾಗಿತ್ತು. ಮನಸ್ಸಿದ್ದಿದ್ದರೆ ಖಂಡಿತ ಇರುತ್ತಿದ್ದಳು. ನನಗೆ ಮೂರು ಕಾಸಿನ ಪ್ರಯೋಜನವಿಲ್ಲ ಇವಳಿಂದ, ಇವಳ ಆ ಕ್ಲಿನಿಕ್‌ನಿಂದ. ಏನಾದರೂ ಮಾಡಿಕೊಳ್ಳಲಿ ಎಂದು ಉದಾಸೀನ ವಾಗಿದ್ದ. ನಂತರ ಪಕ್ಕದ ಮನೆಯ ವರೊಡನೆ ಹೇಳಿದ, "ತಾಯಿಯ ದಿನಕರ್ಮ ಮಾಡುಕ್ಕೆ ಗೋಕರ್ಣಕ್ಕೆ ಹೋಗ್ತಾ ಇದೀನಿ. ನಿರ್ಮಲ ಪ್ರಯಾಣ ಮಾಡುವ ಹಾಗಿಲ್ಲ. ಅವಳು ತಂದೆಯ ಮನೇಲಿರ್ತಾಳೆ. ಮನೋಜನ್ನ ನನ್ನ ಜೊತೆ ಕರೆದುಕೊಂಡು ಹೋಗ್ತಿದೀನಿ."

"ಮಗೂನ ಕರೆದುಕೊಂಡು ಹೋಗಿ. ಏನೇನು ಅಂತ ಮಾಡ್ತೀರಿ?" ಆಕೆ ನುಡಿದರು.

"ಪರವಾಗಿಲ್ಲ ನನ್ನ ಜೊತೇಲೇ ಬರಲಿ. ಈಗ ನಾನೇ ದಿಕ್ಕು. ಒಬ್ಬನನ್ನೇ ಬಿಟ್ಟು ಹೋಗಲು ನನ್ನ ಮನಸ್ಸು ಒಪ್ಪುತ್ತಿಲ್ಲ."

ಆಕೆ ಸುಮ್ಮನಾದಳು ಸ್ವಂತ ಹೆಂಡತಿಯ ಬಳಿಯೇ ಮಗುವನ್ನು ಬಿಟ್ಟು ಹೋಗುತ್ತಿಲ್ಲ. ಏನು ಕಾರಣವೋ ನನಗೇಕೆ ಎಂದುಕೊಂಡಳು.

ರಾತ್ರಿ ಮತ್ತೆ ನಿರ್ಮಲೆಯ ಹತ್ತಿರ ಮಾತನಾಡಲು ಏನೂ ಇರಲಿಲ್ಲ. ಅವನು ಬಂದು ತನ್ನ ಬಳಿ ಕುಳಿತುಕೊಳ್ಳಲಿ. ಮಾತಾನಾಡಲಿ ಎಂಬ ಆಸೆ ಅವಳಿಗೆ. ಈ ನಡುವೆ ತಮ್ಮಿಬ್ಬರ ಮಧ್ಯೆ ಅಂತರ ಜಾಸ್ತಿಯಾಗುತ್ತಿದೆ ಎನ್ನುವುದು ಅವಳಿಗೂ ಅರಿವಾಗಿತ್ತು. ಅದನ್ನು ಸರಿಪಡಿಸುವಂತಿದ್ದರೇ... ಸಧ್ಯಕ್ಕಂತೂ ಅದು ಸಾಧ್ಯವಿಲ್ಲ...ಅವನಿಗೆ ಎಲ್ಲವನ್ನು ಹೇಳಿ, ಅವನನ್ನು ಒಪ್ಪಿಸುವಂತಿದ್ದರೇ, ಒಲಿಸಿಕೊಳ್ಳುವಂತಿದ್ದರೆ...? ಈಗ

ಬೇಡ. ಅವನ ಮನಸ್ಸು ಚೆನ್ನಾಗಿಲ್ಲ. ಊರಿಂದ ವಾಪಸ್ಸು ಬರಲಿ. ಸಮಯ ನೋಡಿ, ನನ್ನ ವಿಚಾರಗಳನ್ನು ತಿಳಿಸ್ತೀನಿ. ಈಗ ಏನು ಹೇಳಿದರೂ, ಅವನನ್ನು ಮೆಚ್ಚಿಸುವುದಕ್ಕಾಗುವುದಿಲ್ಲ. ಅಲ್ಲದೇ ತಪ್ಪೆಲ್ಲಾ ನನ್ನದೇ... ಎಷ್ಟೋ ದಿನಗಳಾದವು. ನನ್ನ ಬಳಿ ಕುಳಿತು ಒಂದು ಪ್ರೀತಿಯ ಮಾತನಾಡಿಲ್ಲ. ನಮಗೆ ಹುಟ್ಟುವ ಮಗುವಿನ ಬಗ್ಗೆ ಒಂದು ವಿಚಾರ ಆಡಿಲ್ಲ. ಸದಾ ಮನೋಜನದೇ ಚಿಂತೆ. ಅವನು ನಮ್ಮಿಬ್ಬರ ಮಧ್ಯೆ ಇದ್ದು ನನ್ನ ಸುಖವನ್ನು ಕಿತ್ತು ಕೊಳ್ತಿದಾನೇನೋ ಅಂತನ್ನಿಸ್ತಿದೆ. ಅದಕ್ಕೇ ಏನೋ ಮೊದಲ್ನಿಂದ ನನಗೆ ಅವನ ಬಗ್ಗೆ ಏನೂ ಅನ್ನಿಸಲಿಲ್ಲ. ಇದುವರಿಗೂ ನೋಡ್ಕೊಳ್ಳೋಕೆ ಅವನ ಅಜ್ಜಿ ಇದ್ದರು. ಈಗ ಎಲ್ಲಾ ರಂಗನಾಥನದೇ. ನನಗೆ ಬೇಜಾರಾಗದೇ ಮತ್ತೇನು?

ಆ ಮಗೂನ ಇವನ್ಯಾಕೆ ಇಟ್ಟುಕೊಳ್ಳಬೇಕು? ತಂಗಿಯ ಗಂಡನ ಮನೆಯಲ್ಲಿ ಬಿಟ್ಟಿದ್ದರೆ ಆಗ್ತಿರಲಿಲ್ವೇ? ಹೇಗಾದರೂ ಮಾಡಿ ಅದಕ್ಕೆ ಇವನನ್ನು ಒಪ್ಪಿಸಬೇಕು. ಇನ್ನು ಮುಂದೆ ನಮ್ಮ ಸಂಸಾರವೂ ದೊಡ್ಡ ದಾಗುತ್ತೆ ಒಂದು ಮಗುವಿಗಿಂತ, ಇನ್ನು ಒಂದು ಮಗುವಾದರೆ ಮತ್ತು ಚೆನ್ನ. ನನ್ನ ಸ್ವಂತ ಮಕ್ಕಳನ್ನು ನಾನು ನೋಡಿ ಕೊಳ್ಳಬಲ್ಲೆ. ಆಯಾ ಗೊತ್ತು ಮಾಡಿ ಕೊಂಡ್ರೆ ಆಯ್ತು. ಆದ್ರೆ ಈ ಮನೋಜ ನಮ್ಮ ಜೊತೆಯಲ್ಲಿರ ಬಾರದು. ಅವನ ಮನೆಯಲ್ಲಿ ಅವನಿರಬೇಕು. ತಾನು ಹಾಗೆ ಮಾಡಬೇಕು.

"ಒಂದು ಸ್ವಲ್ಪ ಮಾತನಾಡಬೇಕಾಗಿತ್ತು. ನಾನು..."ಎಂದಳು ರೂಮಿನ ಬಾಗಿಲಲ್ಲಿ ನಿಂತು. ರಂಗನಾಥ ಏನು ಮಾತಿರಬಹುದು ಎಂದು ಚಿಂತಿಸುತ್ತಾ ಎದ್ದು ಹೋದ.

"ಏನಾಗಿದೆ ನಿಮಗೆ? ನನ್ನನ್ನೇನಾದರೂ ವಿಚಾರಿಸಿದ್ರಾ?ನಾನು ನಿಮ್ಮ ಮಗುವಿನ ತಾಯಿ ಆಗ್ತಿದೀನಿ. ಜ್ಞಾಪಕ ಇದೇ ತಾನೇ?"

"ಏನಾಗಿದೆ ನಿನಗೆ?ನನ್ನ ಮಗೂನ ನಾನು ಮರೆಯಕ್ಕೆ ಸಾಧ್ಯಾನಾ? ಈಗ್ಯಾಕೆ ಈ ಮಾತು?" ಅವಳ ಮಾತಿನಿಂದ ಬೇಜಾರಾಗಿತ್ತು."

"ನಿಮಗೆ ಮನೋಜ ಒಬ್ಬ ಇದ್ದರೆ ಸಾಕು ಅಲ್ವಾ? ಇನ್ಯಾರೂ ಬೇಡ. ನಾನಿದೀನಿ ಎನ್ನೋದೂ ಕಾಣಲ್ಲ ಅಲ್ವಾ?"

"ನಿರ್ಮಲಾ...ನಾನು ನಾಳೆ ಬೆಳಿಗ್ಗೆ ಊರಿಗೆ ಹೊರಡ್ತಿದೀನಿ. ನಿನಗೆ ತೊಂದರೆ ಆಗ್ಬಾರ್ದು ಅಂತ ಅವನನ್ನು ಜೊತೆ ಕರ್ಕೊಂಡು ಹೋಗ್ತಿದೀನಿ. ನೀನೇ ಡಾಕ್ಟರು. ಎಲ್ಲಾ ತಿಳಿದವಳು ನಿನ್ನ ಆರೋಗ್ಯ ನೀನು ಚೆನ್ನಾಗಿ ನೋಡ್ಕೋತೀಯ ಅನ್ನೋ ನಂಬಿಕೆ ನನಗಿದೆ. ಇನ್ನೇನಾಗಬೇಕು ಹೇಳು.?"

"ನನಗೆ ನೀವು ಬೇಕು. ನಿಮ್ಮ ಪ್ರೀತಿ ಬೇಕು"

"ಏನಿದು ಹುಚ್ಚುತನ? ಪ್ರೀತಿ ಮಾಡುವ ಸಮಯಾನಾ ಇದು? ಅಮ್ಮ ಸತ್ತು ಇನ್ನು ಹತ್ತು ದಿನ ಕಳೆದಿಲ್ಲ. ನಿನಗೆ ಹೇಗೆ ಮನಸ್ಸು ಬಂತು ಈ ರೀತಿಯೆಲ್ಲಾ ಮಾತನಾಡುಕ್ಕೆ. ಈಗ ಈ ಮಾತೆಲ್ಲಾ ಬೇಡ. ನಿನ್ನ ಪಾಡಿಗೆ ನೀನು ಮಲಕ್ಕೋ. ಬೆಳಿಗ್ಗೆ ನಾನು ಬೇಗ ಏಳಬೇಕು." ಎನ್ನುತ್ತಾ ತನ್ನ ಪಾಡಿಗೆ ತಾನು ಮಲಗಿದ.

ಅವಳಿಗೆ ನಿರಾಸೆಯಾಯಿತು. ಇವನೆಂತಹವನು? ನಾನಾಗಿಯೇ ಬಂದು ಮಾತಾಡಿದರೂ, ಸನ್ಯಾಸಿಯಂತೆ ಮಲಗಿದ್ದಾನಲ್ಲ. ಮದುವೆಯಾಗಿ ಮೂರು ನಾಲ್ಕು

ತಿಂಗಳು ಕಳೆದಿಲ್ಲ. ಆಗಲೇ ಇವನಿಗೆ ವೈರಾಗ್ಯವೇ...? ಅಥವಾ ನನ್ನ ಮೇಲೆ ಜುಗುಪ್ಸೆಯೇ? ನನ್ನಂತಹ ಕುಂಟಿಯನ್ನು ಏಕಾದ್ರೂ ಮದುವೆಯಾದೆನೋ ಅಂತ ಈಗ ಅನ್ನಿಸುತ್ತಿರಬಹುದೆ? ಅದಕ್ಕೆ ಇದು ಒಂದು ನೆಪವಿರಬೇಕು. ಅಮ್ಮ ಹೇಳಿದ ಹಾಗೇ ನನ್ನಿಂದ ಹಣದ ಸಹಾಯ ಸಿಗದ ಮೇಲೆ, ನನ್ನ ಮೇಲೆ ಉದಾಸೀನ ಮೂಡದೇ ಇರುತ್ತದೆಯ? ಹಾಗೇ ಇದ್ದರೆ, ಎಲ್ಲವನ್ನೂ ಧೈರ್ಯವಾಗಿ ಹೇಳಿಬಿಡಲಿ. ಅದೇನೇನು ಮಾತುಗಳು ಬರುತ್ತೋ ಬರಲಿ. ಅದೇನೇನು ಇತ್ಯರ್ಥವಾಗುತ್ತೋ ಆಗಲಿ... ಮೊದಲು ಊರಿಗೆ ಹೋಗಿ ಬರಲಿ ಎಂದುಕೊಂಡು ತನ್ನ ಪಾಡಿಗೆ ತಾನೂ ಹೋಗಿ ಮಲಗಿದಳು. ಅವಳಿಗೂ ನಿದ್ದೆ ಹತ್ತಿರ ಸುಳಿಯಲಿಲ್ಲ.

ರಂಗನಾಥ ಬೆಳಗಾಗುವುದನ್ನೇ ನಿರೀಕ್ಷಿಸುತ್ತಾ ಮಲಗಿದ್ದ. ಬೆಳಕು ಹರಿಯುತ್ತಲೇ ಎದ್ದು ಕಾಫಿ ಮಾಡಿ, ತಾನು ಕುಡಿದು, ಪ್ಲಾಸ್ಕಿಗೆ ತುಂಬಿಸಿಟ್ಟ. ನಿದ್ದೆಯಲ್ಲಿದ್ದ ಮನೋಜನನ್ನು ಎಬ್ಬಿಸಿ, ಬಲವಂತನಾಗಿ ಹಾಲು ಕುಡಿಸಿ ಮುಖ ತೊಳೆಸಿ, ಬೇರೆ ಬಟ್ಟೆ ತೊಡಿಸಿದ ಸ್ನಾನ ಮಾಡಿ ಬಂದು ಒಂದಿಷ್ಟು ಉಪ್ಪಿಟ್ಟು ಕೆದಕಿ, ಸಣ್ಣ ಡಬ್ಬಿಗೆ ಒಂದಿಷ್ಟು ತುಂಬಿಸಿಕೊಂಡು, ಉಳಿದಿದ್ದ ನ್ನು ಹಾಗೇ ಮುಚ್ಚಿಟ್ಟ.

ಹತ್ತಿರದಲ್ಲಿದ್ದ ಆಟೋ ಸ್ಟ್ಯಾಂಡಿಗೆ ಹೋಗಿ ಒಂದು ಆಟೋ ತಂದ ತನ್ನ ಒಂದೆರಡು ಲಗೇಜನ್ನು ಆಟೋದೊಳಕ್ಕೆ ಇಟ್ಟು ನಿದ್ದೆಯ ಮಂಪರಿ ನಲ್ಲಿದ್ದ ಮನೋಜನನ್ನು ಎತ್ತಿಕೊಂಡು, ನಿರ್ಮಲೆಗೆ ಹೊರಡ್ತೀನಿ. ಎಂದಷ್ಟೇ ಹೇಳಿ ಹೊರಟ. ನಿರ್ಮಲ ಬಾಗಿಲನ್ನು ಮತ್ತೆ ಮುಚ್ಚಿ ತಾನು ಹೋಗಿ ಮಲಗಿಕೊಂಡಳು.

ಗೋಕರ್ಣ ಸೇರಿದಾಗ ಕತ್ತಲೆಯಾಗಿತ್ತು. ಟೈಂ ಎಷ್ಟಾಗಿತ್ತೋ ಸರಿಯಾಗಿ ತಿಳಿಯಲಿಲ್ಲ. ಮನೋಜನಿಗೆಂದು ತಾನು ತಂದಿದ್ದ ಉಪ್ಪಿಟ್ಟನ್ನೇ ಒಂದೆರಡು ಸಲ ತಿನ್ನಿಸಿ, ನೀರು ಕುಡಿಸಿದ್ದ. ರಸ್ತೆಯಲ್ಲಿ ಒಂದೆರಡು ಕಡೆ ಬಾಳೆ ಹಣ್ಣನ್ನು ಕೊಂಡು ತಾನೂ ತಿಂದು, ಮನೋಜನಿಗೂ ತಿನ್ನಿಸಿದ್ದ. ತಾನು ಒಂದೆರಡು ಸಾರಿ ಕಾಫಿ ಕುಡಿದಿದ್ದ.

ಬಸ್ಸಿನಿಂದ ಇಳಿದವನು ಅವರಿವರನ್ನೂ ವಿಚಾರಿಸಿ, ಧರ್ಮಛತ್ರಕ್ಕೆ ಬಂದ. ಧರ್ಮಾಧಿಕಾರಿಗಳನ್ನು ಕಂಡು ಮಾತನಾಡಿ, ಒಂದು ರೂಮನ್ನು ಪಡೆದ. ಆತ ಯಾರೋ ಸಹೃದಯ. ರಂಗನಾಥನ ಜೊತೆ ಇರುವ ಮಗುವನ್ನು ಕಂಡು ತಾನಾಗಿಯೇ, ರಂಗನಾಥನಿಗೆ ಏನೇನು ಅನುಕೂಲ ಗಳು ಬೇಕೋ ಎಲ್ಲವನ್ನು ಒದಗಿಸಿಕೊಡುವುದಾಗಿ ಹೇಳಿದ. ಹೆಂಡತಿಯ ಶ್ರಾದ್ಧ ಮಾಡುಕ್ಕೆ ಬಂದಿದಾನೆ, ಪಾಪ, ತಾಯಿಯಿಲ್ಲದ ತಬ್ಬಲಿ ಎಂದು ಮನೋಜನನ್ನು ಕಂಡು ಕರುಣೆ ಉಕ್ಕಿರಬೇಕು. ರಂಗನಾಥ ಆ ಬಗ್ಗೆ ತಾನಾಗಿಯೇ ಏನನ್ನೂ ಹೇಳಲಿಲ್ಲ. ಆತನೆ ಎಲ್ಲವನ್ನು ವಿಶದವಾಗಿ ಕೇಳಿ ತಿಳಿದುಕೊಂಡು, ರಂಗನಾಥನಿಗೆ ತಾವು ನುಡಿದಂತೆ ಎಲ್ಲಾ ಅನುಕೂಲ ಗಳನ್ನು ಒದಗಿಸಿಕೊಟ್ಟರು. ಕರ್ಮಾಂತರಗಳನ್ನು ಮಾಡುವ ಸಮಯದಲ್ಲಿ ಮನೋಜನನ್ನು ನೋಡಿಕೊಳ್ಳಲು ಒಬ್ಬ ಹುಡುಗನನ್ನು ಸಹ ಗೊತ್ತು ಮಾಡಿದ್ದರು.

ವಿಧಿವತ್ತಾಗಿ ಎಲ್ಲವನ್ನು ಮಾಡಿ ಮುಗಿಸಿ, ಅವನು ತನ್ನ ತಾಯಿಯ ಆತ್ಮಕ್ಕೆ ಮುಕ್ತಿ ದೊರಕುವಂತೆ ಮಾಡಿದ. ಏಕೋ ಏನೋ ಎಲ್ಲಾ ಮಾಡು ವಾಗ, ಅವನ ಮನಸ್ಸು ಕೆಟ್ಟು ಕಲಕಿ ಹೋಗಿತ್ತು. ತಾನೆಂತಹ ಪಾಪಿ ಎಂದೇ ಅನಿಸಿಸುತ್ತಿತ್ತು. ತನ್ನ ಕೈಲಾದ ಮಟ್ಟಿಗೆ ಹಣ ಖರ್ಚುಮಾಡಿ ದಾನ ಧರ್ಮಗಳನ್ನು ಮಾಡಿದ. ಇದೇ

ಮೊದಲು, ಹಾಗು ಇದೇ ಕಡೆಯ ಶ್ರಾದ್ಧ ಅಮ್ಮನಿಗೆ ಅವಳಿಗೆ ನನ್ನ ಪರಿಸ್ಥಿತಿಯ ಅರಿವಿತ್ತು. ನನ್ನ ಮೇಲೆ ನಂಬಿಕೆ ಇತ್ತೂ. ಅಮ್ಮನ ಆತ್ಮ ಖಂಡಿತವಾಗಿ ನೊಂದುಕೊಳ್ಳುವುದಿಲ್ಲ ಎಂದು ದೃಢವಾಗಿ ನಂಬಿದ.

ಎಲ್ಲಾ ಕರ್ಮಾಂತರಗಳನ್ನು ಮಾಡಿಮುಗಿಸಿದ, ಸಾಯಂಕಾಲ, ಮನೋಜ ನನ್ನು ಬಗಲಲ್ಲಿ ಕೂರಿಸಿಕೊಂಡು, ಸಮುದ್ರದ ದಡದಲ್ಲಿ ಗಂಟೆ ಗಟ್ಟಲೆ ಕಾಲ ಕಳೆದ. ಅಗಾಧಾವಾದ ಸಾಗರದ ಅಲೆಗಳ ಹೊಯ್ದಾಟದ ಅಲೆಗಳು! ಮರಳಿನಲ್ಲಿ ಖುಷಿಯಾಗಿ ಆಡಿಕೊಳ್ಳುತ್ತಿದ್ದ ಮನೋಜನನ್ನೇ ಮತ್ತೆ ಮತ್ತೆ ನೋಡಿದಾಗ, ಏನೋ ಅನಿಶ್ಚತೆಯ ನಿರ್ಧರಿಸಲಾಗದ ತಳಮಳದ ಹೊಯ್ದಾಟ...!!

ತನ್ನ ಜೀವನದಲ್ಲಿ ಸುಖದ ನೆರಳೇ ಕಡಿಮೆ. ಚಿಕ್ಕವಯಸ್ಸಿನಲ್ಲಿ ಕಡು ಬಡತನ, ಸಾಲದ ಹೊರೆ, ಮುದ್ದು ತಂಗಿಯ ಸಾವು. ಅನಾಥ ಮನೋಜನ ಪೋಷಣೆಯ ಭಾರ, ಹೆತ್ತ ತಾಯಿಯ ಸಾವು. ಮೆಚ್ಚಿ ಮೆಚ್ಚಿ ಮದುವೆಯಾದ ನಿರ್ಮಲಳ ಸ್ವಾರ್ಥ ತನ, ಒಂದೊಂದಾಗಿ ನೆನಪಿಗೆ ಬಂದು, ಮನಸ್ಸಿನ ತುಂಬಾ ಕಹಿ ತುಂಬಿ ಕೊಂಡಿತು.

ಅಮ್ಮ ಹೇಳಿದಂತೆಯೇ ಆಯಿತು. ಅವಳ ರೂಪಿಗೆ ವಿದ್ಯೆಗೆ ಮರುಳಾದೆ. ಹೃದಯವಂತಿಕೆಯೇ ಇಲ್ಲದ ಅವಳೆಂತಹ ಡಾಕ್ಟರು. ಕೇವಲ ಅವಳ ಭೋಗದವಸ್ತು ನಾನು. ಅಮ್ಮನ ಮೇಲೆ ಆದರವಿರಲಿಲ್ಲ. ಮನೋಜನ ಮೇಲೆ ಮಮತೆ ಇರಲಿಲ್ಲ. ಅವಳಿಗೂ ನನಗೂ ಹೊಂದಾಣಿಕೆ ಯೇ ಇಲ್ಲ. ಅವಳಿಲ್ಲದೇ ನಾನು ಇರಬಲ್ಲೆನಾದರೆ, ನಾನೇಕೆ ಬೇರೆ ಇರಬಾರದು? ಈ ಆಲೋಚನೆ ಬಂದ ಗಳಿಗೆಯಲ್ಲಿ ಬೆದರಿದ. ಆದರೆ ಮತ್ತೆ ಮತ್ತೆ ಅದೇ ಆಲೋಚನೆ ಕಾಡಿದಾಗ, ಅದೇ ಸರಿ ಎನಿಸಿತು.

ಅವಳಿಲ್ಲದೇ ನಾನು ಇರಬಲ್ಲೆನಾದರೆ, ನಾನು ಇಲ್ಲದೆ ಅವಳೂ ಇರಬಲ್ಲಳು. ಅವಳಿಗೆ ಹೆಚ್ಚಿಗೆ ಏನೂ ಕಷ್ಟವಾಗಲಾರದು. ವಿದ್ಯೆ ಬುದ್ಧಿ ತಿಳಿವಳಿಕೆ ಎಲ್ಲಾ ಇದೆ. ಕ್ಲಿನಿಕ್ ಇದೆ. ಸಂಪಾದನೆ ಇದೆ. ಯಾವುದೋ ಒಂದು ಸಹಜ ಸುಖದ ಆಸೆಗೆ ನನ್ನನ್ನು ಮದುವೆಯಾಗಿದ್ದಾಳೆ. ಅವಳ ಬಯಕೆ ಈಡೇರಿರಬಹುದು. ಸಧ್ಯದಲ್ಲೇ ತಾಯಿಯೂ ಆಗಲಿದ್ದಾಳೆ. ಇನ್ನೇನು ಬೇಕು ಆವಳಿಗೆ ನನ್ನಿಂದ ? ಇನ್ನು ಅವಳಿಗೆ ನಾನು ಇಲ್ಲದಿದ್ದರೂ ನಡೆಯುತ್ತೆ.

ಜೊತೆಯಲ್ಲೇ ನಾವಿಬ್ಬರೂ ಸಂಸಾರ ನಡೆಸಿದರೆ, ನಾನೇ ಎಲ್ಲವನ್ನು ಮಾಡಲಿ ಎಂದು ನನ್ನಿಂದ ನಿರೀಕ್ಷಿಸುತ್ತಾಳೆ. ಏನೋ ಹಠ ಅವಳಿಗೆ. ಕೈ ಹಿಡಿದ ಗಂಡನಿಗೆ ತನ್ನ ಸಂಪಾದನೆಯ ಬಗ್ಗೆ ತಿಳಿಯಬಾರದು ಎನ್ನುವ ದುರ್ಬುದ್ಧಿ. ನನಗಿಂತ ಹೆಚ್ಚು ಹಣವಂತೆ ಎಂಬ ಅಹಂಕಾರ ಅವಳಿಗೆ. ನನ್ನನ್ನು ಮದುವೆಯಾಗಿ, ನನ್ನ ಮನೆಯಲ್ಲಿರುವವಳಿಗೆ ಆ ಭಾವನೆ ಇದ್ದರೆ, ನನಗೆ ತಾನೇ ಹೇಗೆ ಸಹಿಸುಕ್ಕೆ ಆಗುತ್ತೆ? ಅದೇ ವಿಷಯವನ್ನು ದೊಡ್ಡದು ಮಾಡಿ, ಚೆನ್ನಾಗಿ ಜಗಳವಾಡಿಬಿಡಬಹುದಾಗಿತ್ತು. ಆದರೆ ಜಗಳವಾಡಿದರೆ ಎಲ್ಲರೂ ನಗುತ್ತಿರಲಿಲ್ಲವೆ? ಅವಳು ದುಡ್ಡು ಕೊಡಲಿಲ್ಲ ವೆಂದು ಇವನು ಜಗಳವಾಡುತ್ತಿದ್ದಾನೆ. ಇವನೆಂತಹ ಗಂಡಸು ಅಂತ ಅಂದುಕೊಂಡರೆ, ಎಂತಹ ಅವಮಾನವಾಗುತ್ತಿತ್ತು? ಹೀಗೇ ಮುಂದುವರೆದರೆ, ಒಂದಲ್ಲ ಒಂದು ದಿನ ನಮ್ಮ ನಮ್ಮಲ್ಲಿ ದೊಡ್ಡ ಕಾದಾಟವೇ ನಡೆಯಬಹುದು. ಅವಳಿಗೆ ತಾನು ಹೆಚ್ಚು ಎಂಬ ಭಾವನೆ ಇದ್ದೇ ಇದೆ...ಹಾಗೇ ತನ್ನ ಸ್ವಂತ ಮಗು ತನಗೆ ಹೆಚ್ಚು ಎಂಬ ಭಾವನೆ ಸಹ

ಸಹಜವೇ. ಮನೋಜನನ್ನು ಅವಳು ಕೀಳಾಗಿ ಕಾಣಬಹುದು. ಅನಾಥಾಶ್ರಮಕ್ಕೆ ಸೇರಿಸಿ ಎಂದು ತನಗೆ ಬಲವಂತ ಮಾಡಬಹುದು. ಬೆಳೆಯುವ ಮಗುವಿನ ಮನಸ್ಸಿನ ಮೇಲೆ ಏನು ಪರಿಣಾಮ ಬೇಕಾದರೂ ಬೀರಬಹುದು. ಆಗ ನನಗೂ ಇಕ್ಕಟ್ಟೇ... ನನಗೂ ನನ್ನ ಸ್ವಂತ ಮಗುವಿನ ಮೇಲಿನ ಮಮತೆ ಹೆಚ್ಚಾಗಿ ಮನೋಜ ನನ್ನು ನಾನೂ ಅಸಡ್ಡೆಯಾಗಿ ಕಾಣುವಂತಾದರೆ? ಆಗ ನಾನು, ಅವನಿಗೂ ಅನುರಾಧಂಗೂ ವಂಚನೆ ಮಾಡಿದಂತಾಗುತ್ತದೆ. ನನ್ನ ನೆಮ್ಮದಿ ಹಾಳಾಗುತ್ತದೆ. ಮನೋಜನ ಭವಿಷ್ಯ ಹಾಳಾಗುತ್ತದೆ...ಹಾಗಾಗಬಾರದು. ಮನೋಜನಿಗೆ ನನ್ನನ್ನು ಬಿಟ್ಟರೆ ಬೇರೆ ಯಾರಿಲ್ಲ. ಆದರೆ ಮುಂದೆ ಹುಟ್ಟಲಿರುವ ನನ್ನ ಮಗುವಿಗೆ ನಾನಿದ್ದೇನೆ, ನಿರ್ಮಲ ಇದ್ದಾಳೆ...ನಮ್ಮಿಬ್ಬರ ಪ್ರೀತಿ ನಮ್ಮ ಮಗುವಿನ ಮೇಲೆ ಸುರಿವಾಗ, ಮನೋಜ ಏಕಾಂಗಿಯಾಗಿ ಬಿಡ್ತಾನೆ...ನನ್ನ ಪ್ರೀತಿ ಆದರಗಳಿಗೆ ಅವನು ಹಾತೊರೆಯ ಬಹುದು. ಅದು ದೊರೆಯದೇ ಹೋದಾಗ, ಅವನು ನಿಜಕ್ಕೂ ಅನಾಥನಾಗಿ ಬಿಡ್ತಾನೆ. ಖಂಡಿತಾ ಹಾಗಾಗಬಾರದು. ಆ ಬಗ್ಗೆ ಚಿಂತಿಸಿದರೇ ನನ್ನ ಎದೆ ಒಡೆದಂತಾಗುತ್ತದೆ.

ನಿರ್ಮಲಳಿಗೆ ಹುಟ್ಟುವ ಮಗುವಿಗೆ ತಾಯಿಯ ಪ್ರೀತಿ. ಪೋಷಣೆ ಖಂಡಿತಾ ಸಿಗುತ್ತದೆ. ಅವಳು ತನ್ನ ಮಗುವನ್ನು ಚೆನ್ನಾಗಿಯೇ ನೋಡಿ ಕೊಳ್ಳುತ್ತಾಳೆ ಇದರಲ್ಲಿ ಸಂಶಯವಿಲ್ಲ. ಆದರೆ ಮನೋಜ?...ತಾಯಿ ತಂದೆ ಇಲ್ಲದ ತಬ್ಬಲಿಗೆ ನಾನೂ ಇಲ್ಲವಾಗಿಬಿಟ್ಟರೆ ಏನಾದಾನು? ಅವನಿಗೀಗ ನಾನೇ ಗತಿ...ಅವನ ಸುಖ, ಅವನ ಭವಿಷ್ಯ ಹಾಳಾಗದಂತೆ ನೋಡಿಕೊಳ್ಳು ವುದು ನನ್ನ ಕರ್ತವ್ಯ.

ನಿರ್ಮಲನ ಎದುರಿಗೆ ಇದ್ದರೂ, ಮನೋಜನಿಗೆ ಅವಳ ಪ್ರೀತಿ ಸಿಗುವುದಿಲ್ಲ. ಅದೇ ನಾನು ಎಲ್ಲೇ ಇದ್ದರೂ ನನಗೆ ನನ್ನ ಮಗುವಿನ ಮೇಲಿನ ಪ್ರೀತಿ ಇದ್ದೇ ಇರುತ್ತೆ. ಆದ್ದರಿಂದ ನಾನೀಗ ಮನೋಜನೊಡನೆ ಬೇರೆಲ್ಲಿಯಾದರೂ ಇದ್ದು ಬಿಡುತ್ತೇನೆ. ಇದೇ ಸರಿ. ನಿರ್ಮಲ ತನ್ನ ಮಗುವಿನೊಂದಿಗೆ ಇದ್ದೇ ಇರುತ್ತಾಳೆ. ಅಲ್ಲಿಗೆ, ಆ ಮಗುವಿಗೂ, ಮನೋಜ ನಿಗೂ ಪ್ರೀತಿ ಪೋಷಣೆ ಸಿಕ್ಕೇ ಸಿಗುತ್ತದೆ.

ಹುಟ್ಟುವ ನನ್ನ ಮಗುವಿಗೆ, ಹುಟ್ಟುವ ಮೊದಲೇ ತಂದೆ ಇಲ್ಲ ಅಂತ ಅನ್ನಿಸಬಹುದು. ಆದರೇನು ಮಾಡುವುದು? ಪ್ರಪಂಚದಲ್ಲಿ ತಂದೆ ಇಲ್ಲದ, ತಾಯಿ ಇಲ್ಲದ ಅನೇಕ ಮಕ್ಕಳಿದ್ದಾರೆ...ನನ್ನ ಮಗುವಿಗೆ ನಿರ್ಮಲೆಯೇ ತಂದೆ ತಾಯಿ, ಈ ಅನಾಥ ಮನೋಜನಿಗೆ ನಾನೇ ತಂದೆ ತಾಯಿ.

ಒಬ್ಬ ವಿಧ್ಯಾವಂತ, ಜವಾಬ್ದಾರಿಯುತ ಗಂಡಸು, ಹೀಗೆ ಮಾಡಲಾರ ನೇನೋ... ಬಸಿರಿ ಹೆಂಗಸು, ಏಕಾಏಕಿ, ಹೀಗೆ ಅವಳನ್ನು ಬಿಟ್ಟು ಬಿಡುವುದು ಸರಿ ಅಲ್ಲ...ಆದರೆ ಈಗ ಬೇರೆ ದಾರಿಯೇ ಇಲ್ಲ. ಇದೇ ಸರಿ ಅಂತಲೂ ಅನ್ನಿಸುತ್ತಿದೆ. ಏನು ಮಾಡಲಿ ದೇವರೇ? ನನಗೇ ಏಕೆ ಇಂಥ ಪೇಚಾಟ? ಈ ಮುಂಚೆ ಯಾರೂ ಇಂತಹ ಪರಿಸ್ಥಿತಿಯನ್ನು ಎದುರಿಸಲಾರದು, ಹೀಗೆ ಹೇಳದೇ ಕೇಳದೇ ಹೆಂಡತಿಯನ್ನು ಬಿಟ್ಟು...

ಇಲ್ಲ ಇಲ್ಲ. ಇನ್ನು ಒಬ್ಬ ಮಹಾನುಭಾವ ಎಷ್ಟೋ ವರ್ಷಗಳ ಹಿಂದೆಯೇ ಇದ್ದ.... ರಾಜಕುಮಾರ ಸಿದ್ದಾರ್ಥ ಮಲಗಿ ನಿದ್ರಿಸುತ್ತಿದ್ದ ತನ್ನ ಹೆಂಡತಿ, ಮಗುವನ್ನು, ರಾಜ್ಯಕೋಶವನ್ನು ಬಿಟ್ಟು ರಾತ್ರಿಯೋ ರಾತ್ರಿ ಅರಣ್ಯಕ್ಕೆ ಹೋಗಲಿಲ್ಲವೇ...ಅವನ ಮನಸ್ಸು ಸಾಕಷ್ಟು ಹೊಯ್ದಾಡಿದ್ದರೂ ಕಡೆಗೂ ತನ್ನ ನಿರ್ಧಾರವನ್ನು ಕದಲಿಸಿರಲಿಲ್ಲ.

ಅವನು ಹೋದದ್ದು ತಪಸ್ಸಿಗೆ...ಜ್ಞಾನಾರ್ಜನೆಗೇ ಇರಬಹುದು. ಎಲ್ಲಾ ಸುಖ ಸೌಲಭ್ಯಗಳ ನಡುವೆ ಇದ್ದ ರಾಜಕುಮಾರನಿಗೆ ತನ್ನ ಸುಖದ ಅಪೇಕ್ಷೆಗಿಂತ, ಜನರ ಕಷ್ಟ ಕಾರ್ಪಣ್ಯಗಳನ್ನು ಕಾಡುವ ಮೂಲ ಯಾವುದು ಎಂದು ತಿಳಿಯುವ ಪ್ರಬಲವಾದ ಆಸೆ, ಇದ್ದಿತಲ್ಲ. ಸುಖ ಸಂಪತ್ತುಗಳನ್ನು ತ್ಯಜಿಸಿ ಜ್ಞಾನಿಯಾಗಿ ಮೆರೆದ ಬುದ್ಧನ ಸಮನಂತೂ ನಾನು ಖಂಡಿತಾ ಅಲ್ಲ. ಆದರೂ ನಾನು ಬೇರೆ ಇನ್ನೊಂದು ಮಹತ್ತರ ವಾದ ಕಾರಣದಿಂದ, ನನ್ನದಲ್ಲದ ಮಗುವನ್ನು ಉದ್ಧಾರ ಮಾಡುವ ಹೆಬ್ಬಯಕೆ ಯಿಂದ, ತಂಗಿಗೆ ಕೊಟ್ಟ ಭಾಷೆಯನ್ನು ಉಳಿಸಿಕೊಳ್ಳುವ ಇಚ್ಛೆಯಿಂದ, ನನ್ನ ಸ್ವಂತ ಸುಖವನ್ನು, ನನ್ನ ಹೆಂಡತಿ ಯನ್ನು ನನ್ನದಾಗಿ ಹುಟ್ಟಲಿರುವ ಮಗುವನ್ನು ಬಿಟ್ಟು ದೂರ, ಬಹುದೂರ ಹೋದರೆ ತಪ್ಪೇನಿಲ್ಲ ಎಂದೇ ಅನ್ನಿಸುತ್ತಿದೆ. ಈ ತೀರ್ಮಾನ ಸರಿಯೋ, ತಪ್ಪೋ. ಅದು ಅನ್ನುವವರಿಗೆ ಸೇರಿದ್ದು. ಖಂಡಿಸಿ ಅನ್ನುವವರ್‍ಯಾರೂ ಮನೋಜನ ಹೊಣೆ ಹೊತ್ತು ಕೊಳ್ಳುವುದಿಲ್ಲ. ನನ್ನ ನಿರ್ಧಾರ ನನ್ನದು, ಇದೂ ಒಂದು ತರಹದ ತಪಸ್ಸು, ಪರೀಕ್ಷೆ ನನ್ನ ಭಾಗಕ್ಕೆ. ಮುಂದೆ ಎಂದಾದರೂ ಯೋಗ ವಿದ್ದರೆ, ನನ್ನ ನಿರ್ಮಲೆಯ ಪುನರ್ಮಿಲನವಾಗಬಹುದು. ಆ ಹೊತ್ತಿಗೆ ಮನೋಜನ ಭವಿಷ್ಯ ಒಂದು ರೂಪವನ್ನು ಕಂಡಿರುತ್ತದೆ.ಭವಿಷ್ಯ ನಿರ್ಧರಿತವಾಗಿರುತ್ತೆ. ನಾನು ನಿರ್ಮಲೆಗಾಗಲೀ, ನನ್ನ ಮಗುವಿಗಾಗಲೀ ಏನೂ ಅನ್ಯಾಯ ಮಾಡುತ್ತಿಲ್ಲ. ಈಗ ಮಾಡುತ್ತಿರುವ ಧರ್ಮ, ನ್ಯಾಯ ನನ್ನ ಮಗುವನ್ನು ಕಾಪಾಡುತ್ತದೆ. ಆ ನಂಬಿಕೆ ನನಗಿದೆ. ಎಂದುಕೊಂಡು ತಲೆ ಕೊಡವಿಕೊಂಡು ಎದ್ದ. ಮರಳಿನಲ್ಲಿ ಆಡುತ್ತಿದ್ದ ಮನೋಜ ನನ್ನು ಎಬ್ಬಿಸಿ ಮೈಕೈ ಬಟ್ಟೆಗಳನ್ನು ಕೊಡವಿ, ಎತ್ತಿಕೊಂಡು ಅಲ್ಲಿಂದ ಹೊರಟ.

ತಾನು ಇಳಿದುಕೊಂಡಿದ್ದ ಸ್ಥಳಕ್ಕೆ ಬಂದ. ಅಲ್ಲಿಯ ಲೆಖ್ಖ ಚುಕ್ತಾ ಮಾಡಿ. ಉಳಿದ ಹಣವನ್ನು ಎಣಿಸಿಕೊಂಡು, ಜೇಬಿನಲ್ಲಿ ಇಳಿಬಿಟ್ಟು ಮನೋಜನನ್ನು ಎತ್ತಿಕೊಂಡು ಬಸ್‌ಸ್ಟ್ಯಾಂಡ್‌ಗೆ ಬಂದ. ಅಲ್ಲಿ ಕಾರವಾರಕ್ಕೆ ಹೋಗುವ ಬಸ್ಸು ಹೊರಡುವುದರಲ್ಲಿತ್ತು. ಹಿಂದೆ ಮುಂದೆ ನೋಡದೇ ಆ ಬಸ್ಸನ್ನೇರಿದ. ಬಸ್ಸಿನ ಕುಲುಕಾಟದಂತೆ ಡೋಲಾಯಮಾನವಾಗಿದ್ದ ಮನಸ್ಸು, ಬಸ್ಸು ಕಾರವಾರವನ್ನು ತಲುಪಿದ ಮೇಲೆ ಒಂದು ಸ್ಥಿಮಿತಕ್ಕೆ ಬಂದಿತ್ತು.

...೨...

ಅಸಹನೆಯಿಂದ ಮನೋಜನ ದಾರಿ ಕಾಯುತ್ತಾ ನಿಂತಿದ್ದ ರಂಗನಾಥ. ಮನೋಜ ಸ್ಕೂಟರನ್ನು ನಿಲ್ಲಿಸಿ ಅವನ ಬಳಿಗೆ ಬಂದ ಕೂಡಲೇ ರೇಗಿಕೊಂಡು ಕೇಳಿದ್ದ.

"ಯಾಕೆ ಇಷ್ಟು ಹೊತ್ತಾಯ್ತು? ಎಲ್ಲಿಗೆ ಹೊಗಿದ್ದೆ?"

"ಇನ್ನೆಲ್ಲೂ ಹೋಗಿರಲಿಲ್ಲ. ನಿನಗ್ಯಾಕೆ ಇಷ್ಟು ಆತಂಕ? ನಾನು ಎಷ್ಟು ದಿನ ಹೇಳಿದ್ದಿನಿ! ನನಗಾಗಿ ಕಾದೂ ಕಾದೂ ಕಾಲು ನೋಯಿಸ್ಕೋಬೇಡ ಅಂತ"

" ನೀನೇನೋ ಹೇಳ್ತೀಯ. ನನ್ನ ಮನಸ್ಸು ಕೇಳಬೇಕಲ್ಲ. ಸ್ಕೂಟರ್ ಮೇಲೆ ಹೋಗ್ತಿರ್ತೀಯ. ವಾಪಸ್ಸು ಬರುವವರೆಗೂ ಜೀವ ಹೊಡೆದುಕೊಳ್ಳು ತ್ತಿರುತ್ತೆ."

" ಎಷ್ಟು ಹೆದರ್ತೀಯ ಮಾವ? ಈಗಿನ ಕಾಲದಲ್ಲಿ ಹುಡುಗೀರೆಲ್ಲ ಸ್ಕೂಟರ್ ಓಡಿಸ್ತಾರೆ. ನಾನೇನು ಚಿಕ್ಕವನೇ?"

"ನೀನು ಚಿಕ್ಕವನಲ್ಲ. ಆದರೆ ನಾನು ನಿನಗಿಂತ ದೊಡ್ಡವನು. ನನಗೆ ಆತಂಕವಿದ್ದೇ ಇರುತ್ತೆ ಒಳಗೆ ಕಾಫಿ, ತಿಂಡಿ ಮಾಡಿಟ್ಟಿದೀನಿ. ತಿನ್ನು. ನಾನು ಸ್ವಲ್ಪ ಹೊರಗೆ ಹೋಗಿ ಬರ್ತಿನಿ."

"ಈಗ ಇನ್ನೇನು ಕೆಲಸ...?"

"ಯಾರೋ ಮನೆಗೆ ಟ್ಯೂಷನ್ ಮೇಷ್ಟರು ಬೇಕು ಅಂತ ಪೇಪರ್ನಲ್ಲಿ ಹಾಕಿಸಿದ್ದರು. ಹೋಗಿ ನೋಡಿಕೊಂಡು ಬರ್ತಿನಿ."

"ಬೆಳಿಗ್ಗೆ ಟುಟೋರಿಯಲ್ ಬೆಳಗಿನ ಹೊತ್ತು ತಾನೇ? ಸಾಯಂಕಾಲ ಒಂದು ಗಂಟೆ ಪಾಠ ಹೇಳಿಕೊಡೋಕೆ ಏನು ಮಹಾ ಕಷ್ಟ? ನಾನು ಹೋಗಿ ಬರ್ತಿನಿ" ಎನ್ನುತ್ತಾ ಸ್ಕೂಟರನ್ನು ಏರಿದ. ಮನೋಜ ತಲೆಯನ್ನು ಅಡ್ಡಡ್ಡ ಕೊಡವುತ್ತಾ ಒಳಗೆ ಬಂದ.

ತಟ್ಟೆಯಲ್ಲಿ ಹಾಕಿ, ಮುಚ್ಚಿಟ್ಟಿದ್ದ. ಅವಲಕ್ಕಿ ಒಗ್ಗರಣೆ ಆರಿ ತಣ್ಣಗಾಗಿತ್ತು. ಪ್ಲಾಸ್ಕಿನಲ್ಲಿದ್ದ ಬಿಸಿ ಕಾಫಿಯ ಜೊತೆ ತಿಂಡಿಯನ್ನು ನುಂಗಿದ.

ಆಗ ತಾನೇ ಹೊರ ಹೋಗಿದ್ದ ರಂಗನಾಥ, ಹತ್ತು ಹದಿನೈದು ನಿಮಿಷಗಳಲ್ಲೇ ವಾಪಸ್ಸಾದ. ಮುಖದ ಕಳೆ ಇಳಿದು ಹೋಗಿತ್ತು ಮನೋಜನಿಗೆ ಗಾಭರಿಯಾಯಿತು. ಇಷ್ಟು ವರ್ಷಗಳಲ್ಲಿ, ಇಷ್ಟೊಂದು ಆಯಾಸಗೊಂಡ ವನಂತೆ, ಮಾವನನ್ನು ಎಂದೂ ಕಂಡಂತೆ ಜ್ಞಾಪಕವಿಲ್ಲ.

"ಏನಾಯ್ತು? ಏನಾಯ್ತು ಮಾವ?" ಗಾಭರಿಯಿಂದ ಕೇಳಿದ.

"ಏನಿಲ್ಲ ಕಣೋ. ನೀನು ಸುಮ್ಮನೇ ಹೋಗು" ಗದರಿಸಿದ.

"ಏನೋ ಆಗಿದೆ. ನಿನ್ನ ಮುಖವೇ ಹೇಳ್ತಿದೆ"

"ನಂಗೆ ಒಂದು ಲೋಟ ನೀರು ತಂದು ಕೊಡು. ನನ್ನ ಪಾಡಿಗೆ ನನ್ನನ್ನು ಬಿಟ್ಟು ಬಿಡು." ಮನೋಜ ತಂದು ಕೊಟ್ಟ ನೀರನ್ನು ರಂಗನಾಥ ಒಂದೇ ಗುಟುಕಿಗೆ ಕುಡಿದ. ಮತ್ತೆ ಮನೋಜ ಕೇಳಿದ.

"ಏನಾದ್ರೂ ಆಯಾಸ ಆಗಿದೆಯಾ? ಬಿ.ಪಿ. ಚೆಕ್ ಮಾಡ್ಲಾ?"

ನೀರು ಕುಡಿದು ಹೊಟ್ಟೆ ತಣ್ಣಗಾಗಿತ್ತು. ಮನೋಜನ ಆತಂಕ ಕಂಡು ಮನಸ್ಸು ಕರಗಿತು.

"ಬಿ.ಪಿ. ಗಿ.ಪಿ. ಏನಿಲ್ಲ. ಯಾಕೋ ಮನಸ್ಸಿಗೆ ಬೇಜಾರಾಯ್ತು."

"ಹೊಗುವಾಗ ಚೆನ್ನಾಗಿದ್ದೆ. ಅಂಥಾದ್ದೇನಾಯ್ತು ಅಂತ ಕೇಳ ಬಹುದಾ?"

"ಟ್ಯೂಷನ್‌ಗೆ ಅಂತ ಒಂದು ಮನೆಗೆ ಹೋಗಿದ್ದೆನಲ್ಲ. ..ಆ ಮನೇಲಿ ಒಂದು ಚಿಕ್ಕಮಗುವಿಗೆ ಪೋಲಿಯೋ ಅಟ್ಯಾಕ್ ಆಗಿ. ಒಂದು ಕಾಲಿನಲ್ಲಿ ಬಲವಿಲ್ಲ. ನೋಡಿ ಮನಸ್ಸು ಕಲಕಿ ಹೋಯಿತು."

"ಅಷ್ಟೇನಾ? ನಾನು ಏನೋ ಅಂತಿದ್ದೆ. ಇಂಥ ಎಷ್ಟೋ ಕೇಸುಗಳನ್ನು ನಾವು ಆಸ್ಪತ್ರೆಯಲ್ಲಿ ದಿನಾ ಕಾಣ್ತೇವಿ."

"ನೀನು ಕಾಣುವುದಕ್ಕೂ ನಾನು ನೋಡುವುದಕ್ಕೂ ವ್ಯತ್ಯಾಸವಿದೆ. ನಿನಗದು ಅರ್ಥವಾಗುಲ್ಲ ಸುಮ್ಮನಿರು"

ಮನೋಜ ಸುಮ್ಮನಾದ. ಮಾವನ ಮನಸ್ಸಿಗೆ ಏನೋ ನೋವಾಗಿದೆ. ತಾನು ಮತ್ತೆ ಮತ್ತೆ ಕೆದಕಬಾರದೆಂದುಕೊಂಡ.

ತಲೆಯ ಹಿಂಬಾಗಕ್ಕೆ, ಎರಡೂ ಕೈಗಳನ್ನು ಜೋಡಿಸಿಟ್ಟುಕೊಂಡು. ಈಸಿ ಚೇರ್‌ನಲ್ಲಿ ಕುಳಿತಿದ್ದ ರಂಗನಾಥ, ಹಾಗೆ ಯೋಚಿಸುತ್ತಾ ಕಣ್ಣುಗಳನ್ನು ಮುಚ್ಚಿಕೊಂಡ. ಮುಚ್ಚಿದ ಕಣ್ಣುಗಳ ಪರದೆಯ ಮೇಲೆ ಏನೇನೋ ನೆನಪುಗಳು. ಈ ಇಪ್ಪತ್ತು ವರ್ಷಗಳಲ್ಲಿ ಆಗಾಗ್ಗೆ ನೆನಪಾಗುತ್ತಿದ್ದ. ಅವನ ಹಿಂದಿನ ಜೀವನದ ಚಿತ್ರಗಳೇ ಅವನನ್ನು ಚಿಂತೆಗೀಡು ಮಾಡುತ್ತಿದ್ದವು. ಅಂಥಾದ್ದರಲ್ಲಿ, ಅದರ ಜೊತೆಗೆ, ಇವತ್ತೂ ನೋಡಿದ ಆ ಹುಡುಗಿಯ ಕಾಲಿನ ಕಾರಣವಾಗಿ, ಅವನ ಚಿತ್ತ ಕಲಕಿ ಹೋಯಿತು. ಆ ಹುಡುಗಿಗೆ ಹಾಗೆ ಆಗಿದೆ ಎಂಬ ಖೇದಕ್ಕಿಂತ, ನಿರ್ಮಲೆಯ ನೆನಪು...ನಿರ್ಮಲೆಗೆ ಹುಟ್ಟಿರಬಹುದಾದ ಮಗುವಿನ ನೆನಪು..ಮಗು ಹೆಣ್ಣೋ ಗಂಡೋ...ಅದು ಕೂಡಾ ತಿಳಿದಿಲ್ಲ.

ಇದೇ ಊರಿಗೆ ವಾಪಸ್ಸು ಬಂದರೂ, ನನಗೆ ಅವರುಗಳ ವಿಚಾರ ತಿಳಿಯುವುದಿಲ್ಲ. ನಿರ್ಮಲೆಯನ್ನು ಹುಡುಕಿಕೊಂಡು ಹೋಗಿ ಕಂಡು ಮಾತನಾಡುವ ಧೈರ್ಯವೇ ಇರಲಿಲ್ಲ. ಅವಳ ಭಾಗ್ಯಕ್ಕೆ ಎಂದೋ ಸತ್ತು ಹೋದ ನಾನು, ಈಗ ಎದ್ದು ಹೋಗಿ ಅವಳೆದುರಿಗೆ ನಿಂತರೆ ನಂಬುವಳೆ?... ಅಥವಾ ನಾನು ಬದುಕಿದ್ದ. ಬೇಕಾಗಿಯೇ ನಿನ್ನಿಂದ ದೂರ ಹೋದೆ ಅಂತ ಅಂದರೆ ನನ್ನ ಮಾತನ್ನು ಒಪ್ಪುವಳೇ? ಈಗ ಮತ್ತೇಕೆ ಬಂದಿರಿ ಎಂದು ಹಂಗಿಸದೇ ಇರುತ್ತಾಳೆಯೇ? ಅಥವಾ ನೀವ್ಯಾರೋ ನನಗೆ ತಿಳಿಯದು, ಎಂದು ನಿರಾಕರಿಸಿಬಿಟ್ಟರೇ...ಈ ಬಗೆಯ ಆಲೋಚನೆಗಳಿಂದ ಅವನು ನಿರ್ಮಲೆಯ. ಬಗ್ಗೆ ತಿಳಿದುಕೊಳ್ಳುವುದಕ್ಕಾಗಲೀ ಅವಳನ್ನು ಕಾಣುವುದ ಕ್ಕಾಗಲೀ ಮುಂದಾಗಲಿಲ್ಲ.

ಆದರೆ....? ಅವಳನ್ನು ಮರೆಯಲೂ ಆಗಿರಲಿಲ್ಲ ಏನಾದರೊಂದು ನೆಪದಲ್ಲಿ ಹಿಂದಿನ ದಿನಗಳು ನೆನಪಿಗೆ ಬಂದು ಅವನನ್ನು ನೋಯಿಸು ತ್ತಿದ್ದವು. ತಾನು ಮಾಡಿದ್ದು ತಪ್ಪಲ್ಲ ಎಂಬ ಭಾವನೆ ಅವನಲ್ಲಿದ್ದರೂ. ಅವಳು ಹಾಗೆ ಭಾವಿಸಿರ'ಲಾರಳು. ಅವಳ ಭಾಗಕ್ಕೆ ನಾನು ತಪ್ಪಿತಸ್ಥನೇ... ಎಂದೂ ಸಹ ಅನ್ನಿಸುತ್ತಿತ್ತು. ನಿರ್ಮಲ ಹೇಗಿದ್ದಾಳೆ...? ಮಗು ಎಂತಹದೋ, ಹೇಗಿದೆಯೋ? ನಿರ್ಮಲ ಈಗ ಎಲ್ಲಿರಬಹುದು? ನನಗಾಗಿ ದುಃಖಿಸಿದ್ದಾಳೋ ಇಲ್ಲವೊ ಹಣಕ್ಕೇನೂ ಕೊರತೆ ಇರಲಿಲ್ಲ. ಆದರೆ ಮಗುವನ್ನು ಒಬ್ಬಳೇ ಹೇಗೆ ಬೆಳೆಸಿದಳೋ..? ಈಗ ಸುಮಾರು ಇಪ್ಪತ್ತು ವರ್ಷದ ಯುವಕನೋ ಯುವತಿಯೋ. ಆಗಿರಬಹುದು. ನೋಡಲು ಹೇಗಿರಬಹುದು...ನನ್ನ ಹಾಗೋ...ಅವಳ ಹಾಗೋ...ಹೆಣ್ಣು ಹುಡುಗಿ ಯಾಗಿದ್ದು ನಿರ್ಮಲೆಯಂತಿದ್ದರೆ? ಗಂಡು ಹುಡುಗನಾಗಿದ್ದು ನನ್ನಂತೆ ಇದ್ದರೆ...? ಹೇಗೆ ಇರಲಿ ನಿರ್ಮಲೆಯ ಹಾಗೆ ಸ್ವಾರ್ಥಿ, ಹಾಗೂ ನನ್ನಂತಹ ದುರಾದೃಷ್ಟವಂತ ಮಾತ್ರ ಆಗಬಾರದು. ಎಲ್ಲಾದರೂ ಸರಿ, ಹೇಗಿದ್ದರೂ ಸರಿ, ಸುಖವಾಗಿರಬೇಕು ಆ ಮಗು.

ತಂದೆ! ಕಾಣದ ತಂದೆಯ ಬಗ್ಗೆ ಆ ಮಗುವಿನ ಮನಸ್ಸಿನ ಮೇಲೆ ಏನು ಪರಿಣಾಮವನ್ನುಂಟು ಮಾಡಿರಬಹುದು? ಹುಟ್ಟಿದಾಗಿನಿಂದ ತಂದೆಯ ಪ್ರೀತಿಯನ್ನೇ ಕಾಣದ ಆ ಮಗುವಿಗೆ, ತಂದೆ ಎಂದರೆ ಏನು ಎಂಬ ಭಾವನೆಯೇ ಇರಲಾರದು. ಏನೇನಾಗಿ ಹೋಯಿತು ನನ್ನ ಜೀವನದಲ್ಲಿ, ಅವನ ಹೃದಯ ಅತ್ತಿತ್ತು. ಇಪ್ಪತ್ತು ವರ್ಷಗಳ ಹಿಂದೆ ತಾನು ಬುದ್ಧಿವಂತನಂತೆ,ಹೆಂಡತಿಯನ್ನು ಹಿಂದೆ ಬಿಟ್ಟು ಮುಂದೆ ಮುಂದೆ ಬಂದಿದ್ದ. ಎಷ್ಟೇ ಸಲ ಮನ ಮಿಡುಕಿದರೂ, ಹಿಂದಕ್ಕೆ ಹೋಗಿ ತನ್ನ ತನವನ್ನು ಕಳೆದುಕೊಳ್ಳುವ ಇಚ್ಛೆ ಇರಲಿಲ್ಲ. ತಾನು ಮಾಡಿದ್ದು ಸರಿ ಎಂದು ತನಗೆ ತಾನೇ

ಸಮಾಧಾನ ಮಾಡಿಕೊಳ್ಳುತ್ತಿದ್ದ. ಒಂದು ಅಪೂರ್ವ ಸಾಧನೆಯನ್ನು ಪೂರೈಸುತ್ತಿರುವ ನೆಮ್ಮದಿ ನನಗಿದೆ. ತಾನು ಅಂದು ಮಾಡಿದ ತ್ಯಾಗ, ತೆಗೆದುಕೊಂಡ ನಿರ್ಧಾರ, ಸಾರ್ಥಕಗೊಳ್ಳುವ ಹಂತದಲ್ಲಿದೆ. ಇನ್ನೆರಡು ವರ್ಷಗಳು ಕಳೆದರೆ, ಮನೋಜನ ಓದು ಒಂದು ಹಂತವನ್ನು ತಲಪುತ್ತದೆ. ಅಲ್ಲಿಗೆ ನನ್ನ ಜವಾಬ್ದಾರಿ ಕಳೆದಂತೆ... ಅವನನ್ನೂ ಈ ಮಟ್ಟಕ್ಕೆ ತರಲು ತಾನು ಪಟ್ಟ ಬವಣೆಗಳೆಷ್ಟು ಎಂದು ನೆನೆಸಿಕೊಂಡಾಗ, ತಾನು ಮಾಡಿದ್ದು ಒಂದು ಮಹತ್ಕಾರ್ಯವೆಂದೇ ಅನಿಸುತ್ತಿತ್ತು. ವಚನ ಭ್ರಷ್ಟನಾಗಲಿಲ್ಲವೆಂದು ಹೆಮ್ಮೆ ಪಟ್ಟುಕೊಳ್ಳುತ್ತಿದ್ದ.

ಆ ದಿನ... ಗೋಕರ್ಣದಲ್ಲಿ ಏನೋ ಒಂದು ನಿರ್ಧಾರವನ್ನು ತೆಗೆದು ಕೊಂಡು, ಬಸ್ಸು ಹತ್ತಿದವನಿಗೆ, ಕಾರವಾರದಲ್ಲಿ ಬಸ್ಸಿನಿಂದ ಇಳಿದಾಗ, ಮನಸ್ಸು ಒಂದು ಸ್ಥಿಮಿತಕ್ಕೆ ಬಂದಿತ್ತು. ತಾನು ಮಾಡುತ್ತಿರುವುದು ಸರಿ, ಮನೋಜನ ಹಿತದಷ್ಟಿಯಿಂದ ಎಂದು ಮನಸ್ಸು ಬಲಗೊಂಡಿತ್ತು.

ನಾಲ್ಕು ದಿನ ನಾನು ವಾಪಸ್ಸು ಬರಲಿಲ್ಲವೆಂದು ಪೇಚಾಡಿಬಹುದು. ಸತ್ಯನೊಡನೆ ತಾನು ಬರಲಿಲ್ಲವೆಂದು ವಿಚಾರಿಸಿರಬಹುದು... ಪೋಲಿಸ್ ಕಂಪ್ಲೆಂಟ್ ಕೊಟ್ಟಿರಬಹುದು. ನನ್ನ ಬಗ್ಗೆ ಏನೂ ತಿಳಿಯದಿದ್ದಾಗ... ಹುಡುಕಿಸಿರಬಹುದು ಅಥವಾ ಏನೂ ಮಾಡದೇ ಸುಮ್ಮನಾಗಿಯೂ ಇರಬಹುದು. ಅವಳೇನೂ ಮಾಡಿದಳೆಂದು ನನಗೆ ತಿಳಿಯಲೇ ಇಲ್ಲ... ನಾನೇ ಕಾಗದವನ್ನು ಬರೆದು ವಿಚಾರಗಳನ್ನು ತಿಳಿಸಬಹುದಾಗಿತ್ತೇನೋ... ಅದರೆ ಪರಿಣಾಮ ಏನಾಗುತ್ತಿತ್ತೋ.. ಆದರೆ ಯಾಕೋ ಏನೋ ಹಾಗೆ ಮಾಡಬೇಕೆನಿಸಲಿಲ್ಲ. ಸತ್ಯನಿಗೆ ಕಾಗದ ಬರೆದಿದ್ದರೇ...ಅವನು ನನಗೆ ಖಂಡಿತಾ ತಿಳುವಳಿಕೆ ಹೇಳುತ್ತಿದ್ದ. ಆದರೆ ಮತ್ತೆ ನಾವು ಒಂದಾಗಿ ಸಂಸಾರ ಮಾಡುವ ಆಸೆ ನನಗಿರಲಿಲ್ಲ. ನನ್ನ ಬಗ್ಗೆ ಸತ್ಯ ಏನೆಂದುಕೊಂಡಿರಬಹುದು? ಅಕ್ಕ ಪಕ್ಕದವರು ಏನೆಂದುಕೊಂಡಿರಬಹುದು! ನಿರ್ಮಲೆಯ ತಂದೆ ತಾಯಿಗೆ ಏನನ್ನಿಸಿರಬಹುದು? ನಿರ್ಮಲ ಮಗುವಿಗೆ ನನ್ನ ಬಗ್ಗೆ ಏನು ಹೇಳಿರಬಹುದು ಏನೇ ಇರಲಿ ನನ್ನ ತನಕ ಯಾವ ವಿಚಾರ ಬರಲಿಲ್ಲ. ನನಗಾಗಿ ಯಾರು ಹುಡುಕಿಸಿದಂತೆಯೂ ನನಗೆ ತಿಳಿಯಲಿಲ್ಲ. ಸಂಶಯ ದಿಂದ ಯಾರೂ ಎಂದೂ ನನ್ನನ್ನು ಮಾತನಾಡಿಸಿದಂತಿಲ್ಲ.

ಅನಾಥ ಮಗುವನ್ನೂ ಒಂದು ಕಾರಣವನ್ನಾಗಿಟ್ಟುಕೊಂಡು ತಾನಾಗಿಯೇ ಕೆಲವು ಅನುಕೂಲಸ್ಥ ಮನೆಯವರ ಪರಿಚಯ ಮಾಡಿ ಕೊಂಡು, ನಾಲ್ಕಾರು ಹುಡುಗರಿಗೆ ಪಾಠ ಹೇಳಿಕೊಟ್ಟು ಮನೋಜನನ್ನು ಬೆಳೆಸಿದ್ದ. ಚಿಕ್ಕಮಗುವನ್ನು ಸಾಕಿ ಸಲಹುವುದು ಕಠಿಣವೆನಿಸಿದರೂ, ನನ್ನ ಜವಾಬ್ದಾರಿ ನನ್ನನ್ನು ಮುಂದೆ ಮುಂದೆ ತಳ್ಳುತ್ತಿತ್ತು.

ಅವರಿವರನ್ನು ಬೇಡಿಕೊಂಡು, ಒಂದು ಜೂನಿಯರ್ ಕಾಲೇಜಿನಲ್ಲಿ ಅಕೌಂಟೆಂಟ್ ಆಗಿ ಕೆಲಸಕ್ಕೆ ಸೇರಿಕೊಂಡ. ಚಿಕ್ಕದೊಂದು ಮನೆಯನ್ನು ಬಾಡಿಗೆಗೆ ಹಿಡಿದ. ಟ್ಯೂಷನ್‌ಗೆ ಕೆಲವು ಹುಡುಗರನ್ನು ಸೇರಿಸಿಕೊಂಡ. ತಾಯಿ ಇಲ್ಲದ ಮಗುವೆಂದು ಮುದ್ದಾಗಿದ್ದ ಮನೋಜನನ್ನು ಅಕ್ಕಪಕ್ಕದವರು, ಚೆನ್ನಾಗಿ ನೋಡಿ ಕೊಳ್ಳುತ್ತಿದ್ದರು. ಎಲ್ಲರೂ ಮನೋಜನ ತಂದೆ ರಂಗನಾಥ, ಅವನ ಹೆಂಡತಿ ಸತ್ತು ಹೋಗಿದಾಳೆ ಎಂದೇ ತಿಳಿದಿದ್ದರು.

ಮನೋಜ ತುಂಬಾ ಒಳ್ಳೆಯ ಮಗು. ಹಠದ ಸ್ವಭಾವವಿಲ್ಲ. ನಗುನಗುತ್ತಾ

ಎಲ್ಲರ ಹತ್ತಿರ ಬೆರೆಯುತ್ತಿದ್ದ. ಆದ್ದರಿಂದ ಅವನಿಗೆ ಮನೋಜನನ್ನು ಬೆಳೆಸುವುದು ಕಠಿಣವೆನಿಸಲಿಲ್ಲ. ಆ ರಸ್ತೆಯ ಚಿಕ್ಕ ಚಿಕ್ಕ ಮಕ್ಕಳ ಜೊತೆ ಮನೋಜನೂ ಸ್ಕೂಲಿಗೆ ಹೋಗಿ ಬರಲು ಪ್ರಾರಂಭಿಸಿದ. ಆ ದಿನ ರಂಗನಾಥನಿಗೆ ಹೆಮ್ಮೆಯೋ ಹೆಮ್ಮೆ. ಸಾಧನೆಯ ಮೆಟ್ಟಿಲುಗಳನ್ನು ಹತ್ತಲಾರಂಭಿಸಿದ್ದ.

ತನ್ನ ಸಂಪಾದನೆಯ ಹಣವನ್ನು ಮನೋಜನ ಓದಿಗಾಗಿ ಮೀಸಲಿಟ್ಟು. ಇತಿಮಿತಿಯಲ್ಲಿ ಖರ್ಚನ್ನು ತೂಗಿಸಿ, ರಂಗನಾಥ ಎಲ್ಲಾ ತಾನೇ ನೋಡಿಕೊಂಡು ನಿಭಾಯಿಸುತ್ತಿದ್ದ.

ದಿನಗಳು ಸರಿದು. ವರ್ಷಗಳು ಕಳೆದವು. ಮನೋಜನೀಗ, ಎಸ್. ಎಸ್.ಎಲ್.ಸಿ. ಯನ್ನು ಮುಗಿಸಿ. ಪಿ.ಯು.ಸಿ.ಗೆ ಸೇರಿದ್ದ. ಓದಿನಲ್ಲಿ ಮುಂದಿದ್ದ. ಶ್ರಮವಹಿಸಿ ಅಭ್ಯಾಸ ಮಾಡುತ್ತಿದ್ದ. ಅವನು ಏನು ಓದುತ್ತೇ ನೆಂದರೆ, ಅದನ್ನು ಎಷ್ಟು ಕಷ್ಟವಾದರೂ ಸರಿ. ಅದನ್ನು ಓದಿಸಬೇಕೆಂಬ ಹಂಬಲ ಇವನಿಗೆ. ಒಂದು ದಿನ ಮನೋಜನ್ನ ಕೇಳಿದ್ದ.

"ಮುಂದೆ ಯಾವ ಕೋರ್ಸ್‌ಗೆ ಸೇರಬೇಕು ಅಂತಿದೀಯ? ನಿನಗೆ ಯಾವುದು ಇಷ್ಟವೋ ಯಾವುದು ಸರಿ ಅಂತ ಅನ್ನಿಸುತ್ತೋ ಅದಕ್ಕೇ ಸೇರಿಕೋ. ನಿನಗೆ ನನ್ನ ಬೆಂಬಲವಿದೆ."

"ನನಗೆ ಡಾಕ್ಟರಾಗಬೇಕು ಅಂತ ಆಸೆ. ಎಂ.ಬಿ. ಬಿ. ಎಸ್. ಸೇರೋಣ ಅಂತ. ನಿನಗೇನನ್ನಿಸುತ್ತೆ?" ಮಾವನ ಸಲಹೆ ಕೇಳಿದ.

ರಂಗನಾಥನಿಗೆ ಸಂತೋಷವಾಯಿತು. ಮನದ ಒಂದು ಮೂಲೆಯಲ್ಲಿ ಆ ಆಸೆ ಅವನಲ್ಲೂ ಇತ್ತು.

"ತುಂಬಾ ಕಷ್ಟ ಪಡಬೇಕಾಗುತ್ತೆ...ಯೋಚಿಸಿ ನೋಡು.." ಸುಮ್ಮನೇ ಹೆದರಿಸುವವನಂತೆ ಹೇಳಿದ್ದ.

"ಯಾವುದಕ್ಕೇ ಆದರೂ, ಕಷ್ಟಪಡಲೇ ಬೇಕಲ್ಲವಾ ಮಾವಾ? ಆದರೆ ನನ್ನ ಜೊತೆಗೆ ನಿನಗೂ ಪರಿಶ್ರಮವಾಗಬಹುದು. ನಿನಗೆ ತೊಂದರೆ ಆಗುವುದಾದರೆ ಹೇಳಿಬಿಡು."

"ತೊಂದರೆ ಏನಿಲ್ಲ...ನಿನಗೋಸ್ಕರ ಏನೇನು ತೊಂದರೆ ಬಂದರೂ ಅದನ್ನು ಎದುರಿಸುವ, ಸಹಿಸುವ ಶಕ್ತಿ ನನಗಿದೆ. ನಿನಗೇನೂ ಆಸೆಯೋ ಅದೇ ಓದನ್ನೂ ಆರಿಸಿಕೋ. ನಿನಗ್ಯಾವ ಚಿಂತೆಯೂ ಬೇಡ" ಧೈರ್ಯ ಹೇಳಿದ್ದ.

ಮನೋಜನಿಗೆ ಹಾಗೆ ಹೇಳಿದ್ದರೂ, ಅವನಿಗೆ ಸ್ವಲ್ಪ ಚಿಂತೆ ಆಗಿತ್ತೂ. ಒಬ್ಬ ಡಾಕ್ಟರಾಗಲು, ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡಬೇಕಾಗ ಬಹುದೆಂದು ಊಹಿಸಿದ್ದ ಇದುವರೆಗೂ ಮನೋಜನ ಓದಿಗೆಂದು ಹೆಚ್ಚಿಗೆ ಖರ್ಚಾಗಿರಲಿಲ್ಲ. ಆವನ ಸಂಪಾದನೆಯಲ್ಲಿ ಹೆಚ್ಚಿಗೆ ಉಳಿತಾಯಮಾಡಲು ಸಾಧ್ಯವಾಗಿರಲಿಲ್ಲ. ಅಡವಿಟ್ಟು ಸಾಲ ಮಾಡಲು ಅವನಲ್ಲಿ ಯಾವ ಆಸ್ತಿಯೂ ಇರಲಿಲ್ಲ. ಏನಾದರೂ ಒಂದು ಉಪಾಯವನ್ನು ಕಂಡು ಹಿಡಿಯಲೇ ಬೇಕಾಗಿತ್ತು. ಇದ್ದಕ್ಕಿದ್ದಂತೆ ಒಂದು ಆಲೋಚನೆ ಮೂಡಿ ಬಂತು. ಒಂದುಗಳಿಗೆ ಮನಸ್ಸು ಅದನ್ನು ತಳ್ಳಿ ಹಾಕಿದರೂ, ಅದೊಂದೇ ದಾರಿ ಮತ್ತೆ ಮತ್ತೆ ಕಂಡು ಬರುತ್ತಿತ್ತು... ಈಗ ಅದನ್ನು ತಳ್ಳಿ ಹಾಕಿದರೆ ನನಗೆ ಬೇರೆ ಮಾರ್ಗವಿಲ್ಲ. ನನಗಿನ್ಯಾವ ಅನುಕೂಲವೂ ಇಲ್ಲ. ಮನೋಜ ನಿಗೆ ನಿರಾಸೆಯಾಗುವುದು ನಿಶ್ಚಿತ. ಜೊತೆಗೆ ತನಗೂ ಕೂಡಾ... ಕಡೆಗೂ ಅಳೆದೂ ಸುರಿದೂ,

ಮೀನಾ ಮೇಷ ಎಣಿಸಿ ಎಣಿಸಿ, ಸ್ವಾಭಿಮಾನವನ್ನು ಬದಿಗೊತ್ತಿ ಆ ಉಪಾಯವನ್ನೇ ಕಾರ್ಯಗತಗೊಳಿಸುವುದೆಂದು ತೀರ್ಮಾನಿಸಿದ.

ಮೊದಲನೇ ವರ್ಷದ ಪರೀಕ್ಷೆ ಮುಗಿದು ರಜ ಬಂದಾಗ, ಒಂದು ದಿನ ಮನೋಜನೊಂದಿಗೆ ಹುಬ್ಬಳ್ಳಿಗೆ ಹೊರಟ. ಇಬ್ಬರೂ ಒಂದು ಹೋಟೆಲ್ಲನಲ್ಲಿಳಿದು ಕೊಂಡರು. ಮನೋಜನನ್ನು ರೂಮಿನಲ್ಲಿಯೇ ಬಿಟ್ಟು ತಾನೊಬ್ಬನೇ ದೇಸಾಯಿಗಳ ಮನೆಗೆ ಬಂದ. ಅಷ್ಟು ವರ್ಷಗಳಲ್ಲಿ ಆ ಊರಿನಲ್ಲಿ ಅನೇಕ ಬದಲಾವಣೆಗಳಾಗಿದ್ದರೂ ದೇಸಾಯಿಗಳ ಮನೆ ಮಾತ್ರ ಹಾಗೇ ಇತ್ತು. ಅನುಮಾನಿಸುತ್ತಾ. ಮುಜುಗರದಿಂದ ಕಾಲಿಂಗ್‌ಬೆಲ್ ಒತ್ತಿದ.

ಒಬ್ಬ ಹುಡುಗಿ ಬಂದು ಬಾಗಿಲನ್ನು ತೆಗೆದು ನೋಡಿದಳು.

ಹಿರಿಯ ದೇಸಾಯಿಯವರನ್ನು ಕಾಣಬೇಕಾಗಿತ್ತು. ಎಂದು ಹೇಳಿದ. ಹುಡುಗಿ ಒಳಗೆ ಹೋದಳು. ಮತ್ತೆ ತಕ್ಷಣವೇ ಬಂದವಳು.

"ಒಳಗೆ ಬಂದು ಕೂಡ್ರಿ. ಈಗ ಬರ್ತಾರೆ" ಎಂದು ಹೇಳಿ ಅವನನ್ನು ಒಳಕ್ಕೆ ಕರೆದಳು. ಮನೆಯ ಒಳಗೂ ಹೆಚ್ಚಿನ ಬದಲಾವಣೆಗಳು ಕಂಡು ಬರಲಿಲ್ಲ.

ಸ್ವಲ್ಪವೇ ಹೊತ್ತಿನೊಳಗೆ, ಹಿರಿಯ ದೇಸಾಯಿಗಳು ಬಂದರು. ಅವರನ್ನು ನೋಡಿದರೆ. ಅನಾರೋಗ್ಯದಿಂದ ಬಳಲುತ್ತಿರುವಂತೆ ಕಂಡು ಬಂದಿತು.

"ನಮಸ್ಕಾರ ದೆಸಾಯಿಯವರಿಗೆ" ಕೈ ಮುಗಿದು ನುಡಿದ.

"ನಮಸ್ಕಾರ...ಯಾರೂಂತ ಗೊತ್ತಾಗ್ಲಿಲ್ಲರೀ," ನುಡಿದರು ಅವರು.

"ನಾನು ರಂಗನಾಥ, ನಿಮ್ಮ ತಮ್ಮಂದಿರ ಭಾವಮೈದ..."ಹೇಳಿಕೊಂಡ.

"ತಮ್ಮನೇ ಇಲ್ಲ. ಇನ್ನು ಯಾವ ಭಾವಮೈದ?"

"ಹೌದು. ನಿಮ್ಮ ತಮ್ಮ ಇಲ್ಲ. ತಮ್ಮನ ಹೆಂಡತಿಯೂ ಇಲ್ಲ. ನಾನು ಅನೂರಾಧಳ ಅಣ್ಣ ರಂಗನಾಥ..." ಮತ್ತೊಮ್ಮೆ ಪರಿಚಯ ಹೇಳಿಕೊಂಡ.

"ಓ..ಹೌದೇನ್ರಪ್ಪಾ...ಗುರುತೇ ಸಿಕ್ಕಲಿಲ್ಲ. ಅದೇನು ಬಂದದ್ದು?"

ಈಗ ಅವರ ಧ್ವನಿ ಗಡುಸಾಗಿದೆಯೆನ್ನುವುದನ್ನು ರಂಗನಾಥ ಗಮನಿಸಿದ.

ನಿಮ್ಮ ಹತ್ತಿರ ಸ್ವಲ್ಪ ಮಾತಾಡಬೇಕಾಗಿತ್ತು. ನಿಧಾನವಾಗಿ ಹೇಳಿದ.

"ನನ್ನ ಹತ್ತಿರ ಏನು ಮಾತಿದೆಯಪ್ಪಾ...?"

"ಸ್ವಲ್ಪ ಪ್ರೈವೇಟಾಗಿ ಮಾತನಾಡಬೇಕು. ಈಗ ನೀವು ಬಿಡುವಾಗಿದೀರ?"

"ಇದೆ ನನಗೀಗ ಬಿಡುವೇ..ಏನು ಬೇಕಾದರೂ ಆಡು. ಇಲ್ಲಿ ಕೇಳಿಸಿಕೊಳ್ಳುವವರ್‍ಯಾರೂ ಇಲ್ಲ. ನನ್ನ ಹೆಂಡತಿಗೆ ಕಿವುಡು. ನನ್ನ ಇಬ್ಬರು ಹೆಣ್ಣು ಮಕ್ಕಳು ಸತ್ತು ಹೋದರು. ಇನ್ನು ಇಬ್ಬರು ಹೆಣ್ಣು ಮಕ್ಕಳಿದ್ದಾರೆ.. ಅವರಿಗಿನ್ನು ಮದುವೆ ಆಗಿಲ್ಲ" ತಾವಾಗಿಯೇ ತಮ್ಮ ಕಷ್ಟವನ್ನು ಹೇಳಿಕೊಂಡರು.

"ಅದೇನು? ನಿಮ್ಮ ಮನೆಯಲ್ಲಿ ಹೆಣ್ಣು ಮಕ್ಕಳು ಸಾಯುವುದು ಹೆಚ್ಚಲ್ವ? ಮದುವೆಯಾಗದೇ ಸತ್ತರೋ ಹೇಗೆ? ಇನ್ನಿಬ್ಬರಿಗೆ ಮದುವೆ ಆಗಿಲ್ಲ ಅಂತೀರಿ. ಅವರು ಬದುಕಿದ್ದೂ ಸತ್ಹಂಗೆ ಅಲ್ವಾ?"

"ಏನಪ್ಪಾ..ಏನೇನೋ ಆಡ್ತಿದಿ ನೀನು? ಅದೇನು ಮಾತೂಂತ...?" ಆತ ರೇಗಿದಂತೆ ನುಡಿದಾಗ, ರಂಗನಾಥ ನುಡಿದ.

"ಏನಿಲ್ಲ. ನಿಮ್ಮನೇಲಿ ನಡೆದ ವಿಚಾರಗಳನ್ನೇ ನಾನು ಹೇಳ್ತಿರೂದು. ನಿಮ್ಮ ಹೆಣ್ಣು ಮಕ್ಕಳು ಸತ್ತರು. ನಿಮ್ಮ ತಮ್ಮನಿಗೆ ಹುಟ್ಟಿದ ಹೆಣ್ಣುಮಕ್ಕಳು ಹುಟ್ಟಿದ ಕೂಡಲೇ ಸತ್ತವು. ಅದೇ ರೂಢಿ ನಿಮ್ಮಲ್ಲಿ ಅಲ್ವಾ? ಏಕೇಂತ?"

ಆತ ಹೆದರಿ ಎದ್ದು ನಿಂತರು.

"ಏನ್ರೀ..ಏನ್ಮಾತು ಆಡ್ತಿದೀರ್ರೀ ನೀವು. ಯಾವುದೋ ನೆಂಟಸ್ತಿಕೆ ಹುಡುಕಿ, ಹೇಳಿಕೊಂಡು ಬಂದು, ನಮ್ಮ ಮನೆ ವಿಚಾರ ಮಾತಾಡುಕ್ಕೆ ನಿಮಗೆಷ್ಟು ಧೈರ್ಯ?"

"ನನಗೇನು ಹೆದರಿಕೆ? ಇದ್ದ ವಿಚಾರ ಹೇಳಿದೆ. ಹೌದೋ ಅಲ್ವೋ?"

"ಇರಬಹುದು ನನ್ನ ತಮ್ಮನ ಸಂಸಾರವೇ ನೆಗೆದು ಬಿತ್ತು. ಈಗ ಮತ್ತೆ ಆ ಮಾತ್ಮಾಡಿ ಹೊಟ್ಟೆ ಯಾಕೆ ಉರಿಸ್ತೀರಿ?"

"ಹಾಗೇನಿಲ್ಲ. ನಿಮ್ಮ ತಮ್ಮನ ಮಗ ಬದುಕಿದ್ದಾನೆ. ನನ್ನ ಬಳಿಯೇ ಇದ್ದಾನೆ"

"ಅವನೆಂತಹ ಮಗಾರಿ? ಹುಟ್ತಾನೇ ಅಪ್ಪನ್ನ ಅಮ್ಮನ್ನ ತಿಂದ್ಕೊಂಡ. ಅವಿದ್ದರೂ ಒಂದೇ ಇಲ್ಲದಿದ್ದರೂ ಒಂದೇ.."

"ಹಾಗೆನ್ನ ಬೇಡಿ ದೇಸಾಯಿಗಳೇ. ಅದರಲ್ಲಿ ಅವನ ತಪ್ಪೇನು? ಅವನು ನಿಮ್ಮ ವಂಶದ ಕುಡಿ. ನಿಮ್ಮ ಮನೆಯ ಮಗ."

"ಏನಾಪ್ಪಾ...? ಹೊಸ ಹೊಸಾ ಮಾತಾಡ್ತಿದೀಯ...ಹತ್ತು ಹದಿನೈದು ವರ್ಷಗಳಿಂದ ಇಲ್ಲಿದ ಸುದ್ದಿ?"

" ಹೊಸ ಸುದ್ದಿ ಏನಲ್ಲ. ಮಗು ಹುಟ್ಟಿದಾಗ ಹೇಳಿ ಕಳಿಸಿದ್ದೆವು. ನಿಮಗಾಗ ಆ ಹುಡುಗ ಬೇಕಿರಲಿಲ್ಲ."

"ಈಗಲೂ ನಮಗೆ ಬೇಡ. ನಿಮ್ಮಲ್ಲೇ ಚೆನ್ನಾಗಿರಲಿ." ಆತ ಒತ್ತಿ ನುಡಿದಾಗ ಇವನು ವಕ್ರವಾಗಿ ನಕ್ಕ.

"ಈಗೇನು ನಿಮ್ಮ ಹತ್ತಿರ ಆ ಹುಡುಗನ್ನ ಬಿಡುಕ್ಕೆ ಬಂದಿಲ್ಲ. ಅವನು ನನ್ನ ಹತ್ತಿರಾನೇ ಇರ್ತಾನೆ. ಅವನನ್ನು ಚೆನ್ನಾಗಿ ಬೆಳೆಸಿದ್ದೀನಿ ನಿಮ್ಮ ಮನೆಯಲ್ಲಿದ್ದರೆ, ಅವನು ಹಾಗೆ ಬೆಳೀತಿದ್ನೋ ಇಲ್ಲವೋ...?"

"ಸರಿ. ಹಾಗಾದ್ರೆ ಇನ್ನೇನಾಗಬೇಕು, ಬರೀ ಇದಿಷ್ಟನ್ನೂ ಹೇಳುಕ್ಕೆ ನೀನು ಇಷ್ಟು ದೂರ ಬಂದಿಲ್ಲ ಹೌದೋ ಅಲ್ವೋ......?"

"ಹೌದು ಅವನೀಗ ಮೆಜಾರಿಟಿಗೆ ಬರ್ತಿದಾನೆ. ಅವನ ಭಾಗದ ಆಸ್ತಿ ಕೇಳೋಕೆ ಬಂದಿದೀನಿ"

"ಸರಿ ಸರಿ. ಬಂದು ಬಂದು ಕೇಳಿದೋರಿಗೆಲ್ಲಾ ಆಸ್ತಿ ಹಂಚೋಕೆ ಇದು ಧರ್ಮಛತ್ರವಲ್ಲ"

"ಇದು ಧರ್ಮಛತ್ರವಲ್ಲ. ನನಗೂ ಗೊತ್ತು. ಧರ್ಮವೇ ಇಲ್ಲದ ಮೇಲೆ ಇಲ್ಲಿ ನೆರಳೂ ಇಲ್ಲ," ಕುಹಕವಾಗಿ ನಗುತ್ತಾ ಹೇಳಿದ,

"ಒಗಟೊಗಟಾಗಿ ಮಾತಾಡಬೇಡ, ಸುಮ್ಮನೆ ಎದ್ದು ಹೋಗು" ಗದರಿದರು ಏಕವಚನದಲ್ಲಿ.

"ಹೋಗ್ತೀನಿ.... ನನ್ನ ಕೆಲಸ ಪೂರೈಸಿದ ಮೇಲೆ, ಅವನ ಭಾಗದ ಆಸ್ತಿ ಅವನಿಗೆ ಸಿಗಲೇ ಬೇಕು"

"ಸಿಗುಕ್ಕೆ ಅದೇನು ಕಡಲೆಪುರಿನಾ? ಕೊಡುಲ್ಲ ಅಂದ್ರೆ?"

"ಕೋರ್ಟಿದೆ ಕೇಸು ಹಾಕಿ ವಸೂಲು ಮಾಡ್ತೀವಿ."

"ಓ..ಹೋಗು ಏನು ಬೇಕಾದ್ರು ಮಾಡ್ಕೋ...ಏನು ಹೆದರಿಸ್ತೀಯಾ ಅವನು ನಮ್ಮ ಮನೆಯವನು ಅನ್ನುವುದಕ್ಕೆ ಏನು ಸಾಕ್ಷಿ ಇದೆ?"

"ಎವಿಡೆನ್ಸ್ ಇಲ್ಲದೇ ನಾನು ಇಲ್ಲಿಗೆ ಬಂದಿಲ್ಲ. ಕೋರ್ಟಿನಲ್ಲಿ ನಿಮ್ಮ ಮಾನ ಮರ್ಯಾದೆ ಎಲ್ಲಾ ಹರಾಜು ಹಾಕ್ತೀನಿ."

"ಹುಂ ಹೋಗ್ಹೋಗು..ಎಲ್ಲಾ ಕಂಡಿದ್ದೀನಿ"

"ಬರೀ ಬೆದರಿಕೆ ಅಂದ್ಕೋಬೇಡಿ ದೇಸಾಯಿಗಳೇ ....ಅನೂರಾಧ ಸಾಯಕ್ಕೆ ಮುಂಚೆ ಎಲ್ಲಾ ಹೇಳಿದ್ದಾಳೆ. ಸಾಕ್ಷಿ ಸಮೇತ ಎಲ್ಲಾ ಫೈಲ್ ಆಗಿದೆ. ನಮ್ಮ ಲಾಯರ್ ಹತ್ತಿರವಿದೆ. ಹುಡುಗ ಮೆಜಾರಿಟಿಗೆ ಬರಲಿ ಅಂತ ಸುಮ್ಮನಿದ್ದೆವು. ಅಷ್ಟೇ. ಅದರಲ್ಲಿ ನೀವು ಮಾಡಿಸಿದ ದುಷ್ಕಾರ್ಯ ಗಳನ್ನೆಲ್ಲ ಬರೆದಿಟ್ಟಿದ್ದಾಳೆ. ಸಾಕ್ಷಿಗಳ ಹೆಸರನ್ನು ಬರೆದಿಟ್ಟಿದ್ದಾಳೆ. ನಿಮ್ಮ ಮನೆಯಿಂದ ತಂದ ಒಂದು ಮುಖ್ಯವಾದ ವಸ್ತು ನಮ್ಮ ಮನೆ ಯಲ್ಲಿದೆ. ಅದನ್ನು ಕೋರ್ಟಿನಲ್ಲಿ ಪ್ರೊಡ್ಯೂಸ್ ಮಾಡ್ತಿವಿ."

" ಎಂಥದಪ್ಪಾ ಅದು?" ಹೆದರಿದ್ದರೂ ಮೇಲೆ ನಕ್ಕಿದ್ದರು.

"ಕೋರ್ಟಿನಲ್ಲಿ ನೋಡೋರಂತೆ." ಎನ್ನುತ್ತಾ ಎದ್ದ.

ಈಗ ದೇಸಾಯಿಗಳು ನಿಜವಾಗಿಯೂ ಹೆದರಿದರು. ಈಗಾಗಲೇ ಅವರು ಸಾಕಷ್ಟು ಆಸ್ತಿಯನ್ನು ಕಳೆದಿದ್ದರು. ಕೋರ್ಟು, ಕೇಸು ಅಂತ ಮನೇಲಿ ಓಡಾಡುವವರ್‍ಯಾರಿರಲಿಲ್ಲ. ಅಲ್ಲದೇ ಮನೆಯ ಗುಟ್ಟು ನಿಜವಾಗಿಯೂ ಹೆದರಿದ್ದರು.

"ಮೊದಲು ನಾನು ಆ ಹುಡುಗನ್ನ ನೋಡಬೇಕು. ಅವನು ನಮ್ಮ ಹುಡುಗನೇ ಎಂದು ನಂಬಿಕೆಯಾದ ಮೇಲೆ, ಈ ಆಸ್ತಿಗೆ ಯೋಗ್ಯನೋ ಇಲ್ಲವೋ ಯೋಚಿಸಬೇಕು. ಅಲ್ಲಿಯವರಿಗೂ ನಾನು ಏನೂ ಮಾತನಾಡು ವುದಿಲ್ಲ." ಅಗತ್ಯಕ್ಕಿಂತ ಹೆಚ್ಚಿನ ಜೋರಿನಲ್ಲಿ ಹೇಳಿದಾಗ, ರಂಗನಾಥನಿಗೆ ಅವರ ಮಾತಿನಿಂದ ನಗುವೂ ಬಂತು. ಕೋಪವೂ ಬಂತು.

ಆ ಹುಡುಗನ ಯೋಗ್ಯತೆ ಅಳೆಯುವಷ್ಟು ಯೋಗ್ಯತೆ ನಿಮಗೆಲ್ಲಿದೆ ಎಂದುಕೊಂಡ. ಆದರೂ ಸಹನೆ ತಂದುಕೊಂಡು.

"ಓ...ಅದಕ್ಕೇನು ಧಾರಾಳವಾಗಿ ನೋಡಿ. ಆದರೆ ಯಾವುದೇ ಕಾರಣಕ್ಕೂ. ನೀವು ಅವನ ದೊಡ್ಡಪ್ಪ ಅಂತ ಅವನಿಗೆ ತಿಳಿಯಕೂಡದು."

"ಎಷ್ಟು ಪೊಗರಯ್ಯಾ ನಿನಗೆ? ನಮ್ಮ ಆಸ್ತಿ ಮಾತ್ರ ಬೇಕು. ನಮ್ಮ ಸಂಬಂಧ ಮಾತ್ರ ಬೇಡವೋ...?"

"ಸಂಬಂಧ ಬೇಕಾಗುಕ್ಕೆ ಉಳಿದಿರುವ ನೆಂಟಸ್ಥಿಕೆ ಏನು? ಆಸ್ತಿ ನಿಮ್ಮದೆನಲ್ಲ... ಪಿತ್ರಾರ್ಜಿತ ...ಅವನ ತಾತಂದು"

"ಆದೋಡ್ನ ಮಾತೆಲ್ಲ ಬೇಡ. ಮೊದಲು ಆ ಹುಡುಗನ್ನ ನೋಡಿ ಮಾತಾಡಬೇಕು ನಾನು."

ಈಗ ರಂಗನಾಥ ಹೆದರಿದ. ಈತ ಮನೋಜನೊಡನೆ ಮಾತನಾಡಿ ಅವನ ಮನಸ್ಸನ್ನು ಕೆಡಿಸಿದರೆ ಅಂತೆನಿಸಿತು. ಬೇರೆ ಧ್ವನಿಯಲ್ಲಿ ಮಾತಾನಾಡಿದ.

ನೋಡಿ. ದೇಸಾಯಿಗಳೇ ಅವನು ಬಹಳ ಸೂಕ್ಷ್ಮ. ಇದುವರಿಗೂ ನನ್ನನ್ನೇ ತಂದೆ ಅಂತ ತಿಳಿದುಕೊಂಡಿದ್ದಾನೆ. ನಾನು ಒಬ್ಬಂಟಿಗನಾಗಿದ್ದು ಕೊಂಡು, ಅವನನ್ನು ಬೆಳೆಸಿ ಮುಂದೆತರುವ ಪ್ರಯತ್ನ ಮಾಡ್ತಿದ್ದೀನಿ. ಈಗ ಅವನು ಡಾಕ್ಟರಾಗಬೇಕು ಅಂತ ಆಸೆ ಪಡ್ತೀದ್ದಾನೆ. ಆದರೆ, ಓದಿಗಾಗಿ ಅಷ್ಟು ಖರ್ಚು ಮಾಡಲು ನನ್ನಲ್ಲಿ ಅನುಕೂಲವಿಲ್ಲ. ಈಗ ಹಿಂದಿನ ವಿಚಾರಗಳೆಲ್ಲ ತಿಳಿದರೆ ಅವನ ಮನಸ್ಸು ಕೆಡ ಬಹುದು. ಆಗ ನಾನಾಗಿಯೇ ಕೈಯಾರ ನಮ್ಮ ಹುಡುಗನ ಭವಿಷ್ಯವನ್ನು ಹಾಳು ಮಾಡಿದಂತಾಗುತ್ತದೆ. ನಿಮ್ಮ ಮನೆಯ ಹುಡುಗ ಡಾಕ್ಟರಾಗುತ್ತಾನೆ ಎಂದರೆ ಅದು ನಿಮಗೂ ಹೆಮ್ಮೆಯ ವಿಷಯವಲ್ಲವೇ ಯಾವುದೋ ಅನಾಥ ಹುಡುಗನ ವಿದ್ಯಾಭ್ಯಾಸಕ್ಕೆ ಧನ ಸಹಾಯ ಮಾಡ್ತಿದ್ದೀವಿ ಅಂತ ಅಂದುಕೊಂಡು ನೆರವು ನೀಡಿ. ಹುಡುಗ ಮುಂದೆ ಬರಲು ಅವಕಾಶ ಮಾಡಿಕೊಡಿ. ಇಲ್ಲದಿದ್ದರೆ ಹುಡುಗ ನಿರಾಸೆಯಿಂದ ನೊಂದು ಕೊಳ್ತಾನೆ..."

"ನಿಮ್ಮ ಹೆಸರೂ ಮುಂದೆ ಬರುತ್ತೆ. ನಿಮಗೆ ಕೀರ್ತಿಯೂ ಸಿಗುತ್ತೆ. ನಿಮ್ಮ ಹುಡುಗ ಮುಂದೆ ಬಂದ ಸಂತೋಷ, ಹೆಮ್ಮೆ ನಿಮಗೆ ಉಂಟಾಗುತ್ತೆ. ಬೇಕಾದರೆ ನಿಮ್ಮ ಹೆಸರನ್ನು ಪೇಪರ್‌ನಲ್ಲಿ  ಪೋಟೋ ಸಮೇತ ಹಾಕಿಸೋಣ."

"ನನ್ನ ತಂಗಿಯ ಮಗ ಎಂಬ ಪ್ರೀತಿಯಿಂದ ನಾನು ಇದುವರೆಗೂ ಬೆಳೆಸಿ ದೊಡ್ಡವನನ್ನಾಗಿ ಮಾಡಿದ್ದೇನೆ...ನಿಮ್ಮ ತಮ್ಮನ ಮಗನ ಓದಿಗಾಗಿ ನೀವು ಒಂದಿಷ್ಟು ದುಡ್ಡು ಖರ್ಚು ಮಾಡುಕ್ಕೆ ಸಿದ್ದವಾಗಿಲ್ವಾ?" ವ್ಯಂಗವಾಗಿ ಅವನು ಪ್ರಶ್ನಿಸಿದಾಗ ಆತ ನುಡಿದರು.

"ಏನಯ್ಯಾ ಎಷ್ಟೊಂದು ಮಾತಾಡ್ತೀಯ ನಿನಗೇ ಬೇಡವಾಗಿದ್ದರೆ ಆಗಲೇ ನಮ್ಮ ಮನೆ ಬಾಗಿಲಿಗೆ ಕರೆತಂದು ಬಿಸ್ಹಾಕ ಬೇಕಾಗಿತ್ತು...?"ಈ ಮಾತಿಗೆ ರಂಗನಾಥ ವಿಚಿತ್ರವಾಗಿ ನಕ್ಕ.

"ನನ್ನ ತಂಗಿಗೆ ಹುಟ್ಟಿದ ಎಲ್ಲಾ ಹೆಣ್ಣು ಮಕ್ಕಳ ಹತ್ಯೆ  ನಡೆದ ಈ ಮನೆಗೆ?...ಹಾಗೇನಾದರೂ ಮಾಡಿದ್ದರೆ, ಅವನೂ ಏನಾಗಿ ಹೋಗು ತ್ತಿದ್ದನೋ...?"

"ಸುಮ್ಮನಿದೀನಿ ಅಂತ ಏನೇನೋ ಒದರುತ್ತಿದೀಯ...ಎದ್ದು  ಹೋಗು" ಅಗತ್ಯಕ್ಕಿಂತ ಹೆಚ್ಚಿನ ಧ್ವನಿಯಲ್ಲಿ ಕಿರುಚಿದರು.

"ಹೋಗ್ತೀನಿ...ಹೋಗ್ತೀನಿ...ಒಂದೋ ಹಣದ ವ್ಯವಸ್ಥೆ ಮಾಡಿ. ಇಲ್ಲದಿದ್ದರೆ ಕೋರ್ಟಿಗೆ ಬರಲು ಸಿದ್ದರಾಗಿ" ಎನ್ನುತ್ತಾ ಹೊರಟ.

"ಎಷ್ಟು ಜೋರಯ್ಯಾ ನಿನಗೆ. ಕೇಳ್ತಾ ಇರೋದು ಸಹಾಯಾನ ಮಾತು ಮಾತ್ರ ಬೇಡವಾದದ್ದೇ .. ಪರವಾಗಿಲ್ವೆ....?"

"ಬೇಡವಾದದ್ದೇನಲ್ಲ. ಒಂದಕ್ಕೊಂದು ಸಂಬಂಧವಿದೆ. ಎಲ್ಲಾ ತಿಳಿದು ಕೊಂಡು ಸಿದ್ದನಾಗಿಯೇ ಬಂದಿದೀನಿ. ಕೊಡ್ತಾ ಇರುವುದು...ನಿಮ್ಮ ಅಪ್ಪನ ಹಣ, ಅವನ ಅಪ್ಪನ ಹಣ, ನಿಮ್ಮದಲ್ಲ ತಿಳೀತೇ? ಅವನನ್ನು ನೋಡ ಬೇಕು, ಮಾತಾಡಬೇಕು ಅಂತ ಇದ್ದರೆ, ನಾನು ಇಳಿದು ಕೊಂಡಿರುವ ಹೋಟೆಲ್ಲಿಗೆ ಬನ್ನಿ. ಆದರೆ ಆ ಹುಡುಗನ ಹತ್ತಿರ ಯದ್ವಾತದ್ವಾ ಏನೇನೋ ಮಾತನಾಡಬೇಡಿ. ಅವನಿಗೆ ಅಭಿಮಾನ ಜಾಸ್ತಿ. ಮೆಜಾರಿಟಿಗೆ ಬರಲಿರುವ ಹುಡುಗ, ಏನು ಮಾಡ್ತಾನೋ ಆಮೇಲೆ ಪಶ್ಚಾತ್ತಾಪ ಪಡುವಂತಾಗ ಬಾರದು" ಮತ್ತೊಮ್ಮೆ ಹೆದರಿಸುವ ಧ್ವನಿಯಲ್ಲಿ ನುಡಿದು ಹೋಟೆಲ್ಲಿನ

ವಿಳಾಸ ತಿಳಿಸಿ ಅಲ್ಲಿಂದ ನಡೆದ.

ರಾತ್ರಿ ಎಂಟು ಗಂಟೆಯ ಹೊತ್ತಿಗೆ ದೇಸಾಯಿಗಳು ಕಾರಿನಲ್ಲಿ ಹೋಟೆಲ್ಲಿಗೆ ಬಂದರು. ಅವರನ್ನು ಕಂಡೊಡನೆ ರಂಗನಾಥ ವಿನೀತನಾಗಿ ನಮಸ್ಕಾರ ಎಂದು ಕೈ ಮುಗಿದು ಮನೋಜನಿಗೆ ಪರಿಚಯ ಮಾಡಿಕೊಟ್ಟ.

"ಮನೂ, ಇವರು ಈ ಊರಿನ ಸಾಹುಕಾರರು. ನಮಗೆ ಬೇಕಾದವರು. ನಿನ್ನ ವಿದ್ಯಾಭ್ಯಾಸಕ್ಕೆ ಹಣ ಸಹಾಯ ಮಾಡಲು ಅವರಾಗಿಯೇ ಮುಂದೆ ಬಂದಿದಾರೆ. ದೇಸಾಯಿಗಳಿಗೆ ರಂಗನಾಥನ ಮಾತಿನ ಮೇಲೆ ಗಮನ ವಿರಲಿಲ್ಲ. ಅವರು ಬೆರಗಾಗಿ ಮನೋಜನನ್ನೇ ನೋಡುತ್ತಿದ್ದರು. ಅವನೂ ವಿನಯದಿಂದ ಕೈ ಮುಗಿದು ನಮಸ್ಕಾರ ಎಂದ.

ವಯಸ್ಸಿಗೆ ತಕ್ಕಂತೆ ಬೆಳೆದು ಸುಂದರವಾಗಿ ಕಂಗೊಳಿಸುತ್ತಿದ್ದವನ ಮುಖದ ಮೇಲೆ ವಿದ್ಯೆಯ ಮೆರಗು, ಶೋಭಿಸುತ್ತಿರುವುದನ್ನು ಗಮನಿಸಿ, ಅವರ ಹೃದಯ ಮೆಚ್ಚಿಕೆಯಿಂದ ತುಂಬಿ ಬಂತು. ಪರವಾಗಿಲ್ಲ ಚೆನ್ನಾಗಿ ಬೆಳೆಸಿದ್ದಾನೆ. ಶಿಕ್ಷಣ ಕೊಟ್ಟಿದ್ದಾನೆ ಎಂಬ ಅಭಿಮಾನದಿಂದ ಇಬ್ಬರನ್ನು ನೋಡಿದರು. ರಂಗನಾಥ ಹೆಮ್ಮೆಯಿಂದ ತಲೆ ಆಡಿಸಿ ಹುಬ್ಬೇರಿಸಿದ.

ದೇಸಾಯಿಗಳಿಗೆ, ಅವನನ್ನು ನೋಡಿ ತಮ್ಮ ತಮ್ಮನ ನೆನಪು ಬಂದಿರಬೇಕು. ಈಗಿನ ತಮ್ಮ ಮನೆಯ ಸ್ಥಿತಿಯ ನೆನಪಾಗಿರಬೇಕು. ಆಸ್ತಿ ಪಾಸ್ತಿ, ಮನೆ ಮಠ ಎಂದು ಜೀವಮಾನವೆಲ್ಲಾ ಒದ್ದಾಡಿದರೂ, ಅದನ್ನು ಮುಂದೆ ಬೆಳೆಸುವ ಗಂಡು ಮಕ್ಕಳು ತನಗಿಲ್ಲ. ಅಳಿಯಂದಿರು ಇನ್ನೂ ಬಂದಿಲ್ಲ. ಬಂದರೂ ಎಲ್ಲಾ ಮಾಡುವರೆಂಬ ನಂಬಿಕೆ ಏನು? ಈ ಹುಡುಗನಿಗೋಸ್ಕರ, ಅದೂ ನಮ್ಮ ಮನೆಯ ಹುಡುಗನ ವಿದ್ಯಾಭ್ಯಾಸ ಕ್ಕೋಸ್ಕರ ಹಣ ಕೊಟ್ಟರೆ ಸದ್ವಿನಿಯೋಗವಾಗುತ್ತದೆ. ನನ್ನ ಹೆಸರೂ ಮುಂದೆ ಬರುತ್ತದೆ ಎಂದುಕೊಂಡು, ಪ್ರೀತಿಯಿಂದ ಮನೋಜನ ಮೈದಡವಿ ಮಾತನಾಡಿಸಿದರು.

ರಂಗನಾಥ ಬೆರಗಾದ. ಅವನ ಮುಖ ನೋಡಿಯೇ, ಪರವಶರಾಗಿ ಬಿಟ್ಟಿದಾರಲ್ಲ. ಇವರ ಆಂತರ್ಯದಲ್ಲಿ ಏನಿದೆ ಎಂಬ ಸಂಶಯಬಂತು. ಆದಷ್ಟು ಬೇಗ ಅವರನ್ನು ಅಲ್ಲಿಂದ ಕಳಿಸಬೇಕು ಎಂದುಕೊಂಡ. ಮನೋಜ ಸಂಕೋಚದಿಂದ ನಿಂತಿದ್ದ. ರಂಗನಾಥನಿಗೆ ಏನನ್ನಿಸಿತೋ ಏನೋ ಇವರು ಹಿರಿಯರು, ಇವರ ಕಾಲಿಗೆ ನಮಸ್ಕಾರ ಮಾಡು ಎಂದ. ಮನೋಜ ಅಂತಯೇ ನಮಸ್ಕರಿಸಿದ. ದೇಸಾಯಿಗಳು ಹೃತ್ಪೂರ್ವಕವಾಗಿ ಆಶೀರ್ವದಿಸಿ ದರು. ಅವರು ಅಲ್ಲಿಂದ ಹೊರಟಾಗ ಅವರ ಜೊತೆಯಾಗಿ ಸ್ವಲ್ಪದೂರ ನಡೆದ ರಂಗನಾಥ.

"ಮಗು ಮುಖಾನ ನೋಡಿದರೆ ಅಯ್ಯೋ ಅನ್ನಿಸ್ತಿದೆ. ಆದರೆ ನಾನೇನು ಮಾಡಲಪ್ಪಾ.. ನನ್ನ ಹತ್ತಿರ ಹಣ ಇಲ್ಲವಲ್ಲ.?"

"ಮತ್ತೆ ಹೊಸ ವರಸೆ ಶುರುಮಾಡಬೇಡಿ ದೇಸಾಯಿಗಳೇ ನಿಮ್ಮ ಹತ್ತಿರ ಹಣ ಇಲ್ಲ. ನನ್ನ ಹತ್ತಿರ ಹಣ ಇಲ್ಲ. ಹಾಗಂದರೆ ಅವನ ವಿದ್ಯಾಭ್ಯಾಸ ಹೇಗೆ ಸಾಗಬೇಕು? ಅವನ ಭವಿಷ್ಯದ ಗತಿ ಏನು? ನಿಮ್ಮ ತಮ್ಮನ ಆತ್ಮಕ್ಕೆ ಶಾಂತಿ ಸಿಗಬೇಕಾದರೆ ನೀವು ಏನಾದರೂ ಮಾಡಲೇಬೇಕು. ಇಲ್ಲ, ಎನ್ನುವ ಮಾತು ಮಾತ್ರ ಆಡಬೇಡಿ"

"ಪ್ರಯತ್ನ ಪಡ್ತೀನಪ್ಪಾ..ಮೊದಲಿನ ಹಾಗೆ ಆಸ್ತಿ ಇಲ್ಲ. ಎಲ್ಲಾ ಕರಗಿ ಹೋಗಿದೆ.

ಹೆಣ್ಣು ಮಕ್ಕಳ ಮದುವೆಗೆ ಅಂತ ಒಂದಿಷ್ಟು ರೊಕ್ಕ ಇಟ್ಟಿದೀನಿ. ನಾನೇನು ಮಾಡಲಪ್ಪಾ?"

"ಹಾಗಾದರೆ ಅವನ ವಿದ್ಯಾಭ್ಯಾಸಕ್ಕೆ ಅಂತ ಖರ್ಚಿನ ಬಾಬ್ತು ವರ್ಷಕ್ಕೆ ಒಂದು ಲಕ್ಷ ಕೊಟ್ಟು ಬಿಡಿ. ಐದು ವರ್ಷದ ಕೋರ್ಸ್ ಅದು"

"ಅಂದ್ರೇ...ಐದು ಲಕ್ಷ ರೂಪಾಯಿ...?" ಹೌಹಾರಿದರು ಅವರು.

"ನಿಮ್ಮ ತಮ್ಮನ ಭಾಗದ ಆಸ್ತಿ. ಹತ್ತು ಹನ್ನೆರಡು ಲಕ್ಷಕ್ಕೂ ಮೀರುತ್ತೆ. ಅಂಥಾದ್ದರಲ್ಲಿ ಐದು ಲಕ್ಷಕ್ಕೆ ಹೀಗಾಡ್ತೀರಲ್ಲ"

"ಹೇಳಿದ್ನಲ್ಲ, ನಮ್ಮ ಕೈಕಟ್ಟಿಹೋಗಿದೆ. ಈಗ ಎಲ್ಲಾ ಮೊದಲಿನಂತಿಲ್ಲ."

"ಅನಾವಶ್ಯಕರವಾಗಿ ಚರ್ಚೆ ಮಾಡಬೇಡಿ. ಕೋರ್ಟು ಕಛೇರಿ ಹತ್ತಿದರೆ, ನಿಮಗೆ ಇನ್ನೂ ಖರ್ಚಾಗುತ್ತೆ ಗೊತ್ತಾ?"

"ಏನಪ್ಪಾ. ಬರೀ ಬೆದರಿಕೆಯ ಮಾತೇ ಆಡ್ತೀಯಲ್ಲ...ಮೂರು ಲಕ್ಷರೂಪಾಯಿ ಕೊಟ್ಟು ಬಿಡ್ತೀನಿ. ಏನಾದ್ರೂ ಮಾಡ್ಕೋ...ಕೋರ್ಟು ಲಾಯರ್ರು ಅಂದ್ರೆ ನಿನಗೂ ಸುಮ್ಮನಾಗುಲ್ಲ."

"ಅದಕ್ಕೇ ಹೇಳಿದ್ದು. ಲಾಯರ್ರಿಗೆ ಏಕೆ ಸುರೀಬೇಕು ಅಂತ.?"

"ನೀನು ಹೇಳೋದೂ ಸರಿ. ಹಣ ಯಾವಾಗ ಬೇಕಾಗಬಹುದು?"

"ಮುಂದಿನ ವರ್ಷ ಅಂತ ಹೇಳಿದರೆ, ಏನಾದರೂ ಎಡವಟ್ಟು ಆದೀತೆಂದಕೊಂಡು, ಈಗ ಸಧ್ಯಕ್ಕೆ ಬೇಕಾಗಿತ್ತು" ಅಂದ.

"ಹಾಗಾದರೆ ಸಾಯಂಕಾಲವೋ. ನಾಳೇನೋ ನಮ್ಮ ಮನೆಗೆ ಬಂದು ಬಿಡು. ಎಲ್ಲಾ ಮಾತನಾಡಿ ಇತ್ಯರ್ಥ ಮಡೋಣ."

ಅವರು ಒಪ್ಪಿಕೊಂಡರಲ್ಲ ಎಂದು ಸಮಾಧಾನವಾದರೂ, ಏನೋ ಅನುಮಾನ. ಹಣ ಕೊಟ್ಟು ಏನಾದರೂ ತೊಂದರೆಗೆ ಸಿಕ್ಕಿ ಹಾಕಿಸಿದರೆ....? ಅಥವಾ ಈಗ ಸ್ವಲ್ಪ ಹಣ ಕೊಟ್ಟು ಮುಂದೆ ಕೊಡದಿದ್ದರೇ...? ಪದೇ ಪದೇ ಈ ಮನುಷ್ಯನ್ನ ಯಾರು ಹೆದರಿಸುಕ್ಕೆ ಆಗುತ್ತೆ ಈತನ ಪ್ಲಾನ್ ಏನಿದೆಯೋ ಅಂತ ಅನ್ನಿಸಿದರೂ, ಒಂದು ಕಲ್ಲು ಎಸೆದಾಗಿದೆ. ಹಣ್ಣು ಬಿದ್ದರೆ ಸರಿ. ಬೀಳದಿದ್ದರೆ ಇನ್ನೊಂದು ಕಲ್ಲನ್ನು ಬೀಸಿದರೆ ಆಯಿತು ಎಂದುಕೊಂಡು ಸುಮ್ಮನಾದ.

ಮಾವನ ಹಣದ ಅನಾನುಕೂಲತೆ ಮನೋಜನಿಗೆ ತಿಳಿದಿತ್ತಾದ್ದರಿಂದ ಏನೂ ಮಾತನಾಡದೇ ಸುಮ್ಮನಾದ. ಆದರೆ ಹುಬ್ಬಳ್ಳಿಯ ಈ ಮನುಷ್ಯ ಮಾವನಿದೆ ಹೇಗೆ ಪರಿಚಯ ಎಂದು ಅರ್ಥವಾಗಲಿಲ್ಲ.

ರಂಗನಾಥ ಮತ್ತೆ ದೇಸಾಯಿಗಳ ಮನೆಗೆ ಹೋದಾಗ, ಅವರ ಮನೆ ಲಾಯರ್ರು ಸಹ ಹಾಜರಿದ್ದರು. ಲಾಯರ್ ಸಮಕ್ಷಮದಲ್ಲಿ, ಮೂರು ಲಕ್ಷರೂಪಾಯಿಗಳನ್ನು ರಂಗನಾಥನಿಗೆ ಕೊಡುವುದಾಗಿ ಬರೆದುಕೊಟ್ಟರು. ಆರು ಸಮಕಂತುಗಳಲ್ಲಿ ಮೂರು ಲಕ್ಷರೂಪಾಯಿಗಳು ಮನೋಜನ ಹೆಸರಿಗೆ ಸಂದಾಯವಾಗುವಂತೆ ಏರ್ಪಾಟು ಮಾಡಿದರು.

ರಂಗಲಾಥ ಅಷ್ಟಕ್ಕೇ ಸಮಾಧಾನ ಪಟ್ಟುಕೊಳ್ಳಬೇಕಾಯ್ತು. ಕೋರ್ಟು ಕಛೇರಿಯ ಸಹವಾಸ ಅವನಿಗೆ ಬೇಕಿರಲಿಲ್ಲ. ದೇಸಾಯಿಗಳನ್ನು ಹೆದರಿಸಿದ್ದ ಅಷ್ಟೇ. ಅವರಿಗೂ

ಅಷ್ಟೇ. ಮನೆತನದ ಮರ್ಯಾದೆ ಹೊರ ಬೀಳುವುದು ಇಷ್ಟವಿಲ್ಲದ ವಿಷಯ.

ಅಲ್ಲಿಗೆ ಎಲ್ಲಾ ಇತ್ಯರ್ಥವಾಗಿತ್ತು. ಮನೋಜನ ವಿದ್ಯಾಭ್ಯಾಸಕ್ಕೆ ಅಷ್ಟು ಹಣ ಸಾಕೇ ಸಾಕು ಎಂಬ ಖಚಿತ ನಿಲವು ರಂಗನಾಥನದು. ಮೊದಲ ಕಂತಿನ ಹಣ ಅರವತ್ತು ಸಾವಿರ ರೂಗಳನ್ನು ಸಂದಾಯ ಮಾಡಿಸಿಕೊಂಡೇ ಅಲ್ಲಿಂದ ಹೊರಟ. ಮನದಲ್ಲೇ ಅನುರಾಧಳ ಕ್ಷಮೆ ಕೋರಿದ.

ಮೊದಲು ಆ ಹಣದಲ್ಲಿ ಮನೋಜನಿಗೆ ಒಂದು ಸ್ಕೂಟರನ್ನು ತೆಗೆಸಿಕೊಟ್ಟ. ಕಾಲೇಜಿಗೆ ಹೋಗುವ ಹುಡುಗ. ಟ್ರಿಂ ಆಗಿ ಹೋಗಿ ಬರಲಿ ಅಂತ, ಐದಾರು ಸೆಟ್ ಒಳ್ಳೆಯ ಬಟ್ಟೆಗಳನ್ನು ಹೊಲಿಸಿಕೊಟ್ಟ. ಡ್ರ್ಯಾಫ್ಟ್ ಕಳಿಸಿ, ಸತ್ಯನ ಸಾಲವನ್ನು ತೀರಿಸಿದ.

ಎರಡನೇ ವರ್ಷದ ಪಿ.ಯು.ಸಿ. ಯ ಪರೀಕ್ಷೆಯಲ್ಲಿ ಫಸ್ಟ್ ಕ್ಲಾಸ್‌ನಲ್ಲಿ ಹೆಚ್ಚು ಅಂಕಗಳನ್ನು ಗಳಿಸಿ ಮನೋಜ ಪಾಸಾಗಿದ್ದ. ಅವನ ಇಚ್ಛೆಯಂತೆ ಮೆರಿಟ್‌ನಲ್ಲಿ ಅವನಿಗೆ ಎಂ.ಬಿ.ಬಿ.,ಎಸ್. ಕೋರ್ಸ್‌ಗೆ ಸೀಟು ಸಿಕ್ಕಿತು. ಆದರೆ ಬೆಂಗಳೂರಿನ ವೈದ್ಯಕೀಯ ಕಾಲೇಜಿನಲ್ಲಿ ಸಿಕ್ಕಿತು.

ರಂಗನಾಥನಿಗೆ ಚಿಂತೆಯಾಗಿತ್ತು. ಮತ್ತೆ ಅವನಿಗೆ ಆ ಊರಿಗೆ ಹೋಗಲು ಬೇಸರವೆನಿರಲಿಲ್ಲ. ಆದರೆ ತಾನಾಗಿಯೇ ಬಿಟ್ಟು ಬಂದ ಊರು. ತಾನು ಮತ್ತೆ, ಪರಿಚಯದ ಊರಿನಲ್ಲಿ, ಪರಿಚಯಸ್ಥರ ಎದುರಿನಲ್ಲಿ ಹೇಗೆ ಇರುವುದು ಎಂಬ ಅಂಜಿಕೆ. ಸತ್ಯನನ್ನಾಗಲೀ ನಿರ್ಮಲೆಯನ್ನಾಗಲೀ, ಕಾಣಲು ಹೆದರುತ್ತಿದ್ದ.

ಆದರೆ ಹಾಗೇನೂ ಆಗಲಿಲ್ಲ. ಈ ಹದಿನಾರು ಹದಿನೇಳು ವರ್ಷಗಳಲ್ಲಿ ಬೆಂಗಳೂರು ಸಾಕಷ್ಟು ಬದಲಾಗಿತ್ತು. ಬೆಳೆದಿತ್ತು. ಎಲ್ಲಿ ನೋಡಿದರೂ ಹೊಸ ಬಡಾವಣೆಗಳು, ಹೊಸ ಮನೆಗಳು. ಜನರ ನಡೆವಳಿಕೆಗಳಲ್ಲಿ ಹೊಸತನ ಎದ್ದು ಕಾಣುತ್ತಿತ್ತು. ಈ ಜನರ ನಡುವೆ ನಿರ್ಮಲ ನನಗೆ ಸಿಗದಿರಲಿ, ಕಾಣದಿರಲಿ ಎಂದೇ ಬಯಸುತ್ತಿದ್ದ. ಕಂಡರೂ ನನ್ನನ್ನು ಗುರುತಿಸುತ್ತಾಳೋ ಇಲ್ಲವೋ...ಎಂಬ ಸಂದೇಹವೂ ಮೂಡುತ್ತಿತ್ತು. ಸತ್ಯನ್ನ ತಾನು ಮರತೇ ಬಿಟ್ಟು ಬಿಟ್ಟಿದ್ದೀನಿ ಎಂದು ಭಾವಿಸಿದ್ದ.

ನಿರ್ಮಲ ಹೇಗಿದಾಳೋ..ಏನೋ, ಅದೇ ಮನೆಯಲ್ಲಿದ್ದಾಳೋ. ಇಲ್ಲವೋ.. ನನ್ನ ಮಗು ಹೇಗಿದೆಯೋ...ಏನು ಓದುತ್ತಿರಬಹುದು ಈ ಆಲೋಚನೆಗಳು ಮೂಡಿಬಂದಾಗ, ಹೋಗಿ ತಿಳಿದುಕೊಳ್ಳುವ ಆಸೆ ಆಗುತ್ತಿತ್ತು. ಆದರೆ ನಿರ್ಮಲೆಯ ಎದುರು ಹೋಗಿ ಮತ್ತೆ ನಿಲ್ಲುವೆದೆಂದರೆ... ಸಾಧ್ಯವೇ...ಹಾಗೆನ್ನಿಸಿದರೂ ಮನಸ್ಸು ತಡೆಯದೇ ತಮ್ಮ ಮನೆ ಇದ್ದ ಜಾಗಕ್ಕೆ ಒಂದು ಸಾರಿ ಹೋಗಿದ್ದ. ಆದರೆ ಆ ಸಣ್ಣ ಮನೆಯ ಬದಲಿಗೆ ಒಂದು ದೊಡ್ಡ ಮನೆ ಎದ್ದು ನಿಂತಿತ್ತು. ಅಕ್ಕಪಕ್ಕದವರೊಡನೆ ವಿಚಾರಿಸುವ ಇಚ್ಛೆಯಾಗಲಿಲ್ಲ. ಹಿಂದಕ್ಕೆ ಬಂದ. ಕ್ಲಿನಿಕ್ ಬಳಿ ಹೋದಾಗ ಕ್ಲಿನಿಕ್ ಬಾಗಿಲು ಮುಚ್ಚಿತ್ತು. ಬೋರ್ಡ್ ಸಹ ಇರಲಿಲ್ಲ,.ಏನು ವಿಷಯ ಎಂದು ತಿಳಿಯಲಿಲ್ಲ.

ಅಂದಿನಿಂದ ಇಂದಿನವರೆಗೂ ನಿರ್ಮಲೆಯ ಬಗ್ಗೆ ಏನೂ ತಿಳಿಲಿಲ್ಲ.

ಆದರೆ ಏಕೋ ಏನೋ ಈ ದಿನ ಆ ಹುಡುಗಿಯನ್ನು ಕಂಡೊಡನೆ ನಿರ್ಮಲೆಯ ಬಗ್ಗೆ ಯೋಚನೆ ಮತ್ತೆ ಶುರುವಾಗಿತ್ತು. ಬದುಕಿದಾಳೋ ಇಲ್ಲವೋ ಎಂಬ ಅನುಮಾನ ಸಹ ಕಾದಿತು. ಆದರೆ ಮನಸ್ಸು ಒಪ್ಪಲು ಹಿಂಜರಿಯಿತು. ಆ ಹುಡುಗಿಗೆ ಪಾಠ

ಹೇಳಿಕೊಡಲು ದಿನಾ ಹೋಗಿ ಬರುವುದಾದರೆ, ನಿರ್ಮಲೆಯ ನೆನಪು, ದಿನಾ ನನ್ನನ್ನು ಕಾಡಿ ಸದೇ ಬಿಡುವುದಿಲ್ಲ. ಎಂದುಕೊಂಡು. ಟ್ಯೂಷನ್ ಹೇಳಿಕೊಡಲು ಹೋಗುವುದನ್ನು ಒಪ್ಪಿಕೊಳ್ಳಲಿಲ್ಲ.

ಆದರೂ, ಆಗಾಗ್ಗೆ ಈ ಚಿಂತೆಗಳು ಅವನ ಮನಸ್ಸನ್ನು ಕಲಕಿ ಕತ್ತಲು ಅಡರಿಕೊಳ್ಳುತ್ತಿತ್ತು...ಮನೋಜ ಕಾಲಿಂಗ್ ಬೆಲ್ ಒತ್ತಿದ್ದು ಸಹ ಕೇಳಿಸಿರಲಿಲ್ಲ. ಮಾವ...ಮಾವ ಅಂತ ಜೋರಾಗಿ ಕೂಗಿದಾಗ ಬೆಚ್ಚಿ ಬಿದ್ದು ಎದ್ದು ಬಂದು, ಬಾಗಿಲು ತೆಗೆದ.

"ಎಷ್ಟು ಹೊತ್ನಿಂದ ಕೂಗ್ತಿದೀನಿ. ಎಂಥಾ ಯೋಚನೆ ಮಾಡ್ತಿದ್ದೆ ಅಷ್ಟು ಆಳವಾಗಿ?" ಕೇಳಿದ.

"ಏನೋ...ಅದ್ಯಾಕೆ ನಿನಗೆ? ಅದಿರಲಿ ನೀನ್ಯಾಕೆ ಲೇಟು?"

"ಲೇಟ್ ಏನಿಲ್ಲ. ದಿನಾ ನಿನಗೆ ಹಾಗೇ ಅನ್ನಿಸುತ್ತೆ. ಅರ್ಧ ಗಂಟೆ ಯಿಂದ ಮುಂಬಾಗಿಲಿನಲ್ಲಿ ನಿಂತೀದೀನಿ?" ತಮಾಷೆ ಮಾಡಿ ನಕ್ಕ.

"ತಮಾಷೆ ನಿನಗೆ. ಏಳು ಕೈಕಾಲು ತೊಳಕೋ ಕಾಫಿ ತಿಂಡಿ ಕೊಡ್ತೀನಿ."

ಉಪ್ಪಿಟ್ಟೋ. ಅವಲಕ್ಕಿ ಒಗ್ಗರಣೆನೋ...ದಿನಾ ಅದೇ ತಿಂದು ತಿಂದು ಬೇಜಾರಾಗಿ ಹೋಗಿದೆ. ಬರೀ ಕಾಫಿ ಕೊಡು ಸಾಕು."

"ಕ್ಯಾಂಟೀನ್‌ನಲ್ಲಿ ಏನಾದ್ರೂ ತಿಂದಿದ್ಯಾ?"

"ಅಲ್ಲೂ ದಿನಾ ಒಂದೇ ತಿಂಡಿ. ತಿಂದು, ನೋಡಿ ಬೇಜಾರಾಗಿದೆ. ಇವತ್ತು ಐಸ್‌ಕ್ರೀಂ ತಿಂದಿದೀನಿ."

"ಬರೀ ಐಸ್ ಕ್ರೀಂ ಸಾಕಾ? ಸುಮ್ಮನೇ ಎದ್ದು ತಿಂಡಿ ತಿನ್ನು"

"ಬರೀ ಐಸ್‌ಕ್ರೀಂ ಅಲ್ಲ...?"ಇವತ್ತು ನಡೆದ ಘಟನೆಯಿಂದ ಬೇರೆ ಏನೂ ಬೇಡ ಅಂತನ್ನಿಸ್ತಿದೆ....ಎಂದುಕೊಂಡ. ಆದರೆ ಅದನ್ನು ಮಾವನಿಗೆ ತಿಳಿಸುವಂತಿಲ್ಲ... ಬರೀ ಕಾಫಿ ಸಾಕು ಅಂತ ಹೇಳಿದ್ನಲ್ಲ...ಎಂದು ಒತ್ತಿ ಹೇಳಿದ. ಕಾಫಿಯನ್ನೂ ಹೀರುತ್ತಾ, ಅಂದು ಕಾಲೇಜಿನ ಆವರಣದಲ್ಲಿ ನಡೆದ ಘಟನೆಯನ್ನೇ ಮೆಲಕು ಹಾಕುತ್ತಿದ್ದ. ಅಷ್ಟರಲ್ಲಿ ಮುರುಳಿ ಬಂದ. ಇಬ್ಬರೂ ಕುಳಿತು, ನಡೆದ ಘಟನೆಯನ್ನೇ ನೆನೆಸಿಕೊಂಡು, ಪಿಸುದನಿಯಲ್ಲಿ ಮಾತನಾಡುತ್ತಾ, ಕಿಸಿಕಿಸಿ ನಕ್ಕೊಂಡರು.

"ಎಷ್ಟೋ ವರ್ಷಗಳಿಂದ ಸ್ಕೂಟರ್ ಓಡಿಸುತ್ತಿದ್ದರೂ, ಎಂದೂ ಹೀಗಾಗಿರಲಿಲ್ಲಪ್ಪಾ...ಇವತ್ತೇಲ್ಲೋ ಬೆಳಿಗ್ಗೆ ಎದ್ದಾಗ ಬೆಕ್ಕಿನ ಮುಖ ನೋಡಿರಬೇಕು ನಾನು,"

"ಬೆಕ್ಕಿನ ಮುಖ ನೋಡಿದ್ರೇನಂತೆ ಹೊಡೆದ್ಯಲ್ಲಾ ಎಂತಾ ಛಾನ್ಸ್ ಎಂಥಾ ಹುಡುಗಿ ಎಂಥಾ ಲಕ್ ನಿನ್ನದು.?"

"ಹುಂ.."ಎಂದು ಹೂಂಕರಿಸಿದರೂ ಮತ್ತೆ ನಗು ಬಂದಿತ್ತು.

ಮುರುಳಿಯನ್ನೂ ಹಿಂದೆ ಕೂರಿಸಿಕೊಂಡು, ಕಾಲೇಜಿನ ಗೇಟನ್ನು ತಲಪುವ ಸಮಯಕ್ಕೆ ಸರಿಯಾಗಿ, ಹಿಂದಿನಿಂದ ವೇಗವಾಗಿ ಬಂದ ಲೂನಾ ಒಂದು, ಸ್ಕೂಟರ್ರಿನ ಹಿಂಭಾಗಕ್ಕೆ ಡಿಕ್ಕಿ ಹೊಡೆದು ಉರುಳಿತ್ತು. ನಡೆದ ಆಕಸ್ಮಿಕಕ್ಕೆ ಹೆದರಿ, ಮನೋಜ ಸ್ಕೂಟರನ್ನು ನಿಲ್ಲಿಸಿ ಹಿಂತಿರುಗಿ ನೋಡಿದ. ಉರುಳಿ ಬಿದ್ದಿದ್ದ ಲೂನಾದಡಿಯಿಂದ

ಕಷ್ಟಪಟ್ಟು, ಮೈಕೊಡವಿಕೊಳ್ಳುತ್ತಾ ಏಳುತ್ತಲಿರುವ ಹುಡುಗಿಯರನ್ನು ಕಂಡ. ಮುರುಳಿ ಸರ್ರನೆ ಇಳಿದು ಹುಡುಗಿಯರಿಗೆ ಸಹಾಯ ಮಾಡಿ ಎಬ್ಬಿಸಿದ. ಮನೋಜನಿಗೆ ಗಾಭರಿಯೂ ಆಗಿತ್ತು. ರೇಗಿಯೂ ಹೋಗಿತ್ತು. ಕೆಳಗೆ ಬಿದ್ದಿದ್ದ ಲೂನಾಕಡೆ ನೋಡಿದ. ಎಲ್ ಬೋರ್ಡ್ ತಗುಲಿ ಹಾಕಿದ್ದು ಕಂಡು ಬಂತು.

"ಎಲ್ ಬೋರ್ಡ್ ಹಾಕಿಕೊಂಡು ಇಷ್ಟು ಸ್ಪೀಡಾಗಿ ಗಾಡಿ ಓಡಿಸ್ತೀರಲ್ಲಾ..ಏನು ತಮಾಷೆ ಅಂತಂದ್ಕೊಂಡ್ರಾ?" ಹುಬ್ಬು ಗಂಟಿಕ್ಕಿ ಕೇಳಿದ. ಅವಳು ಮುಸಿ ಮುಸಿ ಅಳತೊಡಗಿದಳು.

"ಸರಿಯಾಗಿ ಓಡಿಸೋಕೆ ಬರೋವರೆಗೂ, ಗಾಡೀನ ಹೀಗೆಲ್ಲಾ ರಸ್ತೇಲಿ ಓಡಿಸ್ಬಾರ್ದು ಅಂತ ನಿಮಗೆ ಗೊತ್ತಿಲ್ವಾ?" ಮತ್ತೊಮ್ಮೆ ರೇಗಿದ.

"ನಿಮಗೇನು ಅದನ್ನೆಲ್ಲ ಕಟ್ಕೊಂಡು" ಅಳುತ್ತಾ ನುಡಿದಳು ಅವಳು

"ನನಗೇನಾ? ನನ್ನ ಸ್ಕೂಟರ್‌ಗಲ್ವಾ ನೀವು ಹೊಡೆದದ್ದು?"

"ಆಕ್ಸಿಡೆಂಟ್ ಮಾಡಿ ನನ್ನನ್ನೇ ಬೈತೀರಾ?" ಅವನನ್ನೇ ದಿಟ್ಟಿಸಿದಳು

"ಆಂ ...? ಏನಂದ್ರಿ? ನಾನಾ ಮಾಡಿದ್ದು ನಿಮ್ಮಲ್ಲಿ ತಪ್ಪನ್ನಿಟ್ಟು ಕೊಂಡು ನನ್ನನ್ನು ಅಂದ್ರೆ ನಾನು ಸುಮ್ಮನಿರುಲ್ಲ" ಅಷ್ಟರಲ್ಲಿ ತಮಾಷೆ ನೋಡಲು ಅಲ್ಲೇ ತಿರುಗಾಡುತ್ತಿದ್ದವರು. ಜಮಾಯಿಸಿದರು.

"ಮುರುಳಿ ಹೋಗಲಿ ಬಿಡೋ...?"ಎಂದು ಹೇಳುತ್ತಿದ್ದರೂ,

"ಏನೋ ಬಿಡೋದು.. ನನ್ನದು ತಪ್ಪಾ, ನಂಗೇನಿಲ್ಲ. ಸಿಟ್ಟು ಬಂದ್ರೆ ಈ ಲೂನಾ ತಗೊಂಡು ಹೋಗಿ ಊರಾಚೆ ಎಸೆದು ಬರ್ತೀನಿ."

"ಸುಮ್ಸುಮ್ನೆ ನಿಂಗ್ಯಾಕೆ ಆ ಕಷ್ಟ ಹುಡುಗೀರು...ಸುಮ್ಮನಿರಬಾರದಾ?"

"ಸುಮ್ಮನೇ ಇದ್ದುದಕ್ಕೇ...ನನ್ನನ್ನೇ ಅನ್ನುತ್ತಿದಾರಲ್ಲ..?"

"ಹೋಗಲಿ ಮಿಸ್... ಸಾರಿ ಕೇಳಿಬಿಡಿ. ನನ್ನ ಸ್ನೇಹಿತ ದೂರ್ವಾಸ" ಹುಡುಗಿಯರ ಕಡೆ ತಿರುಗಿ ಪಿಸುದನಿಯಲ್ಲಿ ನುಡಿದ.

"ಸಾರಿ ಯಾಕ್ರೀ ಕೇಳಬೇಕು ನಾನು...? ನನ್ನ ತಪ್ಪೇನಿದೆ? ಅದೇನು ಮಾಡ್ತಾರೋ ಮಾಡ್ಲೀ..."ಎಂದಳು ಅವಳೂ ಜೋರಿನಿಂದ.

"ನೋಡಿದ್ಯೇನೋ...ಎಷ್ಟು ಕೊಬ್ಬು! ಹುಡುಗೀರ್ಗೆ ಇಷ್ಟು ಧಿಮಾಕು ಇರಬೇಕಾದ್ರೆ...ನಾನ್ಯಾಕೋ ಸುಮ್ಮನಿರಬೇಕು?"

"ಹೋಗ್ಲಿ ಬಿಡೇ ರಾಧಿಕಾ...?"ಇನ್ನೋಬ್ಬಳು ಹುಡುಗಿ ಅವಳಿಗೆ ಸಮಾಜಾಯಿಷಿ ಹೇಳುತ್ತಿದ್ದಳು.

"ಬಿದ್ದು ಮೈ ಕೈಯೆಲ್ಲಾ ತರಚಿ ಪೆಟ್ಟಾಗಿದೆ. ಉರೀತಿರಬಹುದು. ಅದಕ್ಕೇ ಹಾಗಾಡ್ತಿದಾರೆ...ಹೋಗಲಿ ಬಿಡಬಾರದಾ?" ಮುರುಳಿ ಕಣ್ಸನ್ನೇ ಮಾಡಿದ.

"ಹುಡುಗೀರು ಅನ್ನೋ ಕರುಣೆ ಇಲ್ಲ ಅವರಿಗೆ. ಒಳ್ಳೇ ಆಂಜನೇಯ ಆಡಿದ ಹಾಗೆ ಆಡ್ತೀದಾರೆ.?" ರಾಧಿಕಾ ಮತ್ತೆ ಹಂಗಿಸಿದಳು.

"ನೋಡು..ನೋಡು...ಹೇಗಾಡ್ತಿದಾರೆ. ಇದೆಲ್ಲಾ ಬರೀ ಸ್ಟಂಟ್. ಆ ಮಿಸ್... ಇನ್ನೊಬ್ಬರು... ಅವರಿಗೂ ಪೆಟ್ಟಾಗಿಲ್ವಾ? ಅವರು ಸುಮ್ಮನೇ ಇಲ್ವಾ?"

"ಆ ಹುಡುಗಿ, ಗೀತಾ" ಮುರಳಿಯ ಮುಖ ನೋಡಿ ಮುಗುಳ್ನಕ್ಕಳು.

ಕೆಲವರು ತುಂಬಾ ಸೂಕ್ಷ್ಮ.ಆದದ್ದಾಯಿತು. ಇನ್ನಾದರೂ ಸುಮ್ಮನಿರ ಬಾರದಾ ನೀನು..?" ಮುರುಳಿ ಸಮಾಧಾನ ಹೇಳುವಂತೆ, ಮನೋಜನ ಬೆನ್ನ ಮೇಲೆ ಕೈ ಇಟ್ಟ.

ನಾನ್ಯಾಕೋ ಸುಮ್ಮನಿರಲಿ ನಂದೇನೂ ತಪ್ಪಿಲ್ಲ. ಒಂದು ಸಾರಿ ಕೇಳೋಕೆ ಹಿಂದು ಮುಂದು ನೋಡ್ತಿದಾರೆ ಅವರು..."

"ಹೋಗಲಿ ಸಾರಿ ಕೇಳಿಬಿಡಿ ಮಿಸ್...ಅವನಿಗೂ ಸಂತೋಷವಾಗುತ್ತೆ. ನಿಮ್ಮಿಬ್ಬರಿಗೂ ಐಸ್ ಕ್ರೀಂ ಕೊಡಿಸ್ತಾನೆ."

ಮನೋಜ್ ಚಕಿತಗೊಂಡ. "ಇದೇನಿದು? ಮುರುಳಿ ಹುಡುಗಿಯರ ಪರವಹಿಸಿ ಮಾತಾಡ್ತಿದಾನಲ್ಲ?" ಎನಿಸಿ ಕೋಪದಿಂದ,

"ಏಯ್...ಏನೋ ನೀನು? ನಾನ್ಯಾಕೆ ಐಸ್‌ಕ್ರೀಂ ಕೊಡಿಸಬೇಕು ನಿನಗೆ ಬೇಕಾದರೆ ನೀನು ಕೊಡಿಸು. ನಾನು ಮನೆಗೆ ಹೋಗ್ತೀನಿ ಹೊತ್ತಾಯ್ತು" ಎಂದು ಸ್ಕೂಟರನ್ನು ಏರಿದ.

"ಅಷ್ಟು ದೊಡ್ಡ ಬುದ್ಧಿ ಎಲ್ಲಿದೆ ನಿಮ್ಮ ಸ್ನೇಹಿತರಿಗೆ? ಹುಡುಗೀರು, ಬಿದ್ದು ಪೆಟ್ಟು ಮಾಡಿಕೊಂಡಿದಾರೆ. ಪಾಪ, ಅಯೋ ಅಂತ ಕೂಡಾ ಅನ್ನಿಸಿಲ್ಲ ಅವರಿಗೆ." ಹಂಗಿಸಿ ನುಡಿದಳು ರಾಧಿಕಾ. ಜೊತೆಯಲ್ಲಿ ನಿಂತಿದ್ದ ಗೀತಾ ನುಡಿದಳು.

"ಸುಮ್ಮನಿರೇ...ಹಂಗಿಸಿ ಮಾತಾಡ್ತೀಯಲ್ಲ ಏನೇ ನೀನು?"

"ಮತ್ತೆ ನೋಡು...ಹೇಗೆ ಆಡ್ತಾರೆ ಈ ಮಹಾಶಯ. ಹುಡುಗೀರು ಎನ್ನೋ ಕನ್ಸಿಡರೇಶನ್ ಸಹ ಇಲ್ಲ. ಕಾಲು ಕೆರೆದುಕೊಂಡು ಜಗಳ ಆಡ್ತಿದಾರೆ...ಬನ್ನಿ... ನಾನೇ ನಿಮಗೆ ಐಸ್‌ಕ್ರೀಂ ಕೊಡಿಸ್ತೀನಿ. ತಿಂದು ಕೋಪಾನ ಆರಿಸ್ಕೊಳೋರಂತೆ" ಕಾಲನ್ನು ಎತ್ತಿ ದಪ್ ಎಂದು ಹೆಚ್ಚೆ ಹಾಕಿದಳು.

"ಅಬ್ಬಾ...ಇಬ್ಬರೂ ಬೇಡ. ನಾನು ಕೊಡಿಸ್ತೀನಿ ಬನ್ನಿ" ಎಂದು ಮುರುಳಿ ನಗುತ್ತಾ ಆಹ್ವಾನಿಸಿದಾಗ, ಗೀತಾ ತಾನೂ ಮುಗುಳ್ನಕ್ಕು ಸ್ನೇಹಿತೆಯನ್ನು ಒಪ್ಪಿಸಿದಳು.

"ನಡಿಯೋ ಮನೋಜ...ಇಷ್ಟಿಷ್ಟಕ್ಕೆಲ್ಲ ಅಪ್ಸೆಟ್ ಆದರೆ ಹೇಗೆ ಫರ್ಗೆಟ್ ಇಟ್. ಲೆಟಸ್ ಬೀ ಫ್ರೆಂಡ್ಸ್" ಎಂದಾಗ ಮನೋಜ ಗೊಣಗಿದ್ದ.

"ನಾನು ಬರುಲ್ಲ. ನನಗಿದೆಲ್ಲಾ ಇಷ್ಟವಿಲ್ಲ."

"ಅಬ್ಬಾ...ನಿಮ್ಮ ಸ್ನೇಹಿತರು ಮನುಷ್ಯರೇ ಅಲ್ಲ. ಅವರಿಗೆ ಹೃದಯಾನೇ ಇಲ್ಲ" ರಾಧಿಕಾ ಹಂಗಿಸಿ ಕೆರಳಿಸಿದಳು.

"ಹೌದು. ನಂಗೆ ಹೃದಯವಿಲ್ಲ. ನಿಮಗಿದೆಯಾ? ಆಕ್ಸಿಡೆಂಟ್ ಮಾಡಿದ್ದು ನೀವು. ತಪ್ಪು ನಿಮ್ಮದೇ.. ಒಂದು ಸಾರಿ ಕೇಳೋಕೆ ಹಿಂದೆ ಮುಂದೆ ನೋಡ್ತಿದೀರ...?"

"ಹಾಗಾದ್ರೆ ನಾನು ಸಾರಿ ಕೇಳ್ಕೊಂಡ್ರೆ ನನಗೆ ಐಸ್‌ಕ್ರೀಂ ಕೊಡಿಸ್ತೀರಾ?" ದಿಟ್ಟತನ ದಿಂದ ಅವಳು ಮತ್ತೆ ಪ್ರಶ್ನಿಸಿದಾಗ ಅವನು ಬೆರಗಾದ. ಅಬ್ಬಾ... ಏನು ಹುಡುಗಿ ಯಪ್ಪಾ.. ಎಂದು ಕೊಂಡು.

"ಅಂತೂ ನನ್ನನ್ನೇ ಫೂಲ್ ಮಾಡ್ತಿದೀರಿ, ನಡೀರಿ" ಎಂದ. ಸುತ್ತ ನಿಂತವರೆಲ್ಲಾ ತಮಾಷೆ ನೋಡುತ್ತಿದ್ದುದು ಅವನಿಗೆ ಮುಜುಗರವೆನಿಸಿತ್ತು. ನನ್ನದೇನೂ ತಪ್ಪಿಲ್ಲದಿದ್ದರೂ, ಎಲ್ಲರ ಅನುಕಂಪವೂ ಅವಳ ಕಡೆಗೆ. ನನ್ನ ಸ್ನೇಹಿತ ಮುರಳಿ ಸಹ ಹಾಗೇ ಆಡ್ತಿದಾನೆ. ಇರಲಿ. ಆ ಮೇಲೆ ಅವನನ್ನು ವಿಚಾರಸ್ಕೋತೀನಿ ಎಂದು ಕೊಂಡು,

ಸ್ಕೂಟರನ್ನು ತಳ್ಳಿಕೊಂಡು ಹೊರಟ. ಅಷ್ಟರೊಳಗೆ, ಕೆಳಗೆ ಬಿದ್ದಿದ್ದ ಲೂನಾವನ್ನು ಎತ್ತಿದ್ದ ಮುರಳಿ. ಅದರ ಮುಂಭಾಗಕ್ಕೆ ಒದಗಿದ್ದ ಸ್ಥಿತಿಯನ್ನು ನೋಡಿ ಎಲ್ಲರಿಗೂ ನಗು ಬಂತು. ಮುಂದಿನ ಚಕ್ರ ಹ್ಯಾಂಡಲ್‌ಗಳು ವಕ್ರಗತಿಯೆಡೆಗೆ ತಿರುಗಿದ್ದವು.

"ಏನೇ ಹೀಗಾಗಿದೆ?" ನಕ್ಕಳು ಗೀತಾ.

"ಇಲ್ಲೇ ಎದುರಿಗಿರುವ ಗ್ಯಾರೇಜ್‌ನಲ್ಲಿ ರಿಪೇರಿಗೆ ಕೊಡೋಣ ಎಂದ ಮುರಳಿ. ತನಗೇನೂ ಸಂಬಂಧಿಸಿದ ವಿಷಯವಲ್ಲವೆಂಬಂತೆ, ಸುಮ್ಮನಿದ್ದ ಮನೋಜ. ಮುರುಳಿ ಲೂನಾ ತಳ್ಳಿಕೊಂಡು ಮುಂದೆ ಮುಂದೆ ನಡೆದ. ಹುಡುಗಿಯರು ಅವನ ಹಿಂದೆ ನಡೆದರು. ಸ್ಕೂಟರನ್ನು ತಳ್ಳುತ್ತಾ ಎಲ್ಲರಿಗಿಂತ ಹಿಂದೆ ನಡೆದ ಮನೋಜ.

"ನೀನು ಇವರುಗಳನ್ನು ಆ ಐಸ್‌ಕ್ರೀಂ ಪಾರ್ಲರ್‌ಗೆ ಕರೆದುಕೊಂಡು ಹೋಗು. ನಾನು ಈ ಲೂನಾನ ರಿಪೇರಿಗೆ ಕೊಟ್ಟು ಬರ್ತೀನಿ." ಮನೋಜನಿಗೆ ಹೇಳಿದ.

ಮನೋಜ ಮುರಳಿಯನ್ನು ಮನಸ್ಸಲ್ಲೇ ಬೈದುಕೊಂಡ.

"ಥೂ ಇವನೊಬ್ಬ. ಹುಡುಗೀರು ಅಂದ ಮಾತ್ರಕ್ಕೆ ತಾನಾಗಿಯೇ ಯಾಕೆ ಬಾಯಿ ಬಾಯಿ ಬಿಟ್ಟುಕೊಂಡು ಹೋಗಬೇಕು. ತೀರ ಅತೀ ಅತೀ ಮಾಡ್ತಾನೆ. ಒಬ್ಬನೇ ಸಿಗಲಿ. ಮಾಡ್ತಿನಿ."

ಹುಡುಗಿಯರಿಬ್ಬರೂ, ತಮ್ಮಲ್ಲೇ ಮಾತಾಡಿಕೊಂಡು ನಗುತ್ತಾ ಐಸ್‌ಕ್ರೀಂ ಪಾರ್ಲರ್ ಒಳ ನುಗ್ಗಿ. ಒಂದು ಟೇಬಲ್ ಹಿಡಿದು ಕುಳಿತರು. ಮನೋಜ ಮುರುಳಿಗೆ ಕಾಯುತ್ತಾ ನಿಂತ. ಮುರಳಿ ಹತ್ತಿರ ಬಂದವನು ನಿಂತಿದ್ದ ಮನೋಜನನ್ನು ಎಳೆದುಕೊಂಡು ಪಾರ್ಲರ್ ಒಳಗೆ ಬಂದು ಅವರಿಬ್ಬರೂ ಕುಳಿತಿದ್ದ ಕಡೆಗೆ ಬಂದ.

"ಮುಂದಿನ ಚಕ್ರ ಬದಲಾಯಿಸ ಬೇಕಂತೆ. ನಾಳೆ ಕೊಡ್ತೀನಿಂತ ಅಂತಂದ." ರಾಧಿಕಾಳನ್ನು ಕುರಿತು ಹೇಳಿದ.

"ಅಯ್ಯೋ...ಮತ್ತೆ ಮನೆಗೆ ಹೇಗೆ ಹೋಗಲಿ?" ಕುಯ್ಯಿಗುಟ್ಟಿದಳು.

ಮೊದಲು ಐಸ್‌ಕ್ರೀಂ ಬಂತು. ಎಲ್ಲರೂ ತಿಂದು ಮುಗಿಸಿದರು. ಆದರೂ ಮನೋಜನ ಅಸಮಾಧಾನ ಕಡಿಮೆ ಆಗಿರಲಿಲ್ಲ.

"ಏನ್ರೀ ಇಂಥಾ ಒಳ್ಳೇ ಐಸ್‌ಕ್ರೀಂ ತಿಂದರೂ ನಿಮ್ಮ ಸ್ನೇಹಿತರ ಮುಖ ಹರಳಣ್ಣೆ ಕುಡಿದು ಹಾಗಿದೆ?" ರಾಧಿಕಾ ರೇಗಿಸಿದ್ದಳು.

ಮನೋಜ ಸಿಟ್ಟನ್ನು ನುಂಗಿಕೊಂಡು ಸುಮ್ಮನಿದ್ದ.

"ಸುಮ್ನಿರೇ.... ಯಾಕೆ ಹೀಗ್ಮಾಡ್ತೀಯ?" ಗೀತ ಹೇಳಿದ್ದಳು.

"ಅಲ್ರೀ ಮಿಸ್ ನೀವು ಸಾರಿ ಕೇಳ್ಕೊಂಡೇ ಇಲ್ಲ. ಪಾಪ, ಅವ್ರಿಗೆ ಬೇಜಾರಾಗಿರುಲ್ವಾ? ಐಸ್ ಕ್ರೀಂ ಕೊಡಿಸಿದ್ದಾನೆ. ಈಗ ಥ್ಯಾಂಕ್ಸ್ ಹೇಳದಿದ್ದರೆ ಈಗ ಅವನಿಗೆ ಇನ್ನೂ ಬೇಜಾರಾಗುತ್ತೆ." ಸ್ನೇಹಿತನ ಭುಜ ತಟ್ಟಿದ.

ರಾಧಿಕಾ ನಕ್ಕು ಬಿಟ್ಟಳು. ಮನೋಜ ಸಿಟ್ಟಿನಿಂದ ಎದ್ದು ನಿಂತ.

"ಮುರಳಿ ಏನಿದು ತಮಾಷೆ? ನನಗಿದೆಲ್ಲಾ ಸರಿ ಹೋಗುಲ್ಲ."

ಅವನ ಕೆಂಪಾದ ಮುಖ ಕಂಡು, ರಾಧಿಕಾ ಗಂಭೀರವೆ ಆದಳು.

"ಸಾರಿ. ಮಿಸ್ಟರ್...ಏನೋ ತಮಾಷೆಯಾಗಿ ಮಾತನಾಡಿಬಿಟ್ಟೆವು." ಮನೋಜ ದೀರ್ಘವಾಗಿ ಅವನನ್ನೇ ನೋಡಿದ. ಏನೂ ಹೇಳಲಿಲ್ಲ.

"ಐಸ್‌ಕ್ರೀಂ ತುಂಬಾ ಚೆನ್ನಾಗಿತ್ತು ತುಂಬಾ ಥ್ಯಾಂಕ್ಸ್." ಮತ್ತೊಮ್ಮೆ ಅವಳು ನುಡಿದಾಗ, "ಇಟ್ಸಾಲ್‌ರೈಟ್" ಎಂದ ಕೆಳಗಿನ ಧ್ವನಿಯಲ್ಲಿ, ಅವನಿಗೆ ಅಲ್ಲಿಂದ ಬೇಗ ಎದ್ದು ಹೋದರೆ ಸಾಕೆನಿಸಿತ್ತು. ಮುರಳಿ ಗೀತ ಏನೋ ಮಾತಾಡಿಕೊಂಡರು. ಮುರಳಿ ಎದ್ದ. ಹೊರಡೋಣ. ಹುಡುಗಿ ಯರಿಗೆ ಲೇಟಾಗುತ್ತೆ, ಎಲ್ಲರೂ ಎದ್ದರು. ಮನೋಜ ಬಿಲ್ ಪೇ ಮಾಡಿದ.

ಮತ್ತೊಮ್ಮೆ ಹುಡುಗಿಯರು ಅವನಿಗೆ ಥ್ಯಾಂಕ್ಸ್ ಹೇಳಿ, ಬಸ್ ಸ್ಟಾಪ್ ಕಡೆ ನಡೆದರು. ಮುರುಳಿ ಮನೋಜನ ಅತಿ ಗಂಭೀರವಾದ ಮುಖವನ್ನು ಕಂಡು ಹೆದರಿದ. ನನಗೆ ಸ್ವಲ್ಪ ಕೆಲಸವಿದೆ. ನೀನು ಹೋಗು ಎಂದ.

"ಹಾಗಾದ್ರೆ ಆ ಮೇಲೆ ಬಾ ನಮ್ಮ ಮನೆಗೆ. ನಾನು ಸ್ವಲ್ಪ ಮಾತನಾಡ ಬೇಕು ನಿನ್ನ ಹತ್ರ..."

"ಹೂಂ ಬರ್ತೀನಿ ಎನ್ನುತ್ತಾ ತಪ್ಪಿಸಿಕೊಂಡವನಂತೆ ಓಡಿದ್ದ. ನಂತರ ಮನೋಜ ನನ್ನ ಆಪ್ತ ಸ್ನೇಹಿತ, ಒಂದಿಷ್ಟು ಬೈತಾನೆ ತಾನೇ ಬೈದರೆ ಬೈಯಲಿ" ಎಂದುಕೊಂಡು, ಆಮೇಲೆ ಮನೋಜನ ಮನೆಗೆ ಬಂದಿದ್ದ. ಅಷ್ಟು ಹೊತ್ತಿಗೆ ಮನೋಜನೂ ಸ್ವಲ್ಪ ಶಾಂತವಾಗಿದ್ದ. ನಡೆದ ಘಟನೆಯನ್ನು ನೆನೆಸಿಕೊಂಡು, ತಮಾಷೆಯಾಗಿ ಮಾತನಾಡಿಕೊಂಡರು.

"ಅಬ್ಬಾ...ಎಷ್ಟು ಜೋರು ಅವಳು?"

"ಮತ್ತೆ? ಹಾಗಿಲ್ಲದಿದ್ದರೆ? ತನ್ನ ತಪ್ಪನ್ನುಇಟ್ಟುಕೊಂಡು ಐಸ್‌ಕ್ರೀಂ ಗಿಟ್ಟಿಸುತ್ತಿದ್ದಳಾ? ಭಲೇ ಘಾಟಿ ಹುಡುಗಿ" ತಾನೂ ಹೇಳಿದ.

"ಹೌದು, ಆಗ ಎಷ್ಟು ರೇಗಿತ್ತು ಗೊತ್ತಾ? ನೀನು ...ಆ ಇನ್ನೊಂದು ಹುಡುಗಿ, ಇಬ್ಬರೂ ಎದುರಿಗಿಲ್ಲದೇ ಇದ್ದಿದ್ದರೇ...ಕಪಾಳಕ್ಕೆ ಬಾರಿಸಿಯೇ ಬಿಡುತ್ತಿದ್ದೆನೋ ಏನೋ....?"

"ಅವಳ ಕಪಾಳಕ್ಕೆ ಬಾರಿಸಿ. ನೀನು ಬಚಾವಾಗ್ತಿದ್ದೆಯಾ? ಹುಡುಗೀರ ಕಪಾಳ ಇರುವುದು ಬಾರಿಸುಕ್ಕಲ್ಲಪ್ಪಾ ಮಂಕೀ?" ತಮಾಷೆಯಾಗಿ ನಕ್ಕ ಮುರಳಿ.

"ಸಾಕು ನಿನ್ನ ತಮಾಷೆ, ಆಗ, ಆ ಹುಡುಗೀರ ಪರವಹಿಸಿ ನನ್ನನ್ನು ಪೇಚಿಗೆ ಸಿಕ್ಕಿಸಿದೆಯಲ್ಲ. ನಿನಗೇನು ಸಿಕ್ತು? ಅವರೇನು ನಿನ್ನ ಚಿಕ್ಕಪ್ಪನ ಮಕ್ಕಳಾ?

"ಒಂದು, ನನಗೆ ಬಿಟ್ಟಿ ಐಸ್‌ಕ್ರೀಂ ಸಿಕ್ತು, ಎರಡು, ಅವರಲ್ಲಿ ಒಬ್ಬಳು ನನ್ನ ಮಾವನ ಮಗಳು. ಅದಂತೂ ನಿಜ" ನಕ್ಕ.

"ಹೌದೇನೋ..ಅದಕ್ಕೇ ನೀನು ನಾಟಕ ಆಡ್ತಿದ್ದೆ. ಇರಲಿ, ಅವರಲ್ಲಿ ಯಾರು ನಿನ್ನ ಮಾವನ ಮಗಳು?"

ರಾತ್ರಿಯೆಲ್ಲ ಕೂತು, ಯಾರಿರಬಹುದು ಅಂತ ನೀನೇ ಯೋಚಿಸು. ನಾನು ಬೆಳಿಗ್ಗೆ ಸಿಕ್ತೀನಿ. ಎನ್ನುತ್ತಾ ಮುರುಳಿ ನಡದೇ ಬಿಟ್ಟ. ಅವನನ್ನು ಹಿಡಿದು ನಿಲ್ಲಿಸಿ ಕೇಳುವ ಇಚ್ಛೆಯಾಗಲಿಲ್ಲ. ಆ ವಿಷಯವನ್ನು ಮರೆತೂ ಕೂಡಾ ಮತ್ತೆ ಪ್ರಸ್ತಾಪ ಮಾಡಲಿಲ್ಲ. ಆದರೆ ಮುರಳಿ ಸುಮ್ಮನಿರಲಿಲ್ಲ. ತಾನಾಗಿಯೇ ಕೆದಕಿ ಕೇಳಿದ.

"ನನ್ನ ಕಸಿನ್ ಯಾರು ಅಂತ ಗೊತ್ತಾಯ್ತೆನೋ.....?"

" ಗೊತ್ತಾಗಿ ಏನಾಗಬೇಕಾಗಿದೆ? ನಾನಂತೂ ತಲೆ ಕೆಡಿಸಿಕೊಳ್ಳಲಿಲ್ಲ. ಚೆನ್ನಾಗಿ

ನಿದ್ದೆ ಹೊಡೆದೆ."

"ಎಂಥೋನೋ ನೀನು? ಆ ಹುಡುಗಿ ತಾನಾಗಿಯೇ ನಿನಗೆ ಡಿಕ್ಕಿ ಕೊಟ್ಟಿದಾಳೆ. ಅಂಥಾದ್ರಲ್ಲೂ ನಿದ್ದೆ ಬಂತಾ?"

"ಹುಂ...ಅಂಥಾದ್ದೇನಿದೆ ಅವಳಲ್ಲಿ? ನಿನ್ನೇನೇ ಅವಳ ಜಂಭ ಅಡಗಿಸಿ ಬಿಡ್ತಿದ್ದೆ. ನೀನು ಐಸ್‌ಕ್ರೀಂ ಮಾತನಾಡಿ, ಎಲ್ಲಾ ತಣ್ಣಗೆ ಮಾಡಿಬಿಟ್ಟೆ" ಮುರಳಿ ನಕ್ಕ.

"ಒಳ್ಳೇದಾಯ್ತು ಬಿಡು. ಅವಳು ತುಂಬಾ ಜೋರಾದ್ರೂ ನೋಡೋಕೆ ಚೆನ್ನಾಗಿಲ್ವಾ? ಅವಳ ಫ್ರೆಂಡ್‌ಷಿಪ್ ಬೇಕೂಂತ ಅನ್ನಿಸುಲ್ವಾ?"

"ಚೆನ್ನಾಗಿರಬಹುದು. ಹಾಗಂತ? ಅವಳ ಜಂಭ ನನ್ನ ಹತ್ತಿರ ನಡೆಯಲ್ಲ. ನನಗೆ ಅವಳ ಸ್ನೇಹ ಬೇಡ"

"ಅವಳ ಜಂಭ ನಿನ್ನ ಹತ್ತಿರ ನಡೆಯಬಾರದು ಅಂತಿದ್ರೆ...ಆ ಜಂಭಾನ ಅಡಗಿಸಲೇ ಬೇಕು. ಅದು ಜಾಣತನ. ಮೊದಲು ಫ್ರೇಂಡ್‌ಷಿಪ್..."

"ನನಗೆ ಅವಳ ಫ್ರೆಂಡ್‌ಷಿಪ್ ಬೇಡ. ನಾನು ಜಾಣನಾಗುವುದೂ ಬೇಡ. ಅದೆಲ್ಲಾ ನಿನಗೇ ಇರಲಿ, ಅಲ್ಲಿಂದ ಎದ್ದ."

ಇದೆಲ್ಲಾ ನಡೆದು ಎಷ್ಟೋ ದಿನಗಳಾಗಿದ್ದವು. ಮನೋಜ ಪರೀಕ್ಷೆ ತಯಾರಿ ನಡೆಸಿದ್ದ. ಆ ದಿನ ಮುರಳಿ ಕಾಲೇಜಿಗೆ ಬಂದಿರಲಿಲ್ಲ. ಮನೋಜ ಬೇರೆ ಒಬ್ಬ ಸ್ನೇಹಿತನೊಡನೆ ಮಾತನಾಡುತ್ತಾ ನಡೆದು ಬರುತ್ತಿದ್ದ. ಎದುರಿನಿಂದ ಲೂನಾ ಮೇಲೆ ಬರುತ್ತಿದ್ದ ರಾಧಿಕಾ ಅವನನ್ನು ಕಂಡು ಬ್ರೇಕ್ ಒತ್ತಿದಳು. ಕಿರ್ ಎಂದು ಸದ್ದು ಮಾಡುತ್ತಾ ಗಾಡಿ ನಿಂತಾಗ, ಅವನು ಬೆಚ್ಚಿದ. ಅವನಿಗೆ ಅತಿ ಸಮೀಪದಲ್ಲಿ ಗಾಡಿಯನ್ನು ನಿಲ್ಲಿಸಿದವ ಳನ್ನು ಕಂಡು ಬ್ರೇಕ್ ಒತ್ತಿದಳು. ಕಿರ್ ಎಂದು ಸದ್ದುಮಾಡುತ್ತಾ ಗಾಡಿ ನಿಂತಾಗ, ಅವನು ಬೆಚ್ಚಿದ. ಅವನಿಗೆ ಅತಿ ಸಮೀಪದಲ್ಲಿ ಗಾಡಿಯನ್ನು ನಿಲ್ಲಿಸಿದವಳನ್ನು ಕಂಡು ಕಿಡಿ ಕಾರಿದ. ಗಾಡಿಯ ಹ್ಯಾಂಡಲ್ ಹಿಡಿದು.

ಹುಂ..ಎಂದು ಹೂಂಕರಿಸುತ್ತಾ ಗಾಡಿಯಿಂದಿಳಿದು ನಿಂತಳು. ಜಗಳಕ್ಕೆ ಸಿದ್ದಳಾದವಳಂತೆ ನಿಂತ ನಿಲವು ಅವನನ್ನು ಇನ್ನೂ ರೇಗಿಸಿತು. "ಇವತ್ತು ಕಾಂಪ್ರಮೈಸ್ ಮಾಡುಕ್ಕೆ ಮುರುಳಿ ಇಲ್ಲ. ಬನ್ನಿ. ನಿಮ್ಮ ಅಹಂಕಾರಾನ ತಣ್ಣಗೆ ಮಾಡ್ತೀನಿ."

ಅವಳಿಗೆ ಹೆದರಿಕೆ ಆಯ್ತು. ಅವಳ ಗೆಳತಿ ಗೀತ ಸಹ ಇನ್ನು ಬಂದಿರಲಿಲ್ಲ. ಮುರಳಿಯೂ ಬಂದಿಲ್ಲ.

"ವೆರಿ ಸಾರಿ, ಮಿಸ್ಟರ್, ನಾನು ಬರೀ ಬ್ರೇಕ್ ಹಾಕಿದೆ. ನನ್ನ ತಪ್ಪೇನಿಲ್ಲ."

"ಹೌದು. ಅವತ್ತು ನನ್ನ ತಪ್ಪಿರಲಿಲ್ಲ. ಇವತ್ತು ನಿಮ್ಮ ತಪ್ಪಿಲ್ಲ. ಬನ್ನಿ ಪರವಾಗಿಲ್ಲ. ಐಸ್ ಕ್ರೀಂನ ಆಸೆಗೆ ನೀವು ಹೀಗೆಲ್ಲಾ ಮಾಡ್ತೀರಿ ಅಂತ ತಿಳಿದು ಕೊಂಡಿರಲಿಲ್ಲ ನಾನು"

ಅವಳಿಗೆ ಅವಮಾನದಿಂದ ಮುಖ ಕೆಂಪಾಯಿತು. ಭಯದಿಂದ ಅಳು ಬರುವಂತಾಯ್ತು. "ವೆರಿ ಸಾರಿ" ಎಂದಳು ಅಳುವ ಧ್ವನಿಯಲ್ಲಿ. ಮನೋಜ ಗಾಡಿಯ ಕೈ ಬಿಟ್ಟ.

"ಛೆ...ಹುಡುಗೀರು ಚೆನ್ನಾಗಿ ಅಳುವುದನ್ನು ಕಲಿತಿರ್ತೀರಿ...ಅಲ್ವಾ? ನಿಮ್ಮಂತಹವರಿಗೆಲ್ಲ ವೆಹಿಕಲ್ ಓಡಿಸುಕ್ಕೆ ಬರದಿದ್ರೂ ಆಚೆ ತಂದು ಆಕ್ಸಿಡೆಂಟ್

ಮಾಡ್ತಿರಿ. ನಾಳೆಯಿಂದ ಇದನ್ನು ಮನೆಯಲ್ಲೇ ಬಿಟ್ಟು ಬನ್ನಿ"

"ನನ್ನ ಹತ್ತಿರ ಲೈಸೆನ್ಸ್ ಇದೆ"

"ಲೈಸೆನ್ಸ್ ಇದ್ದರೆ? ಆಕ್ಸಿಡೆಂಟ್ ಮಾಡಬಹುದಾ? ಇಲ್ಲಿ ಕಾಂಪೌಂಡ ನಲ್ಲೇ ಸ್ಪೀಡಾಗಿ ಓಡಿಸ್ತೀರಿ...ಸಡನ್ ಆಗಿ ಬ್ರೇಕ್ ಹಾಕ್ತೀರಿ. ಇನ್ನು ರಸ್ತೆಯಲ್ಲಿ ದೇವರೇ ಗತಿ!" ಹಂಗಿಸಿದ.

"ಎಷ್ಟು ಸಾರಿ, ಸಾರಿ ಕೇಳಾಯ್ತು. ಇವತ್ತು ನಿಮಗೇನು ಪೆಟ್ಟಾಗಿ ಲ್ವಲ್ಲಾ. ಸುಮ್ಮನಿರಬಾರದಾ? ಎಷ್ಟು ಅಂತೀರಿ...ಸ್ವಲ್ಪ ಜೋರಾಗಿ ನುಡಿದಳು. ಒಬ್ಬಳೇ ಹುಡುಗಿ ಸಿಕ್ಕಿದೀನಿ ಅಂತ ಇವರು ಇಷ್ಟು ಅನ್ನುತ್ತಿದ್ದರೂ, ನೀವೂ ಸುಮ್ಮನಿದೀರಲ್ಲ. ಅವನ ಸ್ನೇಹಿತನ ಕಡೆ ತಿರುಗಿದಳು. ಮುರಳಿ ಇದ್ದಿದ್ದರೆ ನನ್ನ ಸೈಡ್ ಮಾತಾಡ್ತಿದ್ದ" ಎಂದಾಗ ಆ ಸ್ನೇಹಿತನಿಗೂ ಏನನ್ನಿಸಿತೋ...

"ಹೋಗಲಿ ಬಿಡೋ ಮನೋಜ್, ಹೊಸದಾಗಿ ಗಾಡಿ ತಗೊಂಡಿರ್ತಾರೆ. ಇದೆಲ್ಲಾ ಒಂದು ತರಹ ಥ್ರಿಲ್ ಅವರಿಗೆ. ಅಷ್ಟು ಹೊತ್ನಿಂದ ಉರಿದುರಿದು ಮಾತನಾಡ್ತದೀಯ. ಇವತ್ತೂ ನೀನು ಖಂಡಿತಾ ಐಸ್‌ಕ್ರೀಂ ತಿನ್ನಬೇಕು"

ಆ ಮಾತಿಗೆ ರಾಧಿಕಾ ಕಿಸಕ್ಕನೆ ನಕ್ಕಳು.

ಸಪ್ಪಗಾಗಿದ್ದ ಮುಖದಲ್ಲಿ ನಗುವಿನ ಛಾಯ ಕಂಡಾಗ ಅವಳ ಮುಖದ ಕಳೆಯೇ ಬದಲಾಯಿಸಿತು. ಮನೋಜ ಅವಳನ್ನೇ ದಿಟ್ಟಿಸಿದ. ಮುರಳಿ ಹೇಳಿದ್ದು ನಿಜ. ಜೋರು, ದರ್ಪ ಅಹಂಕಾರ ಎಲ್ಲಾ ಇದ್ದರೂ ನೋಡುವುದಕ್ಕೆ ತುಂಬಾ ಚೆನ್ನಾಗಿದಾಳೆ ಅಂತೆನಿಸಿ, ಮುಖದಲ್ಲಿ ಮಂದಹಾಸ ಮಿನುಗಿತು. ಅವಳನ್ನು ಕೆಣಕಬೇಕೆನಿಸಿತು.

"ಅಹಾ...ಎಷ್ಟು ಚೆನ್ನಾಗಿ ನಗ್ತೀರಿ...!?"ಅಣಕಿಸಿದ.

"ಅತ್ತರೂ ಅಣಗಿಸ್ತೀರಿ. ನಕ್ಕರೂ ಅಣಗಿಸ್ತೀರಿ. ನೀವೆಂತಹ ಡಾಕ್ಟರು? ಡಾಕ್ಟರೇಕೆ ಮನುಷ್ಯನೇ ಅಲ್ಲ ನೀವು..."

"ಕರೆಕ್ಟ್..ನಾನಿನ್ನು ಡಾಕ್ಟರ್ ಆಗಿಲ್ಲ. ಮನುಷ್ಯನೂ ಅಲ್ಲ. ಯಾಕೆ ಅಂದ್ರೆ..ನಾನಿನ್ನೂ ಹುಡುಗ..ನಕ್ಕ." ತಮಾಷೆ ಮಾಡಬೇಕೆನಿಸಿತ್ತು.

"ಅಹಾ...ಎಷ್ಟು ಚೆನ್ನಾಗಿ ನಗ್ತೀರಿ?" ಎಂದು ಅವನನ್ನು ಪ್ರತಿಯಾಗಿ ಅಣಕಿಸಿ, ಲೂನಾ ಹತ್ತಿ, ತಿರುಗಿಸಿ ಹೊರಟು ಹೋದಳು.

ಮನೋಜ ಬೆಪ್ಪಾದ. ಕಡೆಗೂ ನನ್ನನ್ನೇ ಬೇಸ್ತು ಬೀಳಿಸಿದಳಲ್ಲ ಎನಿಸಿ, ಅತ್ತಿತ್ತ ನೋಡಿದ. ಸಾಕಷ್ಟು ಜನ ಇವರ ಮಾತುಕತೆಗಳನ್ನೇ ಆಲಿಸುತ್ತಾ ನಿಂತಿದ್ದರು. ಅವನ ಮುಖ ಅರಕ್ತವಾಯಿತು. ಕತ್ತೂ ಬಗ್ಗಿಸಿ ಅಲ್ಲಿಂದ ಬಿರಬಿರನೆ ಹೆಜ್ಜೆ ಹಾಕಿದ. ಸ್ನೇಹಿತನಿಗೂ ಒಂದು ಮಾತು ಹೇಳದೇ.

ಸಾಯಂಕಾಲದ ಹೊತ್ತಿಗೆ ಮನಸ್ಸು ತಹಬಂದಿಗೆ ಬಂದಿತ್ತು. ಕಾಲೇಜಿನಿಂದ ಸೀದಾ ಮುರುಳಿಯ ಮನೆಗೆ ಬಂದ.

ಮುರಳಿ ಹುಶಾರಿಲ್ಲವೆಂದು ಮಲಗಿದ್ದ. ಮೊದಲು ಸ್ನೇಹಿತನ ಆರೋಗ್ಯ ವಿಚಾರಿಸಿದ.

ಇವತ್ತೊ ಕಾಲೇಜಿಗೆ ಬರದೇ, ಒಂದ್ದುಡ್ರಾಮಾನ ಮಿಸ್ ಮಾಡ್ಕೊಂಡೆ ನೀನು.. ಮುರಳಿ ಮಲಗಿದ್ದ ಮಂಚದ ಮೇಲೆ ಅವನ ಮಗ್ಗುಲಲ್ಲಿ ಕುಳಿತ.

"ಏನು ಡ್ರಾಮಾನೋ...ಯಾರದ್ದು?" ಮುರಳಿ ಎದ್ದು ಕುಳಿತ.

"ಇನ್ಯಾರದ್ದು?"ಇದಾಳಲ್ಲ ಆ ರಂಭೆ, ಅವಳದು.

"ಅಂತೂ ಅವಳನ್ನು ರಂಭೆ ಅಂತ ಒಪ್ಕೊಂಡೆ ಅನ್ನು"

"ಅದಿರಲಿ, ಏನು ಮಾಡಿದಳು ಗೊತ್ತಾ?" ಎನ್ನುತ್ತಾ ನಡೆದ ಸಂಗತಿಯನ್ನು ವಿವರವಾಗಿ ತಿಳಿಸಿದ.

"ಅವಳಿಗೆ ನಿನ್ನ ಫ್ರೇಂಡ್‌ಷಿಪ್ ಬೇಕೂಂತ ಕಾಣಿಸುತ್ತೆ. ಅದಕ್ಕೇ ಏನೋ ನೆಪ ಮಾಡಿಕೊಂಡು ನಿನ್ನ ಮೇಲೆ ಅಟ್ಯಾಕ್ ಮಾಡ್ತಿದಾಳೆ ಅಂತ ಅನ್ನಿಸುತ್ತೆ. ಅನ್ನು ಮೇಲೆ ಅವಳನ್ನು ಕಂಡಾಗ ಜಗಳವಾಡುವುದನ್ನು ಬಿಟ್ಟು ನಗುನಗುತ್ತಾ ಮಾತನಾಡು."

"ಹೇಳಿದ್ನಲ್ಲ, ನನಗೆ ಅವಳ ಸಹವಾಸ ಬೇಡ. ನಿನಗೆ ಬೇಕಾದರೆ ನೀನೋ ಇಟ್ಕೋ..."

"ಶುದ್ದ ಪೆದ್ದು ಕಣೋ ನೀನು. ಅನಾಯಾಸವಾಗಿ ಗರ್ಲ್‌ಫ್ರೆಂಡ್ ಸಿಕ್ಕಿರುವಾಗ ಖುಷಿ ತರಹ ಆಡ್ತೀಯಲ್ಲ ಎಂಜಾಯ್ ಮಾಡುವುದನ್ನು ಬಿಟ್ಟು ಶಾಪ ಗೀಪ ಹಾಕಿಯೇ ಜೋಕೆ!"ನಗುತ್ತಾ ನುಡಿದ.

"ನಿಂದು ಅತಿಯಾಯ್ತು ನನಗೆ ಗರ್ಲ್‌ಫ್ರೇಂಡ್ ಏನೂ ಬೇಡ. ಅದೆಲ್ಲಾ ನಿನಗೇ ಇರಲಿ"

"ನನಗೆ ನನ್ನ ಮಾವನ ಮಗಳು ಇದಾಳೆ. ಇಲ್ಲದಿದ್ರೆ ಈ ಬ್ಯುಟೀಸ್ ನಾನು ಬಿಡ್ತಿದ್ನಾ? ದಿಢೀರನೇ ಬೇಡ ಅಂತ ಹೇಳ್ಬೇಡಾ. ರಾತ್ರಿಯೆಲ್ಲಾ ನಿದ್ದೆಗೆಟ್ಟು ಯೋಚಿಸು.ಆಮೇಲೆ ಏನು ನಿರ್ದರಿಸಿದೆ ಅಂತ ಹೇಳು."

"ನನಗೆ ಅದಕ್ಕೆಲ್ಲ ಪುರಸೊತ್ತಿಲ್ಲ. ನಿನ್ನ ಎದುರಿಗೆ ಕೂತಿದ್ರೆ ಮತ್ತೆ ಮತ್ತೆ ಅದೇ ಉಪದೇಶ ಮಾಡ್ತೀಯ. ನಾನು ಹೋಗ್ತೀನಿ"

"ಬರೀ ಉಪದೇಶ ಮಾಡೋನಲ್ಲ...ಎಂಜಾಯ್ ಮಾಡುವವನು ನಾನು ಆಮೇಲೆ ರಿಗ್ರೆಟ್ ಮಾಡ್ಕೋತೀಯ ಅಷ್ಟೇ"

"ಏನೋ ಆಪ್ತ ಸ್ನೇಹಿತ ಅಂತ ನಡೆದ ಘಟನೆ ಹೇಳಿದರೂ ನಿನ್ನ ಆಲೋಚನೆಗಳೆ ಬೇರೆ. ಅವಳ ಜಂಭ ಅಡಗಿಸುಕ್ಕೆ ಏನಾದರೂ ಪ್ಲಾನು ಹೇಳ್ತೀಯೇನೋ ಅಂದ್ಕೊಂಡ್ರೆ...ಅವಳೇನು ನಿನ್ನ ಮಾವನ ಮಗಳಲ್ಲ ವಲ್ಲ. ಅವಳ ಮೇಲೇನು ನಿನಗೆ ಸಾಫ್ಟ್ ಕಾರ್ನರ್?"

"ಅವಳು ನನ್ನ ಮಾವನ ಮಗಳಲ್ಲದಿರಬಹುದು. ಆದರೆ ಗೀತನ ತರಹಾನೇ...ನಿನ್ನ ಹಾಗೆ ನನ್ನ ಕೈಲಿ ಇರುಕೆ ಆಗುಲ್ಲಪ್ಪಾ. ಇಬ್ಬಿಬ್ಬರು ಹುಡುಗಿಯರು ಸಿಕ್ಕಿದರೆ ಸನ್ಯಾಸಿ ತರಹ ಏಕಿರಲಿ ನೀನೇ ಹೇಳು?"

"ಥೂ...ಎಷ್ಟು ಹೊಲಸು ಬುದ್ದಿ...ನಿನ್ನದು ?"

"ನಿನ್ನದು? ಅತೀ ಕೆಟ್ಟ ಬುದ್ಧಿ...ಅಂಥ ಪ್ರೆಟಿ ಗರ್ಲ್ ಮೇಲೆ ನಿನಗೆಂಥ ಸೇಡು, ಜಂಭ ಅಡಗಿಸ್ತಾನಂತೆ. ಜಂಭ ಅಡಗಿಸುವ ಮೊದಲು ಅವಳನ್ನು ನಿನ್ನ ಸ್ನೇಹಿತೆಯನ್ನಾಗಿ ಮಡ್ಕೋ..ಆ ಮೇಲೆ ಅವಳ ಜಂಭ ತಾನಾಗಿಯೇ ಅಡಗುತ್ತೆ"

"ಅದ್ಹೇಗೆ ?" ಅರ್ಥವಾಗದವನಂತೆ ಮುಖ ಮಾಡಿದ.

"ಅದ್ಹೇಗೋ ಅದು ಮುಂದಿನ ಮಾತು. ಅವಳ ಜಂಭ ಅಡಗಿದ ಮೇಲೆ ಅವಳ

ದಾರಿ ಅವಳಿಗೆ. ನಿನ್ನ ದಾರಿ ನಿನಗೆ"

"ಅದೇನೇ ಇರಲಿ. ಈಗ ನಿನ್ನ ದಾರಿಗೆ ನನ್ನನ್ನೂ ಎಳೆತಿದೀಯ ಅನ್ನು?"

"ಸ್ನೇಹಿತ ಅಂದ್ರೆ ಅಷ್ಟು ಮಾಡಬೇಡವೇ?" ನಕ್ಕ ಮುರಳಿ. ಮನೋಜ ಸಿಗಲಿಲ್ಲ. ಆದರೂ ಮನೋಜ ಅವಳ ಬಗ್ಗೆ ತಲೆ ಕೆಡಿಸಿಕೊಳ್ಳಲಿಲ್ಲ. ಅವಳೇ ಅವನನ್ನೂ ಕಂಡಾಗ ಹಲೋ ಹೇಳುತ್ತಿದ್ದಳು. ವಿಧಿ ಇಲ್ಲದೆ ಇವನೂ ಹಲೋ ಎನ್ನುತ್ತಿದ್ದ.

ಗೀತಾ ರಾಧಿಕಾಳಿಗೆ ಉಪದೇಶ ಮಾಡಿದ್ದಳು. ಮನೋಜನನ್ನು ಹೊಗಳಿ ಅವಳೊಡನೆ ಬೈಸಿಕೊಂಡಿದ್ದಳು. ಮುರಳಿ ತನ್ನ ಕಸಿನ್ ಎಂದೂ ಮುರಳಿಯ ಆಪ್ತ ಸ್ನೇಹಿತ ಮನೋಜ ಎಂದೂ ಅವರಿಬ್ಬರನ್ನೂ ಮೆಚ್ಚುಗೆಯ ನುಡಿಗಳಿಂದ ಹೊಗಳು ಮಾತನಾಡಿದಾಗ, ರಾಧಿಕಾ ಗೀತಾಳ ಮೇಲೆ ರೇಗಿದ್ದಳು.

"ಏನೇ ನೀನು ...ಮುರಳಿ ನಿನ್ನ ಕಸಿನ್ ಅಂತ ಈಗ ಹೇಳ್ತಿದೀಯಲ್ಲಾ.. ಮುಂಚೇನೇ ಏಕೆ ಹೇಳಲಿಲ್ಲ?"

"ಏನೋ...ಹೇಳುವ ಅವಕಾಶವೇ ಒದಗಿರಲಿಲ್ಲ."

"ನಿನ್ನನ್ನು ನೋಡಿದರೆ ಅಸೂಯೆಯಾಗುತ್ತೆ ಕಣೇ. ನಿನಗೆ ಕಸಿನ್ಸ್ ಇದಾರೆ. ನನಗೆ ಯಾವ ಕಸಿನ್ ಇಲ್ಲ. ನಮಮ್ಮನ ಹಾಗೇ ನಾನು ಒಂಟಿ. ನೀನೊಬ್ಬಳೇ ಫ್ರೆಂಡ್ ...ನನಗೆ ಯಾವ ಬಾಯ್ ಫ್ರೆಂಡ್ ಕೂಡಾ ಇಲ್ಲ."

"ನಿನಗೋ ಯಾರೂ ಸರಿ ಹೋಗುಲ್ಲ. ನಿನಗ್ಯಾಕೆ ಬಾಯ್ ಫ್ರೆಂಡ್ ನೀನ್ಯಾಕೆ ಆಸೆ ಪಡ್ತೀಯ....?"

"ಬಾಯ್ ಫ್ರಂಡ್ ಅಂದ್ರೆ..ಅಲ್ಲಿ ಇಲ್ಲಿ ಸುತ್ತಾಡುವುದು ಕೈಕೈ ಹಿಡದು ತಿರುಗಾಡುವುದು. ಹೋಟೆಲ್ಲಿಗೆ ಸಿನಿಮಾಕ್ಕೆ ಹೋಗುವುದು ಇದೆಲ್ಲಾ ನನಗಿಷ್ಟವಿಲ್ಲ. ನನ್ನ ಬಾಯ್ ಫ್ರೆಂಡ್ ಹೇಗಿರಬೇಕು ಗೊತ್ತಾ?" ಕಣ್ಣು ಮುಚ್ಚಿ ತನ್ಮಯತೆಯಿಂದ ಹೇಳತೊಡಗಿದಳು.

"ನಾನು ಏತಿ ಅಂದ್ರೆ ಅವ್ನು ಪ್ರೀತಿ ಅನ್ನಬೇಕು. ನಾನು ಕಾಲು ಕೆರೆದು ಜಗಳವಾಡಿದರೆ, ಅವನೂ ಜಗಳವಾಡಬೇಕು. ಆಗಲೇ ಮಜ..."

"ಈಗ ಮನೋಜನ ಜತೆ ಆಡ್ತೀದೀಯಲ್ಲ ಹಾಗಾ?" ಗೀತ ಮಧ್ಯೆ ಬಾಯಿ ಹಾಕಿ ಪ್ರಶ್ನಿಸಿದಳು.

"ಓಹುಂ...ಅವನ ಜೊತೆ ಜಗಳ ಆಡ್ದಾಗ ಮಜವಾಗಿತ್ತು. ಆದರೆ ಈಗ ನಾನು ಹಲೋ ಎಂದ್ರೂ ಹಲೋ ಅನ್ನೋಕೆ ಹಿಂದೆ ಮುಂದೆ ಯೋಚಿಸ್ತಾನೆ. ಒಂಥರಾ ಅಹಂಕಾರ ಅವನಿಗೆ ದೂರ್ವಾಸನತರ ಆಡ್ತಾನೆ."

"ನಿನ್ನ ಸ್ವಭಾವಾನೇ ನನಗೆ ಅರ್ಥವಾಗುಲ್ಲ ಕಣೇ ರಾಧಿಕಾ. ಜಗಳ ಆಡುವವನು ಬೇಕು ಅಂತೀಯ. ನೀನಾಗಿಯೇ ಹಲೋ...ಹೇಳ್ತೀಯ. ಅದರಲ್ಲೇನು ಮಜಾ ನಿನಗೆ? ನಾನು ಮುರಳಿ ಕಂಡಾಗೆಲ್ಲ ಜಗಳ ಆಡ್ತೀವಿ. ನಮಗೆ ಮಜಾ ಅಂತನ್ನಿಸಿಲ್ಲ."

"ನೀವಿಬ್ರೂ ಕಸಿನ್ಸ್. ಅದಕ್ಕೇ ಏನೂ ಅನ್ನಿಸುಲ್ಲ ನನಗೆ ಅಂಥವನು ಒಬ್ಬ ಸಿಗಲಿ ಆಮೇಲೆ ನಿನಗೆ ಹೇಳ್ತೀನಿ."

"ಆಮೇಲೆ ನನಗೆ ಹೇಳುಕ್ಕೆ ನಿನಗೆ ಬಿಡುವೆಲ್ಲಿ? ಸದಾ ಜಗಳ ಆಡುಕ್ಕೇ ಸಮಯ ಸಾಲದು?" ತಮಾಷೆ ಮಾಡಿದ್ದಳು.

"ನಿನಗೆ ಸದರ ಜಾಸ್ತಿ. ತಡಿ, ನಿಮ್ಮ ತಾಯಿಗೆ ಹೇಳ್ತೀನಿ."

"ನಮ್ಮಮ್ಮನಿಗೆ ಏನು ಹೇಳ್ತೀಯ, ಅವರಿಗೆ ಎಲ್ಲಾ ತಿಳಿದದ್ದೇ, ನೀನು ಬಾಯ್ ಫ್ರೆಂಡ್ ಮಜಾ ಅಂತ ಏನೇನೋ ಮಾಡ್ತೀಯ. ಇದೆಲ್ಲ ನಿಮ್ಮ ತಾಯಿಗೆ ತಿಳಿದರೆ.. ನಿಂಗೆ ಭಯ ಅನ್ನಿಸುಲ್ವಾ,,,?"

"ನಮ್ಮಮ್ಮನಿಗೆ ಏನು ಹೇಳ್ತೀಯ ಅವರಿಗೆ ಎಲ್ಲಾ ತಿಳಿದದ್ದೇ. ನೀನು ಬಾಯ್ ಫ್ರೆಂಡ್, ಮಜಾ ಅಂತ ಏನೇನೋ ಮಾಡ್ತಿಯ ಇದೆಲ್ಲ ನಿಮ್ಮ ತಾಯಿಗೆ ತಿಳಿದರೆ...? ನಿಂಗೆ ಭಯ ಅನ್ನಿಸುಲ್ವಾ?"

"ನಮ್ಮಮ್ಮನಿಗೆ ಹೇಗೆ ತಿಳಿಯಬೇಕು? ನಾನೋ....ನೀನೋ. ಹೇಳಬೇಕು ಅಷ್ಟೇ...ಅಷ್ಟಾದರೂ ಕೇಳಿಸಿಕೊಳ್ಳುಕ್ಕೆ ಪುರಸೊತ್ತಿದ್ದರೆ ತಾನೇ...? ಅವಳೂ...ಅವಳ ಕ್ಲಿನಿಕ್ ಪ್ರಪಂಚ! ಅದರಿಂದ ಎಂದಾದರೂ ಹೊರಗೆ ಬಂದಿದಾಳಾ? ಲೈಫ್ ಇರುವುದು ಎಂಜಾಯ್ ಮಾಡುಕ್ಕೆ ಅಂತ ಅವಳಿಗೇನು ಗೊತ್ತು? ಎಂದಾದ್ರೂ ಅವಳಿಗೆ ಬಾಯ್ ಫ್ರೆಂಡ್ ಇದ್ದ ಎನ್ನುವುದು ಅಸಾಧ್ಯದ ಮಾತು. ಮದುವೆಯಾದ ಗಂಡನ ಜೊತೆ ಕೂಡಾ ಎಂಜಾಯ್ ಮಾಡಿಲ್ಲ ಅಂತನನ್ನಿಸುತ್ತೆ.?"

"ಛೆ...ರಾಧಿಕಾ...ನಿನ್ನ ತಾಯಿಯ ಬಗ್ಗೆ ಹೀಗಾ ಮಾತಾಡೋದು?"

"ಏನಾಯ್ತೀಗ? ಇರೋ ವಿಚಾರ ಹೇಳಿದೆ ಅಷ್ಟೇ. ಅಮ್ಮನ ಬಗ್ಗೆ ನನಗೇನೂ ಕೆಟ್ಟ ಭಾವನೆಗಳಿಲ್ಲ. ಆದರೂ ಅವಳ ಡಿಸಿಪ್ಲೀನ್, ಅವಳ ಕ್ಲಿನಿಕ್ ಪ್ರಪಂಚ, ತನ್ನದೇ ಆದ ರೀತಿಯಲ್ಲಿ ನನ್ನನ್ನು ಬೆಳೆಸಿರುವ ಬಗೆ ನನಗೆ ಹಿಡಿಸುಲ್ಲ." ರೇಗುತ್ತೆ ತಲೆ ಕೊಡವಿದಳು.

"ಮನೆಯವರ ಮೇಲೇ ರೇಗುವವಳು, ನೀನು ಹೊರಗಿನವರನ್ನು ಬಿಡ್ತೀಯ? ಡಾಕ್ಟರಾಗುವವಳಿಗೆ ಈ ಗುಣ ಸರಿಯಲ್ಲ, ಈಗಿನಿಂದ ನಿನ್ನ ಗುಣ ತಿದ್ದಿಕೋ. ಅಭ್ಯಾಸ ಮಾಡಿಕೋ ನಿನಗೇ ಒಳ್ಳೆಯದು"

"ನಿಜ ಹೇಳಲಾ ಗೀತ, ನಾನು ಅಮ್ಮನ ಬವವಂತಕ್ಕೆ ಈ ಕೋರ್ಸ್‌ಗೆ ಸೇರಿದೆ. ಇಲ್ಲದಿದ್ರೆ ನಾನು ಲಿಟರೇಚರ್‌ನಲ್ಲಿ ಡಾಕ್ಟರೇಟ್ ಮಾಡಬೇಕು ಅಂತಿದ್ದೆ. ಅದೂ ಒಂದು ಕೋರ್ಸಾ? ಅದೂ ಒಂದು ಸಬ್ಜೆಕ್ಟಾ? ಅಂತ ಹೀಯಾಳಿಸಿ ಬಿಟ್ಟಳು. ನನಗೂ ಅಮ್ಮನ್ನ ಬಿಟ್ಟರೆ ಬೇರೆ ಯಾರಿಲ್ಲ. ಹೋಗಲಿ ಅಂತ ಸುಮ್ಮನಾದೆ. ಈಗಲೂ ಅಮ್ಮನಿಗೆ ಕಾಣದಂತೆ ಇಂಗ್ಲೀಷ್ ನಾವೆಲ್ಸ್ ಓದ್ತಾ ಇರ್ತೀನಿ. ಎಷ್ಟು ಮಜವಾಗಿರುತ್ತೆ ಗೊತ್ತಾ?"

"ಆ ಮಜಾ ಎಲ್ಲಾ ನಿನಗೇ ಇರಲಿ"

"ಏಯ್ ಕಳ್ಳೀ....ನನ್ನದೆಲ್ಲಾ ಥಿಯರಿ. ನಿನ್ನದು ಪ್ರಾಕ್ಟಿಕಲ್. ನೀನು ಮುರಳಿ ದಿನಾ ಮೀಟ್ ಮಾಡ್ತೀರಾ? ಏನೇನು ಮಾತಾಡ್ತೀರಿ..?"

"ಅವನು ನನ್ನ ಕಸಿನ್. ನನ್ನ ಬಾಯ್ ಫ್ರೆಂಡ್ ಅಲ್ಲ. ನೀನೇ ನೋಡ್ತೀ ಯಲ್ಲ. ನಾವು ಅಷ್ಟೇ ಮೀಟ್ ಮಾಡುವುದು. ಆಗ ಈಗ ಒಬ್ಬರ ಮನೆಗೆ ಇನ್ನೊಬ್ಬರು ಹೋಗ್ತೀವಿ. ಇನ್ನು ಒಂದು ವಿಷಯ ಅವನು ನನ್ನ ವುಡ್‌ಬೀ ಕೂಡಾ. ಆದರೆ ಈಗ ನಿನ್ನ ಹೊರತು ನಾನು ಯಾರಿಗೂ ಈ ವಿಚಾರ ಹೇಳಿಲ್ಲ. ಅವನೂ ಅಷ್ಟೆ....ಕಾಲೇಜಿನಲ್ಲಿ ಯಾರಿಗೂ ನಾವು ಕಸಿನ್ಸ್ ಅಂತ ಸಹ,ತಿಳಿಸಿಲ್ಲ."

"ಎಷ್ಟು ಕೆಟ್ಟ ಬುದ್ದೀನೇ...ನಿನ್ನ ಆಪ್ತ ಸ್ನೇಹಿತೆ ನಾನು. ನನಗೂ ವಿಷಯ ತಿಳಿಸಿರಲಿಲ್ಲ. ಎಷ್ಟು ಸ್ವಾರ್ಥಿನೇ ನೀನು.?"

"ಅದಕ್ಕೇನು, ಈಗ ಹೇಳಿದ್ನಲ್ಲ. ಇನ್ನೂ ನಿನಗೆ ನನ್ನ ಸ್ನೇಹ ಏಕೆ ಬೇಕಾಗಿದೆ? ಬಾಯ್‌ಫ್ರೆಂಡ್ ಸಹವಾಸ ಬೇಕಾಗಿದೆ. ಮನೋಜನಂತಹ ಮುಗ್ದ ಸಿಕ್ಕಿ ದಾನೆ. ಹೆಸರಿಗೆ ತಕ್ಕ ಹಾಗಿದಾನೆ. ನಿನಗೆ ಸರಿಯಾಗಿದ್ದಾನೆ. ಇನ್ನೇನಾಗಬೇಕು ನಿನಗೆ?" ಸ್ನೇಹಿತೆಯನ್ನು ಉಬ್ಬಿಸಿದಳು.

ರಾಧಿಕಾ ಉಬ್ಬಿ ಹೋದಳು ಹೇಗಾದರೂ ಸರಿ ಅವನ ಸ್ನೇಹವನ್ನು ಗಳಿಸಬೇಕು. ಅವನು ನನಗೆ ತಕ್ಕವನು. ನಾನು ಅವನಿಗೆ ತಕ್ಕವಳು ಹೀಗೆ ತರ್ಕಿಸಿದ ಮೇಲೆ. ತಾನಾಗಿಯೇ ಮಾತನಾಡಿಸಲು ಪ್ರಾರಂಭಿಸಿದಳು. ಅವನು ಉದಾಸೀನನಾಗಿಯೇ ಇದ್ದಾಗ ಪೆಚ್ಚಾದಳು. ಗೀತಳೊಡನೆ ಹೇಳಿಕೊಂಡಳು.

"ಮನೋಜನಿಗೆ ನನ್ನ ಮೇಲಿನ ಅಸಮಾಧಾನ ಇನ್ನೂ ಕಡಿಮೆಯಾಗಿಲ್ಲ."

ಈ ಮಾತನ್ನು ಗೀತ ಮುರಳಿಯೊಡನೆ ಹೇಳಿದಳು. ಅವನೂ ಹೇಳಿದ. ಈ ನಡುವೆ ಮನೋಜ ಅತೀ ಗಂಭೀರವಾಗಿದ್ದಾನೆ. ಏನು ವಿಷಯ ಅಂತ ಕೇಳಿದರೆ, ಪರೀಕ್ಷೆಯ ಚಿಂತೆ ಅಂತ ಅಂದಿದ್ದ. ನಮಗೂ ಎಲ್ಲಾ ಪರೀಕ್ಷೆ ಇಲ್ಲವೇ? ಪ್ರತೀ ವರ್ಷವೂ ಪರೀಕ್ಷೆ ಬರುತ್ತೆ... ಹೋಗುತ್ತೆ.. ಪಾಸಾದರೆ ಸರಿ. ಅವನ ಐಡಿಯಾ ಬೇರೆ. ಅವನ ವಯಸ್ಸಿಗೆ ಅವನ ಯೋಚನೆಗಳೇ ಬೇರೆ. ಬ್ರಹ್ಮಚಾರಿ ಮಾವನ ಜೊತೆ ಬೆಳೆದು ಅವನ ಮನಸ್ಸೂ ಬ್ರಹ್ಮಚಾರಿಯಾಗಿ ಬಿಟ್ಟಿರಬಹುದು. ತಮಾಷೆಯಾಗಿ ಎಷ್ಟೋ ಸಲ ಹೇಳಿಯಾಯಿತು. ಅವನು ಅವಳ ಬಗ್ಗೆ ಏನು ಯೋಚಿಸ್ತಾನೋ ಯಾರಿಗೆ ಗೊತ್ತೂ ಹೋಗಲಿ ಬಿಡು ನಮಗೇಕೆ?"

ಮುರಳಿ ಹೀಗೆ ವೇದಾಂತ ನುಡಿದರೂ..ರಾಧಿಕಾಳ ಬಗ್ಗೆ ಯೋಚಿಸಿದ್ದ. ರಾಧಿಕಾಳ ಹಿಂದೆ ಮುಂದೆ ಓಡಾಡಲು ಹುಡುಗರು ಕಾದು ನಿಂತಿರ್ತಾರೆ. ಅವಳ ಜೋರಿಗೆ, ಮಾತಿಗೆ ಹೆದರಿ, ಅವಳಿಗೆ ಯಾರೂ ಸ್ನೇಹಿತೆಯರಾಗಿಲ್ಲ. ಗೀತ ಒಬ್ಬಳೇ ಅವಳ ಸ್ನೇಹಿತೆ. ಚೆಲ್ಲು ಚಲ್ಲಾಗಿ ಆಡಿ ಯಾವ ಹುಡುಗ್ರನ್ನು ಅಟ್ರಾಕ್ಟ್ ಮಾಡುಲ್ಲ. ಏನೋ ಅವಳ ಸ್ವಭಾವವೂ ಸ್ವಲ್ಪ ವಿಚಿತ್ರ ಅಂತ ಗೀತ ಅವತ್ತೇ ಹೇಳಿದ್ಲಲ್ಲ.

ಮುರಳಿ ತಾಯಿಯ ಅಪೇಕ್ಷೆಯಂತೆ, ಅವರ ಮನೆಯಲ್ಲಿ ಶ್ರೀ ಸತ್ಯ ನಾರಾಯಣ ವ್ರತದ ಕಾರ್ಯಕ್ರಮವನ್ನಿಟ್ಟುಕೊಂಡು, ಹತ್ತಿರದ ನೆಂಟರಿಷ್ಟರು, ಅಕ್ಕಪಕ್ಕದವರನ್ನು ಆಹ್ವಾನಿಸಿದ್ದ. ಮನೋಜ. ರಂಗನಾಥರಿಗೂ ಆಮಂತ್ರಣ ಸಿಕ್ಕಿತು. ಗೀತ ಹೇಳಿದಳು ಅಂತ ರಾಧಿಕಾಳನ್ನು ಆಹ್ವಾನಿಸಿದ.

ರಾಧಿಕಾಳಿಗೆ ಮುರಳಿಯ ಮನೆಯವರ್‍ಯಾರ ಪರಿಚಯವಿರಲಿಲ್ಲ. ಅಲ್ಲದೇ ಪೂಜೆ ಪುನಸ್ಕಾರಗಳಲ್ಲಿ ಅವಳಿಗೆ ಆಸಕ್ತಿ ಇರಲಿಲ್ಲ. ಸ್ನೇಹಿತೆಯ ಬಲವಂತಕ್ಕೆ ಬೆಲೆ ಕೊಟ್ಟು ಬಂದಿದ್ದಳು. ಗೀತಳ ಜೊತೆ ಮಾತನಾಡುತ್ತಿದ್ದ ಅವಳು ಅನೇಕರ ಗಮನವನ್ನು ಸೆಳೆದಿದ್ದಳು.

ಮಹಾ ಮಂಗಳಾರತಿಯ ಹೊತ್ತಿಗೆ, ರಂಗನಾಥ ಮನೋಜ ಬಂದರು. ರಂಗನಾಥನಿಗೆ ಮನೆಯ ಬಳಿ ಇಳಿದಾಗಲೇ ಬಲವಾದ ಅನುಮಾನ. ಈ ಮನೆಗೆ ಈ ಮುಂಚೆ ತಾನು ಬಂದಿದ್ದೇನೆ. ಇದು ಸ್ನೇಹಿತ ಸತ್ಯಮೂರ್ತಿಯ ಮನೆ. ಹಾಗಾದರೆ

ಮುರಳಿ...ಅವನ ಹೃದಯದ ಬಡಿತ ಹೆಚ್ಚಾಯಿತು. ಒಳಗೆ ಬಂದ. ಬಾಗಿಲ ಎದುರಿಗೆ, ವೆರಾಂಡದ ಗೋಡೆಗೆ ತೂಗು ಹಾಕಿದ್ದ ಸತ್ಯಮೂರ್ತಿಯ ಭಾವಚಿತ್ರವನ್ನು ಕಂಡ. ಅವನ ಕಣ್ಣುಗಳು ತುಂಬಿ ಬಂದವು. ಹೃದಯ ಭಾರವಾಯಿತು. ಹೌದು, ಇದು ಸತ್ಯಮೂರ್ತಿಯ ಮನೆಯೇ..ಈಗ ಅವನು ಬದುಕಿಲ್ಲ. ಆದರೆ ನಾನೀಗ ಯಾರನ್ನ ಏನಂತ ಕೇಳಲಿ? ನನ್ನ ಗುರುತಿನವರು ಯಾರಾದರೂ ಇದ್ದು. ನನ್ನನ್ನು ಗುರುತಿಸಿದರೆ... ಏನೇನೋ ಸಮ್ಮಿಶ್ರ ಭಾವನೆಗಳಿಂದ ಅವನ ಕಾಲು ಮುಂದೆ ಹೆಜ್ಜೆ ಇಡಲಿಲ್ಲ. ಮುಂಬಾಗಿಲಿನಲ್ಲಿಯೇ ನಿಂತು ಮುರಳಿಯ ತಂದೆಯ ಫೋಟೋವನ್ನೇ ನೋಡುತ್ತಾ ನಿಂತಿದ್ದ. ಮಾವನನ್ನು ಮನೋಜ ಎಚ್ಚರಿಸಿದ. ಒಳಗೆ ಹೋಗೋಣ ಬಾ... ರಂಗನಾಥ ಅನುಮಾನಿಸುತ್ತಾ ಅತ್ತಿತ್ತ ನೋಡುತ್ತಾ ಒಳನಡೆದ. ಮುರಳಿ ಬಂದು ಇಬ್ಬರನ್ನು ಸ್ವಾಗತಿಸಿದ.

ಮುರಳಿಯನ್ನು ಏನೋ ಕೇಳಬೇಕೆಂದುಕೊಂಡು, ಬಾಯಿ ತೆರೆದವನು ಹಾಗೇ ನಿಂತು ಬಿಟ್ಟ. ಅವನಿಗೆ ಮತ್ತೂ ಒಂದು ಶಾಕ್. ರೂಮಿನ ಗೋಡೆಗೆ ಒರಗಿ ನಿಂತು, ಮಾತನಾಡುತ್ತಿದ್ದ ಇಬ್ಬರು ಹುಡುಗಿಯರಲ್ಲಿ ಒಬ್ಬಳು... ಅವಳು ಯಾರು? ಅವಳನ್ನೇ ನೋಡಿದ. ನೋಡುತ್ತಲೇ ಇದ್ದ.

ಅತ್ತಿತ್ತ ತಿರುಗುತ್ತಾ ಗುಂಪಿನಲ್ಲಿದ್ದವರ ಕಡೆ ನೋಡುತ್ತಾ ಏನೋ ಮಾತನಾಡುತ್ತಿದ್ದ ರಾಧಿಕಾ, ಮನೋಜನನ್ನು ಕಂಡಳು. ಖುಷಿಯಿಂದ ಮುಗುಳ್ನಕ್ಕು ಹಾಯ್ ಎಂದುಸುರಿ ಕೈಯಾಡಿಸಿದಳು. ಮಾವನ ಪಕ್ಕ ನಿಂತಿದ್ದ ಮನೋಜನಿಗೆ ಮುಜುಗರ, ಸುಮ್ಮನೆ ಮುಗುಳ್ನಕ್ಕ. ರಂಗನಾಥ ಅವಳನ್ನೇ ನೋಡುತ್ತಿದ್ದ.

ಮನೋಜ ಸುಮ್ಮನೆಯೇ ಇದ್ದುದು, ಆ ಮುದುಕ ತನ್ನನ್ನೇ ದಿಟ್ಟಿಸಿ ನೋಡುತ್ತಿರುವುದು ಕಂಡು, ಅವಳಿಗೆ ರೇಗಿಹೋಯಿತು.

"ಯಾರೇ ಆ ಮುದುಕ? ನಮ್ಮನ್ನೇ ಹೇಗೆ ನೋಡ್ತಿದಾನೆ?" ಪಿಸುದನಿ ಯಲ್ಲಿ ಪ್ರಶ್ನಿಸಿದಳು.

"ಥೂ ಹಾಗೆನ್ನ ಬೇಡವೇ? ಕೇಳಿಸೀತು. ಅವರು ಮನೋಜನ ಮಾವ"

"ಮೇಷ್ಟ್ರಾಗಿ ಹೀಗೆ ಹುಡುಗಿಯರನ್ನು ತಿನ್ನುವ ಹಾಗೆ ನೋಡುವ ಚಪಲ, ಥೂ ಅಸಹ್ಯ" ಗೊಣಗಿದಳು.

"ಅವರು ನಿನ್ನನ್ನೇ ನೋಡ್ತಿದಾರೆ ಅಂತ ನೀನ್ಯಾಕೆ ಅಂದ್ಕೋತೀಯ? ಅವರು ನನ್ನನ್ನ ನೋಡುತ್ತಿರಬಹುದು ಅಲ್ವಾ?"

] "ನಾನೋ ನೀನೋ ಆದರೂ ಅಸಭ್ಯ ವರ್ತನೆ"

"ಸುಮ್ಮನಿರು. ನೋಡಿದರೆ ನೋಡಲಿ ನಮಗೇನು ನಷ್ಟ?"

"ನನಗೆ ನಷ್ಟವೇ, ಆ ಮುದುಕ ಹೀಗೆ ನೋಡ್ತಿದಾನೆ. ಅವನ ಪಕ್ಕದಲ್ಲಿ ನಿಂತಿರುವ ಮನೋಜ ಗಂಭೀರವನ್ನು ನಟಿಸುತ್ತಿದಾನೆ. ಅವನಾದರೂ ನೋಡಿದ್ದರೆ....ಈ ಮುದುಕ ಹೀಗೇ ನೋಡುತ್ತಿದ್ದರೆ, ನನಗೆ ಹುಚ್ಚು ಹಿಡಿದು ಬಿಡುತ್ತದೆ ಅಷ್ಟೇ ನಾನು ಮನೆಗೆ ಹೋಗ್ತೀನಮ್ಮ."

"ಎಷ್ಟು ಅವಾಂತರ ನಿನಗೆ? ಈ ತಕ್ಷಣವೇ ಹೋಗ್ಬೇಕು ಅಂತ ಯಾಕೆ ಅನ್ನಿಸ್ಬೇಕು? ಬೇಕಾದರೆ ನೀನು ರೂಮಿನೊಳಗೆ ಕೂತಿರು"

ಅತ್ತ ಸರಿದ ಕೂಡಲೇ ಕೇಳಿದ.

ಪಾಪ ಮುರಳಿ ಅಷ್ಟು ಗೌರವದಿಂದ ಹೇಳಿದಾನೆ. ಊಟ ಮಾಡ್ಕೊಂಡೇ ಹೋಗೋಣ. ರಂಗನಾಥ ಅತ್ತಿತ್ತ ನೋಡುತ್ತಾ ಹೇಳಿದ. ಮನೋಜ ಸುಮ್ಮನಾದ.

ಮತ್ತೆ ಅರ್ಧಗಂಟೆಯೊಳಗೆ ಮಹಾ ಮಂಗಳಾರತಿ ಮುಗಿದು, ಎಲ್ಲರಿಗೂ ಎಲೆ ಹಾಕಿ, ಊಟಕ್ಕೆ ಬಡಿಸಿದರು. ರಂಗನಾಥ ಮನೋಜ, ಒಂದು ಕಡೆ ಪಕ್ಕಪಕ್ಕದಲ್ಲಿ ಕುಳಿತರು. ಅವರ ಎದುರಿನ ಸಾಲಿನಲ್ಲಿ ರಾಧಿಕಾ ಗೀತ ಕುಳಿತರು. ರಂಗನಾಥನಿಗೆ ಅವಳನ್ನು ಮತ್ತೆ ಆಗಾಗ್ಗೆ ನೋಡುವ ಅವಕಾಶ ಸಿಕ್ಕಿತ್ತು ರಾಧಿಕಾ ತನ್ನಲ್ಲೇ ಪಿಟಿಪಿಟಿ ಎಂದು ಬೈದು ಕೊಂಡಳು.

"ಈ ಮಹಾಶಯ ಹೀಗೇ ನೋಡ್ತಿದ್ರೆ ನಂಗೆ ಊಟ ಸೇರುಲ್ಲ ಕಣೆ ಗೀತ"

"ನೀನ್ಯಾಕೆ ಆ ಕಡೆ ನೋಡ್ತೀಯ...? ನಿನ್ನ ಪಾಡಿಗೆ ನೀನು ನಿನ್ನ ಎಲೆ ನೋಡಿಕೊಂಡು ಊಟ ಮಾಡು."

"ಏನೋ ಕಣೆ.... ನನಗೆ ಒಂಥರಾ ಆಗ್ತಿದೆ."

"ಏನೇ ನೀನು? ಎಲ್ಲೂ ಸರಿ ಹೋಗುಲ್ಲವಲ್ಲ ನಿನಗೆ. ನಿಮ್ಮ ಮನೇಲಿ ಹೀಗೆ ಪೂಜೆ ಪುನಸ್ಕಾರ, ಸಂಭ್ರಮವಿಲ್ಲವಲ್ಲ ಅಂತ ನಿನ್ನನ್ನ ಕರೆದರೆ, ಶುರು ಮಾಡಿದ್ಯೆಲ್ಲಾ ನಿನ್ನ ಗೋಣಗಾಟ. ಅವರು ಮನೋಜನ ಮಾವ? ಅವನಿ ಗಿಂತ ಸ್ಟ್ರಿಕ್ಟ್ ಬ್ರಹ್ಮಚಾರಿ. ತಿಳೀತಾ? ಅವರ ನೋಟದಲ್ಲಿ ಯಾವ ಕೆಟ್ಟ ಉದ್ದೇಶ ವಿಲ್ಲ, ಅವರಿಗೆ ಯಾವುದೋ ನೆನಪು ಬಂದಿರಬಹುದು ಅಂತನ್ನಿಸುತ್ತೆ."

"ಹುಂ ನಂದೇ ತಪ್ಪು ಅಂತನ್ನಿಸುತ್ತೆ. ನಾನು ಬರಲೇ ಬಾರದಾಗಿತ್ತು ಬೇಗ ಊಟ ಮುಗಿಸಿ ಮನೆಗೆ ಹೋಗ್ತೀನಿ," ಬಡಬಡಿಸಿ, ಸರಸರ ಊಟ ಮಾಡಲು ಶುರುಮಾಡಿದಳು. ಗಡಿ ಬಿಡಿಯಿಂದ ತುತ್ತು ನುಂಗಲು ಹೋಗಿ, ನೆತ್ತಿಗೆಹತ್ತಿ ರಂಪವಾಯಿತು. ಕೆಮ್ಮಲು ಪ್ರಾರಂಭಿಸಿದವಳನ್ನೇ ಎಲ್ಲರೂ ನೋಡುತ್ತಿದ್ದರು. ಗೀತ ನೆತ್ತಿ ತಟ್ಟಿದಳು. ನೀರು ಕುಡಿಯಲು ಹೇಳಿದಳು.

ಎದುರಿಗೆ ಕೂತಿದ್ದ ರಂಗನಾಥ, ಕೆಮ್ಮಿ ಕೆಮ್ಮಿ ಕೆಂಪಾಗಿದ್ದ ಅವಳ ಮುಖವನ್ನೇ ನೋಡಿದ. ಕಣ್ಣುಗಳಲ್ಲಿ ನೀರು ತುಂಬಿಕೊಂಡು, ಕಷ್ಟ ಪಡುತ್ತಿದ್ದವಳನ್ನು ಕಂಡು, ಕತ್ತೆತ್ತಿ ಮೇಲೆ ನೋಡಮ್ಮ ....ಸರಿ ಹೋಗುತ್ತೆ ಎಂದ. ಗೀತಳೇ, ಅವಳ ಕತ್ತನ್ನು ಮೇಲಕ್ಕೆ ಎತ್ತಿ ಛಾವಣಿ ತೋರಿಸಿದಳು.

ಮತ್ತೆ ಕೆಲವು ನಿಮಿಷಗಳಲ್ಲಿ ಎಲ್ಲಾ ಸರಿ ಹೋಯಿತು. ಆದರೆ ಅವಳಿಗೆ ಮತ್ತೆ ಊಟ ಸೇರಲಿಲ್ಲ. ಶ್ವಾಸನಾಳದ ತುದಿಯಲ್ಲಿ ಕೂತಿದ್ದ ಅಗುಳಿನ ಅಂಶ ಹೊರ ಬಂದು ನಿರಾಳವಾದರೂ, ಅವಳ ಮುಜುಗರ ಜಾಸ್ತಿಯಾಗಿತ್ತು. ಎಲ್ಲರೂ ತನ್ನನ್ನೇ ನೋಡುತ್ತಿದಾರೆ ಎಂಬ ಅನುಭವ. ಮೆಲ್ಲಗೆ ಕತ್ತೆತ್ತಿ ಮನೋಜನ ಕಡೆ ನೋಡಿದಳು. ಅವನು ನಕ್ಕ. ಅವನು ಮುಗುಳ್ನಕ್ಕನೋ, ಅಪಹಾಸ್ಯ ಮಾಡಿ ನಕ್ಕನೋ ಗೊತ್ತಾಗಲಿಲ್ಲ. ಏಕೋ ಏನೋ ರಂಗನಾಥನ ಕಡೆ ನೋಡುವ ಧೈರ್ಯ ಬರಲಿಲ್ಲ.

ಊಟ ಮುಗಿಯಿತು. ಎಲ್ಲರೂ ಎದ್ದರು. ರಾಧಿಕಾ ಮತ್ತೆ ಮಹಡಿಯ ನ್ನೇರಿದಳು. ರಂಗನಾಥ ಮನೋಜ ಇಬ್ಬರೂ ಹೊರಟಾಗ, ಮುರುಳಿ ಮನೋಜನನ್ನು ಉಳಿಸಿಕೊಂಡ.

"ನನ್ನ ಊಟ ಆಗಲಿ, ಆ ಮೇಲೆ ಸ್ವಲ್ಪ ಹೊತ್ತು ಬಿಟ್ಟು ಹೋಗುವಂತೆ ಇರ್ತೀಯಾ?" ಮನೋಜ ಮಾವನ ಮುಖ ನೋಡಿದ.

"ನಾನು ಹೋಗ್ತೀನಿ. ನೀನ ಬೇಕಾದರೆ ಇರು."

ಮುರಳಿ ಊಟಕ್ಕೆ ಕುಳಿತ. ಅವನ ಊಟ ಮುಗಿಯುವವರೆಗೂ ಅವನ ಪಕ್ಕ ಕುಳಿತು ಮನೋಜ ಮಾತನಾಡುತ್ತಿದ್ದ. ಕೈ ತೊಳೆಯಲು ಎದ್ದ ಮುರಳಿ, "ನೀನು ಮಹಡಿ ಮೇಲಿನ ರೂಮಿನಲ್ಲಿ ಕೂತಿರು.. ನಾನು ಈಗ ಬಂದು ಬಿಡ್ತೀನಿ" ಎಂದ.

ಮನೋಜ ಮಹಡಿಯನ್ನೇರಿದ. ಮೇಲೆ ಬಲ್ಕನಿಯಲ್ಲಿ ಎದುರು ಬದುರಿಗೆ ಕುಳಿತು, ಗೀತಾ, ರಾಧಿಕಾ ಮಾತನ್ನಾಡುತ್ತಿದ್ದರು. ಅವನನ್ನು ಕಂಡು ಗೀತ ಮುಗುಳ್ನಕ್ಕಳು. ರಾಧಿಕಾ ಕತ್ತು ತಗ್ಗಿಸಿದಳು. ಮನೋಜನಿಗೆ ನಗು ಬಂತು.

"ಯಾಕ್ರೀ ಇವತ್ತು ಹಲೋ ಹೇಳುಲ್ವಾ?" ಅವನ ಮಾತಿನ ಧಾಟಿಗೆ ಅವಳಿಗೂ ನಗು ಬಂತು, "ಹಲೋ ಮನೋಜ್" ಎಂದಷ್ಟೇ ಹೇಳಿದಳು.

"ನಿಮಗೆ ಆತುರ ಜಾಸ್ತಿ. ದಿನಾ ಹೀಗೇ ಊಟ ಮಾಡ್ತೀರಾ?"

"ಯಾಕೆ, ನಿಮಿಗ್ಯಾಕೆ?"

"ಛೆ..ಛೆ...ನನಗೇನೂ ಪ್ರಾಬ್ಲಂ ಇಲ್ಲ" ಅವನೆಂದ.

"ಯಾರೋ ಅವಳನ್ನು ಬೈದು ಕೊಂಡಿರಬೇಕು" ಗೀತ ನುಡಿದಳು

"ಇನ್ಯಾರು? ಇಲ್ಲೂ ಯಾಕೆ ಬಂದಳಪ್ಪಾ ಅಂತ ಮನೋಜನೇ ಬೈದು ಕೊಂಡಿರಬೇಕು. ರಾಧಿಕಾ ಹುಸಿ ಮುನಿಸಿನಿಂದ ನುಡಿದಳು.

"ತೋಬಾ ತೋಬಾ. ಎರಡು ಕೆನ್ನೆಗಳನ್ನು ಕೈನಿಂದ ತಟ್ಟಿಕೊಂಡ. ಅಷ್ಟು ಕೆಟ್ಟವನಲ್ಲ ನಾನು"

"ಹಾಗಾದ್ರೆ ನಿಮ್ಮ ಮಾವ ಇರಬೇಕು ಎಂದು ಮನಸ್ಸಲ್ಲೇ ಅಂದು ಕೊಂಡು ನಕ್ಕು ಬಿಟ್ಟಳು."

"ಯಾಕ್ರೀ ನಗ್ತಿದೀರಾ?"ಮನೋಜ ಅವಳ ನಗುಮುಖವನ್ನೇ ನೋಡಿದ. "ಏನಿಲ್ಲ.. ಏನಿಲ್ಲ...?"ಎಂದಳು ನಗುವನನ್ನು ಅದುಮಿಡುತ್ತಾ.

ಗೀತಾ ಏನೋ ನೆನಪಾದವಳಂತೆ, ಈಗ ಬರ್ತೀನಿ ಎಂದು ಕೆಳಗಿಳಿದು ಹೋದಳು. ಈಗ ಇಲ್ಲಿ ಇವರಿಬ್ಬರೇ. ಮನೋಜ ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತ.

"ನನ್ನ ಮೇಲೇನೂ ಕೋಪ ಇಲ್ವಲ್ಲಾ ಈಗ?" ರಾಧಿಕಾ ಕೇಳಿದಳು.

"ಯಾಕೆ? ಇಲ್ಲ, ಮುರಳಿ ಮನೇಲಿ, ನಾನ್ಯಾಕೆ ನಿಮ್ಮ ಮೇಲೆ ಕೋಪ ಮಾಡಿಕೊಳ್ಳಲಿ?"

"ಥೂ. ಹಾಗಲ್ಲ. ನಿಮ್ಮನ್ನು ಅವತ್ತು ಕಾಲೇಜಿನಲ್ಲಿ, ಹೀಯಾಳಿಸಿ ಹಂಗಿಸಿ ಅಂದೆನಲ್ಲ ಅದಕ್ಕೇ ...ನನ್ನದೇ ತಪ್ಪಿದ್ದರೂ...ಏನೇನೋ ಆಡಿದೆ."

"ಹೌದೂ...ನಿಮ್ಮದೇ ತಪ್ಪಿದ್ದರೂ, ನನ್ನನ್ನೆ ಬ್ಲೇಮ್ ಮಾಡಿದಿರಿ. ಐಸ್ ಕ್ರೀಂ ಕೊಡಿಸಿಕೊಂಡಿರಿ. ನನಗೆ ಅವಮಾನ ಮಾಡಿದಿರಿ. ಸರೀನಾ?"

"ಸಾರಿ. ಮನೋಜ್. ಐ ಆಮ್ ರಿಯಲಿ ಸಾರಿ"

"ಆಗ ಹಾಗೆ ದುಡುಕಿ ಮಾತನಾಡಿ, ಈಗ ಇಷ್ಟು ದಿನದ ಮೇ ಲೆ ಸಾರಿ ಕೇಳಿದ್ರೆ.. ಸರೀನಾ, ನೀವೇ ಹೇಳಿ. ನಾನಾಗುವ ಹೊತ್ತಿಗೆ ಸುಮ್ಮನಿದ್ದೆ. ಇನ್ಯಾರಾದರೂ

ಆಗಿದ್ರೆ...?"

"ಏನ್ಮಾಡುತ್ತಿದ್ದರು?" ಕೊಂಕಿದಳು.

"ಹೋಗಲಿಬಿಡಿ. ಆ ಮಾತೇಕೆ ಈಗ? ನಿಮಗೆ ಅಹಂಕಾರ ಜಾಸ್ತಿ. ನಿಮ್ಮಂತಹವರೊಡನೆ ಉದಾಸೀನವಾಗಿರುವುದೇ ಮೇಲು."

"ಏನು ಬೇಕಾದರೂ ಅನ್ನಿ. ಆದರೆ ನನ್ನನ್ನು ಕ್ಷಮಿಸಿದೀನಿ ಅಂತ ಹೇಳಿಬಿಡಿ. ನನಗೆ ಸಂತೋಷವಾಗುತ್ತೆ."

"ನಿಮ್ಮ ಸಂತೋಷಕ್ಕೆ, ನಾನು ಕ್ಷಮಿಸಿದೀನಿ ಅಂತ ಹೆಳ್ಬೇಕಾ? ಹೇಳ್ದೇ ಇದ್ರೆ?"

"ಬೇತಾಳನ ತರಹ ನಿಮ್ಮ ಬೆನ್ನು ಹತ್ತುತ್ತೀನಿ."

"ಈಗ ಮಾಡಿರುವುದೂ ಅದೇ ತಾನೇ...ಇಲ್ಲೂ ನನ್ನ ಸ್ನೇಹಿತನ ಮನೆಗೆ ನನ್ನನ್ನು ಕಾಡುಕ್ಕೆ ಅಂತ ಬಂದಿದೀರಲ್ಲ."

"ಹಾಗೇನಿಲ್ಲ. ಮುರಳಿ ನನಗೂ ಸ್ನೇಹಿತ, ನನ್ನ ಸ್ನೇಹಿತನ ಮನೆಗೆ ನನ್ನನ್ನು ಕಾಡುಕ್ಕೆ ಅಂತ ಬಂದಿದೀರಲ್ಲ"

"ಹಾಗೇನಿಲ್ಲ, ಮುರಳಿ ನನಗೂ ಸ್ನೇಹಿತ, ನನ್ನ ಸ್ನೇಹಿತೆ ಗೀತಳ ಕಸಿನ್ ಅವನು."

"ಆಂ ? ಹೌದಾ? ಗೀತಾ ಹೇಳಿದ್ರಾ? ಮುರಳಿ ನಂಗೇನೂ ಹೇಳಲೇ ಇಲ್ಲ.,?" ತನಗೇನೂ ತಿಳಿಯದು ಎಂಬಂತೆ ತಮಾಷೆ ಮಾಡಿ ನಕ್ಕ.

"ಹೌದು. ಗೀತಾ ಮುರಳಿ ಇಬ್ಬರೂ ಕಸಿನ್ಸ್. ನನಗೆ ಯಾರೂ ಕಸಿನ್ಸೇ ಇಲ್ಲ. ನಿಮಗೆ ಕಸಿನ್ಸ್ ಇದಾರಾ ಮನೋಜ್?"

"ಹೂಂ...ಹೂಂ..ಯಾರಿಲ್ಲ. ನನಗೆ ಗೊತ್ತಿರುವ ಹಾಗೆ, ಮಾವನ್ನ ಬಿಟ್ಟರೆ ನನಗೆ ಬೇರೆ ಯಾರೂ ಇಲ್ಲ.

ನಿಮಗೆ ಬೇಜಾರಾಗುಲ್ವಾ! ಒಂಟಿ ಅಂತ ಅನ್ನಿಸುಲ್ವಾ! ನನಗೇನೋ ತುಂಬಾ ಅನ್ನಿಸುತ್ತೆ. ಅಕ್ಕ ಅಣ್ಣ ತಮ್ಮ ತಂಗಿ, ಯಾರಾದ್ರೂ ಒಬ್ಬರಾದ್ರೂ ಇದ್ದಿದ್ರೇ...ಅಂತ ಸದಾ ಅಂದ್ಕೋತೀನಿ...ನನಗೂ ಅಷ್ಟೇ ನನ್ನ ಅಮ್ಮನ್ನ ಬಿಟ್ಟರೆ ಬೇರೆ ಯಾರೂ ಇಲ್ಲ. ಅಮ್ಮ ನನ್ನ ಜತೆ ಇರುವುದೇ ಕಮ್ಮಿ. ಸದಾ ಕ್ಲಿನಿಕ್..ಅದಕ್ಕೇ ನಾನು ಗೀತನ್ನ ಇಷ್ಟು ಹಚ್ಚಿಕೊಂಡಿರುವುದು.

ಒಂದೇ ಉಸಿರಿಗೆ ರಾಧಿಕಾ ಇಷ್ಟ ನುಡಿದರೂ, ಅವಳ ಮಾತಿಗೆ ಏನು ಹೇಳಬೇಕೆಂದು ತಿಳಿಯಲಿಲ್ಲ ಅವನಿಗೆ. ಸುಮ್ಮನೇ ಕೂತಿದ್ದ ಆಷ್ಟರಲ್ಲಿ ಗೀತ ಮುರಳಿ ಇಬ್ಬರೂ ಮಹಡಿ ಹತ್ತಿ ಬಂದರು.

"ಏನಾಯ್ತೋ...ಬೈತಿದ್ಯಾ ಇವರನ್ನ?" ಕೇಳಿದ ಮುರಳಿ.

"ಹುಂ ನಂಗಿನ್ನೇನು ಕೆಲಸ? ಬೈತಾ ಇದ್ದೆ.

ಹುಂ ಅವತ್ತು..ಅದೇ ಅವತ್ತು ಹೇಳಿದ್ದಯಲ್ಲ. ಅವರಿಗೆ ಅಹಂಕಾರ ಜಾಸ್ತಿ, ಜಂಭಾನ ಅಡಗಿಸಬೇಕು ಅಂತ ....ರಾಧಿಕಾಳ ನಡೆ ಓರೆ ನೋಕಡದಿಂದ ನೋಡಿದ. ಅವಳ ಮುಖ ಕೋಪದಿಂದ ಕೆಂಪಾಗಿತ್ತು ಮನೋಜ ರೇಗಿದ.

"ಷಟಪ್...ಏನೇನೋ ಹೇಳಬೇಡ ನೀನು..."

"ಯಾಕೆ? ಸುಳ್ಳೇನಲ್ಲವಲ್ಲ ನಾನು ಹೇಳಿದ್ದು ಜಂಭ ಇಳಿಸಿದೆಯಾ ಅಂತ ಕೇಳಿದೆ ಅಷ್ಟೇ..... ಅಲ್ರೀ ರಾಧಿಕಾ ನೀವೂ ಅಷ್ಟೇ. ಅವನ ಫೀಲಿಂಗ್ಸ್‌ನ ಹರ್ಬ್

ಮಾಡ್ತಿದೀರ...ನಮ್ಮ ಹುಡುಗ ಬಹಳ ಸೆನ್ಸಿಟಿವ್, ಸ್ನೇಹಿತನ ಭುಜದ ಮೇಲೆ ಕೈ ಇಟ್ಟ.

"ಸಾರಿ, ಕೇಳಾಯ್ತಾಲ್ಲ. ಇನ್ನೇನು?"

"ಓ...ಯಾವಾಗ ಕೇಳಿದ್ರೀ? ಏನಂದ ಇವನು?"

ಮುರಳಿ ಸುಮ್ಮನಿರು. ಆ ಮಾತೆಲ್ಲಾ ಈಗ್ಯಾಕೆ? ಅವರಿಬ್ಬರನ್ನು ನೋಡಿದ್ರೆ ಜಗಳ ಆಡ್ತೀದ್ರು ಅಂತ ಅನ್ನಿಸುತ್ತಾ ನಿನಗೆ ಗೀತ ನುಡಿದಳು.

ಓ...ಜಗಳ ಆಡ್ತಿರಲಿಲ್ಲ. ಹಾಗಾದ್ರೆ ಏನು ಮಾಡ್ತಿದ್ರು?" ಮುರಳಿ ಮತ್ತೆ ಕೆಣಕಿದ. ಗೀತಳ ಕಡೆ ನೋಡುತ್ತಾ ಕಣ್ಣು ಹೊಡೆದ.

ಮುರಳಿ, ಅತಿಯಾಯ್ತು...ಎಂದಳು ರಾಧಿಕಾ ನಾಚುತ್ತಾ. ಮನೋಜ ಬೆಪ್ಪನಂತೆ ಎಲ್ಲರನ್ನೂ ನೋಡಿದ. ಮುರಳಿ ಮನೋಜನ ಸಮೀಪ ಕುಳಿತ ಗೀತನ ಕಡೆ ತಿರುಗಿದ.

''ಗೀತ ಕಾಫಿ ಆಗಿದ್ರೆ ತಗೊಂಡು ಬಾ...ಬಾಯಾರಿಕೆ ಆಗ್ತಿದೆ''

''ಈಗ್ತಾನೇ ಊಟ ಆಯ್ತಿಲ್ಲೋ...''

'' ನಮ್ಮ ಮನೆ ಪದ್ದತಿ ಹಾಗೇ...ಊಟ ಆದ ಮೇಲೆ ಸ್ವಲ್ಪ ಹೊತ್ನಲ್ಲೇ ಕಾಫೀನೂ ಕುಡಿದು ಬಿಡ್ತೀವಿ''

''ನಿಮ್ಮ ಮನೆ ವಾತಾವರಣ ಎಷ್ಟು ಚೆನ್ನಾಗಿದೆ. ಮುರಳಿ ಎಲ್ಲಾ ಎಷ್ಟು ಹ್ಯಾಪಿಯಾಗಿದೀರಿ ಅಂತನ್ನಿಸುತ್ತೆ, ರಾಧಿಕಾ ಹೇಳಿದಳು.

''ಯಾಕೆ? ನೀವು ಹ್ಯಾಪಿಯಾಗಿಲ್ಲವಾ?" ಕೇಳಿದ.

ನಾನು ಹ್ಯಾಪೀನಾ? ಎವರ್?ಹುಟ್ಟಿದಾಗಿನಿಂದ ನಾನು ಒಂಟಿ. ಆಡ ಆಡಿಸುಕ್ಕೆ ಕೆಲಸದವಳು. ಊಟ ಮಾಡಿಸುಕ್ಕೆ ಆಡಿಗೆಯವಳು. ಅಮಮ್ಮಿಗೆ ಸದಾ ಕ್ಲಿನಿಕ್. ಮನೆಯಲ್ಲಿ ಒಬ್ಬಳಿಗೇ ಬೋರ್. ಅದಕ್ಕೇ ನಾನು ಸದಾ ಕತೆ ಪುಸ್ತಕ ಓದ್ತೀನಿ. ಆದರೆ ಟೆಕ್ಸ್ಟ್ ಬುಕ್ ಓದುಕ್ಕೆ ಬೆಜಾರಪ್ಪಾ...ಅಲ್ಲದೇ ಇದು ನನ್ನ ಇಷ್ಟವಾದ ಕೋರ್ಸ್ ಸಹ ಅಲ್ಲ. ಅಮ್ಮನ ಬಲವಂತಕ್ಕೆ ಸೇರಿದ್ದೀನಿ. ಕಾಲ ಕಳೆಯುಕ್ಕೆ ಕಾಲೇಜಿಗೆ ಬರ್ತೀರಿ ಅಂತ ಮುರಳಿ ನುಡಿದಾಗ ರಾಧಿಕಾ ಮುನಿಸಿಗೊಂಡಳು.

ಮತ್ತೆ ಮತ್ತೆ ಅದೇ ಮಾತನಾಡುತ್ತೀರಿ ನೀವು...ನಾನು ಬರ್ತೀನಿ ಎನ್ನುತ್ತಾ ಎದ್ದಳು.

ಏನ್ರೀ...?ಅದೆಷ್ಟು ಬೇಗ ಕೋಪ ಬರುತ್ತೆ ನಿಮಗೆ?" ಅಷ್ಟರಲ್ಲಿ ಗೀತ ನಾಲ್ಕು ಕಪ್‌ಗಳಲ್ಲಿ ಕಾಫಿ ತಂದಳು.

ಹೋಗಲಿ, ಬಿಸಿಬಿಸಿ ಕಾಫಿ ಕುಡಿದು, ನಿಮ್ಮ ಕೋಪಾನ ಆರಿಸ್ಕೊಳ್ಳಿ'' ಮುರುಳಿ ನಗುತ್ತಾ ಹೇಳಿದಾಗ, ಎಲ್ಲರೂ ನಕ್ಕರು. ಮನಸ್ಸು ಮುದಗೊಂಡಿತು. ಕಾಫಿ ಕುಡಿದು ಮನೋಜ ಎದ್ದ. ನಾನು ಬರ್ತೀನಪ್ಪಾ

ನಾನೂ ಬರ್ತೀನಿ ರಾಧಿಕಾ ನುಡಿದಳು.

ಬಾ..ಅತ್ತೆಗೆ ಹೇಳೂವಂತೆ ಗೀತ ಕರೆದಳು.

ಇಬ್ಬರೂ ಮಹಡಿ ಇಳಿದರು. ಅವರ ಹಿಂದೆ. ಮನೋಜ, ಮುರಳಿಯೂ ಇಳಿದರು. ನಿಮ್ಮ ತಾಯಿಗೆ ಹೇಳಿಬಿಡಪ್ಪಾ..., ಮನೋಜ ನೆಂದ.

ಗೀತ, ರಾಧಿಕಾ ಎಲ್ಲರಿಗೂ ಹೇಳಿ ಆಚೆ ಬರುವಷ್ಟರಲ್ಲಿ ಸಾಕಷ್ಟು ಸಂಯ ಕಳೆದಿತ್ತು ಮನೋಜ್ ಹೊರಟು ಹೋದ್ರಾ ಗೀತ ಕೇಳಿದಳು.

ಹುಂ..ಯಾಕೆ.

ಸುಮ್ಮನೇ ...ಕೇಳಿದೆ. ಬಿಸಿಲು ಹೇಗೆ ಹೋಗ್ತೀಯೆ ರಾಧಿಕಾಯ

ಸಾಯಂಕಾಲದವರೆಗೂ ಇದ್ರೆ ನಾನೂ ಬರ್ತೀನಿ. ಒಟ್ಟಿಗೇ ಹೋಗೋಣ ಮುರಳಿ ನುಡಿದ.

ಬೇಡಪ್ಪಾ...ಮಾತಾಡಿ ಮಾತಾಡಿ ಸಾಕಾಗಿದೆ. ಮನೆಗೆ ಹೋಗಿ ರೆಸ್ಟ್ ತಗೋಳ್ಳೋಣ ಅಂತ ಲೂನಾ ತಂದಿದೀ‌ಇ ನೋ ಪ್ರಾಬ್ಲಂ ಎಂದಳು.

ಅಬ್ಬಾ..ಸಕುಮಾರಿ. ಮಾತಾಡಿದ್ದಕ್ಕೆ ಸುಸ್ತಾ, ಹೀಗಾದರೆ ಡಾಕ್ಟರಾದ ಮೇಲೆ, ಪೇಶೆಂಟ್ಸ್ ಹತ್ತಿರ ಹೇಗೆ ಮಾತಾಡ್ತೀಯೆಯ ನಗುತ್ತಾ ಕೇಳಿದಳು ಗೀತ.

ಡಾಕ್ಟರಾದ ಮೇಲೆ ತಾನೇ ಆ ಮಾತು...ಯ ನೋಡ್ಕೊಳ್ಳೋಣ. ತಾನೂ ನಗುತ್ತಾ ನುಡಿದಳು. ರಾಧಿಕಾ ಲೂನಾ ಏರಿ ಕೈ ಬೀಸಿ ಮುಂದೆ ನಡೆಸಿದಳು. ಮುರಳಿ ಗೀತ ಒಳ ನಡೆದರು.

ಮನೋಜ ಮನೆ ಸೇರಿದ. ಕೆಂಪಾಗಿ ಬೆವರುತ್ತಾ ಬಂದವನನ್ನು ರಂಗನಾಥ ಕೇಳಿದ.

ಬಿಸಿಲ್ನಲ್ಲಿ ಬರೋಕೆ ಯಾಕೆ ಹೋದೆ. ನಿಧಾನವಾಗಿ ಸಾಯಂಕಾಲ ಬಂದಿದ್ರಾಗ್ತೀರಲಿಲ್ವಾ ಸ್ಕೂಟರ್ ತಾನು ತಂದು ಬಿಟ್ಟಿದ್ದ.,

ಇನ್ನಷ್ಟು ಹೊತ್ತು ಕೂತಿರುವುದು ಅಲ್ಲಿ . ಮುರಳೀಗೂ ಬೇಕಾದಷ್ಟು ಕೆಲಸವಿತ್ತು. ನಡೆದು ಬಂದಿದ್ದರಿಂದ ಬೆವರುತ್ತಿದ್ದ.

ಮನೂ...ಮುರಳಿ ಮನೇಲಿ ಜೊತೆ ಜೊತೆಯಾಗಿ ಇಬ್ಬರು ಹುಡುಗಿಯರಿದ್ರಲ್ಲ... ಯಾರು ಅವರು, ಅವರಿಗೆ ಏನಾಗಬೇಕು,

ಒಬ್ಬಳು ಗೀತಾ..ಮುರಳಿಯ ಸೋದರ ಮಾವನ ಮಗಳು ಇನ್ನೊಬ್ಬಳು ರಾಧಿಕಾ...ಅವಳ ಸ್ನೇಹಿತೆ. ಏಕೆ ಎಂಬಂತೆ ನೋಡಿದ.

ಓ...ರಾಧಿಕಾ...ಅವರಿಬ್ಬರಲ್ಲಿ ಯಾರು ಆ ರಾಧಿಕಾ, ಹೆಸರು ಮನೋಹರವಾಗಿದೆ ಅಂತ ಅನ್ನಿಸಿದ್ದರಿಂದ ಮತ್ತೆ ಕೇಳಿದ.

ಮನೋಜ ಗಾಭರಿಯಾದ. ಮಾವ ಯಾಕೆ ಹೀಗೆ ಕೇಳ್ತಿದ್ದಾನೆ? ಆ ಹುಡುಗಿ ಆಕ್ಸಿಡೆಂಟ್ ಮಾಡಿದಳು ಅಂಚ ಗೊತ್ತಾಗಿರಬಹುದೆ? ಯಾರು ಆ ವಿಷಯ ಹೇಳಿರಬಹುದು?ಯಾಕೆ?ಮತ್ತೆ ಕೇಳಿದ.

ರಂಗ ಒಂದು ಗಳಿಗೆ ತಡೆದ. ಇವನಿಗೇನಾದರೂ ಅನುಮಾನವೋ.... ನಾನೇಕೆ ಆ ಹುಡುಗಿಯ ಬಗ್ಗೆ ವಿಚಾರಿಸುತ್ತಿದ್ದೇನೆಂದು ನನ್ನ ಅನುಮಾನ ಏನೂಂತ ಹೇಳಲೋ ಬೇಡವೋ...ಹೇಳಿದರೆ ನಗಬಹುದೇನೋ...

ಸುಮ್ಮನೇ ಕೇಳಿದೆ, ಸುಮ್ಮನೇ ಹಾಗೆಲ್ಲಾ ಎಂದೂ ಮಾವ ಹುಡುಗಿಯರ ಬಗ್ಗೆ ಕೇಳಿದವನಲ್ಲ. ಎಂದು ಮನೋಜನಿಗೂ ಗೊತ್ತು. ಹುಡುಗಿ ಚೆನ್ನಾಗಿದಾಳೆ ಅಂತ ಕೇಳಿರಬಹುದೇ ಅಂತ ಅನ್ನಿಸಿ..ಓರೆಗಣ್ಣಿನಿಂದ ಮಾವನನ್ನು ನೋಡಿದ.

ಅದೇ ಊಟಕ್ಕೆ ಕೂತಾಗ, ನೆತ್ತಿ ಹತತಿಸಿಕೊಂಡು ಒದ್ದಾಡ್ತಿದ್ಲಲ್ಲಾ ಅವಳೇ...ಅವಳೆ ರಾಧಿಕಾ..."

"ಹೌದೇನೋ...ಹಾಗೇ ಇರಬಹುದು ಅಂತ ನನಗನ್ನಿಸಿತ್ತು. ನಿನಗೆ ಗೊತ್ತಾ ಮನೂ, ಆ ಹುಡಗಿ ನಮ್ಮ ಅನೂರಾಧ ಇದ್ಹಾಗೇ ಇದ್ದಾಳೆ. ಅನೂರಾಧ ಹೀಗೇ

ಇದ್ದಳು ಚಿಕ್ಕ ವಯಸ್ನಲ್ಲಿ.."

"ಯಾವ ಅನೂರಾಧ ?"

"ಅನೂರಾಧ ,,,,,ನಮ್ಮ ಅನೂ...ನಿನ್ನ ಅಮ್ಮ ಕಣೋ..."

"ಮನೋಜ ಬೆಪ್ಪಾದ. ಅಮ್ಮ ಹೇಗಿದ್ಲು ಅಂತ ನನಗೇನು ಗೊತ್ತು? ನಾನು ನೋಡೇ ಇಲ್ಲವಲ್ಲ."

"ನಾನು ಹೇಳ್ತಾ ಇದೀವಲ್ಲ. ಆ ಹುಡುಗಿ ತರಹಾನೇ ಇದ್ದದ್ದು.

"ಅದ್ಹೇಗೆ ಸಾದ್ಯ? ಆ ಹುಡುಗಿ ಯಾರೋ....ಎನೋ..ಅದೆಲ್ಲ ನಿನ್ನ ಭ್ರಮೆ."

"ಭ್ರಮೆ ಏನಲ್ಲ. ಫೋಟೋ ಇದ್ದಿದ್ರೆ ತೋರಿಸ್ತಿದ್ದೆ"

"ಹೌದು.... ಅಂದ್ಹಾಗೇ ಅಮ್ಮ ಅಪ್ಪನ ಫೋಟೋ ಯಾಕಿಲ್ಲ"ರಂಗನಾಥ ನಿರುತ್ತರನಾದ.

ಅಮ್ಮ ಅಪ್ಪನ ಬಗ್ಗೆ ಕೇಳಿದಾಗಲಿಲ್ಲಾ ಹೀಗೇ ಸುಮ್ಮನಾಗಿ ಬಿಡ್ತೀಯ. ನಾನೂ ನಿನಗೆ ಬೇಜಾರಾಗಬಾರದು ಅಂತ ಸುಮ್ಮನಿದೀನಿ. ಅಲ್ಲಿ ನಿಲ್ಲದೇ ಮನೋಜ ರೂಮಿನೊಳಕ್ಕೆ ಹೊರಟು ಹೋದಾಗ ರಂಗನಾಥನಿಟ್ಟುಸಿರುಗರೆದ.

ರೂಮಿನಲ್ಲಿ ಬಟ್ಟೆ ಬದಲಾಯಿಸಿ, ಮಂಚದ ಮೇಲೆ ಉರುಳಿಕೊಂಡ ಮನೋಜ. ಹುಟ್ಟಿನದಾಗಿನಿಂದ ನೋಡದ ಅಮಮ ಅಪ್ಪನ ಬಗ್ಗೆ ಅವನಿಗೆ ಯಾವ ಭಾವನೆಯೂ ಇರಲಿಲ್ಲ. ತಂದೆ ತಾಯಿಗಿಂದ ಹೆಚ್ಚಾಗಿ ಪೋಷಿಸಿ ಬೆಳೆಸಿದ್ದ ಮಾವನ ಮೇಲೆ ಅವನಿಗೆ ಅಪಾರ ಪ್ರೀತಿ, ಗೌರವ ವಿಶ್ವಾಸ. ಮಾವನ ಮನಸ್ಸು ನೋಯಿಸುವ ಮಾತನ್ನು ಎಂದೂ ಆಡಿರಲಿಲ್ಲ. ಮಾವನಿಗೆ ವಿರುದ್ಧವಾಗಿ ಎಂದೂ ನಡೆದು ಕೊಂಡಿರಲಿಲ್ಲ. ಮಾವ ಹೇಳಿದ್ದು ವೇದವಾಕ್ಯ ಎಂದು ಅವನ ಭಾವನೆ. ಇವತ್ತು ಅವನು, ಮಾವನಿಗೆ ಏನೋ ಭ್ರಮೆ ಎಂದು ಹೇಳಿದ್ದರೂ, ಮಾವ ಎಂದೂ ಆಡಿರದ ಮಾತುಗಳು ಇವು ಎಂದು ಚಿಂತಿಸಿದ....ಮಾವ ಅನೂರಾಧಳ ಬಗ್ಗೆ ಹೇಳಿ, ಮನೋಜ ರಾಧಿಕಾಳ ಬಗ್ಗೆ ಚಿಂತಿಸುವಂತೆ ಮಾಡಿದ್ದ. ಅವಳ ಜೊತೆ ಎರಡು ಸಲ ಬೇಟಿ ಯಾದದ್ದೂ ಆಕಸ್ಮಿಕವಾಗಿ. ಘಟಾವಾಣಿ ಹುಡುಗಿ, ನನಗೇ ಜೋರು ಮಾಡಿಬಿಟ್ಟಳು. ಆಮೇಲೆ ಕಂಡಾಗ ಹಲೋ ಎಂದೂ ತಾನಾಗಿಯೇ ಹೇಳಲಾರಂಭಿಸಿದಳು. ಆದರೆ ತಾನೆಂದೂ, ಅವಳ ಬಗ್ಗೆ ಆಸಕ್ತಿ ತೋರಿದವನಲ್ಲ. ಅವಳ ಗೊಡವೆ ತನಗೇಕೆ ಎಂದು ಉದಾಸೀನನಾಗಿಯೇ ಇದ್ದ. ಆದರೆ ಇಂದು ಹಾಗೆನಿಸಲಿಲ್ಲ. ಊಟದಲ್ಲಿ ನೆತ್ತಿ ಹತ್ತಿ ಒದ್ದಾಡುತ್ತಿದ್ದವಳನ್ನು ಕಂಡು ತುಸು ನಗು ಒಂದಿದ್ದರೂ ಮನ ಮರುಗಿತ್ತು. ಬೇಕೆಂದೇ ಅವಳನ್ನು ಕೊಂಕಿದ್ದ. ಆ ಮೇಲೆ ಅವಳ ಮುಗ್ದ ಮಾತುಗಳನ್ನು ಕೇಳಿ. ಪಾಪ ಅಂತನಿಸಿತ್ತು. ಪಾಪ ಅವಳು ಒಂಟಿ. ಅದನ್ನು ಅವಳು ಮನಸ್ಸಿಗೆ ತುಂಬಾ ಹಚ್ಚಿಕೊಂಡಿದಾಳೆ. ಅವಳಿಗೆ ತಾಯಿಯನ್ನು ಬಿಟ್ಟು ಬೇರೆ ಬಂಧುವಿಲ್ಲ. ಗೀತನ್ನ ಬಿಟ್ಟರೆ ಆಪ್ತರಿಲ್ಲ. ನನಗಿನ್ನೇನು? ಮಾವನನ ಮುರಳೀನ ಬಿಟ್ಟರೆ ಬೇರೆ ಯಾರಿದಾರೆ? ನನಗೂ ಅವಳಿಗೂ ಒಳ್ಳೇ ಜೋಡಿ .,...ನಗು ಬಂತು.

ಮನಸ್ಸು ಮೃದುವಾಗುತ್ತಿದ್ದ ಹಾಗೇ ಜೋಡಿಯ ಚಿಂತೆ. ಅವಳ್ಯಾರೋ. ನಾನ್ಯಾರೋ..ನನಗೇಕೆ ಅವಳ ಚಿಂತೆ ಎಂದುಕೊಂಡರೂ, ಮತ್ತೆ ಮತ್ತೆ ಅವಳ ಮುಖ ಮನದೆದುರು ಬಂದು ನಿಲ್ಲುತ್ತಿತ್ತು. ಅದಕ್ಕೆ ತಕ್ಕ ಹಾಗೆ ಮಾವನ ಮಾತು. ನಾನು

ನೋಡಿ ನೆನಪಿರದ ಅಮ್ಮನ ಹೋಲಿಕೆ ಇರುವ ಈ ಹುಡುಗಿ ಯಾರು? ನನ್ನ ಮನಸ್ಸನ್ನು ಆಕರ್ಷಿಸಿರುವ ಈ ಬೆಡಗಿ ಯಾರು?...ಯಾರೇ ಇರಲಿ. ಈಗ ಈ ಚಿಂತೆಯನ್ನೆಲ್ಲ ಕಿತ್ತುಗೆಯ ಬೇಕು. ಪರೀಕ್ಷೆಗೆ ಇನ್ನು ಕೆಲವೇ ದಿನಗಳು ಬಾಕಿ ಇವೆ ಎಂದುಕೊಂಡು, ಕೈಗೆ ಸಿಕ್ಕಿದ ಒಂದು ಪುಸ್ತಕದ ಹಾಳೆಗಳನ್ನು ತಿರುವಿದ.

ಅನಂತರ, ರಾಧಿಕಾ ಎದುರಿಗೆ ಸಿಕ್ಕು. ಹಲೋ ಎಂದಾಗಲೆಲ್ಲಾ ಇವನೂ ಸ್ನೇಹದಿಂದ ಮಾತನಾಡಿಸುತ್ತಿದ್ದ. ಅವಳು ಕಾಣದಿದ್ದ ದಿನ ಮನಸ್ಸು ಚಡಪಡಿಸು ತ್ತಿತ್ತು. ಆಗಾಗ್ಗೆ ಮನಸ್ಸು ಅವಳ ಹಿಂದೆ ಮುಂದೆ ಸುತ್ತುತ್ತಿತ್ತು. ರಂಗನಾಥನಿಗೂ ಏನೋ ಚಡಪಡಿಕೆ.ಆ ಹುಡುಗಿಯನ್ನು ಮತ್ತೆ ಕಾಣಬೇಕು. ಮಾತನಾಡಿಸಬೇಕು ಎಂಬ ಬಯಕೆ. ಆದರೆ ಯಾರಿಗೆ ಹೇಳಬೇಕು ಈ ಮಾತನ್ನು? ಮನೋಜಮುರಳಿ ಏಂದುಕೊಳ್ಳಬಹುದು? ಎಂದು ತಡೆದುಕೊಂಡಿದ್ದ.

ಎಂದೂ ಯಾರ ಬಗ್ಗೆಯೂ ತನಗೇನೂ ಅನ್ನಿಸಿರಲಿಲ್ಲ. ಏಕೋ ಏನೋ ಆ ಹುಡುಗಿಯನ್ನೂ ಕಂಡ ಕೂಡಲೇ ನನಗೆ ಒಂದು ತರಹ ಅನುಭವವಾಯಿತು. ಅದು ಆನಂದವೋ. ಉತ್ಸಾಹವೋ ತಿಳಿಯದು. ಈಗ ಆ ಹುಡುಗಿಯ ಬಗ್ಗೆ ತಿಳಿದುಕೊಳ್ಳಬೆಕೆನ್ನುವ ಹಂಬಲ.ಮುರಳಿ ಸತ್ಯನ ಮಗ ಅಂತ ತಿಳಿದದ್ದಕ್ಕಿಂತ ಹೆಚ್ಚು ಆನಂದ ಆ ಹುಡುಗಿಯನ್ನು ಕಂಡು. ಏಕಿರಬಹುದು? ಚಿಂತಿಸಿ ಚಿಂತಿಸಿ ಬಳಲಿದ.

ಪರೀಕ್ಷೆಯ ದಿನಗಳು ಹತ್ತಿರವಾಗುತ್ತಿದ್ದುದರಿಂದ ಮನೋಜ ಹೆಚ್ಚು ಮನೆಯಲ್ಲೇ ಇರುತ್ತಿದ್ದ. ಆಗ ಈಗ ಮುರಳಿಯೇ ಬರುತ್ತಿದ್ದ. ಇಬ್ಬರೂ ಒಟ್ಟಾಗಿ ಕೂತು ಏನೇನೋ ಡಿಸ್ಕೆನ್ ಮಾಡುತ್ತಿದ್ದರು. ರಂಗನಾಥ ಹೊತ್ತಿಗೆ ಸರಿಯಾಗಿತಿಂಡಿ ಕಾಫಿಗಳನ್ನು ಮಾಡಿಕೊಟ್ಟು ಎಲ್ಲವನ್ನು ತಾನೇ ಮಾಡುತ್ತಿದ್ದ.

ರಾಧಿಕಾ ಗೀತನ್ನ ಗೋಳು ಹೊಯ್ದು ಕೊಳ್ಳುತ್ತಿದ್ದಳು.

"ನೀನು ನನಗೆ ಗೈಡ್ ಮಾಡದಿದ್ದರೆ. ನಾನು ಫೇಲ್ ಆಗಿ ಬಿಡ್ತೀನಿ. ಆ ಮೇಲೆ ನಾನೇನೋ ಮನೇಲೇ ಇದ್ದು ಬಿಡ್ತೀನಿ. ಆದರೆ ನಿನಗೇ ಲಾಸ್..ನನ್ನಂತಹ ಆಪ್ತ ಕ್ಲಾಸ್‌ಮೇಟ್ ಯಾರೂ ಸಿಗುಲ್ಲ ನೋಡು,"

ಅವಳ ಮಾತಿಗೆ ಗೀತ ನಕ್ಕು ಬಿಡುತ್ತಿದ್ದಳು. ಫೇಲಾಗುವಷ್ಟು ದಡ್ಡಿ ಯೇನಲ್ಲ ನೀನು. ಆದರೆ ನನ್ನನ್ನು ನೀನು ಹೀಗೆ ಗೋಳು ಗುಟ್ಟಿಸುತ್ತಿದ್ದರೆ, ನಾನು ಫೇಲಾಗಿ ಬಿಡ್ತೀನಿ ಅಷ್ಟೇ. ಮುಂದಿನ ಕ್ಲಾಸಿಗೆ ನೀನು ಹೋಗ್ತೀಯ. ಆಗ ನಿನಗೂ ಅಷ್ಟೇ. ನನ್ನಂಥ ಗೆಳತಿ ಯಾರೂ ಸಿಗಲ್ಲ ನೋಡು."

"ಹೌದು ಕಣೇ ಗೀತ. ನಿನ್ನನ್ನ ಬಿಟ್ಟರೆ ನನಗೆ ಬೇರೆ ಯಾರೂ ಸರಿ ಹೋಗುಲ್ಲ. ಯಾಕೇ?"

"ಯಾಕೇಂದ್ರೆ..ನೀನು ಹೇಳುವುದನ್ನೆಲ್ಲ ನಾನು ಸಿನ್ಸಿಯರ್ ಆಗಿ ಕೇಳ್ತೀನಿ.. ಅದಕ್ಕೇ"

"ಐಸೀ...ಹಾಗಾದ್ರೆ ಈ ಚಾಪ್ಟರ್ ಜೋರಾಗಿ ಓದು. ನಾನು ಕೇಳ್ತಾ ಇರ್ತೀನಿ" ಕಣ್ಣುಮುಚ್ಚಿ ಹಾಗೇ ಒರಗಿ ಕುಳಿತಳು.

"ಥೂ ನಿನ್ನ, ಎಂದು ಬೈದು, ಇವತ್ತು ಒಂದು ದಿನ ಮಾತ್ರ.. ನಾಳೆ ಯಿಂದ ನೀನೇ ಓದ್ಕೋಬೇಕು?" ಎಂದು ಹೇಳಿ ಓದಲು ಪ್ರಾರಂಭಿಸಿದಳು.

ಪರೀಕ್ಷೆಗಳು ಮುಗಿದು, ಕೆಲವೇ ದಿನಗಳ ರಜ ಕಳೆಯುವಷ್ಟರಲ್ಲಿ ಹೆಚ್ಚು ಕಡಿಮೆ ಎಲ್ಲರೂ ಫಸ್ಟ್ ಕ್ಲಾಸ್‌ನಲ್ಲಿ ಪಾಸಾಗಿದ್ದರು. ಎಲ್ಲರಿಗಿಂತ ಹೆಚ್ಚಿನ ಮಾರ್ಕ್ಸ್ ಬಂದಿದ್ದು ಮನೋಜನಿಗೆ.

ಮನೋಜ, ಮುರಳಿ ನಾಲ್ಕನೇ ವರ್ಷದ ಮೆಡಿಕಲ್ ವಿದ್ಯಾರ್ಥಿ ಗಳಾದರೆ, ಗೀತಾ, ರಾಧಿಕಾ, ಎರಡನೇ ವರ್ಷಕ್ಕೆ ಬಂದಿದ್ದರು. ಮುರಳಿಯ ತಮ್ಮ ಮೋಹನ ಬಿ.ಇ. ಮುರನೇ ವರ್ಷದಲ್ಲಿ ಅಭ್ಯಾಸ ಮಾಡುತ್ತಿದ್ದ.

ಪರೀಕ್ಷೆಯಲ್ಲಿ ಹೆಚ್ಚಾಗಿ ಮಾರ್ಕ್ಸ್ ತೆಗೆದು, ಪಾಸಾದುದಕ್ಕೆ ಸ್ನೇಹಿತರೆಲ್ಲಾ ಪಾರ್ಟಿ ಕೊಡಿಸು ಎಂದು ಮನೋಜನನ್ನು ಪೀಡಿಸಿದರು. ಮನೋಜ ರಂಗನಾಥನ ಸಲಹೆಯನ್ನು ಕೇಳಿದ,"ಪಾರ್ಟೀನ ಯಾವು ದಾದರೂ ಹೋಟೆಲ್ಲಿನಲ್ಲಿ ಕೊಡಿಸ್ಲಾ..?"

"ಎಂಟು ಹತ್ತು ಜನ ಆದರೆ, ಮನೇಲೇ ತಿಂಡಿ ಕಾಫಿ ಮಾಡಿಸಿ ದರಾಯ್ತು. ಹೊಟೆಲ್ಲು ಯಾಕೆ?"

"ಮನೇಲಿ ಕಷ್ಟ ಆಗುಲ್ವಾ? ಜಾಗ ತಾನೇ ಎಲ್ಲಿದೆ?"

"ಸಾಯಂಕಾಲದ ಹೊತ್ತಾದ್ರೆ ತಂಪಾಗಿರುತ್ತೆ. ಟೆರೆಸ್ ಮೇಲೆ ಒಂದು ನಾಲ್ಕು ಕುರ್ಚಿ ಹಾಕಿಸಿದ್ರಾಯ್ತು.?"

"ಹಾಗಾದ್ರೆ..ಆ ಜವಾಬ್ದಾರಿ ನಿಂದು ಶನಿವಾರದ ಸಾಯಂಕಾಲಕ್ಕೆ ಅವರುಗಳಿಗೆ ಹೇಳಿ ಬಿಡ್ತೀನಿ."

"ಹಾಗಾದ್ರೇ....ಹಾಗೇ ಆ ಹುಡುಗಿ ರಾಧಿಕಾಳನ್ನು ಕರೆದುಬಿಡು. ಅನುಮಾನಿಸುತ್ತಾ ರಂಗನಾಥ ಹೇಳಿದಾಗ, ಮನೋಜ ಚಕಿತನಾದ. ಹುಬ್ಬು ಗಂಟಿಕ್ಕಿ ಕೇಳಿದ.

''ಅವಳ್ಯಾಕೆ? ಅವಳು ನನಗಿಂತ ಜೂನಿಯರ್.."

"ಹಾಗಲ್ಲ ಕಣೋ...ಅವತ್ತು ನೋಡಿದ್ದು...ಆಮೇಲೆ ಎಷ್ಟೋ ಸಲ ಆ ಹುಡುಗೀನ. ನೋಡಬೇಕು, ಮಾತನಾಡಿಸಬೇಕು ಅಂತ ಅನ್ನಿಸಿದ್ದುಂಟು. ಆದರೂ ತಡೆದುಕೊಂಡೆ. ಈಗ ಒಂದು ಅವಕಾಶ ಬಂದಿದೆ. ಕರೀತೀಯ? ನನಗೊಸ್ಕರ ಕರೀತೀಯಾ?" ಮಾನವ ಹುಚ್ಚುತನಕ್ಕೆ ಕೋಪ ಬಂದಿತ್ತು.

''ಯಾರಾದ್ರೂ ಕೇಳಿದ್ರೆ ನಗ್ತಾರೆ? ಅಲ್ಲ, ಅಮ್ಮ ಇದ್ದಹಾಗೆ ಇದಾಳೆ ಅಂದ ಮಾತ್ರಕ್ಕೆ ಕರೆಯೋದಾ? ನನಗಿಷ್ಟವಿಲ್ಲ" ಎಂದ.

''ಏನೋ ನನಗೆ ಆ ಹುಡುಗೀನ ನೋಡಬೇಕು ಅಂತ ಅನ್ನಿಸ್ತು. ಅದಕ್ಕೇ ಹೇಳಿದೆ ಇನ್ನು ನಿನ್ನ ಇಷ್ಟ" ರಂಗನಾಥನಿಗೆ ಅಸಮಾಧಾನವಾಗಿತ್ತು.

ಮನೋಜ ಮುರಳಿಗೆ ಈ ವಿಷಯವನ್ನು ತಿಳಿಸಿದ.

" ನನ್ನ ತಾಯಿಯ ತರಹವೇ ರಾಧಿಕಾ ಇದಾಳೆ ಎಂಬ ಭ್ರಮೆ ಮಾವನಿಗೆ. ಈಗ ನನ್ನ ಮೇಲೆ ಸಿಟ್ಟು..ಏನು ಮಾಡಲೋ...?"

"ರಾಧಿಕಾ ಈಗ ನಿನಗೂ ಫ್ರೆಂಡ್ ತಾನೇ, ಮೊದಲಿನ ಹಾಗೆ ಎನಿಮೀಸ್ ಅಲ್ಲವಲ್ಲ. ಕರೆದರಾಯ್ತು. ಗೀತನ್ನೂ ಕರೆದರೆ ಅವಳ ಜೊತೆಗೆ ಅವಳೂ ಬರ್ತಾಳೆ"

"ಹಾಗಂತೀಯ? ಯಾರಾದ್ರೂ ಏನಾದ್ರೂ ಅಂದ್ರೆ? ಆಡಿಕೊಂಡು ನಕ್ಕರೆ...?"

"ಯಾರ್‍ಯಾಕೆ ಆಡಿಕೊಂಡು ನಗ್ತಾರೆ? ನೀನು ಯಾವ ಶತಮಾನ ದಲ್ಲಿದೀಯಾ? ಅಂಥಾ ಚೆನ್ನಾಗಿರುವ ಹುಡುಗೀನ ಪಾರ್ಟಿಗೆ ಕರಿ ಅಂತ ನಿನ್ನ ಮಾವನೇ ಹೇಳಿರುವಾಗ

ಇನ್ನೇನು? ಆ ಹುಡುಗಿಗೆ ನಿನ್ನ ತಾಯಿಯ ಹೋಲಿಕೆ ಇದ್ದರೂ ಇರಬಹುದು. ನೀನೂ ಹಾಗೇ ಭಾವಿಸು."

"ಎಂದೂ ನೋಡಿರದ ಅಮ್ಮನ ತರಹ ಅಂತ ಹೇಗೆ ತಿಳಿದು ಕೊಳ್ಳಲಿ?"

"ನಿನ್ನ ಅಮ್ಮನ ತರಹ ಅಂತ ತಿಳಕೋ ಬೇಡವೋ ಪೆದ್ದೇ...ನಿನ್ನ ಗರ್ಲ್‌ಫ್ರೆಂಡ್ ಅಂತಲೇ ತಿಳಕೋ ನಿಮ್ಮಮ್ಮನ ಹಾಗೆ ನೋಡಲು ಅಕರ್ಷಕವಾಗಿರುವ ಹುಡುಗಿ, ನಿನ್ನ ಮಾವನ ಮನಸ್ಸನ್ನು ಸೆಳೆದ ಮೇಲೆ ನಿನಗಿನ್ನೇನು? ಹೋಡಿ ಒಂದುಛಾನ್ಸು"

"ಸರಿ ಹೋಯ್ತು. ಒಬ್ಬೊಬ್ಬರು ಒಂದೊಂದು ತರಹ ಆಡ್ತೀರಿ ನೀನೇ ಗೀತನಿಗೂ ರಾಧಿಕಾಳಿಗೂ ಹೇಳಿ ಬಿಡು.?"

"ಹೇಳ್ತೀನಿ...ಅದಕ್ಕೇನು? ಬರದೇ ಇದ್ರೆ ನನ್ನನ್ನ ಬೈಯಬೇಡ."

ಮುರಳಿ, ಗೀತಾ ರಾಧಿಕಾಳಿಗೆ ವಿಷಯ ತಿಳಿಸಿ, ಪಾರ್ಟಿಗೆ ಬರಬೇಕೆಂದು ಮನೋಜ ಹೇಳಿದಾನೆ ಎಂದಾಗ ರಾಧಿಕಾ ಕೇಳಿದಳು.

"ಮನೋಜ್ ಎಲ್ಲಿ? ಅವರೇ ಹೇಳಬಹುದಾಗಿತ್ತಲ್ಲ,?"

"ಅವನು ಅರ್ಜೆಂಟ್ ಕೆಲಸವಿದೆ ಅಂತ ಓಡಿ ಹೋದ. ಅದಿರಲಿ, ನಾನು ಕರೆದರೆ ನೀವು ಬರುಲ್ವಾ? ಸುಮ್ಮನೇ ಬನ್ನಿ. ನಿಮಗೆ ಅವನ ಮಾವನ ಸ್ಪೇಷಲ್ ಇನ್ವಿಟೇಷನ್ ಇದೆ"

"ಅವರ ಮಾವಾನಾ? ನಾನು ಬರುಲ್ಲ. ನನಗೆ ಸರಿಹೋಗುಲ್ಲ"

"ಯಾಕ್ರಿ ಅವರು ನಿಮ್ಮಂತಹ ಹುಡುಗೀನ ಸ್ಪೇಷಲ್ ಆಗಿ ಕರೆದಿರುವುದಕ್ಕೆ ಸ್ಪೇಷಲ್ ಕಾರಣ ಇರುತ್ತೆ..ಅಲ್ವಾ ಗೀತಾ?"

"ಹೂಂ. ಯಾಕೋ ಇವಳಿಗೆ ಅವರು ಅಂದ್ರೆ ಸಿಟ್ಟು?"

"ಯಾಕೆ? ಅವರೇನು ಮಾಡಿದ್ರು ಎಷ್ಟು ಒಳ್ಳೆಯವರು ಗೊತ್ತಾ?"

"ಒಳ್ಳೆಯವರಿರಬಹುದು..ಆದರೆ ಹಾಗೆ ತಿನ್ನುವ ಹಾಗೆ ಯಾಕೆ ನೋಡ್ತಾರೆ?" ಈ ಮಾತು ತಕ್ಷಣಕ್ಕೆ ಅರ್ಥವಾಗಲಿಲ್ಲ ಅವನಿಗೆ. ಗೀತಾ ಹೇಳಿದಳು.

"ಓ...ಅದಾ...? ಹೇಳಿದ್ರೆ ನಂಬ್ತೀರೋ ಇಲ್ವೋ? ಮೇಷ್ಟ್ರಿಗೆ ಒಬ್ಬ ತಂಗಿ ಇದ್ರಂತೆ ಅವರು ನಿಮ್ಮ ಹಾಗೇ ಇದ್ರಂತೆ ನೋಡೋಕೆ... ಅದರಿಂದಲೇ...?"

"ಅಂದ್ರೆ...ಮನೋಜನ ತಾಯೀನಾ?" ಗೀತ ಪ್ರಶ್ನಿಸಿದಳು.

"ಹೂಂ. ನಿಮನ್ನು ಕಂಡು ಅವರಿಗೆ ಅವರ ತಂಗಿಯ ನೆನಪಾಗಿರ ಬೇಕು?"

"ಏನು? ನಾನು ಮನೋಜನ ಅಮ್ಮನ ಹಾಗೆ ನೋಡೋಕೆ... ಇಂಪಾಸಿಬಲ್ ಅವರ್‍ಯಾರೋ. ನಾನ್ಯಾರೋ? ಅದ್ಹೇಕೆ ಸಾದ್ಯ?"

"ಹೋಗಲಿ ಬಿಡಿ. ಅವರ ಕಣ್ಣಿಗೆ ನೀವು ಅವರ ತಂಗಿಯ ತದ್ರೂಪ ಅಂತ ಅನ್ನಿಸಿರಬೇಕು. ಅದರಲ್ಲಿ ತಪ್ಪೇನು? ವೆರಿ ಅಫಕ್ಷನೇಟ್ ಅವರು"

ರಾಧಿಕಾಳಿಗೆ ಹೀನಾಯವೆನಿಸಿತ್ತು. ಸಂಕೋಚದಿಂದ ನುಡಿದಳು. "ಮುರಳಿ. ಅವತ್ತು ನಿಮ್ಮ ಮನೆಯಲ್ಲಿ ಅವರನ್ನು ದೂಷಿಸಿದೆ. ಅವರ ಮನಸ್ನಲ್ಲಿ ಹೀಗೆದೆ ಅಂತ ನನಗ್ಹೇಗೆ ತಿಳಿಯಬೇಕು ನಂಗೆ ಗೊತ್ತಾಗ್ಲೇ ಇಲ್ಲ."

"ಅವರನ್ನು ಸಾರಿ ಕೇಳಿ ಬಿಟ್ರೆ ರಾಯ್ತು"

"ಎಂಥಾ ಕೆಟ್ಟ ಹುಡುಗಿ ಅಂತ ಅಂದ್ಕೋಳ್ಳುಲ್ವಾ? ಸಾರಿ ಯಾಕೆ ಕೇಳ್ಕೋಬೇಕು?

ಸುಮ್ಮನಿದ್ದು ಬಿಟ್ರಾಯ್ತು.?" ಗೀತಾ ಹೇಳಿದಳು.

"ಕ್ವೈಟ್ ರೈಟ್... ಎಂದ ಮುರಳಿ. ಶನಿವಾರ ಸಾಯಂಕಾಲ ಆರು ಗಂಟೆಯಹೊತ್ತಿಗೆ ಇಬ್ಬರೂ ಬಂದ್ಬಿಡಿ" ಮತ್ತೊಮ್ಮೆ ಇಬ್ಬರಿಗೂ ಹೇಳಿದ.

ರಾಧಿಕಾ ಒಂದು ತರಹ ಉತ್ಸಾಹಗೊಂಡಿದ್ದಳು. ಅವಳು ಊಹಿಸದ ರೀತಿಯಲ್ಲಿ ಅವಳಿಗೆ ಮನ್ನಣೆ ಸಿಕ್ಕಿತ್ತು. ಮನೋಜನ ಮಾವ ನಿಜಕ್ಕೂ ಒಳ್ಳೆಯವರೇ ಆದರೆ, ನನಗೊಬ್ಬ ಗಾರ್ಡಿಯನ್ ಸಿಕ್ಕ ಹಾಗೇ ಆಗುತ್ತೆ. ತಂದೆಯ ಮುಖವನ್ನೇ ಕಾಣದ ನಾನು ಅವರನ್ನು ತಂದೆಯ ತರಹ ಗೌರವಿಸ್ತೀನಿ ಎಂದು ತನ್ನ ಮನಸ್ಸಲೇ ನಿರ್ಧರಿಸಿಕೊಂಡಳು.

ಪಾರ್ಟಿಯ ಸಿದ್ಧತೆಗಳನ್ನು ಮನೋಜನೇ ಮಾಡಿದ. ಅಡಿಗೆಯವರಿಗೆ ಆರ್ಡರ್ ಕೊಟ್ಟು ಹದಿನೈದು ಜನಕ್ಕೆ ಆಗುವಷ್ಟು ವೆಜಿಟೆಬಲ್ ಬಾತ್ ಮೈಸೂರು ಪಾಕು, ಪಕೋಡಗಳನ್ನು ಮಾಡಿಸಿದ್ದ. ಕುಡಿಯಲು ಎಲ್ಲರಿಗೂ ಬಿಸಿ ಬಿಸಿ ಬಾದಾಮಿ ಹಾಲು.

ಕರೆದವರೆಲ್ಲರೂ ಬಂದರು. ಎಲ್ಲರಿಗಿಂತ ಮುಂಚೆ ಬಂದರು, ಮುರಳಿ ಹಾಗೂ ಅವನ ತಮ್ಮ ಮೋಹನ್, ಮನೋಜನಿಗೆ ಸಹಾಯ ಮಾಡಲು. ಅನಂತರ ಗೀತಾ, ರಾಧಿಕಾ ಇಬ್ಬರೂ ಬಂದರು. ಮೈ ಬಣ್ಣಕ್ಕೊಪ್ಪುವ ಹೊಂಬಣ್ಣದ ಸೀರೆ ಉಟ್ಟು, ಅದೇ ಬಣ್ಣದ ರವಿಕೆ ಧರಿಸಿ, ಚಿನ್ನದ ಪುತ್ಥಳಿಯಂತೆ ಕಂಗೊಳಿಸುತ್ತಿದ್ದ ರಾಧಿಕೆಯನ್ನೇ ಮೆಚ್ಚುಗೆಯಿಂದ ನೋಡಿದ ರಂಗನಾಥ. ಇಬ್ಬರೂ ಒಟ್ಟಾಗಿ ನಮಸ್ಕಾರ ಸಾರ್ ಎಂದಾಗ ರಂಗನಾಥ ಎಚ್ಚೆತ್ತುಗೊಂಡ. ಮನೋಜನ ಕಣ್ಣುಗಳಲ್ಲಿ ಮೆಚ್ಚುಗೆಯ ನೋಟವನ್ನು ಗಮನಿಸಿದ ರಾಧಿಕಾ ಕೆಂಪಾದಳು.

"ಅರೇ ಇದೇನೇ ಇಷ್ಟು ಬೇಗ ಬಂದು ಬಿಟ್ರಿ?" ಮುರಳಿ ಗೀತಳನ್ನು ದ್ದೇಶಿಸಿ ಕೇಳಿದ.

"ಅಪರೂಪಕ್ಕೆ ರಾಧಿಕಾ ಬೇಗ ರೆಡಿಯಾಗಿದ್ದಳು. ಅವಳದ್ದೇ ಬಲವಂತ ಬೇಗ ಹೋಗೋಣ ಅಂತ" ಗೀತ ನುಡಿದಳು. ಮುರಳಿ ಪ್ರಶ್ನಾರ್ಥಕವಾಗಿ ರಾಧಿಕಾಳ ಕಡೆ ನೋಡಿದಾಗ ಅವಳು ಕಣ್ಣು ತಪ್ಪಿಸಿದಳು.

ಉಳಿದವರು ಬರುವ ಹೊತ್ತಿಗೆ ಎಲ್ಲಾ ರೆಡಿಯಾಗಿತ್ತು. ಸೀದಾ ಟರೇಸ್ ಮೇಲೆ ಹೋದರು. ಉಳಿದ ಸ್ನೇಹಿತರಿಗೆ ಈ ಹುಡುಗಿಯರನ್ನು ಕಂಡು ಸಂಭ್ರಮ, ಅಚ್ಚರಿ! ರಾಧಿಕಾಳಿಗೂ ಮನೋಜನಿಗೂ ಜೋರು ಜೋರಿನ ಮಾತು ನಡೆದ್ದಿದನ್ನು ಅವರು ತಿಳಿದಿದ್ದರು. ಆದರೆ ಇವತ್ತು ಒಬ್ಬರಿಗೊಬ್ಬರು ಅನ್ಯೋನ್ಯವಾಗಿದಾರೆ. ರಾಧಿಕಾ ಬ್ಯೂಟಿ. ಮನೋಜ ಅವಳನ್ನು ಮೆಚ್ಚಿರಬಹುದು. ಮನೋಜನಂತಹ ಹುಡುಗನ ಸ್ನೇಹ ಈ ಬೆಡಗಿಗೂ ಬೇಕಿರಬಹುದು. ಅದಕ್ಕೆ ಅದನ್ನೇ ಒಂದು ನೆಪ ಮಾಡಿಕೊಂಡು ಸ್ನೇಹಿತರಾಗಿದ್ದಾರೆಂದು ಊಹಿಸಿದರು.

ಖುಷಿ ಖುಷಿಯಾಗಿ ಮಾತನಾಡುತ್ತಾ ರುಚಿಯಾದ ತಿನಿಸುಗಳನ್ನು ತಿಂದು ಸಂತೋಷದಿಂದ ಎಲ್ಲರೂ ಮನೋಜನನ್ನೂ ರಂಗನಾಥನನ್ನು ಅಭಿನಂದಿಸಿದರು. ರಾಧಿಕಾ ಆಸೆಯಿಂದ ಎರಡು ಮೂರು ಮೈಸೂರುಪಾಕು ಪೀಸುಗಳನ್ನು ತಿಂದಿದ್ದನ್ನು ರಂಗನಾಥ ಗಮನಿಸಿದ್ದ. ಅನೂರಾಧಾಗೂ ಅಷ್ಟೇ ಮೈಸೂರು ಪಾಕ್ ಅಂದ್ರೇ ತುಂಬಾ ಇಷ್ಟ. ಒಟ್ಟಿಗೇ ಮೂರು ನಾಲ್ಕು ಚೂರುಗಳನ್ನು ತಿಂದು ಬಿಡುತ್ತಿದ್ದಳು ಎನ್ನುವುದನ್ನು

ಜ್ಞಾಪಿಸಿ ಕೊಂಡ ಈಗಲೂ, ಆಗಾಗ್ಗೆ ರಾಧಿಕಾಳ ಕಡೆ ನೋಡಿ ಮುಗುಳ್ನಗುತ್ತಿದ್ದ. ಈಗ ಅವಳಿಗೆ ಮುಜುಗರವೆನಿಸುತ್ತಿರಲಿಲ್ಲ.

ಅಲ್ಲಿಂದ ಹೊರಡುವಾಗ ಅವಳಿಗೆ ಬೇಜಾರು. ಈ ಸಂಭ್ರಮವನ್ನು ಬಿಟ್ಟು ಹೋಗಲು ಮನಸ್ಸಿಲ್ಲ. ತಮ್ಮ ಮನೆಗೆ ಎಂದೂ ಯಾರೂ ಬಂದುದಿಲ್ಲ. ತಾವೂ ಎಲ್ಲಿಗೂ ಹೋದುದಿಲ್ಲ. ಇಲ್ಲಿಯ ವಾತಾವರಣ ಎಷ್ಟು ಚೆನ್ನಾಗಿದೆ. ದಿನಾ ಹೀಗೇ ಇದ್ದರೆ ಎಷ್ಟು ಚೆನ್ನ ಅಂತೆನಿಸಿತು. ಗೀತನೊಂದಿಗೆ ಅದೇ ಮಾತನ್ನು ಹೇಳಿದಳು.

"ಅಂಕಲ್ ಬರ್ತ್‌ಡೆ ಪಾರ್ಟಿ ತುಂಬಾ ಚೆನ್ನಾಗಿತ್ತು" ರಾಧಿಕಾ ಗೀತಾ ಒಟ್ಟಾಗಿ ಹೇಳಿದರು.

"ಆಗಾಗ ಬರ್ತಾ ಇರಮ್ಮ. ಈ ಅಂಕಲ್ ಜೊತೆ ಸ್ವಲ್ಪ ಹೊತ್ತು ಕಾಲ ಕಳೆಯೂವಂತೆ."

ಎಲ್ಲರೂ ಒಬ್ಬರ ಮುಖ ಒಬ್ಬರು ನೋಡಿಕೊಂಡರು. ರಾಧಿಕಾಂಗೇ ಉದ್ದೇಸಿಸಿ ಹೇಳಿದ್ದು ಎಂದು ಎಲ್ಲರಿಗೂ ಅರ್ಥವಾಗಿತ್ತು.

ಎಲ್ಲರೂ ಹೊರಟುಹೋದ ಮೇಲೆ ರಂಗನಾಥ ಮತ್ತೆ ಮತ್ತೆ ಅದೇ ಮಾತುಗಳನ್ನಾಡಿದ್ದ.

"ಮನೋಜ ನೋಡಿದ್ಯಾ? ನಿಮ್ಮಮ್ಮ ಅದೇ ತರಹ ಇದ್ದದ್ದು. ನಿಮ್ಮಮ್ಮನಿಗೂ ಮೈಸುರು ಪಾಕು ಅಂದ್ರೆ ಬಹಳ ಇಷ್ಟವಿತ್ತು. ಒಟ್ಟೊಟ್ಟಿಗೇ ನಾಲ್ಕೈದು ಪೀಸ್ ತಿಂದು ಬಿಡುತ್ತಿದ್ದಳು."

"ಅದಕ್ಕೇ....ನಮ್ಮಮ್ಮನಿಗೆ ಮೈಸೂರು ಪಾಕು ಇಷ್ಟವಾದರೆ ನನಗೂ ಇಷ್ಟವಾಗಬೇಕಿತ್ತು. ನಗಿಷ್ಟವಿಲ್ಲ. ಆ ಹುಡುಗಿಗೋ ಇಷ್ಟವೋ ಇಷ್ಟ."

"ನಮ್ಮ ಅನೂರಾಧನ್ನೇ ಹೋಲುವ ಹುಡಗಿ, ಇವಳ್ಯಾರು ಅಂತ ಸೋಜಿಗ."

"ನನಗೂ ಅದೇ ಆಶ್ಚರ್ಯ. ಈಚೀಚೆಗೆ ನಿನಗೆ ಆ ಹುಡಿಗಿಯದೇ ಧ್ಯಾನ. ಅವಳ್ಯಾರು ನಂಗಿಂತ ಅವಳ ಮೇಲೆ ಆಸಕ್ತಿ ಆಗಿದೆ.?"

ರಂಗನಾಥ ಹೆದರಿದ. ತನ್ನ ಬಾಯಿಂದ ಏನೇನು ಮಾತು ಹೊರಟು ಬಿಡುತ್ತೋ ಎನಿಸಿ ಯೋಚಿಸಿ ಮಾತನಾಡಿದ.

"ನಿಮ್ಮಮ್ಮನ ಮೇಲೆ ನನಗೆ ತುಂಬಾ ಪ್ರೀತಿ ಇತ್ತು ಕಣೋ ನನ್ನ ಜೊತೆ ಇದ್ದುದು, ಹದಿನಾರು ಹದಿನೇಳು ವರ್ಷಗಳು ಮಾತ್ರ. ಅದಕ್ಕೇ ಅವಳನ್ನ ಮರೆಯಕ್ಕೆ ಆಗಿಲ್ಲ. ಆ ಹುಡುಗಿಯನ್ನು ಕಂಡಾಗಿನಿಂದ ನನ್ನ ಮನಸ್ನಲ್ಲಿ ಅನೂರಾಧ ಮತ್ತೆ ಮತ್ತೆ ಬರುತ್ತಾಳೆ."

ಮಾವನ ವ್ಯಥಿತ ಮುಖ ಕಂಡು ಸುಮ್ಮನಾದರೂ ಮಾವನಿಗೆ ಈ ಭ್ರಮೆ ಹೇಗೆ ಅಂಟಿಕೊಂಡಿತು ಅಂತೆನಿಸಿತು. ಆ ಸಮಯದಲ್ಲಿ ಇಬ್ಬರೂ ಮಾತು ಬೆಳೆಸದೇ ಸುಮ್ಮನಾದರೂ. ಕೆಲವು ದಿನಗಳ ನಂತರ ಕೇಳಿದ.

"ಆ ಹುಡುಗಿ ಕಾಲೇಜಿಗೆ ಬಂದಿದ್ದಳೇನೋ?"

ಮನೋಜನಿಗೆ ಅರ್ಥವಾದರೂ ಬೇಕಂತ ಕೇಳಿದ

"ಯಾರು ಮಾವ? ಯಾವ ಹುಡುಗಿ?"

"ಅದೇ ಅವತ್ತು ಬಂದಿದ್ದಳಲ್ಲ ರಾಧಿಕಾ ಅಂತ"

"ಬಂದಿರಬಹುದು ನಾನು ನೋಡಲಿಲ್ಲ." ಉದಾಸೀನವಾಗಿ ಹೇಳಿದ.

"ಆ ಹುಡುಗೀನ ಕರೆದುಕೊಂಡು ಬಾ ಎಂದಾದ್ರು..ಯಾರು, ಏನು ಅಂತ ಕೇಳಿತಿಳಕೊತೀನಿ."

"ಯಾವುದೋ ಹುಡುಗೀನ ನಾವು ಸುಮ್ಮನೇ ಕರೆಯುವುದೂ ಸರಿಯಲ್ಲ. ಅವಳು ಬರುವುದೂ ಇಲ್ಲ." ಹೀಗೆ ಹೇಳಿದರೂ ಮುರಳಿ ಯೊಡನೆ ಹೇಳಿದ್ದ

"ಇದೊಂದು ಹೊಸ ಸಮಸ್ಯೆ. ಮಾವ ಎಂದೂ ಹೀಗೆ ಆಡಿದ್ದು ನೆನಪಿಲ್ಲ. ಶುದ್ಧ ಬ್ರಹ್ಮಚಾರಿಯಾಗಿದ್ದು ನನ್ನನ್ನು ಸಾಕಿ ಬೆಳೆಸಿದ್ದಾರೆ ಈಗ ಆಡ್ತಾ ಇರೋದನ್ನ ನೋಡಿದರೆ ಚಿಂತೆ ಆಗುತ್ತೆ

ಮುರಳಿ ಗೇಲಿ ಮಾಡಿದ.

"ವಯಸ್ಸಾದ ಮೇಲೆ ಈಗ ಪಶ್ಚಾತ್ತಾಪವಾಗಿರಬೇಕು. ಹಳೆಯ ಯಾವುದೇ ಗೆಳೆತನ ನೆನಪಾಗಿರಬೇಕು"

"ಷಟಪ್ ಯಾವುದೋ ಗೆಳೆತ ಅಲ್ಲ ನಮ್ಮಮ್ಮನ ನೆನಪು... ನಮ್ಮಮ್ಮ ಅವರ ತಂಗಿ... ನನ್ನ ಮಾವನ ಬಗ್ಗೆ ಹೀಗೆಲ್ಲಾ ಮಾತಾಡ್ತೀ ಯಲ್ಲ ನಿನಗೆ ನಾಚಿಕೆ ಆಗೋಲ್ವಾ?"

"ಸಾರಿ ಫ್ರೆಂಡ್. ನಿಮ್ಮ ಮಾವನ ಬಗ್ಗೆ ನನಗೆ ಕಿಂಚಿತ್ತು ಅನುಮಾನ ವಿಲ್ಲ. ಅಂಥಾ ಮಹಾನುಭಾವ ನಿನ್ನ ಮಾವನಾಗಿರುವುದು. ನಿನ್ನ ಯಾವುದೋ ಜನ್ಮದ ಪುಣ್ಯ. ಅವರು ಆ ಹುಡುಗೀನ ನೋಡಬೇಕು, ಮಾತನಾಡಿಸಬೇಕು ಅಂತ ಆಸೆ ಪಟ್ಟರೆ. ನೀನೇಕೆ ಅಸೂಯೆ ಪಡ್ತೀಯ?"

"ಥೂ ಆಸೂಯೆ ಏನಿಲ್ಲ. ಇದೇನಾಗಿದೆ ಮಾವನಿಗೆ ಅಂತ ಚಿಂತೆ?"

"ಚಿಂತಿಸಬೇಡ. ಆ ಹುಡುಗಿ ಬೇರೆ ಯಾರೂ ಅಲ್ಲ. ನಿನ್ನ ಸ್ನೇಹಿತೆ ರಾಧಿಕಾನೇ ತಾನೇ. ನಿಮ್ಮ ಮಾವನಿಗೂ ಸರಿಯಾದ ವಯಸ್ನಲ್ಲಿ ಮದುವೆಯಾಗಿ, ಮಗಳಿದ್ದಿದ್ದರೆ, ಈ ವಯಸ್ಸಿನ ಮಗಳಿರುತ್ತಿದ್ದಳು. ಹಾಗೇ ನಿನ್ನ ಮಾವನಿಗೂ ಅನ್ನಿಸಿರಬೇಕು. ಮಗಳ ತರಹ ಪ್ರೀತಿ ತೋರಿಸಿದರೆ ತಪ್ಪೇನು ನೀನು ಅದರ ಅಡ್ವಾಂಟೇಜ್ ತಗೊಂಡ್ರೆ ಆಯ್ತು."

"ಏನು ನಿನ್ನ ಅರ್ಥ? ನಂಗೆ ಅಂಥದ್ದೆಲ್ಲಾ ಬೇಕಿಲ್ಲ."

"ಬೇಕಿಲ್ಲದಿದ್ದರೆ ನಿನಗೇ ಲಾಸ್. ರಾಧಿಕಾನ್ನ ನೀನು ಸರಿಯಾಗಿ ನೋಡೇ ಇಲ್ಲವೇನೋ ಅಂತನ್ನಿಸುತ್ತೆ ನನಗೆ"

"ಶುರು ಮಾಡಿದ್ಯಾ ನಿನ್ನ ಪುರಾಣಾನಾ? ನನಗೆ ಆ ಹುಚ್ಚು ಇಲ್ಲ."

"ಅದನ್ನೂ ಹುಚ್ಚು ಅನ್ನೋಲ್ಲ. ಪ್ರೀತಿ ಅಂತಾರೆ. ಮುದುಕ ಆದ್ಮೇಲೆ ಮಾಡ್ತೀಯ ಪ್ರೀತೀನಾ?" ಕೀಟಲೆ ಮಾಡಿದ.

"ಪ್ರೀತಿ ಪ್ರೇಮಕ್ಕೆ. ಒಂದು ವಯಸ್ಸು, ಒಂದು ಕಾಲ ಇರುತ್ತೆ ನನಗಗೀಗಲೇ ಅದರಲ್ಲೇಲ್ಲಾ ಆಸಕ್ತಿ ಇಲ್ಲ."

"ಅಲ್ಲೀಯವರೆಗೂ ರಾಧಿಕಾ ನಿನಗೋಸ್ಕರ ಕಾಯ್ತಾ ಇರ್ತಾಳೆ ಅಂತ ಅಂದ್ಕೊಂಡ್ಯಾ? ಸುಮ್ಮನೇ ಬೊಗಳೆ ಬಿಡಬೇಡ. ಆತ್ಮಸಾಕ್ಷಿಯಾಗಿ ಹೇಳು ಅವಳ ಬಗ್ಗೆ ಆಸಕ್ತಿ ಇಲ್ಲ ಅಂತ. ಅಂತಹವಳು ಬೇರೆ ನಿನಗೆ ಖಂಡಿತಾ ಸಿಗುಲ್ಲ."

"ಈಗಲಿಂದ ಆ ಯೋಚನೆ ಯಾಕೆ? ಕಾಲ ಬಂದಾಗ ಯೋಚಿಸಿದ ರಾಯ್ತು.

ಅದಕ್ಕೆ ಬೇಕಾದಷ್ಟು ಸಮಯವಿದೆ." ಹಾಗೆ ಹೇಳಿದರೂ ಮುರಳಿಯ ಮಾತು ಅವನ ಮೇಲೆ ಪರಿಣಾಮ ಬೀರಿತ್ತು. ಹಾಗೇ ಚಿಂತಿಸಿದ. ನೋಡಲು ಚೆನ್ನಾಗಿದಾಳೆ. ಇದೇ ಕಾಲೇಜಿನಲ್ಲಿ ಓದುತ್ತಿದಾಳೆ. ಮಾವನಿಗೆ ಅವಳ ಮೇಲೆ ಅಪರಿಮಿತ ಅಭಿಮಾನವಿದೆ. ಹಾಗಂತ... ಮುಂದೆ ಯೊಚಿಸಲು ಅವನ ಮನ ಹಿಂಜರಿಯಿತು.

ಆದರೆ ಅಂದಿನಿಂದ ರಾಧಿಕಾಳನ್ನು ಮನಸ್ಸಿನಲ್ಲೇ ಒಳಗೊಳಗೇ ಪ್ರೀತಿಸಲಾರಂಭಿಸಿದ್ದ. ಅವಳಿಗೆ ಆಗಾಗ್ಗೆ ಐಸ್‌ಕ್ರೀಂ ಕೊಡಿಸಿ ಗೇಲಿ ಮಾಡುತ್ತಿದ್ದ. ಮುರಳಿ ಗೀತ ಸಹ ಅವರಿಬ್ಬರ ಸ್ನೇಹಕ್ಕೆ ಪುಷ್ಟಿಕೊಟ್ಟರು.

ಒಂದು ದಿನ ರಾಧಿಕಾಳನ್ನು ತನ್ನ ಮನೆಗೆ ಕರದುಕೊಂಡು ಬಂದ. ರಂಗನಾಥ ಮೆಚ್ಚುಗೆಯಿಂದ ಅವಳನ್ನು ನೋಡಿದ್ದೇ ನೋಡಿದ್ದು ರಾಧಿಕಾಗೆ, ಮುಜುಗರದಿಂದ ಕೂಡಿದ ಸಡಗರ. ಜೊತೆಯಲ್ಲಿ ಬಂದಿದ್ದ ಗೀತ, ಮುರಳಿಗೂ ಸಹ ಅಚ್ಚರಿ. ರಂಗನಾಥನ ನೋಟದಲ್ಲಿ ಅಡಗಿದ್ದ ಅರ್ಥ ಯಾರಿಗೂ ತಿಳಿಯಲಿಲ್ಲ.

ಮನೋಜ, ಸಂಭ್ರಮದಿಂದ ಎಲ್ಲರಿಗೂ ತಿಂಡಿ ಕಾಫಿಗಳನ್ನು ತಂದಿತ್ತ. ಚಟುವಟಿಕೆಯಿಂದ ಓಡಾಡುತ್ತಿದ್ದ ಮನೋಜನನ್ನೇ ಗಮನಿಸಿದಳು ರಾಧಿಕಾ. ಇರುವುದು ಇಬ್ಬರೇ ಗಂಡಸರು, ಆದರೂ ಇವರ ಮನೆ ಎಷ್ಟು ಚೊಕ್ಕಟವಾಗಿದೆ. ಇಬ್ಬರೂ ಹೆಂಗಸರಿರುವ ತನ್ನ ಮನೆಗೆ ಹೋಲಿಸಿ ಕೊಂಡಳು. ಜೊತೆಗೆ, ಒಬ್ಬಳು. ಅಡಿಗೆಯವಳಿದಾಳೆ. ಒಬ್ಬ ಕೆಲಸದವಳಿ ದ್ದಾಳೆ. ಆದರೂ ಆ ಮನೆಯಲ್ಲಿ ಕಳೆ ಇಲ್ಲ. ಕೆಲಸದವಳಿಗೆ, ಅಡಿಗೆಯವಳಿಗೆ ಯಾವ ಅಭಿಮಾನವೂ ಇಲ್ಲ. ಅಮ್ಮನಿಗೆ ಕ್ಲಿನಿಕ್‌ನಲ್ಲೇ ಹೆಚ್ಚು ಸಮಯ ಕಳೆದು ಹೋಗುತ್ತೆ.ಮನೆಯ ಯಾವ ಕೆಲಸವೂ ಅಮ್ಮನಿಗೆ ಬರುಲ್ಲ. ಇನ್ನೆನು ಅವಳಿಗೇ ಬರದಿದ್ದ ಮೇಲೆ ನನಗೇನು ಬರುತ್ತೇ?" ಯೋಚಿಸು ತ್ತಿದ್ದಳು.

ಗಂಡು ಹುಡುಗ ಮನೋಜನಿಗೆ. ಅಡಿಗೆ ಮನೆ ಕೆಲಸವೆಂದರೆ ಯಾವ ಬೇಸರವೂ ಇಲ್ಲ ಅಂತ ಕಾಣಿಸುತ್ತೆ ಅಂತಂದುಕೊಂಡಾಗ, ತನ್ನ ಬಗ್ಗೆ ಹೀನಾಯವಾಗಿತ್ತು.

ರಂಗನಾಥ ಕುಳಿತಲ್ಲೇ ಚಡಪಡಿಸುತ್ತಿದ್ದ. ಅವಳೇ ಎದುರಿಗೆ ಕೂತಿರು ವಾಗ ಮಾತನಾಡಲು ಅಳುಕಿದ. ಏನಂತ ಕೇಳುವುದು ಹೇಗೆ ಕೇಳುವುದು? ಅಪಾರ್ಥ ಮಾಡಿಕೊಂಡರೇ? ಅಂತೂ ಏನೂ ಕೇಳದೇ ಸುಮ್ಮನಾದ. ಏನೂ ತೋರದೇ, ಕುಡಿದು ತಿಂದು ಖಾಲಿ ಮಾಡಿಟ್ಟಿದ್ದ. ತಟ್ಟೆ ಬಟ್ಟಲಗಳನ್ನು ತೆಗೆಯಲು ಹೋದ.

"ನಾನು ತೆಗೀತೀನಿ. ಸುಮ್ಮನೆ ಕೂತ್ಕೋಬಾರದಾ?" ಮನೋಜನೆಂದ.

"ಇರಲಿ ಬಿಡು. ಒಂದು ದಿನ ನಾನು ತೆಗೆದರೇನಾಯ್ತು?" ಆದರೂ ಮನೋಜ ಮಾವನ ಕೈನಿಂದ ಕಿತ್ತುಕೊಂಡು, ಎಲ್ಲವನ್ನು ಒಳಗಿಟ್ಟು ಬಂದ.

ಅವರಿಬ್ಬರ ವಿಶ್ವಾಸ ಕಂಡು ರಾಧಿಕಾ ಮೂಕವಾದಳು. ತನ್ನ ಮನೆ ಯಲ್ಲಿ ತನಗೂ ತನ್ನ ತಾಯಿಗೂ ಇರುವ ಅಂತರದ ಅರಿವಾಯಿತು. ಅಮ್ಮ ಒಂದು ದಿನವೂ ನಿಧಾನದಿಂದಿದ್ದು ತನ್ನ ಬಗ್ಗೆ ವಿಶ್ವಾಸದಿಂದ ಮಾತನಾಡಿದ್ದು ಅವಳಿಗೆ ನೆನಪಿಲ್ಲ. ಯಾವಾಗಲೂ ಕ್ಲಿನಿಕ್. ನಮ್ಮ ಮನೆಯ ವಾತಾವರಣಕ್ಕು ಇಲ್ಲಿಯ ವಾತಾವರಣಕ್ಕೂ ಎಷ್ಟು ವ್ಯತ್ಯಾಸ? ತನ್ನಲ್ಲೇ ಚಿಂತಿಸುತ್ತಿದ್ದಳು.

"ಏನೇ...ಸುಮ್ಮನೇ ಕೂತು ಬಿಟ್ಟೆ ಹೊರಡುಲ್ವಾ?" ಗೀತ ಕೇಳಿದಳು ರಾಧಿಕಾ

ಎದ್ದಳು. ಎಲ್ಲರೂ ಹೊರಟಾಗ ರಂಗನಾಥನಿಗೆ ಏನನ್ನಿಸಿತೋ ಏನೋ ರಾಧಿಕಾಳನ್ನು ಕುರಿತು ನುಡಿದ.

"ರಾಧಿಕಾ. ಆಗಾಗ್ಗೆ ಬರ್ತಾ ಇರಮ್ಮ. ಮನೋಜನಿಗೆ ಹೇಳಿದರೆ ಮರತೇ ಬಿಡ್ತಾನೆ. ನೀನೇ ಬರ್‍ತಾ ಇರು." ಧ್ವನಿಯ ಮೃದುತ್ವದ ಅರಿವಾಗಿ, ಅವಳಿಗೆ ತಾನು ಕಾಣದ ತನ್ನ ತಂದೆಯ ನೆನಪಾಯಿತು. ತನಗೂ ತನ್ನ ಅಪ್ಪನ್ನ ನೋಡಿದ ನೆನಪಿಲ್ಲ. ಆದರೆ..ಇಂಥ ತಂದೆ ತನಗೆ ಇದ್ದಿದ್ದರೇ... ಅಂತ ಅನ್ನಿಸಿದಾಗ, ಇದ್ದಕ್ಕಿಂದ್ದಂತೆ ಮಂಕಾದಳು. ಅಮ್ಮ ಎಂದೂ ಅಪ್ಪನ ಬಗ್ಗೆ ಮಗಳಿಗೆ ಹೇಳಿದವಳಲ್ಲ. ಚಿಕ್ಕವಳಾಗಿದ್ದಾಗ, ಎಂದಾದರೂ ಇವಳೇ ಕೇಳಿದರೆ. ರೇಗುತ್ತಿದ್ದಳು.

ಈಗ ನಿನಗೆ ಕಮ್ಮಿ ಏನಾಗಿದೆ ಇಲ್ಲದ ಅಪ್ಪನ ಬಗ್ಗೆ ಕೇಳಿ ಕೇಳಿ ನನ್ನನ್ನು ರೇಗಿಸ್ತೀಯ...

ಕ್ರಮೇಣ ರಾಧಿಕಾ ಕೇಳುವುದನ್ನೇ ಬಿಟ್ಟು ಬಿಟ್ಟಳು. ಅಪ್ಪ ಬದುಕೀದಾರೋ. ಇಲ್ಲವೋ ಅದೂ ಸಹ ಸರಿಯಾಗಿ ತಿಳಿದಿಲ್ಲ., ಅಮನ್ನ ಹೊರತು ಬೇರೆ ಯಾರೂ ಹೇಳುವವರಿಲ್ಲ. ಸರಿಯಾದ ತಿಳುವಳಿಕೆ ಬಂದಂದಿನಿಂದಲೂ ಅವರಿಬ್ಬರೇ ಇದ್ದ ನೆನಪು.

ಇಬ್ಬರೇ ಇದ್ದೂ ಇದ್ದೂ ಬೇಜಾರಾಗಿತ್ತೂ. ಗೀತ ಒಬ್ಬಳೇ ಸ್ನೇಹಿತೆ. ಈಚೆಗೆ ಮುರಳಿ, ಮನೋಜ ಸ್ನೇಹಿತರಾಗಿದ್ದಾರೆ... ಮನೋಜನ ಮಾವ ಆತ್ಮೀಯತೆ ತೋರಿಸುತ್ತಿದ್ದಾರೆ. ಇನ್ನು ನಾನು ಒಂಟಿಯಲ್ಲ ಎಂದು ಅನ್ನಿಸಿದಾಗ ಅವಳ ಹೃದಯ ಕುಣಿದಾಡಿತು.

"ಆಗ್ಲಿ ಅಂಕಲ್. ದಿನಾ ಬಾ ಅಂದ್ರೂ ಬರ್ತೀನಿ.."ಎಂದು ನಕ್ಕಳು. ಎಲ್ಲರೂ ನಗುವನ್ನು ಸೇರಿಸಿದರು. ನಗುನಗುತ್ತಾ ಹೊರಟ ಹುಡುಗಿಯನ್ನು ಕಂಡು ರಂಗನಾಥನ ಮನಸ್ನಲ್ಲಿ ಏನೇನೋ ಆಲೋಚನೆಗಳು. ಅವರುಗಳ ಜೊತೆ ಮನೋಜನೂ ಹೊರಟ. ಸ್ವಲ್ಪ ದೂರದಲ್ಲಿದ್ದ ಬಸ್ ಸ್ಟ್ಯಾಂಡ್‌ನ ವರೆಗೂ ಅವನು ವಾಪಸ್ಸುಬರುವವರೆಗೂ ಬಾಗಿಲಲ್ಲೇ ನಿಂತಿದ್ದ. ರಂಗನಾಥ. ಬಸ್ಸು ಸಿಕ್ತಾ?" ಅವನ ಆತಂಕ ಗಮನಿಸಿ, ಮನೋಜ ನಕ್ಕ.

"ಸಿಕ್ಕಿರಬಹುದು. ಸಿಕ್ಕದಿದ್ದರೆ ಆಟೋದಲ್ಲಿ ಹೋಗ್ತಾರೆ. ನಿನಗೇಕೆ ಆತಂಕ ಹೋಗಲಿ ಇವತ್ತಾದಾದ್ರೂ ನಿನ್ನ ಅನುಮಾನ ಪರಿಹಾರ ಮಾಡ್ಕೊಂಡ್ಯಾ?"

"ಇನ್ನೆಂದಾದ್ರೂ ಕೇಳಿದ್ರಾಯ್ತು ಬಿಡು. ಆಗಾಗ್ಗೆ ಬರ್ತೀನಿ ಅಂತಂದ್ಲಲ್ಲ.,?"

"ಸಧ್ಯ ಅವಳನ್ನು ಕರಕೊಂಡು ಬಾ ಅಂತ ನನ್ನನ್ನು ಪೀಡಿಸದೇ ಇದ್ರೆ ಸಾಕು. ನನ್ನ ಓದು ಬರಹ ಬಿಟ್ಟು ಅವಳ ಹಿಂದೆ ತಿರುಗಾಡ ಬೇಕಾಗಿತ್ತು. ಇನ್ನು ನೀನುಂಟು ಅವಳುಂಟು."

ಹಾಗಂತ ಅವನು ಮಾವನಿಗೆ ಹೇಳಿದ್ದು ಬರೀ ಮೆಚ್ಚಿಸುಕ್ಕೆ ಮಾತ್ರ. ರಾಧಿಕಾನ್ನ ಒಂದು ದಿನ ಭೇಟಿಯಾಗದಿದ್ದರೆ ಅವನ ಮನಸ್ಸು ಮುದುಡು ತ್ತಿತ್ತು. ಅವನ ಪೆಚ್ಚು ಮುಖ ಮುರಳಿ ರೇಗಿಸುತ್ತಿದ್ದ.

"ಏನೋ...ಒಳ್ಳೋ ವಿಶ್ವಾಮಿತ್ರನ ತರಹ ಆಡ್ತಿದ್ದೆ. ಈಗ ಮೇನಕೆ ಕಾಣದಿದ್ದರೆ ಮಂಕಾಗಿ ಹೋಗ್ತೀಯಲ್ಲ?"

"ಇದೆಲ್ಲಾ ನಿನ್ನದೇ ಪ್ರಭಾವ. ನನ್ನ ಪಾಡಿಗೆ ನಾನಿದ್ದೆ. ನಿನ್ನ ದಾರಿಗೆ ನನ್ನನ್ನೂ ಎಳೆದೆ" ಇವನೂ ನಗುತ್ತಾ ನುಡಿಯುತ್ತಿದ್ದ.

"ನನ್ನ ವಿಚಾರ ಬೇರೆ ಬಿಡು. ಗೀತಾ ನನ್ನ ಕಸಿನ್. ಕಾಲೇಜ್ನಲ್ಲಿ ಅವಳ ಮೇಲೆ ಒಂದು ಕಣ್ಣಿಟ್ಟಿರ್ತೀನಿ" ಅಂತ ನಮ್ಮ ಅಜ್ಜಿಗೆ ಮಾತು ಕೊಟ್ಟಿದೀನಿ.

"ಬರೀ ಬೂಟಾಟಿಕೆ ನಾನು ನಂಬುಲ್ಲ."

"ನೀನು ಏನಾದ್ರೂ ಅಂದ್ಕೋ...? ಗೀತಾ ಬರೀ ಕಸಿನ್ನೇ. ನಾನು ಒಂದೇ ವಯಸ್ಸಿನವರು. ಒಟ್ಟಿಗೇ ಓಡಾಡ್ತೀವಿ. ಮಾತಾಡ್ತೀನಿ. ಆದರೆ ನೀನು ರಾಧಿಕಾ ಬರೀ ಸ್ನೇಹಿತರಲ್ಲ ಅಂತ ಒಪ್ಕೋತೀತಾನೇ...?"

ಇದಕ್ಕೆಲ್ಲಾ ನೀನೇ ಕಾರಣ. ಹುಸಿಮುನಿಸಿನಿಂದ ಹೇಳಿದ್ದ. ಮನೋಜ ಕಾಲೇಜಿಗೆ ಬಂದು ಎಷ್ಟೋ ಹೊತ್ತಾದರೂ, ರಾಧಿಕಾ, ಗೀತ ಎಲ್ಲಿಯೂ ಕಾಣಲಿಲ್ಲ. ಮುರಳಿಯ ಜೊತೆ ಇದ್ದರೂ. ಏನೋ ಬೇಜಾರೆನಿಸಿತು. ಮದ್ಯಾಹ್ನವೋ ಕಳೆಯಿತು. ಮುರಳಿಯ ಜೊತೆ ಅವರ ಮನೆಗ ಬಂದ. ಅವನ ತಾಯಿ ಅವನನ್ನು ಕಂಡ ಕೂಡಲೇ ಹೇಳಿದರು.

"ಗೀತಾ ಬಂದಿದ್ದು, ರಾಧಿಕಾಗೆ ಆಕ್ಸಿಡೆಂಟ್ ಆಗಿದೆಯಂತೆ. ನೀನು ಬಂದ ಕೂಡಲೇ ಕಳಿಸಿ ಅಂತಂದ್ಲು ನರ್ಸಿಗ್ ಹೋಂನ ಹೆಸರನ್ನು ತಿಳಿಸಿದರು.

ಮನೋಜ ಪೆಚ್ಚಾದ. ಅವನ ಎದೆ ಹೊಡೆದುಕೊಂಡಿತು.

ಗೀತ ಇನ್ನೇನು ಹೇಳಿದ್ಲು?" ಮುರಳಿ ಪ್ರಶ್ನಿಸಿದ.

ಸೀರಿಯಸ್ ಏನಿಲ್ಲ. ಕಾಲಿಗೆ ಪೆಟ್ಟಾಗಿರಬಹುದು ಅಷ್ಟೇ ಅಂತ ಅಂದ್ಲು. ಅವಳಿಗೂ ಗೊತ್ತಿಲ್ಲ.ಯಾರೋ ಪೋನ್ ಮಾಡಿದ್ರಂತೆ.

ಹಾಗಾದ್ರೆ ಈಗಲೇ ಹೋಗಿ ನೋಡ್ಕೊಂಡು ಬರ್ತೀನಿ ಅಂತ ಹೇಳಿ ಇಬ್ಬರೂ ಮತ್ತೆ ಸ್ಕೂಟರನ್ನೇರಿದರು.

ನರ್ಸಿಗ್ ಹೊಂ ತಲುಪಿ, ಸೀದಾ ಒಳಕ್ಕೆ ಹೋದರು. ಯಾರನ್ನೋ ಮಂಚದ ಮೇಲೆ ಮಲಗಿದ್ದ ರಾಧಿಕಾ ಇವರಿಬ್ಬರನ್ನು ಕಂಡು ಮುಗುಳ್ನಕ್ಕಳು. ಗೀತ ಸಹ ಅಲೇ ಕುಳಿತಿದ್ದಳು.

ಲೂನಾ ಸರಿಯಾಗಿ ಓಡಿಸಕ್ಕೆ ಬರದಿದ್ದ ಮೇಲೆ, ಅದನ್ನು ಯಾಕೆ ಓಡಿನಬೇಕು? ಮನೋಜ ರೇಗಿ ಕೇಳಿದ.

ಇವತ್ತು ನನ್ನ ತಪ್ಪೇನೂ ಇರಲಿಲ್ಲ ಮನೋಜ್, ಬಿಲೀವ್ ಮಿ ಎಂದಳು. ಗೀತ ಸ್ನೇಹಿತೆಯನ್ನು ವಹಿಸಿಕೊಂಡು ನುಡಿದಳು.

ಎದುರ್ನಿಂದ, ಬರುತ್ತಿದ್ದ ಟ್ರಾಫಿಕ್‌ನ ಅವಾಯ್ಡಂ ಮಾಡಲು ಹೋಗಿ ಪಕ್ಕದ ಮೋರಿಗೆ ಬಿದ್ದಿದಾಳೆ. ಹೆದರಿಕೆಗೆ ಅನ್‌ಕಾನ್‌ಶಿಯಸ್ ಆಗಿ ಬಿದ್ದಿದಾಳೆ. ಯಾರೋ ಇಲ್ಲಿಗೆ ಕರೆತಂದು ಸೇರಿಸಿದ್ದಾರೆ.

ನಿನಗೆ ಹೇಗೆ ಗೊತ್ತಾಯ್ತು! ಮುರಳಿ ಕೇಳಿದ.

ಇವಳಿಗೆ ಜ್ಞಾನ ಬಂದ ಮೇಲೆ ನನಗೆ ಪೋನ್ ಮಾಡಿಸಿದ್ದಾಳೆ. ಇವತ್ತು ಇವಳು ನಮ್ಮ ಮನೆಗೆ ಬರುವ ಪ್ರೋಗ್ರಾಂ ಇತ್ತು. ಇವಳಿಗೊಸ್ಕರ ಕಾಯ್ತಾ ಇದ್ದೆ. ಇನ್ನು ಇವರಮ್ಮನಿಗೆ ಏನೂ ಗೊತ್ತಿಲ್ಲ. ಆಮ್ಮಂದಗೆ ಈಗಲೇ ಹೇಳುವುದು ಬೇಡಾಂತಂದ್ಲು."

"ಯಾಕೆ?" ಇಬ್ಬರೂ ಒಟ್ಟಿಗೇ ಕೇಳಿದರು.

"ಕಾಲು ನೋವು ಇಲ್ಲದೇ ಇದ್ದಿದ್ರೆ ಎದ್ದು ಹೊರಟು ಹೋಗಿರುತ್ತಿದ್ದೆ. ಎಕ್ಸ್‌ರೇ ರಿಪೋರ್ಟ್ ಬಂದ ಮೇಲೆ, ಹೇಳೋಣ ಅಂದ್ಕೊಂಡೆ"

" ಅದೆಲ್ಲ ಸರಿಯಲ್ಲ. ನಿಮ್ಮ ತಾಯಿಗೆ ತಿಳಿಸುವುದು ಒಳ್ಳೆಯದು." ಮನೋಜನೆಂದ.

ಅಮ್ಮ ಕ್ಲಿನಿಕ್‌ನಲ್ಲಿರುತ್ತಾಳೆ. ಪೇಶೆಂಟ್ಸ್‌ನೆಲ್ಲಾ ಕಳಿಸಿ. ಅವಳು ಬರುವ ಹೊತ್ತಿಗೆ ನನ್ನ ಪೇಶೆಂನ್ಸ್ ಹಾಳುಗುತ್ತೆ ಅಂತ ಅಂದ್ಕೊಂಡು ಸುಮ್ಮನಾದೆ"

"ಹಾಗಾದ್ರೆ ...ನಾನೀಗಲೇ ಹೋಗಿ ಹೇಳಿತೀನಿ. ಬರುವುದಾದರೆ ನನ್ನ ಜೊತೇಲೇ ಕರೆದುಕೊಂಡುಬರ್ತಿನಿ" ಮುರಳಿ ಹೊರಟ.

"ನಾನು ಫೋರ್ ಅವರ್ಸ್‌ನಿಂದ ಇಲ್ಲೇ ಇದೀನಿ. ನಾನೂ ಸ್ವಲ್ಪ ಮನೆಗೆ ಹೋಗಿ ಬರ್ತಿನಿ. ಮುರಳಿ ನನಗೆ ಡ್ರಾಪ್ ಕೊಡ್ತೀಯಾ?" ಗೀತಾ ಕೇಳಿದಳು.

ಈಗ ಅಲ್ಲಿ ಮನೋಜನೊಬ್ಬನೇ ಉಳಿದ. ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತ.

"ರಾಧಿಕಾ, ಎಂತಹ ಫಜೀತಿ ಬಂತು ನೋಡು. ಇನ್ನು ಮೇಲೆ ನೀನು ಲೂನಾ ಓಡಿಸಬೇಡ ನೋಡು" ಕಳಕಳಿಯಿಂದ ನುಡಿದ.

"ಕಾಲು ಮುರಿದಿದ್ರೆ ಸಧ್ಯಕ್ಕಂತೂ ಓಡಿಸುಕ್ಕಾಗುಲ್ಲ. ಆಮೇಲೆ ನಾನು ಸ್ಕೂಟರ್ನಲ್ಲಿ ನನ್ನನ್ನು ತಿರುಗಾಡಿಸಬೇಕಾಗುತ್ತೆ ನೋಡು...."ಅವಳು ನಗುತ್ತಾ ನುಡಿದಳು.

"ನಿನಗೆ ತಮಾಷೆ! ನನಗೆ ಎಷ್ಟು ಗಾಭರಿಯಾಯ್ತು ಗೊತ್ತಾ?"

"ನಾನು ಅಂದ್ರೆ ನಿನಗೆ ಅಷ್ಟು ಇಷ್ಟಾನ ಮನೋಜ್?"

"ಕಣೆ ಕೇಳು, ಮಾವನಿಗೆ ಗೊತ್ತಾದರೆ, ನನಗಿಂತ ಹೆಚ್ಚು ಆತಂಕ ಪಟ್ಕೋತಾನೆ."

"ನಿಮ್ಮ ಮಾವ ತುಂಬಾ ಒಳ್ಳೆಯವರು ಮನೋಜ್...ಅವರಿಗೆ ನನ್ನ ಮೇಲೆ ತುಂಬಾ ಪ್ರೀತಿ ಅಲ್ವಾ?"

"ಹೂಂ. ತುಂಬಾ ಪ್ರೀತಿ...ಕಾರಣ ಗೊತ್ತಾ ನಿನಗೆ? ಹೇಳಿದ್ರೆ ನಂಬ್ತೀಯೋ ಇಲ್ವೋ..."

"ಹೇಳು ಮನೋಜ್.. ನೀನೂ ಏನು ಹೇಳಿದರೂ ನಾನು ನಂಬ್ತೀನಿ" ಎನ್ನುತ್ತಾ ಉತ್ಸಾಹದಿಂದ ಏಳಲು ನೋಡಿ. ಹಾಂ ಎಂದು ನೋವಿನಿಂದ ಮುಖ ಕಿವುಚಿ ಚೀರಿದಳು.

"ತಥ್ ಹಾಳಾದ್ದು...ಕಾಲಿಗೆ ಪೆಟ್ಟಾಗಿದೆ ಅನ್ನೋದೇ ಮರೆತು ಹೋಗಿತ್ತೂ...ಮನೋಜ್ ನನಗೆ ಐಸ್‌ಕ್ರೀಂ ತಂದುಕೊಡ್ತೀಯಾ? ಪ್ಲೀಸ್"

"ಒಂದಲ್ಲ. ನಾಲಕು ತಂದು ಕೊಡ್ತೀನಿ. ಮೊದಲು ಕಾಲಿಗೇನಾದರೂ ತುಂಬಾ ಪೆಟ್ಟಾಗಿದೆಯಾ ಅಂತ ನೋಡಬೇಕು. ನಾನು ಡಾಕ್ಟರನ್ನು ನೋಡಿಕೊಂಡು ಬರ್ತಿನಿ" ಎಂದು ಹೊರಟ.

"ಬೇಗ ಬಾ..." ಎಂದು ನೋವಿನಿಂದ ಮುಖ ಕಿವುಚುತ್ತಾ ನುಡಿದಾಗ ಅವನಿಗೆ ವ್ಯಥೆಯಾಗಿತ್ತು.

ಡಾಕ್ಟರರ ಹತ್ತಿರ ಮಾತನಾಡಿ. ಎಕ್ಸರೇ ನೋಡಿ. ಮನೋಜ ವಾರ್ಡಿಗೆ ವಾಪಸ್ಸು ಬರುವ ಹೊತ್ತಿಗೆ ರಾಧಿಕಾಳ ತಾಯಿ ಬಂದಿದ್ದಳು. ಮನೋಜ ಅಲ್ಲೇ ನಿಂತ ಆಕೆ ಮಗಳ ಮೇಲೆ ರೇಗುತ್ತಿದ್ದಳು.

"ನಿನಗೆ ಅವಾಂತರ ಜಾಸ್ತಿ. ಅವತ್ತೇ ಹೇಳಿದ್ದೆ. ಅಷ್ಟೊಂದು ಸ್ಪೀಡಾಗಿ ಓಡಿಸಬೇಡವೇ ಗಾಡೀನಾ...ಆಕ್ಸಿಡಂಟ್ ಮಾಡ್ಕೋತೀಯ ಅಂತ. ನೀನೆಲ್ಲಿ ಕೇಳ್ತೀಯ ನನ್ನ ಮಾತನ್ನ. ಆಯ್ತಲ್ಲ ಅನುಭವಿಸು"

"ಏನ್ ಮಮ್ಮೀ...ಇಲ್ಲಿ ನನ್ನ ಫ್ರೆಂಡ್ ಎದುರಿಗೆ ಬೈತಾ ಇದೀಯಲ್ಲ. ಕಾಲು ನೋವಿ ಅಂತ ನಾನು ಒದ್ದಾಡ್ತಿದ್ರೆ, ಒಳ್ಳೇ ಮಾತಾಡುಕ್ಕೆ ಆಗುಲ್ವಾ ನಿನದಗೆ? ಆಕ್ಸಿಡೆಂಟ್‌ನಲ್ಲಿ ಸತ್ತು ಹೋಗಿದ್ರೆ ಚೆನ್ನಾಗಿತ್ತು" ರಾಧಿಕಾ ಗೊಣಗಿದಳು.

"ಏನು ಗೊಣಗ್ತೀಯ? ನನ್ನ ಚಿಂತೆ ನಿನಗೆ ಹೇಗೆ ತಿಳಿಯುತ್ತೆ? ಕೈಯೋ ಕಾಲೋ ಮುರಿದಿದ್ರೆ ಏನು ಗತಿ? ಪೋಲಿಸ್ ಎನ್‌ಕ್ವೈರಿ ಏನಾದ್ರೂ ಆದ್ರೆ..."ಆತಂಕದಿಂದ ಕೇಳಿದಳು.

"ಅಂಥಾದ್ದೇನಿಲ್ಲ ಆಂಟಿ. ಅವಳೇ ಬ್ಯಾಲೆನ್ಸ್ ತಪ್ಪಿ ಪಕ್ಕಕ್ಕೆ ಬಿದ್ದಿದಾಳೆ. ಯಾರದ್ದೂ ಫಾಲ್ಟ್ ಇಲ್ಲ."

"ಇವತ್ತಂತೂ ನನ್ನ ತಪ್ಪಿರಲಿಲ್ಲ ಮಮ್ಮಿ. ಸ್ಪೀಡಾಗಿ ಹೋಗ್ತಾನೂ ಇರಲಿಲ್ಲ. ಎದುರಿಗೆ ಇದ್ದಕ್ಕಿದ್ದಂತೆ ಬಂದ ನಾಯಿ ಮರೀನ ಬಚಾವ್ ಮಾಡುಕ್ಕೆ ಹೋಗಿ ಮೋರೀಲಿ ಬಿದ್ದೆ ಅಷ್ಟೇ,... ಸಧ್ಯ ಮೋರೀಲಿ ನೀರು ಇರಲಿಲ್ಲ." ನೋವಿನಲ್ಲೂ ಅವಳು ನಗುತ್ತಾ ನುಡಿದಾಗ, ಮನೋಜನಿಗೆ ಐಸ್‌ಕ್ರೀಂ ನೆನಪು ಬಂತು. ನರ್ಸಿಂಗ್ ಹೋಂನ ಸಮೀಪದಲ್ಲಿದ್ದ ಕೂಲ್ ಕಾರ್ನರ್‌ನಲ್ಲಿ ನಾಲ್ಕು ಕಪ್ ಐಸ್‌ಕ್ರೀಂಗಳನ್ನು ಪ್ಯಾಕ್ ಮಾಡಿಸಿಕೊಂಡು ಬಂದ. ಮುಳಿಯ ಕೈಗೆ ಕೊಟ್ಟು ಕೊಡು ಅಂತ ಹೇಳಿದ.

ರಾದಿಕಾ, ಮನೋಜನನ್ನು ತನ್ನ ತಾಯಿಗೆ ಪರಿಚಯಿಸಿದಳು. "ಇವನು ನನ್ನ ಫ್ರೆಂಡ್ ಮನೋಜ್..." ಅವಳು ಅವನನ್ನೇ ದಿಟ್ಟಿಸಿದಳು. ಮನಸ್ಸಿಗೆ ಹಿತವೆನಿಸಲಿಲ್ಲ. ಮನೋಜ ಕೈ ಮುಗಿದು ನಮಸ್ಕಾರ ಹೇಳಿದರೂ ಮನಸ್ಸು ಯೋಚಿಸುತ್ತಿದ್ದುದೇ ಬೇರೆ. ಈಗ್ಯಾಕೆ ಐಸ್‌ಕ್ರೀಂ ಎಂದಳು ಕಟುವಾಗಿ.

"ನಾನೇ ತಗೊಂಡು ಬರೋಕೆ ಹೇಳಿದ್ದೆ" ರಾಧಿಕಾ ನುಡಿದಳು.

ಮುರಳಿ ಎಲ್ಲರಿಗೂ ಕೊಡಲು ಹೋದ. ಆಕೆ ನಿರಾಕರಿಸಿದಳು. ಮನೋಜ, ಮುರಳಿ ಒಂದೊಂದು ತಿಂದರು. ರಾಧಿಕಾ ಎರಡನ್ನು ಮುಗಿಸಿದಳು. "ಚೆನ್ನಾಗಿತ್ತು. ಥ್ಯಾಂಕ್ಸ್" ಎಂದಳು ಮನೋಜನ ಕಡೆ ತಿರುಗಿ. ಮುರಳಿ ಮನೋಜನಿಗೆ ಮೆಲುದನಿಯಲ್ಲಿ ಹೇಳಿದ.

"ನೀನು ಬೇಕಾದರೆ ಮನೆಗೆ ಹೋಗು ಗೀತ. ನಿನ್ನ ಮಾವ ಕಾಯ್ತಾ ಇರ್ತಾರೆ. ಅಲ್ಲದೇ ಆಕೆ ಒಂದು ತರಹ ಸ್ವಭಾವದವರು"ಆಕೆಯ ವರ್ತನೆಯಿಂದ ಮನೋಜನ ಇರುವು ಆಕೆಗೆ ಇಷ್ಟವಿಲ್ಲವೆನ್ನುವುದನ್ನು ಮುರಳಿ ಅರಿತ, ಮನೋಜನಿಗೂ ಮುಜುಗರವಾಗಿತ್ತು. ಆದರೂ ಹೇಳಿದ.

"ನಾನು ಹೊರಟು ಹೋದ್ರೆ, ರಾಧಿಕಾ ಏನೂ ಬೇಜಾರು ಮಾಡ್ಕೊಳ್ಳಲ್ಲ ತಾನೇ...?''

''ಇಲ್ಲಪ್ಪಾ...ನಾನು ಅವಳಿಗೆ ಹೇಳ್ತೀನಿ. ನೀನು ಹೋಗು" ಅಷ್ಟರಲ್ಲಿ ನರ್ಸಿಂಗ್ ಹೋಂನ ಮಾಳೆ ಡಾಕ್ಟರು ಬಂದರು.

" ಹಲೋ ಯಂಗ್ ಲೇಡಿ...ಹೇಗೆನ್ನಿಸುತ್ತೆ ಈಗ?" ರಾಧಿಕೆಯ ಬಳಿ ಸರಿದು

ಕೇಳಿದರು. ಅವಳು ಮುಗುಳ್ನಕ್ಕು ತಲೆ ಆಡಿಸಿ, ನಂತರ ತನ್ನ ತಾಯಿಯ ಪರಿಚಯ ಮೆಳಆಡಜಿ ಕೊಟ್ಟಳು. ತಾಯಿ ಅವರ ಹತ್ತಿರ ಮಾತನಾಡುತ್ತಿದ್ದಾಗ, ಮನೋಜ ರಾಧಿಕಾಳಿಗೆ, ಆ ಮೇಲೆ ಮತ್ತೆ ಬರ್ತಿನೀ ಅಂ ಹೇಳಿ ಹೊರಟ. ಸಧ್ಯ ಹೆಚ್ಚಿಗೆ ಏನೂ ಅಪಾಯವಾಗಿಲ್ಲವಲ್ಲ ಅಂತ ನಿರಾಳವಾಗಿತ್ತು. ಮನೆಗೆ ಬಂದೊಡನೆ ತನ್ನ ಮಾವನಿಗೆ ಹೇಳಿದ್ದ.

ನಿನ್ನ ಕಣ್ಮಣಿ, ಅದೇ ಆ ಹುಡುಗಿ, ರಾಧಿಕಾ...ಆಕ್ಸಿಡೆಂಟ್ ಮಾಡಿಕೊಂಡು ಆಸ್ಪತ್ರೇಲಿ ಮಲಗಿದ್ದಾಳೆ. ರಂಗನಾಥನ ಎದೆ ಢವಗುಟ್ಟಿತು.

ಹೌದೇನೋ...ಏನಾಯ್ತೋ...ಆತುರಾತುರವಾಗಿ, ಮನೋಜನ ವ್ಯಂಗ್ಯವನ್ನು ಗಮನಿಸದೇ ಕೇಳಿದ.

ಅದೇ ಓಡಿಸ್ತಾಳಲ್ಲ ಲೂನಾ...ಲೂನಾದಿಂದಲೇ ಆದದ್ದು. ನನಗೆ ಎರಡು ಸಲ ಹೊಡೆದಳು. ನಾಉ ಬಚಾವಾದೆ. ಈಗ ಅವಳೇ ಬಿದ್ದು ಕಾಲು ಮುರಿದುಕೊಂಡಿದಾಳೆ ಅಷ್ಟೇ."

"ಸಾಕು ನಿನ್ನ ತಮಾಷೆ. ಯಾರಿದಗಾದ್ರೂ ಪೆಟ್ಟಾದಾಗ ಹೀಗೆಲ್ಲಾ ಮಾತನಾಡಬಾರದು. ಯಾವ ನರ್ಸಿಗ್ ಹೋಂ ನಲ್ಲಿದಾಳೆ ಅವಳು?"

"ಯಾಕೆ? ನೀನು ಹೋಗಿ ನೋಡ್ಬೇಕಾ?"

"ಹುಂ. ನೋಡ್ಕೊಂಡು ಬರ್ತಿನಿ" ಅವನು ಗಂಭೀರವಾಗಿ ಹೇಳಿದಾಗ ಮನೋಜ ಸುಮ್ಮನಾದ. ಬೇಕಾಂತ ಮಾವನ್ನ ಕೆಣಕಿದ್ದ. ಆದರೆ ರಾಧಿಕಳ ಕಾಲಿನ ಮೂಳೆ ಫ್ರಾಕ್ಚರ್ ಆಗಿರುವುದು ಅವನಿಗೂ ವ್ಯಥೆಯೇ.

ಈಗಲೇ ಬೇಡ . ಅಲ್ಲಿ ಅವಳ ಅಮ್ಮ ಬಂದಿದಾರೆ. ನಾಳೆ ಹೋಗೂವಂತೆ."

"ಅವರಿದ್ದರೆ ನಾನ್ಯಾಕೆ ಹೋಗ್ಬಾರ್ದು?"

"ಕಾಲು ಫ್ರಾಕ್ಚರ್ ಆಗಿದ್ರೆ ಪ್ಲಾಸ್ಟರ್ ಹಾಗಿ ಕಟ್ತಾರೆ. ಈಗ ಹೋಗಿ ಏನು ಮಾಡ್ತೀಯ ಅಂತ?"

"ಸರಿ ಹಾಗಾದ್ರೆ ಬೆಳಿಗ್ಗೇನೇ ಹೋಗ್ತೀನಿ ಎಂದ. ರಾತ್ರಿ ಇಬ್ಬರಿಗೂ ನಿದ್ದೆ ಇಲ್ಲ. ಕಾಲು ಫ್ರೀಕ್ಚರ್ ಆಗಿರಬಹುದು ಎನಿಸಿ, ರಂಗನಾಥನಿಗೆ ವ್ಯಥೆಯಾಗಿತ್ತು. ತುಂಬಾ ಪೆಟ್ಟಾಗಿದ್ದರೆ, ಕುಂಟಬೇಕಾಗುತ್ತದೆ...ಆ ಕಾಲಿನ ಮೇಲೆ ಭಾರ ಹಾಕುವಂತಿಲ್ಲ...ಕುಂಟು ಎಂದೆನಿಸಿದ ಕೂಡಲೇ ಏನೋ ನೆನಪು..ಎಂಥಾ ರೂಪವತಿ ಹುಡುಗಿ, ಮನೋಜ ಒಪ್ಪಿದರೆ ಅವನಿಗೆ ಅವಳ ಜೊತೆ ಮದುವೆ ಮಾಡುವ ಕನಸು ಕಂಡಿದ್ದೆ ನಾನು ಆದರೆ...ಕುಂಟೀನಾದರೂ ಆಗ ಹೋದರೆ ಮನೋಜ ಒಪ್ಪುವನೋ ಇಲ್ಲವೋ...ನಾನು ಬಲವಂತ ಮಾಡುವುದಕ್ಕಾಗುವುದಿಲ್ಲ. ಹಾಗಾದರೆ ಆ ಹುಡುಗಿಯ ಭವಿಷ್ಯ ? ದೇವರೇ ಹಾಗೇನೂ ಆಗದಿರಲಿ.,..ನಿರ್ಮಲೆಗೆ ಕುಂಟು ಎಂದು ತನಗೆಂದೂ ಅವಳ ಮೇಲೆ ತಿರಸ್ಕಾರವಿರಲಿಲ್ಲ. ಹಾಗಂತ ನಾನೂ ಮನೋಜನಿಗೆ ಬಲವಂತ ಮಾಡಲಾರೆ...ಅವನ ಮನಸ್ಸಿನಲ್ಲಿ ಏನಿದೆಯೋ? ಆಹುಡುಗಿಯ ಜೊತೆ ಹೇಗಿದ್ದಾನೋ....ಸ್ನೇಹಿವಿದೆಯೋ ಇಲ್ಲವೋ...ಪ್ರೀತಿ ಪ್ರೇಮ ಎಂದು ತಲೆಗೆ ಹಚ್ಚಿಕೊಂಡಿರುವಂತೆ ಅನ್ನಿಸುವುದಿಲ್ಲ. ಅವನಾಯಿತು. ಮವನ ಓದಾಯಿತು. ಈಗ ಹಾಗಿರುವುದೇ ಸರಿ. ಇಬ್ಬರೂ ಡಾಕ್ಟರುಗಳಾಗುವವರು ಅಂತ ನಾನೇನೋ ಯೋಚಿಸಿದ್ದೆ.

ದೇವರೆ ಆ ಹುಡುಗಿಯ ಕಾಲು ಸರಿಯಾಗಿ ಎಂದು ಮತ್ತೊಮ್ಮೆ ದೇವರಲ್ಲಿ ಪ್ರಾರ್ಥಿಸಿ , ಮಲಗಿ ನಿದ್ರಿಸಲು ಯತ್ನಿಸಿದ.

ಮನೋಜನ ಚಿಂತೆಯೇ ಹೇರೆ. ಕಾಲು ಫ್ರಾಕ್ಚರ್ ಆಗಿದ್ದರೆ ತಿಂಗಳೋ ಒಂದೂವರೆ ತಿಂಗಳೋ ಕಾಲು ಆಡಿಸಬಾರದು. ಕಾಲೇಜಿಗೂ ಬರುಕ್ಕೆ ಆಗುತ್ತೋ ಇಲ್ಲವೋ..ಈ ನಡುವೆ ಅವಳನ್ನು ಒಂದು ದಿನ ನೋಡದಿದ್ದರೂ ನನ್ನ ಮನಸ್ಸು ಚಡಪಡಿಸತ್ತೆ. ಆಸ್ಪತ್ರೇಲೇ ಇದ್ದರೆ, ನಾನೇ ದಿನಕ್ಕೇ ಒಂದು ಸಲ ಹೋಗಿ ನೋಡಿ ಮಾತನಾಡಿಸಿಕೊಂಡು ಬರಬಹುದು. ಮನೆಗೆ ಕರೆದುಕೊಂಡು ಹೋದರೇ...ಅವರಮ್ಮ ಹೇಗೋ ಏನೋ...ಮುರಳಿ ಸಹ ಸರಿಯಾಗಿ ಏನೂ ಹೇಳಲಿಲ್ಲ. ನಾನು ರಾಧಿಕಾಳ ಬಾಯ್ ಫ್ರೆಂಡ್ ಅಂತ ತಿಳಿದುಕೊಂಡು ಆಕೆಗೆ ಸರಿ ಹೋಗದಿದ್ದರೆ? ನಾನು ಅವರ ಮನೆಗೆ ಹೇಗೆ ಹೋಗಲಿ? ಅವಳು ಸಧ್ಯಕ್ಕೆ ಕೆಲವು ದಿನಗಳಾದರೂ ಆಸ್ಪತ್ರೆಯಲ್ಲಿರುವಂತಾಗಲಿ ಎಂದು ದೇವರಲ್ಲಿ ಬೇಡಿ ಕಣ್ಣು ಮುಚ್ಚಿದ.

ಬೆಳಗ್ಗೆ ಮನೋಜ ಕಾಲೇಜಿಗೆ ಹೋಗುವ ಹೊತ್ತಿಗೆ ರಂಗನಾಥನೂ ಸಿದ್ದನಾದ.

ನಾನು ಆಸ್ಪತ್ರೆಗೆ ಹೋಗಿ ಬರ್ತೀನಿ ಎಂದ.,

ನಾನೂ ಬರ್ತೀನಿ. ನಿನ್ನನ್ನು ಅಲ್ಲಿ ಬಿಟ್ಟು ಕಾಲೇಜಿಗೆ ಹೋಗ್ತೀನಿ. ಇಬ್ಬರೂ ನರ್ಸಿಗ್ ಹೋಂ ತಲುಪಿದರು. ರಂಗನಾಥ ಬಹಳ ಕಳಕಳಿಯಿಂದ ರಾಧಿಕಾಳನ್ನು ವಿಚೀರಿಸಿಜಯ

ಯಾಕಮ್ಮಾ ಹೀಗೆ ಮಡ್ಕೊಂಡೆ? ಏನಾದ್ರೂ ಹೆಚ್ಚು ತುಂಬಾ ನೋಯುತ್ತಿದೆ.

ಪೆಟ್ಟಾದ್ರೆ ನೋಯ್ದೇ ಇರುತ್ತಾ?'' ಮನೋಜ ಕೆಣಕಿದ.

ಇ ರಾತ್ರಿ ....ಇಲ್ಲಿ ನೀನೊಬ್ಬಳೇ ಇದ್ಯಾ?"

ಹ್ಞೂಂ ಹ್ಞೂಂ ನಮ್ಮನೆ ಅಡಿಗೆಯವರು ಜೊತೇಲಿದ್ರು

ರಾಧಿಕಾ,ಸುಮ್ಮನೇ ನಿಂತಿದ್ದ ಮನೋಜನಿಗೆ ಹೇಳಿದಳು

ರಾದಿಕಾ, ಸುಮ್ಮನೇ ನಿಂತಿದ್ದ ಮನೆಜನಿಗೆ ಹೇಳಿದಳು.

ಕಾಲೇಜಿಗೆ ಹೋಗುಲ್ವಾ? ಗೀತ ಸಿಕ್ಕಿದ್ರೆ. ಬಂದು ಹೋಗುವಂತೆ ಹೇಳು. ಹಾಗೇ ತುಂಬಾ ಮ್ಯಾಗ್ಸೈನ್ಸ್ ಬೇಕಂತೆ ಅಂತ ಹೇಳು.

ಅವಳು ಮನೋಜನನ್ನು ಏಕವಚನದಲ್ಲಿ ಮಾತನಾಡಿಸಿದುದನ್ನು ರಂಗನಾಥ ಗಮನಿಸಿದ. ಹಾಗಾದ್ರೆ ಇವರ ಸ್ನೇಹ ತುಂಬಾ ಮುಂದುವರೆದಿರೆ ಅಂತೆಸಿತು.

ಮನೋಜ ಹೊರಟು ಹೋದ. ರಂಗನಾಥ ಅಲ್ಲಿಯೇ ಉಳಿದುಕೊಂಡ. ಅಂಕಲ್ ಹತ್ತಿರಮಾತನಾಡಲು ಅವಳಿಗೆ ಹೆಚ್ಚಿಗೆ ವಿಷಯಗಳಿರಲಿಲ್ಲ. ರಂಗನಾಥ ಅವುಳ ಬಗ್ಗೆ ವಿಚಾರಿಸಬೇಕು ಅನ್ನು ವಷ್ಟರಲ್ಲಿ ಮುರಳಿ ಬಂದ.

ಹಲೋ ರಾಧಿಕಾ...ರಾತ್ರಿ ಚೆನ್ನಾಗಿ ನಿದ್ದೆ ಬಂತಾ? ಈಗ ಹೇಗಿದೀಯ?" ಆತ್ಮೀಯತೆಯಿಂದ ವಿಚಾರಿಸಿದ.

ನೋಡ್ತಾ ಇದೀಯಲ್ಲ. ಬಿದ್ದಿದೀನಿ. ಬೋರ್ ಎಂದಳು.

ನಿನಗೆ ಎಲ್ಲಾ ಬೋರ್. ಎಷ್ಟು ದಿನ ಇರಬೇಕಂತೆ ಇಲ್ಲಿ?"

"ಮೂರು ದಿನ ಇದ್ರೆ ಸಾಕು ಅಂದ್ರು . ಆಮೇಲೆ ಡಿಸ್ಚಾರ್ಜ್ ಮಾಡ್ತಾರೆ ಮನೇಲೂ ಬೇಜಾರೇ...ಈಗಲಿಂದ ಚಿಂತೆ ಆಗ್ತಿದೆ."

" ಟಿ.ವಿ. ನೋಡ್ಕೊಂಡು ಕಾಲ ಕಳೀಬಹುದಲ್ಲ.

ಥೂ. ಟಿ .ವಿ. ಪ್ರೋಗ್ರಾ. ಒಂದೂ ಚೆನ್ನಾಗಿರುಲ್ಲ ಬೇಜಾರು."

" ಎಲ್ಲಾ ಬೇಜಾರು ಅಂದ್ರೆ ಹೇಗೆ? ಮೂಳೆ ಸರಿಯಾಗಿ ಕೂಡುವವರೆಗೂ ಅಲ್ಲಾಡದೇ ಇರಬೇಕು.ಇಲ್ಲದಿದ್ರೆ ನಿನಗೇ ತೊಂದರೆ"

"ನಂಗೆ ಬೇಜಾರಾಗುತ್ತೆ. ನಾನು ಕಾಲೇಜಿಗೆ ಹೋಗೇ ಹೋಗ್ತೀನಿ"

"ಕಷ್ಟ ಆಗುತ್ತೆ. ರಾಧಿಕಾ...ನಿನಗೆ ಗೊತ್ತಿಲ್ಲ."

ಒಂದು ಆಟೋ ಗೊತ್ತು ಮಡ್ಕೋಳ್ತೀನೀ. ಹಠವಾದಿಯಂತೆ ಅವಳು ನುಡಿದಾಗ, ರಂಗನಾಥ ಬೆರಗಾದ. ಈ ತರಹದ ಹಠ ಹುಡುಗಿಯರಿಗೆ ಒಳ್ಳೆಯದಲ್ಲ ಎಂದು ಹೇಳಬೇಕೆಂದು ಕೊಂವನು, ತಡೆದುಕೊಂಡ.

ತಡಿ...ನೋಡೋಣ. ನಿನ್ನ ಮಮ್ಮಿ ಏನಂತಾರೆ ಅಂತ....

ನಾನೂ ಕೇಳ್ತೀನಿ. ಸದಾ ನನ್ನ ಎದುರಿಗೆ ಕೂತಿರ್ತೀಯಾ ಅಂತ. ಕ್ಲಿನಿಕ್‌ನ ಬಿಟ್ಟು ಹತ್ತು ನಿಮಿಷ ನನ್ನೆದುರಿಗೆ, ನನಗೆ ಬೇಕಾದಾಗ ಕೂತ್ಕೊಳ್ಳಲಿ ನೋಡೋಣ.

ಕ್ಲಿನಿಕ್ ಎನ್ನುವ ಪದ ರಂಗನಾಥನ ಕಿವಿಗೆ ಬಿತ್ತು. ಮೈಯೆಲ್ಲೆಲ್ಲಾ ಏನೋ ಹರಿದಾಡಿದ ಅನುಭವ...ಎದೆ ಬಡಿತ ತೀವ್ರವಾದೆಂತೆನಿಸಿತು. ಆದರೂ ಬಾಯಿಬಿಟ್ಟು ಏನನ್ನು ಕೇಳಲಾರ. ಮತ್ತೆ ಅಲ್ಲಿ ಕುಳಿತಿರಲು ಮುಜುಗರವೆನಿಸಿ ಎದ್ದು ಹೊರಟ.

ಬರ್ತಿನಮ್ಮಾ ....ಬೇಗ ವಾಸಿ ಮಾಡ್ಕೋ...ಏನಾದ್ರೂ ಬೇಕಿದ್ರೆ ನಿಸ್ಸಂಕೋಚ ವಾಗಿ ಕೇಳು. ನಾನು ಇದ್ದೀನಿ. ಮನೋಜನೂ ಇದ್ದಾನೆ"

"ಥ್ಯಾಂಕ್ಸ್ ಅಂಕಲ್ ,ನೀವು ಹೇಳಿದ ಮೇಲೆ ಇನ್ನೇನು? ಏಕೋ ಏನೋ ಮಮತೆ ಉಕ್ಕಿದಂತಾಗಿ ರಾಧಿಕಾಳ ತಲೆ ಸವರಿ. ಅಲ್ಲಿಂದ ಕದಲಿದ.

ಮುರಳಿ, ಮನೋಜನ ಮಾವ ಯಾಕಿಷ್ಟು ಒಳ್ಳೆಯವರು? ಎಲ್ಲಾ ಗಂಡಸರೂ ಇಷ್ಟೇ ಒಳ್ಳೆಯವರಾಗಿರ್ತಾರಾ?"ಮುಗ್ಧಳಂತೆ ಕೇಳಿದಳು.

೧ ನಂಗೆ ಗೊತ್ತಿಲ್ಲಪ್ಪಾ....ನನ್ನನ್ನು ಮನೋಜನ್ನ ನೋಡಿದರೆ ನಿನಗೇನನ್ನಿಸುತ್ತೆ?ಒಳ್ಳೆಯವರು ಅಂತನ್ನಿಸುತ್ತೋ ಇಲ್ಲವೋ...?

"ಯೂ ಆರ್ ರೈಟ್ ಮುರಳಿ. ನೀವೆಲ್ಲಾ ಒಳ್ಳೆಯವರು. ತುಂಬಾ ಒಳ್ಳೆಯವರು. ನಿನ್ನಂತಹ ಒಬ್ಬ ಅಣ್ಣನೋ, ತಮ್ಮನೋ ನನಗಿದಿದ್ದರೆ ಅಂತ ನನಗೆ ಸದಾ ಅನ್ನಿಸುತ್ತೆ."

"ನಾನಿಷ್ಟು ಒಳ್ಳೆಯವನು ಅಂತ ಆಗ ನಿನಗೆ ಖಂಡಿತಾ ಅನ್ನಿಸುತ್ತಿರಲಿಲ್ಲ ರಾಧಿಕಾ. ನನ್ನ ಜೊತೆ ಜಗಳ ಆಡಿ, ಮಮ್ಮಿಗೆ ಚಾಡಿ ಹೇಳಿ ನನ್ನನ್ನು ಬೈಸ್ತಿದ್ದೆ ನೀನು ರೈಟ್?

"ಏನಿಲ್ಲ...ನಿಂಗೆ ಹೇಗೆ ಗೊತ್ತು?"

"ಈಗ ನಾನೂ, ಮೋಹನ ಮಾಡುವುದು ಹಾಗೇ ಅಲ್ವಾ?"

"ಆದ್ರೂ..ಚೆನ್ನಾಗಿರ್ತಿತ್ತು. ಬೋರ್ ಆಗ್ತಿರಲಿಲ್ಲ. ನಾನು ಎಷ್ಟು ಒಂಟಿ ಅಂತ ನಿನಗೆ ಹೇಗೆ ಅರ್ಥವಾಗಬೇಕು?" ಮುಖ ಸಪ್ಪಗೆ ಮಾಡಿದಳು. ಅದನ್ನು ಗಮನಿಸಿ ಮುರಳಿ ನುಡಿದ.

ಮನೋಜನೂ ನಿನ್ನ ಹಾಗೇ ಒಂಟಿ. ಆದರೆ ಅವನೆಂದೂ ಬೇಜಾರು ಅಂತ ಹೇಳಿದ ನೆನಪೇ ಇಲ್ಲ. ಅಪ್ಪ ಅಮ್ಮನ ಮುಖ ನೋಡಿಲ್ಲ ಅವನು. ಬೆಳೆಸಿದ್ದೆಲ್ಲಾ ಈ ಮಾವನೇ"

"ಆದರೂ ಅದೇ ಬೇರೆ. ಅವನು ಮಾವನ ಕೈಲಿ ಬೆಳೆದಿದ್ದಾನೆ. ನಾನು! ನಾನು ಕೆಲಸದವಳ ಆರೈಕೇಲಿ ಬೆಳೆದಿದೀನಿ ಗೊತ್ತಾ? ನನಗೆ ಅಪ್ಪನ ನೆನಪಿಲ್ಲ. ಅಮ್ಮನ ಪ್ರೀತಿ ದೊರಕಿಲ್ಲ. ಮನೋಜನಿಗೆ ಮಾವನೇ ಸರ್ವಸ್ವ..ಹಾಗಿದಾರೆ ಅವರು...ಆದರೆ ನನಗೆ?"

"ಹಾಗೆ ಹೇಳಬೇಡ. ನಿನ್ನ ತಾಯಿ ನಿನ್ನನ್ನು ಪ್ರೀತಿಸದೇ ಇರ್ತಾರಾ? ನಿನಗೆ ತಿಳುವಳಿಕೆ ಸಾಲದು"

"ನೀನೂ ಉಪದೇಶ ಮಾಡಬೇಡ. ಗೀತಾನೂ ಅಷ್ಟೇ..ನಿನ್ನ ಹಾಗೇ...ಸದಾ ನನಗೆ ಬುದ್ದಿ ಹೇಳ್ತಾಳೆ.

ಅಷ್ಟರಲ್ಲಿ ಗೀತ ಬಂದಳು. ಬಾರೇ ನಿನಗೆ ಮೂರು ವರ್ಷ ಆಯಸ್ಸು. ನಾವುಬ್ಬರೂ ನಿನ್ನನ್ನೇ ಬೈದುಕೊಳ್ಳುತ್ತಿದ್ದೆವು.

ನಿಮಗಿನ್ನೇನು ಕೆಲಸ?'' ನಗುತ್ತಾ ನುಡಿದಳು ಗೀತ.

ನರ್ಸಿಗ್ ಹೋಂಗೆ ಸಮೀಪದಲ್ಲಿದ್ದ ಬಸ್‌ಸ್ಟ್ಯಾಂಡ್‌ಗೆ ನಡೆದು ಹೋಗುತ್ತಿದ್ದ ರಂಗನಾಥ, ಎದುರಿಗೆ ಭರ್‍ರನೆ ಬಂದು ಆಸ್ಪತ್ರೆಯ ಕಾಂಪೌಂಡಿನೊಳಕ್ಕೆ ತಿರುಗಿದ ಆಟೋ ರಿಕ್ಷಾವನ್ನು ಗಮನಿಸಿದ. ಆ ಆಟೋದಲ್ಲಿ ಕುಳಿತವಳನ್ನು ತಾನು ನೋಡಿದ್ದೆನೆ ಎಂದು ಆ ಕ್ಷಣದಲ್ಲಿ ಅನ್ನಿಸಿದರೂ, ಮುರುಗಳಿಗೆಯೇ ಮನಸ್ಸು ತಳ್ಳಿ ಹಾಕಿತು. ಆದರೂ ಮತ್ತೆ ಮತ್ತೆ ಅನುಮಾನ ಕಾಡಿದಾಗ, ವಾಪಸ್ಸು ನರ್ಸಿಗ್ ಹೋಂನ ಕೌಂಪೌಂಜಿನ ಒಳಗೆ ಬಂದು ಸ್ವಲ್ಪ ದೂರದಲ್ಲಿ ನಿಂತು ನೋಡಿದ. ಆಟೋದಿಂದ ಇಳಿಯುವ ಹೆಂಗಸನ್ನೇ ಗಮನಿಸಿದ. ಹೌದು, ಹೌದು....ಅವಳೇ ಅವಳೇ ಎಂದು ಕೊಂಡು ಮತ್ತೆ ಸರಿಯಾಗಿ ನೋಡಿದ. ಕಾಲೆಳೆದು ಹಾಕುತ್ತಾ ನಿಧಾನವಾಗಿ ನರ್ಸಿಗ್ ಹೋಂ ಒಳಗೆ ಹೋಗಲಿದ್ದವಳನ್ನು ಕಂಡು ನಿರ್ಮಲಾ ಎಂದು ತನ್ನಲ್ಲೇ ಉದ್ಗರಿಸಿದ.... ಒಂದೇ ಕ್ಷಣದಲ್ಲಿ ನಾನಾ ಭಾವನೆಗಳು ಅವನನ್ನು ಅಲುಗಾಡಿಸಿದವು.

ಇಲ್ಲಿ ಈಗ ...ಹೀಗೆ ನಿರ್ಮಲಾಳನ್ನು ಕಂಡಿದ್ದನ್ನು ನಂಬಲೇ ಸಾಕಷ್ಟು ಸಮಯ ಹಿಡಿಯಿತು. ಮತ್ತೆ ಅವಳನ್ನೂ ತಾನೆಂದೂ ಕಾಣುವುದೇ ಇಲ್ಲವೆಂದುಕೊಂಡಿದ್ದೆ. ಆದರೆ ಈಗ ಇಲ್ಲಿ ಆಕಸ್ಮಕವಾಗಿ ಅವಳು ಕಂಡಳು. ಅವಳು ಈ ನರ್ಸಿಗ್ ಹೋಂನಲ್ಲಿ ಡಾಕ್ಟರಾಗಿರಬಹುದೇ...ಇಲ್ಲದಿದ್ದರೆ ಈ ನಸಿಗಂಗ್ ಹೋಂಗೇಕೆ ಸುಮ್ಮನೇ ಬರುತ್ತಾಳೆ ಎಂದುಕೊಂಡರೂ, ಬೇರೆಲ್ಲವನ್ನು ಮರೆತು, ಹಾಗೇ ಯೋಚಿಸುತ್ತಾ ನಿಂತ.

ನಿಧಾನವಾಗಿ ಎಳೆದಳೆದು ಹೆಚ್ಚು ಹಾಕುತ್ತಾ ಹೋದವಳನ್ನೇ ಆಲೋಚನೆಗಳು ಹಿಂಬಾಲಿಸಿದವು. ಅವಳ ಹಿಂದೆಯೇ ತಾನೂ ಹೋಗಿ, ಅವಳು ಎಲ್ಲಿಗೆ ಹೋಗುತ್ತಾಳೆಂದು ನೋಡಲೇ...? ಅವಳು ನನ್ನನ್ನು ಗುರುತಿಸಿಬಿಟ್ಟರೇ...? ಗುರುತಿಸಿಯೂ ಮಾತನಾಡದಿದ್ದರೆ....ಏನು ಮಾಡಲಿ ಈಗ ಎಂದು ಅತ್ತಲೇ ನೋಡುತ್ತಾ ನಿಂತಿದ್ದವನನ್ನು ಮುರಳಿ ಎಚ್ಚರಿಸಿದ. ಏನ್ಸಾರ್...ಇನ್ನೂ ಇಲ್ಲೇ ಇದೀರಾ? ಆಟೋ ಸಿಗಲಿಲ್ವಾ?"

ರಂಗನಾಥ ಬೆವತು ಹೋದ. ತುಂಬಾ ಶೆಕೆ. ಎಳನೀರು ಕುಡಿಯಲೂ ಅಂತ ಬಂದೆ "

" ರಾಧಿಕಾ, ಎಳನೀರು ಬೇಕೂಂತ ಅಂದ್ಲು. ಅದಕ್ಕೇ ನಾನೂ ಬಂದೆ"

"ಒಬ್ಬಳೇ ಇದಾಳಾ?" ಅನುಮಾನಿಸುತ್ತಾ ಕೇಳಿದ

" ಇಲ್ಲ ಈಗ್ತಾನೇ ಅವರ ತಾಯಿ ಬಂದರು"

"ಹೌವಿದಾ ?ಆಕೆ ಕೆಲಸಕಕ್ಕೆ ಹೋಗ್ತಾರೇನೋ..."

"ಅವರದ್ದೇ ಸ್ವಂತ ಕ್ಲಿನಿಕ್ ಇದೆ. ಆಕೇನೂ ಡಾಕ್ಟರು

ರಂಗನಾಥನ ಹೃದಯದ ಬಡಿತ ಜೋರಾಯಿತು...ಹಾಗಾದರೆ ಇದೇ ತಾನೇ ಹೋದ ನಿರ್ಮಲಾ ರಾಧಿಕಾಳ ತಾಯಿಯಿರಬಹುದೇ,? ಹೇಗೆ ಕೇಳುವುದು? ಎಂದು ಆಲೋಚಿಸಿ.

ಎಲ್ಲಿದೆ ಅವರ ಕ್ಲಿನಿಕ್?" ಎಂದ

ಜಯನಗರದಲ್ಲಿದೆ. ರಂಗನಾಥ ನಿರಾಳನಾದ. ಹಿಂದೆ ನಿರ್ಮಲಳ ಕ್ಲಿನಿಕ್ ಇದ್ದುದು ಬಸವನಗುಕಡಿಯಲ್ಲಿ. ಹಾಗಾದರೆ ಅವಳೇ ಇರಲಾರಳು ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡರೂ ಅನುಮಾನ ಬಗೆಹರಿದಿರಲಿಲ್ಲ. ಮುರಳಿ ಡಾಕ್ಟರ ಹೆಸರನ್ನೂ ಹೇಳಿರಲಿಲ್ಲ ಇವನಿಗೆ ಕೇಳುವ ತವಕವಿದ್ದರೂ, ಏನೋ ಅಂಜಿಕೆ...ಅವ್ಯಕ್ತ ಕಳವಳ.

ಅಷ್ಟರಲ್ಲಿಮುರಳಿ ಎಳನೀರುಗಳನ್ನು ಕೊಟ್ಟಿಸಿಕೊಂಡು ಹೊರಟ. ಇವುಗಳನ್ನು ಕೊಟ್ಟು ಬಂದುಬಿಡ್ತಿವಿ. ಒಟ್ಟಿಗೇ ಹೋಗೋಣ ಮುರಳಿ ವಾಪಸ್ಸು ಬರುವವರೆಗೂ ರಂಗನಾಥ ಅಲ್ಲೇ ಕಂಭದಂತೆ ನಿಂತೇ ಇದ್ದ.

ಮನೋಜ ಮನೆಗೆ ವಾಪಸ್ಸು ಬಂದಾಗ, ರಂಗನಾಥ ದೀಪ ಸಹ ಹಾಕದೇ ಹಾಗೇ ಆರಾಮ ಕುರ್ಚಿಯಲ್ಲಿ ಕುಳಿತಿದ್ದ. ಇವನು ಕರೆದಾಗ ಬೆಚ್ಚಿದ.,

ಅದೇ ಯಾವಾಗ ಬಂದೆ? ಗೊತ್ತಾಗ್ಲೇ ಇಲ್ಲ ಎಂದ.

ನೀನು ರಾಧಿಕೆಯ ಲೋಕದಲ್ಲಿದ್ದೆ ಅಂತ ಕಾಣುತ್ತೆ. ಕೆಣಕಿದ.

ರಂಗನಾಥ ಏನೂ ಹೇಳಲಿಲ್ಲ. ತಿಂಡಿ ಬಿಸಿ ಮಾಡಿ, ತಟ್ಟೆಗೆ ಹಾಕಿ ಪ್ಲಾಸ್ಕಿನಲ್ಲಿದ್ದ ಬಿಸಿ ಕಾಫಿಯನ್ನು ಬಟ್ಟಲಿಗೆ ಬಗ್ಗಿಸಿಕೊಂಡು ತಂದುಕೊಟ್ಟ.

ರಾಧಿಕಾನ್ನ ನಾಡಿದ್ದು ಮನೆಗೆ ಕಳಿಸ್ತಾರಂತೆ. ಹೋಗಿ ಮಾತಾನಾಡಿಸಿಕೊಂಡು ಬಾ. ಏನಾದರೂ ಹೆಲ್ಪ್ ಬೇಕಾಗಬಹುದು ಮನೋಜ ಹುಬ್ಬೇರಿಸಿದ. ವ್ಯಂಗ್ಯದ ಛಾಯೆಯನ್ನು ಹುಡುಕಿದ. ಆದರೆ ಹಾಗೇನೂ ಅನ್ನಿಸಲಿಲ್ಲ. ರಾಧಿಕಾಳ ಮೇಲಿನ ಪ್ರೀತಿಯ ಜೊತೆಗೆ ಈಗ ಅನುಕಂಪವೂ ಬೆರೆತಿದೆ ಅಂದುಕೊಂಡ. ಮತ್ತೆಸಿದ್ದನಾಗಿ ಹೊರಟ.

ವಾರ್ಡಿನೊಳಕ್ಕೆ ಕಾಲಿಟ್ಟ. ರಾಧಿಕಾ ದಿಂಬಿಗೊರಗಿ ಮಂಚದ ಮೇಲೆ ಕುಳಿತಿದ್ದಳು ಕೈಯಲ್ಲಿ ಪುಸ್ತಕ ಹಿಡಿದಿದ್ದಳು. ಅವಳ ತಾಯಿ ಸಹ ಅಲ್ಲೇ ಕುಳಿತಿದ್ದರು. ಅವನನ್ನು ಕಂಡ ಕೂಡಲೇ ಪುಸ್ತಕ ಅತ್ತ ತೆಗೆದಿಟ್ಟು ಸಧ್ಯ ಬಂದೇಯಾ? ಬಾ. ಬೋರ್ ಆಗ್ತಿತ್ತೂ ಎಂದು ಹೇಳಿ ತನ್ನ ತಾಯಿಯ ಕಡೆ ತಿರುಗಿ ಮಮ್ಮಿ, ನೀನೂ ಬೇಕಾದರೆ ಮನೆಗೆ ಹೋಗು. ಅಡಿಗೆಯವರು ಬರುವವರೆಗೂ ಇವನು ಇರ್ತಾನೆ ಎಂದಳು ಖುಷಿಯಿಂದ.

ಇವನ್ಯಾರು ಈ ಮನೋಜ್? ನನಗಿಂತ ಹೆಚ್ಚೆ? ನಾನು ಇಲ್ಲಿ ಕೂತಿದ್ದರೂ ಮಾತಿಲ್ಲ. ಬೋರ್ ಆಗ್ತಿತ್ತಂತೆ. ಕೈಯಲ್ಲಿ ಪುಸ್ತಕ ಹಿಡಿದಿದ್ದರೂ ಮಾತಿಲ್ಲ. ಬೋರ್ ಆಗ್ತಿತ್ತಂತೆ. ಕೈಯಲ್ಲಿ ಪುಸ್ತಕ ಹಿಡಿದಿದ್ದರೂ..ಅವನು ಬಂದ ಕೂಡಲೇ ಮುಖ

ಅರಳಿತು. ಎಷ್ಟು ಇವನ ಸ್ನೇಹವೋ...ಪ್ರೀತಿ ಗೀತಿ ಅಂತ ತಲೆಗೆ ಹಚ್ಚಿಕೊಂಡಿರಬೇಕು. ಎಲ್ಲಾ ವಯಸ್ಸಿನ ಪ್ರಭಾವ. ಮನೆಗೆಬಂದ ಮೇಲೆ ಸರಿಯಾಗಿ ಅಡ್ವೈಸ್ ಮಾಡಬೇಕು ಎಂದುಕೊಂಡಳು.

ಮನೋಜ ನಮಸ್ಕಾರ ಆಂಟಿ. ಎಂದ ಗೌರವದಿಂದ.

ನಮಸ್ಕಾರ ಎಂದಷ್ಟೇ ಹೇಳಿದಳು ಬಿಗುಮಾನದಿಂದ.

ಹೂಂ. ಮನೆಗೆ ಹೋಗು ಮಮ್ಮಿ. ಎಷ್ಟು ಹೊತ್ನಂದ ಕೂತಿದೀಯ ಮತ್ತೆ ಹೇಳಿದಳು. ನಿರ್ಮಲ ದುರುದುರು ಮಗಳನ್ನು ನೋಡಿದಳು. ಅವಳಿಗೂ ಸುಮ್ಮನೇ ಕೂತು ಕೂತು ಬೇಸರವಾಗಿತ್ತು. ಸಾಯಂಕಾಲ ಕ್ಲಿನಿಕ್ ಮುಚ್ಚಿ ಇವಳಿಗೋಸ್ಕರ ಬಂದು ಕೂತಿದ್ದಳು.ಆದರೆ ಈಗ ಇವನನ್ನು ಕಂಡೋಡನೆ ನನಗೆ ಹೋಗು ಅಂತಿದಾಳೆ. ಇಷ್ಟೇಯೇನೋ ಈ ಮಗಳ ಪ್ರೀತಿ. ಅವನು ಬಂದೊಡನೆ ನಾನು ಬೇಡವಾಯಿತು. ಎಲ್ಲೀವರೆಗೆ ಮುಂದುವರೆದಿದೆಯೇ ಇವರಿಬ್ಬರ ಸ್ನೇಹ. ಇದನ್ನು ಇಷ್ಟಕ್ಕೇ ನಿಲ್ಲಿಸಬೇಕು. ಇನ್ನು ಚಿಕ್ಕವಳು. ಇವಳಿಗ್ಯಾಕೆ ಈಗಲಿಂದ ಈ ಪ್ರೀತಿ ಪ್ರೇಮ.ಒಂದು ವೇಳೆ ಹಾಗೇನಾದರೂ ಇದ್ದರೆ ಅದನ್ನು ಖಂಡಿತಾ ಕಲ್ ಮಾಡಬೇಕು. ಈ ಪ್ರೀತಿ ಗೀತಿ ಎಲ್ಲಾ ಯೋಚಿಸಿದರೂ, ಈಗ ಆಸ್ಪತ್ರೆಯಲ್ಲಿ ಏನೂ ಹೇಳಲಾರಳು. ಬೇಗ ಅಡಿಗೆಯವರನ್ನು ಕಳಿಸಿಬಿಡಬೇಕು ಎಂದು ಹೊರಟಳು.

ಮನೋಜ , ಪ್ಲೀಸ್ ಅಮ್ಮನಿಗೆಒಂದುಆಟೋ ತಂದುಕೊಡ್ತೀಯಾ? ರಾಧಿಕಾ ಕೇಳಿದಳು. ಮನೋಜ ಹೊರಟ. ಆಸ್ಪತ್ರೆಯ ಹೊರ ಆವರಣದಲ್ಲಿ ನಿಂತಿದ್ದ ಒಂದು ಆಟೋ ಹಿಡಿದು. ಹಿಂತಿರುಗಿ ನೋಡಿದ.ಅವನ ಉತ್ಸಾಹವೆಲ್ಲಾ ಝುರ್ರನೆ ಇಳಿದು ಹೋದಂತಾಯಿತು. ರಾಧಿಕಾಳ ತಾಯಿ ಕುಂಟಿಕೊಂಡು ಬರುತ್ತಿದ್ದವಳನ್ನೆ ದಿಟ್ಟಿಸಿ ನೋಡಲು ಮುಜುಗರವೆನಿಸಿ ಮುಖ ತಿರುಗಿಸಿ ನಿಂತ. ಆಟೋ ಹೊರಟು ಹೋಯಿತು. ಆದರೆ ಮನೋಜ ಹಾಗೇ ನಿಂತಿದ್ದ. ಅವನ ಮನಸ್ಸು ಕಲಕಿ ಹೋಗಿತ್ತು.

ರಾಧಿಕಾಳ ತಾಯಿಗೆ ಕುಂಟು. ಯಾವಾಗಿನಿಂದ ಹೀಗಾಗಿದೆಯೋ ಏನಾದರೂ ಆಕ್ಸಿಡೆಂಟ್ ಆಗಿ ಹೀಗಾಗಿದ್ದರೇ...ಈಗ ರಾಧಿಕಾಗೂ ಕಾಲಿಗೆ ಫ್ರಾಕ್ಚರ್ ಆಗಿದೆ. ಮೂಳೆ ಸರಿಯಾಗಿ ಕೂಡದೇ ಅವಳಿಗೂ ಕುಂಟಾದರೇ...ಈ ಅನುಮಾನವೇ ಅವನನ್ನು ಹೆದರಿಸಿತು. ರಾಧಿಕಾಗೆ ಖಂಡಿತಾ ಹಾಗಾಗಬಾರದು. ಮೂಳೆ ಮುರಿದರೆ ಸರಿ ಮಾಡುವುದು ಈಗ ಯುಗದಲ್ಲಿ ಕಷ್ಟವೇನಲ್ಲ...ಅವಳಿಗೇನೂ ತೊಂದರೆ ಆಗಲಾರದು. ಆದರೂ ಒಂದು ವೇಳೆ ಹಾಗೇನಾದರೂ ಆದರೆ. ಮುಂದೆ ಯೊಚಿಸಲಾರದೇ ಹಾಗೇ ನಿಂತ. ಕೆಲ ನಿಮಿಷ ಹಾಗೇ ನಿಂತಿದ್ದು, ಮನಸ್ಸನ್ನು ದೃಢ ಮಾಡಿಕೊಂಡು ಮತ್ತೆ ವಾರ್ಡಿಗೆ ಬಂದ.

ಎಷ್ಟು ಹೊತ್ತಾಯ್ತಲ್ಲ...ಯಾಕೆ ಆಟೋ ಬೇಗ ಸಿಗಲಿಲ್ವಾ?"ಕೇಳಿದಳು.

"ಸಿಕ್ತು..ನೀನು ಮನೆಗೆ ಹೋಗಿರುವುದಕ್ಕಿಂತ ಆಸ್ಪತ್ರೆಲಿರೋದೇ ವಾಸಿ ಅಂತನ್ನಿಸುತ್ತೆ. ಇಲ್ಲಿ ಆಸ್ಪತ್ರೆಲಿ ಎಲ್ಲಾ ಇರ್ತಾರೆ. ಚೆನ್ನಾಗಿ ನೋಡ್ಕೋತಾರೆ. ಸಲಹೆ ನೀಡುವವನಂತೆ ಹೇಳಿದಾಗ ಅವಳು ನಕ್ಕಳು.

ಯಾಕೆ? ನಿನಗೆ ಹೆದರಿಕೇನಾ?ಇವಳಿಗೆ ಕುಂಟಾಗಿ ಬಿಟ್ಟರೇ ಅಂತ?

"ಛೆ...ನೀನು ಇಲ್ಲೇ ಇದ್ದರೆ ದಿನಾ ನೋಡ್ಕೋಕೆ ಬಹುದು ಅಂತ. ನಿಮ್ಮ ಮನೆಗೆ

ದಿನಾ ಬರೋಕೆ ಆಗುತ್ತಾ ನಾನು?"

" ಹೌದು , ಅಮ್ಮಂಗೆ ಇಷ್ಟ ಆಗುಲ್ಲ. ಆದರೆ ಹಾಗಂತ ಇಲ್ಲೇ ಇರುಕ್ಕೆ ಆಗುತ್ತಾ? ಅಮ್ಮಂಗೆ ಕಷ್ಟ ಆಗುತ್ತಲ್ಲ."

ಅದ್ಸರಿ ಮನೇಲಿ ಒಬ್ಬಳೇ ಕೂತು ಏನು ಮಾಡ್ತೀ? ನಿನಗೆ ಬೋರ್ ಆಗುಲ್ವಾ?"

ಅದಕ್ಕೇ ಹೇಗಾದ್ರೂ ಸರಿ. ಅಮ್ಮನ್ನ ಒಪ್ಪಿಸಿ ಕಾಲೇಜಿಗೆ ಬರ್ತೀನಿ. ಕಾಲೇಜಿಗೆ ಬರದಿದ್ದರೆ ನನಗೆ ಆಗೂದೇ ಇಲ್ಲ.

ಆದರೆ ಈ ವಿಷಯ ಬಂದಾಗ ನಿರ್ಮಲ ಸುತರಾಂ ಒಪ್ಪಲಿಲ್ಲ. ಕಡೇ ಪಕ್ಷ ಒಂದು ತಿಂಗಳಾದರೂ ತೆಪ್ಪಗೆ ಮನೇಲೇ ಬಿದ್ದಿರು ಮಗಳ ಮೇಲೆ ರೇಗಿದಳು.

ಹಾಗಾದರೆ ನೀನೂ ಕ್ಲಿನಿಕ್‌ಗೆ ಹೋಗಕೂಡದು ರಾಧಿಕಾ ಕಂಡೀಷನ್ ಹಾಕಿದಳು.

ನಾನು ಕ್ಲಿನಿಕ್‌ಗೆ ಹೋಗದಿದ್ರೆ ಹೇಗೆ ನಡೆಯುತ್ತೆ? ಏನೇನೋ ಆಡಬೇಡ.

ಹಾಗಾದ್ರೆ ದಿನಾ ನನ್ನ ಫ್ರೆಂಡ್ಸ್ ಮನೆಗೆ ಬರ್ತಾರೆ. ಯಾರನ್ನು ಏನೂ ಅನ್ನಕೂಡದು

ನಿಂದೊಳ್ಳೆ ಅತಿಯಾಯ್ತು. ಅವರೆಲ್ಲಾ ದಿನಾ ಯಾಕೆ ಬರಬೇಕು? ಮನೇಲಿ ಕೂತ್ಕೊಂಡು ಸ್ಟಡಿ ಮಾಡು. ಸುಮ್ನೇ ಹರಟೆ ಹೊಡೀತಾ ಟೈಂ ವೇಸ್ಟ್ ಮಾಡಬೇಡ.,

ಈ ಮಾತಿನಿಂದ ರಾಧಿಕಾಳಿಗೆ ರೇಗಿ ಹೋಯ್ತು. ಆ ಕ್ಷಣದಲ್ಲಿ ಏನೂ ಹೇಳದೇ ಸುಮ್ಮನಾದರೂ, ಏನೇ ಆಗಲಿ,ಈವರ್ಷ ಎಕ್ಸಾಮ್‌ಗೆಅಟೆಂಡ್ ಮಾಡಬಾರದು ಅಂತ ನಿರ್ಧರಿಸಿಕೊಂಡಳು.

ಮಗಳು ಸುಮ್ಮನಾದುದನ್ನುಕಂಡು ನಿರ್ಮಲ ಸಮಾಧಾನಗೊಂಡಳು. ಗೀತ ಮೊದಲಿನಂತೆ ಆಗ ಈಗ ಬಂದು ಹೋಗುತ್ತಿದ್ದಳು. ಮುರಳಿ ಅಪರೂಪಕ್ಕೊಮ್ಮೆ, ನಿರ್ಮಲ ಕ್ಲಿನಿಕ್‌ಗೆಹೋಗಿರುವ ಸಮಯದಲ್ಲಿ ಬಂದು ಹೋಗುತ್ತಿದ್ದ. ಮನೋಜ ಮಾತ್ರ ಸಂಕೋಚದಿಂದ ಬಂದಿರಲಿಲ್ಲ. ಮುರಳಿಯಿಂದ ಅವಳ ಯೋಗಕ್ಷೇಮವನ್ನು ತಿಳಿದುಕೊಳ್ಳುತ್ತಿದ್ದ.

ಆರು ವಾರಗಳ ನಂತರ ಕಾಲಿಗೆ ಹಾಕಿರುವ ಪ್ಲಾಸ್ಕರ್‌ನ್ನೂ ಬಿಚ್ಚುವುದಾಗಿ ಡಾಕ್ಟರು ಹೇಳಿದ್ದರು. ಅಪಾಯಿಂಟ್ ಮೆಂಟ್ ಕೊಟ್ಟಿದ್ದರಿಂದ ಮುರಳಿ, ಮನೋಜ ಸಹ ಅದೇ ವೇಳೆಗೆ ನರ್ಸಿಗ್ ಹೋಂಗೆ ಬಂದಿದ್ದರು. ನಿರ್ಮಲ. ಅವರಿಬ್ಬರನ್ನೂ ಕಂಡು ಗಂಭೀರಳಾದಳು. ರಾಧಿಕಾ ಮಾತ್ರ ಅವರಿಬ್ಬರೊಡನೆ ಖುಷಿ ಖುಷಿಯಾಗಿ ಮಾತನಾಡಿದ್ದು ನಿರ್ಮಲೆಗೆ ಸಹಿಲಿಲ್ಲ.

ಮತ್ತೊಮ್ಮೆ ಎಕ್ಸ್ ರೇ ತೆಗೆದು ನೋಡಿ, ಇನ್ನೂ ಪೂರ್ತಿಕೊಡಿಕೊಂಡಿಲ್ಲ. ಇನ್ನು ಒಂದು ತಿಂಗಳು ಇದ್ದರೆ ಉತ್ತಮ ಎಂದು ಮತ್ತೆ ಪ್ಲಾಶ್ಟಿಕ್ ಬಿಗಿದರು. ರಾಧಿಕ ಹತಾಶಳಾದಳು. ಅಸಹಾಯಕತೆಯಿಂದ ಆಳುಬಹುವಂತಾಯ್ತು. ಸಹಾಯಕಳಾಗಿ ಕೆಲಸದವಳು ಸದಾ ಇದ್ದರೂ, ಕಾಲಿನ ಭಾರ, ಕಡಿತ, ಮುಜುಗರ ಗಳಿಂದ ಹಿಂಸೆಯಾಗುತ್ತಿತ್ತೂ. ಅಲ್ಲದೇ ಮೂಳೆ ಇನ್ನೂ ಸರಿಯಾಗಿ ಕೂಡಿಲ್ಲ ವೆಂದರೆ, ಏನಾಗಿದೆಯೋ ಎಂಬ ಭಯ..ಅಮ್ಮನ ಹಾಗೆ ತನಗೂ ಕುಂಟಾಗಿ ಬಿಟ್ಟರೇ... ಎಂದು ತಲ್ಲಣಿಸಿದಳು ದಿಗಿಲು ಅದೀರತೆಗಳಿಂದ ಅವಳ ಮುಖ ಕಪ್ಪಿಟ್ಟಿತು.

ನಿರ್ಮಲಾ,ಮೂಳೆಯ ತಜ್ಞರೊಡನೆ ಮಾತನಾಡಿ, ಎಲ್ಲವನ್ನು ವಿಶದವಾಗಿ

ತಿಳಿದುಕೊಂಡಿದ್ದಳು. ಏನೂ ತೊಂದರೆ ಇಲ್ಲ. ಒಂದುತಿಂಗಳಿನೊಳಗೆ ಪೂರ್ತಿ ಎಲ್ಲಾ ಸರಿ ಹೋಗುತ್ತದೆ ಎಂದು ನುಡಿದಿದ್ದರು.

ರಾಧಿಕಾ ಅತ್ತೂ ಅತ್ತೂ ಮುಖ ಕೆಂಪು ಮಾಡಿಕೊಂಡಳು. ಮನೋಜ ಮುರಳಿ ಪೆಚ್ಚಾದರು. ನಿರ್ಮಲ ಎಷ್ಟೇ ಸಮಾಧಾನ ಹೇಳಿದಳು. ಮಗಳ ಅಳುವಿನ ಕಾರಣ ತಿಳಿದಿತ್ತು ಮುರಳಿಗೆ ಹೇಳಿದಳು. ಗೀತಾನ್ನ ಮನೆಗೆ ಕಳಿಸಪ್ಪಾ...ಸ್ನೇಹಿತೆಗೆ ಸಮಾಧಾನ ಹೇಳಲಿ ಮುರಳಿ ಹುಂ ಗುಟ್ಟಿದ್ದ.

ಮನೋಜ ಮನೆಗೆ ಬಂದವನ್ನು ಮಾವನಿಗೆ ಸಮಾಧಾನವಾಗಲೆಂದು ವರಿದಿ ಒಪ್ಪಿಸುವವನಂತೆ, ಅಷ್ಟು ಹೇಳಿದ.

ಹೌದಾ? ಹಾಗಾಯ್ತಾ?ಏನಾಗಿದೆಯೋ ಏನೋ..ಮತ್ತೆ ಪ್ಲಾಸ್ಟರ್ ಹಾಕಿರಬೇಕಾದರೇ...ಈ ಕಾಲದ ಹುಡುಗರು...ಜವಾಬ್ದಾರಿ ಕಡಿಮೆ. ಒಂದು ನಿಮಿಷದಲ್ಲಿ ಏನೇನೋ ಮಾಡಿಕೊಂಡು ಬಿಡ್ತೀರಿ. ಆಮೇಲೆ ಅನುಭವಿಸುವುದು ಎಷ್ಟು ಕಷ್ಟ ನೋಡಿ..."

"ಅಂಥಾದ್ದೇನಾಗಿಲ್ಲ ಬಿಡು. ಅವಳ ಕಾಲಿಗೆಬಿಗಿದು ಕಟ್ಟಿದ್ರೇ ಸರಿ. ಇಲ್ಲದಿದ್ದರೆ ಮತ್ತೆ ತಕ್ಷಣವೇ ಏನಾದ್ರೂ ಆದೀತೆಂದು ಡಾಕ್ಟರು ಹಾಗೆ ಮಾಡಿರಬಹುದು"

"ಅದೆಲ್ಲಾ ನಿನಗೇ ಗೊತ್ತಾಗಬೇಕು. ನೀನೂ ಡಾಕ್ಟರಾಗುವವನೇ ತಾನೇ ಅದ್ಸರಿ...ಅವಳೂ ಮೆಡಿಕಲ್ ಸ್ಟೂಡೆಂಟು. ಅವಳೇಕೆ ಅತ್ತಳು? ಅಷ್ಟು ನೋವಾಗುತ್ತಿತ್ತಂತಾ?"

ನೋವು, ಕಡಿತ, ಭಾರ ಎಲ್ಲಾ ಇರುತ್ತೆ. ಅದೆಲ್ಲಕ್ಕಿಂತ ಅವಳಿಗೆ ಹೆಚ್ಚಿನ ಹೆದರಿಕೆ ಏನಪ್ಪಾ ಅಂದ್ರೆ, ಅವರಮ್ಮನ ಹಾಗೆ ಅವಳಿಗೂ ಎಲ್ಲಿ ಕುಂಟಾಗಿ ಬಿಟುತ್ತೋ ಏನೋ ಅಂತ ಅಷ್ಟೇ..ಮನೋಜ ತಮಾಷೆಯೆನ್ನೂವಂತೆ ನುಡಿದಿದ್ದ. ಆದರೆ ಆ ಕುಂಟು ಎನ್ನುವ ಪದರಂಗನಾಥನನ್ನೂ ನಿಶ್ಚಲನನ್ನಾಗಿ ಮಾಡಿತ್ತು. ಒಂದು ಗಳಿಗೆ, ತಡೆದು ಸಂದೇಹವನ್ನು ಪರಿಹರಿಸಿಕೊಳ್ಳುವವನಂತೆ, ಮತ್ತೆ ಕೇಳಿದ.

ಏನಂದೆ?....ಅವರಮ್ಮನಿಗೆ ಕುಂಟು ಅಂದ್ಯಾ?ನೀನೂ ಸರಿಯಾಗಿ ನೋಡಿದೀಯ ಅವರನ್ನೂ? ಅವನ ತಳಮಳ ಇನ್ನು ಹೆಚ್ಚಿತ್ತು.

"ಹೂಂ ಯಾಕೆ? ಅದರಲ್ಲೇನು ಆಶ್ಚರ್ಯ? ಎಷ್ಟೇ ಜನಕ್ಕೆ ಕಾಲು ಊನವಾಗಿರುಲ್ವೇ?"

ರಂಗನಾತನಿಗೆ ಈಗ ಖಂಡಿತವಾಗಿತ್ತು. ಅವಳು ರಾಧಿಕೆಯ ತಾಯಿ, ನಿರ್ಮಲಾ ರಾಧಿಕೆಯ ತಾಯಿ...ಅಂದರೆ ರಾಧಿಕಾ ನನ್ನ ಮಗಳು..ಆ ಒಂದು ಅನಿಸಿಕೆಯೋ ಅವನು ಪರವಶನಾಗುವಂತೆ ಮಾಡಿತು. ಮನಸ್ಸು ಹುಚ್ಚೆದ್ದು ಕುಣಿಯಿತು. ಆದರೂ ಅದನ್ನೀಗ ಯಾರಿಗೂ ಹೇಳಿಕೊಂಡು ಖುಷಿಪಡುವಂತಿಲ್ಲ...ತಳವುಳವನ್ನು ಹೇಳಿಕೊಳ್ಳೂವಂತಿಲ್ಲ.. ಕಷ್ಟಪಟ್ಟು ಮನಸ್ಸನ್ನು ಬಿಗಿ ಹಿಡಿದ.

ಈ ಸಂತೋಷದ ಸುದ್ದಿಯನ್ನು ಮನೋಜನಿಗೂ ತಿಳಿಸುವಂತಿಲ್ಲ. ರಂಗನಾಥ ಅತ್ತಿಂದಿತ್ತ ಶತಪಥ ತಿರುಗಿದ. ಮನೋಜನಿಗೆ ಎಲ್ಲವನ್ನು ಹೇಳುವಂತಿದ್ದರೇ....ಅವನಿಗೇನನ್ನಿಸಬಹುದು?

ಈಕ್ಷಣ ಓಡಿ ಹೋಗಿ ರಾಧಿಕಾಳನ್ನು ತಬ್ಬಿಕೊಂಡು, ವಾತ್ಸಲ್ಯದಿಂದ ಮೈದಡವಿ

ಸಮಾಧಾನ ಮಾಡುವಂತಿದ್ದರೆ ಎಷ್ಟು ಚೆನ್ನಾಗಿತ್ತೆನಿಸಿತು. ಆದರೆ ನಿರ್ಮಲಾ...? ಅವಳಿಗೆ ಯಾವುದೂ ತಿಳಿದಿರಲಾರದು.

ಮನೋಜ ಯಾರೆಂದು ಅವಳಿಗೆ ತಿಳಿದಿರುವಂತಿಲ್ಲ. ನಾವುಗಳು ಇದೇ ಊರಿನಲ್ಲಿದ್ದೇವೆಂಬ ಅನುಮಾನವಿಲ್ಲ. ತಿಳಿದರೆ, ಅವಳಿಗೇನನ್ನಿಸಬಹುದು? ಅವಳಾಗಿಯೇ ಬಂದು ಖಂಡಿತಾ ಮಾತನಾಡಿಸುವುದಿಲ್ಲ...ನನ್ನ ಮೇಲೆ ಕೋಪವಿರದೇ ಇರುತ್ತದೆಯೆ? ಮಗಳು ನನ್ನನ್ನು ನೋಡದಿರುವಂತೆ ಮಾಡಬಹುದು...ಆದರೆ ಅದನ್ನು ಸಹಿಸುವ ಶಕ್ತಿ ನನ್ನಲ್ಲಿಲ್ಲ. ಅವಳು ನನ್ನ ಮಗಳು ಎಂದು ತಿಳಿಯುವ ಮೊದಲೇ, ಅವಳನ್ನು ಕಂಡ ದಿನವೇ ಮಮತೆಯ ಆಕರ್ಷಣೆ ಸೆಳೆಯಿತು...ಈಗ ಅವಳು ನನ್ನ ಮಗಳು ಎಂದು ತಿಳಿದ ಮೇಲೆ ನಾನೇ ನಿನ್ನ ತಂದೆ ಎಂದು ಅವಳೊಡನೆ ಹೇಳಿಕೊಳ್ಳಬೇಕೆನಿಸುತ್ತಿದೆ. ಇಪ್ಪತ್ತು ವರ್ಷಗಳಲ್ಲಿ ತೋರದ ಪ್ರೀತಿ ವಾತ್ಸಲ್ಯವನ್ನು ಹೇಳಿಕೊಳ್ಳಬೇಕೆನ್ನಿಸುತ್ತಿದೆ. ಆದರೆ ಇದು ಸಾಧ್ಯವೇ? ಅದನ್ನು ರಾಧಿಕಾ ನಂಬುವಳೇ..ಒಪ್ಪುವಳೆ...ತಿರಸ್ಕರಿಸಿಬಿಟ್ಟರೇ...ಇದಕ್ಕಿಂತ ಬೇರೆ ಅಪಮಾನವಿದೆಯೇ?

ತಾನು ತಪ್ಪಿತಸ್ಥ..ಮಗಳು ನನ್ನ ತಪ್ಪನ್ನು ಒಪ್ಪಿಕೊಳ್ಳುವಳೆಂದು ಹೇಗೆ ಭಾವಿಸಲಿ?

ಇನ್ನು ನಿರ್ಮಲಾ...ಈ ಇಪ್ಪತ್ತು ವರ್ಷಗಳ ನಂತರ, ಅವಳಿಗೆ ನಾನು ಏನು ಹೇಳಿದರೆ ತಾನೇ ಸಮಾಧಾನವಾಗುತ್ತದೆ? ಅಲ್ಲದೇ ಎಲ್ಲಾ ಸರಿ ಹೋಗಬಹುದು ಎಂಬ ಭರವಸೆ ಏನು? ಈಗಿರುವ ಸಂಬಂಧವೂ ಕಳಚಿ ಹೋದರೇ...ನಿರ್ಮಲಾ ಮಗಳಿಗೆ ತನ್ನ ಅಪ್ಪನ ಬಗ್ಗೆ ಏನೂ ಹೇಳಿದ್ದಾಳೋ... ಈಗ ಹಳೆಯ ವಿಷಯಗಳನ್ನೂ ಕೆದಕಿ, ನಿರ್ಮಲವಾಗಿರುವ ಮುಗ್ಧ ಮನಸ್ಸನ್ನು ಕದಡಿ ರಾಡಿ ಮಾಡು ವುದು ಸರೀಯೋ...?

ಆದರೂ....ಆದರೂ...ಈಗೆಲ್ಲಾ ತಿಳಿದ ಮೇಲೆ ಸುಮ್ಮನಿರುವುದು ಸಾಧ್ಯವೇ? ಸಾಧ್ಯವಿಲ್ಲ...ನಾನೊಮ್ಮೆ ನಿರ್ಮಲೆಯನ್ನು ಭೇಟಿ ಯಾಗಲೇ ಬೇಕು..ಇಲ್ಲದಿದ್ದರೆ ನನಗೆ ಮನಶ್ಶಾಂತಿ ಇರುವುದಿಲ್ಲ...ಆದರೆ ನನ್ನನ್ನು ಕಂಡೊಡನೆ ಅವಳಿಗೇನನ್ನಿಸ ಬಹುದು? ನನ್ನೊಡನೆ ಮಾತನಾಡಲು ಒಪ್ಪದಿದ್ದರೇ....ಚಿಂತಿಸಿ ಹಣ್ಣಾದ.

ಮನಸ್ಸು ಸಮ್ಮಿಶ್ರ ಭಾವನೆಗಳ ಮಡುವಾಗಿತ್ತು. ಆಳವಾದ ಮಡುವಿನಲ್ಲಿ ಸುಳಿಗಳು ಸುತ್ತಿ ಸುತ್ತಿ ತಿರುಗುವಂತೆ, ಅವನ ಮನಸ್ಸು ಸುತ್ತಿ ಸುತ್ತಿ ಆಳವಾಗುತ್ತಿತ್ತು. ಈ ಆಳದಿಂದ ಹೇಗಾದರೂ ಮೇಲಕ್ಕೆ ಬರಲೇ ಬೇಕಾಗಿತ್ತು. ಬರದಿದ್ದಗರೆ ಮುಳುಗಿ ಹೋಗ್ತೀವಿ...ಮನೋಜನ ಎದುರಿಗೆ ಕೂತಿರಲಾರದೇ ಎದ್ದು ತಿರುಗಾಡಲೆಂದು ಹೊರಟ. ರಸ್ತೆಗೆ ಬಂದ ನಂತರ ಅನ್ನಿಸಿತ್ತು.ಅವಳ ಅಡ್ರೆಸ್ ತಿಳಿದಿದ್ದರೆ, ಈಗಲೇ ಹೋಗಿಬಿಡಬಹುದಾಗಿತ್ತೆನಿಸಿತು. ಮನೆ ಎಲ್ಲಿದೇನೋ , ಕ್ಲಿನಿಕ್ ಎಲ್ಲಿದೆಯೋ..ಒಂದು ತಿಳಿಯದು...ಕ್ಲಿನಿಕ್‌ಗೆ ಹೋಗಿ ಮಾತನಾಡುವುದೆಂದು ನಿಶ್ಚಯಿಸಿದ. ಆದರೆ ಅದಕ್ಕೆ ಮೊದಲು, ತಾನು ರಾಧಿಕಾನ ನೋಡಬೇಕೆಂದು ಮನಸ್ಸು ಹಂಬಲಿಸಿತು. ಆದರೆ ಅನಿಸಿದ ಕೂಡಲೇ ಹೋಗುವಂತಿಲ್ಲ.. ಅಲ್ಲಿ ಇಲ್ಲಿ ತಿರುಗಾಡಿ, ವಾಪಸ್ಸು ತಲ್ಲ ಮನೆಗೆ ಬಂದ. ಮನೋಜ ಓದಿಕೊಳ್ಳುತ್ತಿದ್ದ. ತನಗೆ ಊಟ ಬೇಡವಂದು ತಿಲಿಸಿ, ಮಲಗಿದ. ನಿದ್ದೆ ಬರುವಂತಿಲ್ಲ. ಮನಸ್ಸಿನ ತುಂಬಾ, ನಿರ್ಮಲಾ

ರಾಧಿಕಾ ಹಾಗೂ ತನ್ನ ಹಿಂದಿನ ಜೀವನದ ಸಿಹಿ ಕಹಿ ನೆನಪುಗಳು? ಅದರಲ್ಲೂ ಸಿಹಿಗಿಂತ ಕಹಿಯೇ ಜಾಸ್ತಿ!

ಅದಕ್ಕೆ ಕಾರಣ! ತಮ್ಮ ಬಡತನವೇ? ದುರಾದೃಷ್ಟವೇ? ಅಥವಾ ನಿರ್ಮಲೆಯ ಸ್ವಾರ್ಥತನವೇ...?

ಈಗ ನಿರ್ಮಲಾ ಅನುಕೂಲವಾಗಿಯೇ ಇರುವಂತೆ ಅನ್ನಿಸುತ್ತೆ ಸಂಪಾದಿಸುವ ಹಣವೆಲ್ಲಾ ಅವರಿಬ್ಬರಿಗೇ....ಮಗಳನ್ನು ಮೆಡಿಕಲ್ ಕಾಲೇಜಿಗೆ ಸೇರಿಸಿದ್ದಳೆಂದರೆ, ಎಲ್ಲಾ ಸರಿಯಾಗಿದೆಯೆಂದೇ ಅರ್ಥ. ಇದೇ ನನಗೆ ಬೇಕಾಗಿದ್ದುದು...ನಾನು ಅಂದುಕೊಂಡಂತೆ, ತನ್ನ ಮಗಳನ್ನು ಚೆನ್ನಾಗಿಯೇ ಪೋಷಿಸಿದ್ದಾಳೆ...ಮಗಳೂ ತನ್ನ ಹಾಗೇ ಡಾಕ್ಟರಾಗಲಿ ಎಂಬ ಆಸೆ ಇರಬಹುದು...ಆದರೆ ರಾಧಿಕಾ ಇವಳಂತೆ ಸ್ವಾರ್ಥಿಯಾಗಬಾರದು...ಬರೀ ಹಣ ಸಂಪಾದಿಸುವ ಡಾಕ್ಟರಾಗಿಯೇ ಉಳಿಯಬಾರದು....

ಮಗಳಿಗೆ ಮದುವೆ ಮಾಡುವ ಆಲೋಚನೆ ಇದೆಯೋ ಇಲ್ಲವೋ ಇದ್ದರೂ, ಒಂದು ವೇಳೆ ರಾಧಿಕಾ ಮದುವೆಯಾಗಿ ಬೇರೆ ಮನೆಗೆ ಹೊರಟು ಹೋದರೆ... ನಮ್ಮಿಂದಲೂ ದೂರವಾಗಿ ಬಿಡುತ್ತಾಳೆ... ಕೂಡದು. ಹಾಗಾಗಬಾರದು. ಮದುವೆಯಾದರೂ ರಾಧಿಕಾ ನಮಗೆ ಹತ್ತಿತರವಾಗಿಯೇ ಇರಬೇಕು. ಹೇಗಾದರೂ ಸರಿ, ಇದಕ್ಕೆ ನಿರ್ಮಲನ್ನು ಒಪ್ಪಿಸಬೇಕು...ರಾಧಿಕಾ, ಮನೋಜರ ಮನಸ್ಸಿನಲ್ಲಿ ಏನಿದೆಯೋ ತಿಳಿದುಕೊಳ್ಳಬೇಕು. ಸ್ನೇಹಿತರೇನೋ ಹೌದು. ಸ್ನೇಹ ಎಷ್ಟು ಮುಂದುವರೆದಿದೆ ಎಂದು ತಿಳಿಯುವುದಿಲ್ಲ.

ಪ್ರೀತೆ ಗೀತಿ ಅಂತ ಈಗ ಇಲ್ಲದಿದ್ದರೆ ಅದೇನೋ ಸರಿ. ಅವರುಗಳ ಸ್ಟಡೀಸ್ ಇನ್ನೂ ಮುಗಿದಿಲ್ಲ. ಸ್ಟಡೀಸ್ ಮುಗಿಯುವುದರೊಳಗೆ ಏನೇನು ಆಗುತ್ತೋ...ಅಲ್ಲಿಯವರೆಗೆ ನಾನು ಸುಮ್ಮನಿರಲು ನನ್ನ ಕೈಲಿ ಆಗುತ್ಯೆ? ಕೈಗೆ ಗೊಂಬೆ ಕೊಟ್ರಂತೆ ಮಾಡಿ, ಮತ್ತೆ ಕಿತ್ತುಕೊಂಡ ಹಾಗಿದೆ ನನ್ನ ಸ್ಥಿತಿ..ರಾತ್ರಿಯೆಲ್ಲಾ ಹೊರಳಾಡಿ ಚಿಂತಿಸಿದರೂ, ಏನೂ ಬಗೆಹರಿಯಲಿಲ್ಲ.

ಬೆಳಿಗ್ಗೆ ಎದ್ದಾಗ ಬಳಲಿದವನಂತೆ ಇದ್ದ ಮಾವನನ್ನು ಕಂಡು ಮನೋಜ ಚಿಂತೆಗೊಂಡ. ಮಾವಾ ಡಾಕ್ಟರನ್ನ ಕರೆಸ್ಲಾ? ಯಾಕೋ ತುಂಬಾ ಸುಸ್ತಾಗಿರುವ ಹಾಗೆ ಕಾಣಿಸ್ತೀಯಲ್ಲ...ಕೇಳಿದ

"ರಾತ್ರಿ ಯಾಕೋ ನಿದ್ದೇನೇ ಬರಲಿಲ್ಲ. ಅದಕ್ಕೆ ಹಾಗೆ...ನಾನು ರಾಧಿಕಾನ್ನ ನೋಡಬೇಕಲ್ಲ.

ಅವಳನ್ನೂ ನೋಡಬೇಕು ಅಂತ ರಾತ್ರಿಯೆಲ್ಲಾ ನಿದ್ದೆಗೆಟ್ಟು ಚಿಂತಿಸಿದೆಯಾ?ಅವರ ಮನೆಗೆ ಹೋಗಿ ಬಂದ್ರಾಯ್ತು

ಅವರ ಮನೆಗಾ? ಅವರಮಮ ಏನಂದು ಕೋಳ್ತಾರೋ ಏನೋ?

"ಏನಂದು ಕೊಳ್ತಾರೆ ನೀನು ಅವಳ ಮೇಷ್ಟ್ರು ಅಂತ ತಿಳಿದು ಕೊಳ್ತಾರೆ ರಂಗನಾಥ ಪೆಚ್ಚಾಗಿ ನಕ್ಕಗ. ಮನೋಜನಿಗೆ ಮಾವನ ಬಗ್ಗೆ ಅಯ್ಯೋ ಅಂತನ್ನಿಸಿತು. ಇವನೇಕೆ, ಈ ಹುಡುಗಿಯ ಬಗ್ಗೆ ಚಿಂತಿಸುತ್ತಾನೆ ಎಂದು ಅರ್ಥವಾಗಲಿಲ್ಲ.

ನಾನು ಇವತ್ತೂ ಕಾಲೇಜಿಗೆ ಹೋಗುವುದಿಲ್ಲ. ನಾನೇ ಅಡಿಗೆ ಕೆಲಸ ಮಾಡ್ತಿವಿ.

ನೀನು ಊಟ ಮಾಡಿ ರೆಸ್ಟ್ ತಗೋ ಹಿರಿಯನಂತೆ ಮನೋಜ ಅಭಿಮಾವದಿಂದ ನುಡಿದಾಗ ರಂಗನಾಥನ ಕಣ್ಣುಗಳಲ್ಲಿ ನೀರಾಡಿತು. ಇವನಿಗೆ ನನ್ನ ಹಿಂದಿನ ವಿಷಯ ತಿಳಿದರೆ, ಅವನ ಮನಸ್ಸು ಕಲಕಿ ರಾಡಿಯಾಗುವುದಿಲ್ಲವೇ? ನನ್ನ ಮೇಲಿನ ವಿಶ್ವಾಸ ಕಡಿಮೆಯಾಗಬಹುದು. ಕೀಳರಿಮೆ ಮೂಡಬಹುದು. ಇದು ಅವನ ಭವಿಷ್ಯಕ್ಕೆ ಅಪಾಯ ತಾನು ಇಷ್ಟೆಲ್ಲಾ ಮಾಡಿದ್ದು ನೀರಿನಲ್ಲಿ ಹೋಮ ಮಾಡಿದಂತಾಗುವು ದಿಲ್ಲವೇ?"

ಈ ರೀತಿಯ ಆಲೋಚನೆಗಳಲ್ಲೇ, ಎರಡು ಮೂರು ದಿನಗಳು ಕಳೆದು ಹೋದವು. ಈ ಎರಡು ಮೂರು ದಿನಗಳಲ್ಲಿ ಖಾಯಿಲೆ ಬಿದ್ದು ಎದ್ದವನಂತೆ ಮಂಕಾಗಿದ್ದ. ಮಾತಿಲ್ಲ. ಕತೆಯಿಲ್ಲ. ಸದಾ ಏನೋ ಚಿಂತೆಯಲ್ಲಿ ಮುಳುಗಿರುವವನನ್ನು ಮನೋಜ ಗಮನಿಸಿದ. ಅವನಿಗೆ ಆತಂಕವಾಗಿತ್ತು ಮುರಳಿಯ ಹತ್ತಿರ ಹೇಳಿಕೊಂಡ.

ಈಚೆಗೆ ರಾಧಿಕನ್ನ ಕಂಡಾಗಿನಿಂದ ನನ್ನ ಮಾವ ತುಂಬಾ ಬದಲಾಯಿಸಿ ಬಿಟ್ಟಿದಾರೆ. ನಂಗೆ ಏನು ಮಾಕಡಬೇಕೂಂತ ತಿಳೀತಿಲ್ಲ. ಮೂರಳಿಗೂ ತಕ್ಷಣಕ್ಕೆ ಏನು ಹೇಳಬೇಕು ಅಂತ ತಿಳಿಯಲಿಲ್ಲ. ಅವರ ಮನಸ್ಸಲ್ಲಿ ಏನೋ ಕೊರಗು ಇದೆ. ಅದು ಅವರನ್ನು ಕಾಡುತ್ತಿದೆ. ಅದು ಯಾರಿಗೂ ತಿಳಿಯದ, ತಿಳಿಯಸಲಾಗದ ವಿಷಯವಿರಬೇಕೆಂದು ಊಹಿಸಿದ. ಮನೋಜನನ್ನು ಮತ್ತೇನೂ ಕೇಳಲಿಲ್ಲ.

ಮತ್ತೆ ಮನೆಯಲ್ಲೇ ಕಾಲ ಕಳೆಯಬೇಕಾಗಿ ಬಂದುದಕ್ಕೆ ರಾಧಿಕಾಳಿಗೆ ಬೇಜಾರಾಯಿತು. ತಾಯಿಯ ಮೇಲೆ ರೇಗಿದಳು.

ನನಗೆ ಮನೇಲಿ ಹೊತ್ತು ಹೋಗುಲ್ಲ. ಆಸ್ಪತ್ರೇಲಿದ್ದರೆ ಎಷ್ಟೋ ಚೆನ್ನಾಗಿರುತ್ತೆ. ನರ್ಸುಗಳ ಮುಖಾನಾದ್ರೂ ನೋಡ್ತಾ ಕಾಲ ಕಳೆಯಬಹುದು.

ಎಲ್ರೂ ಮನೇಲಿರ ಬೇಕೂಂತ ಆಸೆ ಪಟ್ಟರೆ, ನಿನಗೆ ಮನೆಯೇ ಸರಿ ಹೋಗುಲ್ಲವಲ್ಲ. ನೀನೊಂದು ತರಹ ವಿಚಿತ್ರ, ನೋಡು.

ಹೌದು. ನಾನು ವಿಚಿತ್ರ ನೀನು?ನೀನಿನ್ನೇನಿ? ನೀನೂ ಮನೆಲೆಲ್ಲಿರ್ತೀಯ? ಕ್ಲಿನಿಕ್‌ನಲ್ಲೇ ತಾನೇ ಇರ್ತೀಯಾ...?

ಷಟಪ್...ಸದಾ ಅದನ್ನೇ ಆಡಬೇಡ

ಮತ್ತಿನ್ನೇನು?ಮನೇಲಿ ನಾನೊಬ್ಬಳೇ. ನಿನಗಾದರೆ ಪೇಶೆಂಟ್ಸ್‌ಗಳ ಜೊತೆ ಕಾಲ ಕಳೆಯುತ್ತೆ. ನಂಗೂ ಮನೇಲಿ ತಮ್ಮನೋ ತಂಗಿಯೋ ಇನ್ನೋಂದಿಬ್ಬರು ಇದ್ದಿದ್ದರೆ ಹೊತ್ತು ಹೋಗುತ್ತಿತ್ತು. ಜಗಳಾನಾದ್ರೂ ಆಡಿಕೊಂಡು ಕಾಲ ಕಳೆಯ ಬಹುದಾಗಿತ್ತು.

ಹೂಂ. ಇರಬೇಕಾಗಿತ್ತು ಇನ್ನೊಂದಿಬ್ಬರು. ಎಲ್ಲರನ್ನು ಕಟ್ಟಿಕೊಂಡು ದೇಶಾಂತರ ಹೋಗಬೇಕಾಗಿತ್ತು ನಿರ್ಮಲ ಗೊಣಗಿದಳು.

ಅದೇನದು? ಜೋರಾಗಾದ್ರೂ ಗೊಣಗು. ನನಗೂ ಕೇಳಿಸಲಿ. ನನ್ನ ಬೇಜಾರೂ ಕಳೆಯುತ್ತೆ. ವ್ಯಂಗ್ಯದಿಂದ ಹೇಳಿದಳು.

ನಿನಗೆ ತಮಾಷೆ. ಹೊತ್ತಾಯ್ತು. ನಾನು ಕ್ಲಿನಿಕ್‌ಗೆ ಹೋಗಬೇಕು

ಇವತ್ತಾದ್ರೂ, ನಾನು ಇಷ್ಟೆಲ್ಲಾ ಹೇಳಿದ ಮೇಲಾದ್ರೂ ನೀನು ಕ್ಲಿನಿಕೇಗೆ ಹೋಗದಿದ್ರೆ ಆಗುಲ್ವಾ? ಅದೆನ್ನೆಲ್ಲಿ ಬಿಡ್ತಿಯಾ?" ಖಾರವಾಗಿ ನುಡಿದಳು.

ಡಾಕ್ಟರಾಗಿ ಕ್ಲಿನಿಕ್‌ನ ಸದಾ ಮುಚ್ಚಿದ್ರೆ ಏನೂ ಚೆನ್ನ? ಜನ ಏನಂತಾರೆ? ಅವರುಗಳಿಗೆ ತೊಂದರೆ ತೊಂದರೆ ಆಗುಲ್ವಾ?"

"ಹುಂ. ಆಗುತ್ತೆ. ನಿನಗೆ ನನ್ನ ತೊಂದರೆಗಿಂತ ಬೇರೆಯವರ ತೊಂದರೇನೇ ಹೆಚ್ಚು ಅಲ್ವಾ? ಹೋಗು. ಹೋಗು. ಅಲ್ಲೇ ಇರು. ಮನೆಗೇ ಬರಬೇಡ. ಮನೇಲಿ ನಾನೊಬ್ಬಳೇ ಬಿದ್ದಿರ್ತಿನಿ. ಎನ್ನುತಿತಾ ರಾಧಿಕಾ ಮುಸುಕಳೆದು ಮಲಗಿದಾಗ, ಮುಸುಕನ್ನು ಕಿತ್ತೊಗೆದು, ಕೆನ್ನೆಗೆ ರಪರಪನೆ ಬಾರಿಸುವಷ್ಟು ಕೋಪ ಬಂದಿತ್ತು. ಆದರೂ ಸಹನೆಯನ್ನು ತಂದುಕೊಂಉ.

ಬೇಬಿ..ಇದೇನೇ ಹೀಗಾಡ್ತಿದೀಯಲ್ಲ. ನಿಂಗೇನೂ ಗೊತ್ತಾಗುಲ್ಲ ನುಡಿದಳು. ರಾಧಿಕಾ ಮುಸುಕು ಸರಿಸಿ ತಾಯಿಯನ್ನೇ ನೋಡಿದಳು.

ನಾನೇನು ಬೇಬಿಯಲ್ಲ. ನನಗೆಲ್ಲಾ ಗೊತ್ತಾಗುತ್ತೆ. ನಿನಗೆ ಕನಿಕ್‌ನ ಬಿಟ್ಟರೆ ಬೇರೆ ಪ್ರಪಂಚವೇ ಗೊತ್ತಿಲ್ಲ. ಸದಾ ಕ್ಲಿನಿಕ್ಕುಮ ಪೇಶೆಂಟ್ಸು, ಇಂಜೆಕ್ಷನನು ಮೆಡಿಸನ್ನು ...ನನಗಂತೂ ನೋಡಿ ನೋಡಿ ಕೇಳಿ ಕೇಳಿ ಸಾಕಾಗಿಹೋಗಿದೆ......... ಐ ಹೇಟ್ ದಿಸ್ ಪ್ರೊಫೆಷನ್...ಐ ಹೇಟ್ ದಿಸ್ ಎನ್ನುತ್ತಾ ಮುಷ್ಟಿ ಬಿಗಿದು ಹಲ್ಲು ಕಡಿಯುತ್ತಾ ರಾಧಿಕಾ ನುಡಿದಾಗ ನಿರ್ಮಲ ದಿಗಿಲು ಗೊಂಡಳು.

ಹಾಗಾದ್ರೆ ನಿನ್ನ ಅರ್ಥವೇನು? ಸದಾ ಮನೇಲಿದ್ದು ಕೊಂಡು, ಅಡಿಗೆ ತಿಂದೆ, ಕಸ ಮುಸುರೆ ಕೆಲಸ ಮಾಡಬೇಕು ಅಂತೀಯಾ?"

ಅದೆಷ್ಟೋ ಚೆನ್ನಾಗಿರ್ತಿತ್ತು. ನಂಗೂ ನೆಮ್ಮದಿ ಇರ್ತಿತ್ತು. ನಾನೂ ಎಲ್ಲಾ ಕಲಿತ್ಕೋ ಬಹುದಾಗಿತ್ತು. ಈ ಕೋರ್ಸ್ ಈ ಪ್ರೊಫೆಷನ್ ಯಾರಿಗೆ ಬೇಕಾಗಿದೆ?ಮತ್ತೆ ಗೊಣಗಿದಳು.

ಏನೋ ಅತಿಯಾಯ್ತು ನಿಂದು .ನಿನ್ನ ಮಾತೇ ನನಗರ್ಥವಾಗುವುದಿಲ್ಲ. ಎಂದು ಮತ್ತೆ ಹೆಚ್ಚಿಗೆ ಮಾತು ಬೆಳೆಸದೇ ನಿರ್ಮಲ ಹೊರಟು ಹೋದಳು. ಅವಳ ಆತಂಕ ಹೆಚ್ಚಾಗಿತ್ತು.

ರಾಧಿಕಾ ತನ್ನಲ್ಲೇ ಯೋಚಿಸುತ್ತಿದ್ದಳು. ನಮಗಿಂತ, ಆ ಮನೋಜ ಅವರ ಮಾವ ವಾಸಿ. ಎಷ್ಟು ಅನ್ಯೋನ್ಯವಾಗಿದಾರೆ. ಅಂತಹವರ ಮನೆಯಲ್ಲಿ ಕೆಲಸದವಳಾಗಿ ಬಿದ್ದಿದ್ದರೂ ಸಾಕು. ನೆಮ್ಮದಿ ಸಿಗುತ್ತೆ ಅಂತೆನ್ನಿಸಿದಾಗ ತುಟಿಯಂಚಿನಲ್ಲಿ ಕಿರುನಗೆ ಮೂಡಿತು. ತನಗೇನೂ ಕೆಲಸ ಬರುತ್ತೆ ಒಂದು ದಿನ ಲೋಟ ತೆಗೆದು ಇಲ್ಲಿಂದ ಅಲ್ಲಿ ಇಟ್ಟವಳಲ್ಲ. ತಾನು ಅದಕ್ಕೂ ಲಾಯಕ್ಕಿಲ್ಲ ಅಂತನ್ನಿಸಿದಾಗ ಎಲಿಸಿದಾಗ ದುಃಖವಾಯಿತು. ಕಣ್ಣಿನಿಂದ ನೀರು ತುಳುಕಿತು. ಹಾಗೇ ಮಲಗಿದಳು.

ಸ್ವಲ್ಪ ಹೊತ್ತಿನಲ್ಲೇ ಗೀತ ಬಂದಳು. ರಾಧಿಕಾಳ ಹುಬ್ಬು ಸಡಿಲಗೊಂಡವು. ಕಣ್ಣೀರನ್ನು ಒರೆಸಿಕೊಂಡು, ನಗುಮುಖದಿಂದ, ಅಬ್ಬಾ...ನೀನಾದ್ರೂ ಬಂದೆಯಲ್ಲಾ...ಒಬ್ಬಳೇ ಇದ್ದೂ ಇದ್ದೂ ಆತ್ಮಹತ್ಯ ಮಾಡ್ಕೋ ಬೇಕು ಅನ್ನುವಷ್ಟು ಬೇಜಾರಾಗ್ತಿತ್ತು.''

'' ಬೇಜಾರಿಗೆಲ್ಲಾ ಯಾರಾದ್ರೂ ಆತ್ಮಹತ್ಯೆ ಮಾಡ್ಕೋತಾರಾ? ನೀನೊಬ್ಬಳು ವಿಚಿತ್ರ ಕಣೇ...''

''ನನ್ನನ್ನೇ ಎಲ್ಲರೂ ವಿಚಿತ್ರ ಅಂತ ಅಂತೀರಿ. ನಂದೇನು ಕರ್ಮ ಹೇಳು ನಾನು ಇಲ್ಲಿ ಕಾಲು ಮುರಿದುಕೊಂಡು ಕೂತಿದೀನಿ. ಎಲ್ರೂ ಹಾಯಾಗಿ ತಿರುಗಾಡಿಗೊಂಡಿಲ್ವಾ?"

"ಅಂದ್ರೆ...?ನಾವೂ ಎಲ್ಲಾ ಕಾಲು ಮುರಿದುಕೊಂಡು ಕೂತಿರಬೇಕಾಗಿತ್ತಾ?" ಗೀತ ಕೋಪಿಸಿಕೊಂಡಳು. ಆಗ ನಿನ್ನನ್ನು ನೋಡೋಕೆ ನಾವ್ಯಾರೂ ಬರುತ್ತಿರಲಿಲ್ಲ..."

"ಸಾರಿ , ಕಣೇ . ಕೋಪ ಮಡ್ಕೋಬೇಡ. ನಾನು ಹಾಗಲ್ಲ ಹೇಳಿದ್ದು. ನನಗೂ ನೀನೊಬ್ಬಳೇ ಸ್ನೇಹಿತೆ. ನಾನೊಬ್ಬಳೇ ಹೇಗಿರಲಿ ಹೇಳು? ಹೀಗೇ ಇದ್ದರೆ ನನಗೆ ಹುಚ್ಚು ಹಿಡಿಯುತ್ತೆ ಅಷ್ಟೇ...

ತಿರುಗಾಟವಿಲ್ಲದೇ ಮನೇಲೇ ಆರಾಮವಾಗಿದೀಯಲ್ಲ. ಒಂದಿಷ್ಟು ಸ್ಟಡೀಸಾದ್ರೂ ಮಾಡಬಾರ್ದಾ?ಉಪಯೋಗನಾಗುತ್ತೆ''

''ಏನು ಸ್ಟಡೀಸೋ ಏನೋ ನಾನು ಈ ವರ್ಷದ ಎಕ್ಸಾವಸ್‌ಗೆ ಹೋಗುಲ್ಲ ನಿರ್ಧಾರದ ಧ್ವನಿಯಲ್ಲಿ ಹೇಳಿದಾಗ ಗೀತಾ ನಕ್ಕಳು..

ನಗಬೇಡ ಗೀತಾ. ಐ ಮೀನ್ ಇಬ್. ಹೇಗೂ ಕಾಲೇಜಿಗೆ ಹೋಗ್ತಾ ಇಲ್ಲ. ಇದೇ ನೆವ. ಕಾಲೇಜೂ ಇಲ್ಲ, ಸ್ಟಡೀಸು ಇಲ್ಲ. ಎಕ್ಸಾಮ್ಸ್ ಕೂಡಾ ಇಲ್ಲ. ಎಲ್ಲಾ ಸೊನ್ನೆ. ಎಂದು ಹೇಳುತ್ತಾ ಕೈ ಬೆರಳಿನಲ್ಲಿ ಸೊನ್ನೆ ಸುತ್ತಿ ಕಿಲಕಿಲನೆ ನಕ್ಕಳು. ಈಗ ಗೀತ ನಗಲಿಲ್ಲ. ಏನೋ ಆಗಿದೆ ಇವಳಿಗೆ ಎಂದೇ ಅನ್ನಿಸಿತು.

ಮೊದಲಿನಿಂದಲೂ ಅಷ್ಟೇ. ಏನೋ ಸ್ವಭಾವ ಪಿ.ಯು.ಸಿ ತರಗತಿಯಲ್ಲಿ ಓದುತ್ತಿದ್ದಾಗ ಇಬ್ಬರೂ ಗೆಳತಿಯರಾದರು. ಗೀತಾ ಕಷ್ಟಪಟ್ಟು ಓದಿ ಹೆಚ್ಚು ಅಂಕ ಗಳಿಸಿ, ಮೆಡಿಕಲ್ ಕಾಲೇಜಿಗೆ ಸೇರಿದಳು. ಕರಾಧಿಕಾ ತಾಯಿಯ ಬಲವಂತಕ್ಕೆ ಸೇರಿಕೊಂಡಿದ್ದಳು. ರಾಧಿಕಾ ಬುದ್ದಿವಂತೆ, ಆದರೆ ಸೋಮಾರಿ ಎನ್ನುವುದನ್ನು ಗೀತ ಅರಿತಿದ್ದಳು. ಪರೀಕ್ಷೇಯ ಹೊತ್ತಿಗೆ ಒಂದಿಷ್ಟು ಪುಸ್ತಕ ಕಿತ್ತಾಡಿ, ಪರೀಕ್ಷೆಯಲ್ಲಿ ಗೀಚಿ ಬಂದರೂ, ಫಸ್ಟ್ ಕ್ಲಾಸಿನಲ್ಲಿ ಪಾಸಾಗುವುದನ್ನೂ ಗಮನಿಸಿದ್ದಳು.

ನಿನ್ನದೆಲ್ಲಾ .ಯುದ್ದಕಾಲೇ ಶಸ್ತ್ರಾಭ್ಯಾಸ...ಅಂತಾರಲ್ಲ ಹಾಗೇ...ಒಂದು ಶಿಸ್ತು ಇಲ್ಲ. ರೀತಿ ನೀತಿ ಇಲ್ಲದಿದ್ದರೂ, ಪರೀಕ್ಷೇಲಿ ಮಾತ್ರ ಫಸ್ಟ್ ಕ್ಲಾಸ್. ಅದು ಹೇಗೇ ಸಾಧ್ಯ?''

"ನಿಂಗ್ಯಾಕೇ ಹೊಟ್ಟೆ ಉರಿ? ಇನ್ನು ಮೇಲೆ ಇನ್ನೂ ಸಿಂಪಲ್ ಮಾಡಿಕೊಳ್ತಿವಿ. ಇಬ್ಬರೂ ಜಾಯಿಂಟ್ ಸ್ಟಡೀ ಮಾಡೋಣ...ನೀನು ಗಟ್ಟಿಯಾಗಿ ನನ್ನ ಮುಂದೆ ಓದು. ನಾನು ಅದನ್ನು ತಲೆಗೆ ತುಂಬಿಕೊಳ್ತೀನಿ...ನಿಂಗೆ ಸ್ವಲ್ಪ ಶ್ರಮವಾಗಬಹುದು...ಆದರೆ ನೀನು ಖಂಡಿತಾ ಇಲ್ಲ ಅನ್ನೋಲ್ಲ. ನನಗೆ ಗೊತ್ತು...ಸ್ನೇಹಿತೆಯನ್ನು ಹೊಗಳಿ ಬಾಯಿ ಮುಚ್ಚಿಸುತ್ತಿದ್ದಳು.

"ಥೂ....ಹಲ್ಕಾ...ನೀನೆಷ್ಟು ಸ್ವಾರ್ಥಿ ಎಂದು ತಮಾಷೆಯಾಗಿ ಬೈದರೂ ಅವರಿಬ್ಬರ ಸ್ನೇಹಕ್ಕೆ ಚ್ಯುತಿ ಬಂದಿರಲಿಲ್ಲ. ಹಠ,ಮೊಂಡುತನ, ಜೋರು ಜಂಭ ಇದ್ದರೂ, ಗೀತಳ ಸ್ನೇಹ ಮಾತ್ರ ಬೇಕೇ ಬೇಕು. ಗೀತ ಸ್ನೇಹಿತೆಯನ್ನು ಅರ್ಥಮಾಡಿ ಕೊಂಡು, ಅಡ್ಜಸ್ಟ್ ಮಾಡಿಕೊಂಡು ಹೋಗುತ್ತಿದ್ದಳು. ಇದರಲ್ಲಿ ಯಾವ ಸ್ವಾರ್ಥವೂ ಇರಲಿಲ್ಲ. ಗೀತಾ ಅಪರಂಜಿ.

ಅವಳಿಗೆ ತಿಳಿದಂತೆ, ರಾಧಿಕಾ ಪರೀಕ್ಷೆಗೆ ಹೋಗುವುದಿಲ್ಲ ಎಂದು ಯಾವತ್ತು ಹೇಳಿದ ನೆನಪಿಲ್ಲ. ಇದು ಹೊಸದಾಗಿ ಉದ್ಭವಿಸಿದ ಸಮಸ್ಯೆ,. ಅವಳ ಮನ ಒಲಿಸುವುದು ಹೇಗೆಂದು ಹೊಳೆಯಲಿಲ್ಲ. ಮುರಳಿ ಯೊಡನೆ ಹೇಳಿದಳು. ಅವನು

ಆಶ್ಚರ್ಯಗೊಂಡ.

ನಿಜ,..ಅವಳು ವಿಚಿತ್ರಾನೇ. ತನಗೆ ಯಾವುದೂ ಇಷ್ಟವಿಲ್ಲ. ಎಲ್ಲಾ ಅಮ್ಮನ ಬಲವಂತಕ್ಕೆ ಮಾಡ್ತದೀನಿ ಎನ್ನುವ ಭಾವನೆ ಅವಳಿಗೆ. ತಾಯಿಯ ಮೇಲಿನ ಸಿಟ್ಟಿಗೇ ಹೀಗೆ ನಿರ್ಧರಿಸಿದಾಳೆ. ಹಾಗೇ ಮಾಡಿದರೂ...ಆಶ್ಚರ್ಯವೇನಿಲ್ಲ. ಆವಳ ತಾಯಿಗೆ ತಿಳಿಸಬೇಕಲ್ಲ. ಆಕೇನೂ ಅಷ್ಟೇ ಮಗಳಿಗೆ ಎಲ್ಲಾ ಸೌಲಭ್ಯ, ಸೌಕರ್ಯ ಒದಗಿಸಿ ಕೊಟ್ಟಿದೀನಿ. ಇನ್ನೇನು ಕಮ್ಮಿಯಾಗಿರೋದು ಅಂತ ಅನ್ನಬಹುದು. ಆದರೆ ಅದ್ಯಾವುದೂ ಬೇಕೇ ಇಲ್ಲವಲ್ಲ ಇವಳಿಗೆ.

ಮಗಳಿಗೆ ಬೇಜಾರಾಗುತ್ತೆ. ಹೊತ್ತು ಕಳೆಯುವಿದು ಕಷ್ಟ ಎಂದು, ಅವಳಿಗಾಗಿ, ಅಡಿಗೆಯವರ ಮಗಳನ್ನು ತನ್ನ ಮನೆಯಲ್ಲೇ ಇರಿಸಿಕೊಂಡಳು. ನಿರ್ಮಲಾ. ಆ ಹುಡುಗಿ ಬಂದು ಏನಾದರೂ ಕೇಳಿದರೆ ಉರಿದು ಬೀಳುತ್ತಿದ್ದಳು. ರಾಧಿಕಾ.

ಒಂದು ಗೊಂಬೆ ಸಾಲದು ಅಂತ, ಇನ್ನೊಂದು ಗೊಂಬೇನ ಕರೆ ತಂದಿಟ್ಟು ಕೊಂಡಿದಾಳೆ ನಮ್ಮಮ್ಮ ಅಂತ ಗೊಣಗಿದ್ದಳು. ಆ ಹುಡುಗಿ ಚಿಕ್ಕವಳಾದುದರಿದಂ ಏನೂ ತಿಳಿಯದೇ ಅಕ್ಕಾ ಅಕ್ಕಾ...ಅಂತ ಮಾತನಾಡಿ ಓಡಾಡಿಕೊಂಡಿದ್ದಳು.

ಮತ್ತೊಮ್ಮೆ ಗೀತ ಬಂದಾಗ ಹೇಳಿದ್ದಳು .

ಈಗೊಂಬೇನ ತೊಲಗಿಸು ಅಂತ ಅಮ್ಮನಿಗೆ ಬಾಯಿಬಿಟ್ಟು ಹೇಳಿದರೂ ತಿಳೀಲಿಲ್ಲ. ನೀನಾದರೂ ಹೇಳೇ"

"ಇರಲಿ ಬಿಡೇ. ಒಬ್ಬಳೇ ಇರ್ತೀಯ. ಜೊತೆಗೊಬ್ಬರು ಬೇಡವೇ?

ಒಬ್ಬಳೇ ಇದ್ದ ಮಾತ್ರಕ್ಕೇ ಇಷ್ಟವಿಲ್ಲ. ನಾನೇನು ಸತ್ತು ಹೋಗುಲ್ಲ. ನನಗೆ ಇವಳ ಮುಖ ನೋಡುಕ್ಕೇ ಇಷ್ಟವಿಲ್ಲ. ನನಗೆ ಇದೆಲ್ಲಾ ಬೇಜಾರಾಗಿ ಹೋಗಿದೆ.

ಮತ್ತೆ? ಹೇಳು ನಿನಗೇನು ಬೇಕು ಅಂತ. ನಾನು ಹೆಲ್ಪ್ ಮಾಡ್ತೀನಿ. ನನ್ನ ಕೈಲಾದರೆ"

"ಮಾಡ್ತೀಯಾ ಹಾಗಾದ್ರೆ......"ಉತ್ಸಾಹದಿಂದ ಕೇಳಿದಳು.

"ಹುಂ ಹೇಳು ನೋಡೋಣ."

"ನನಗೆ ಮನೋಜನ್ನ ನೋಡಬೇಕೆನಿಸಿದೆ. ಅವನ ಬತ್ತಿರ ಮಾತನಾಡ ಬೇಕೆನಿಸಿದೆ. ಅವನಿಗೆ ಹೇಳಿ, ಅವನನ್ನು ನಮ್ಮ ಮನೆಗೆ ಕರೆದುಕೊಂಡು ಬರ್ತೀಯಾ?

"ಓ...ಇದು ಪ್ರೇಮ ರೋಗ ಅನ್ನು. ನಾನೇನೋ ಅವನಿಗೆ ಹೇಳ್ತೀನಿ. ಆದರೆ ಅವನು ಬರದಿದ್ರೆ ನಂಗೊತ್ತಿಲ್ಲಮ್ಮಾ..."

"ಪ್ಲೀಸ್. ಒಪ್ಪಿಸಿ ಕಳಿಸು. ಇಲ್ಲದಿದ್ದರೆ ಹುಚ್ಚು ಹಿಡಿಯುತ್ತೆ. ಅಥವಾ ಆತ್ಮಹತ್ಯೆ ಮಾಡ್ಕೋತೀನಿ"

ಲವರ್ಸ್ ಯಾರೂ ಸೂಯಿಸೈಡ್ ಮಾಡ್ಕೊಳ್ಳಲ್ಲ. ಸುಮ್ಮುನ್ನೆ ನೀನ್ಯಾಕೆ ಈಗ್ಲಿಂದ ಪ್ರೀತಿ ಪ್ರೇಮ ಅಂತ ತಲೆ ಕೆಡಿಸ್ಕೋತಿದೀಯ. ಅದಕ್ಕೆಲ್ಲ ಮುಂದೆ ಬೇಕಾದಷ್ಟು ಸಮಯವಿದೆ.

ನಿನಗೆ ಹೇಗೆ ಗೊತ್ತಾಗಬೇಕು ನನ್ನ ಕಷ್ಟ? ಇಷ್ಟು ವರ್ಷದ ಮೇಲೆ ನನಗೊಬ್ಬ ಫ್ರೆಂಡ್ ಸಿಕ್ಕಿದಾನೆ. ನೀನು ಹುಟ್ತಾನೇ ರೆಡಿಮೇಡ್ ಗಂಡನ್ನ ಪಡೆದಿದೀಯೆ..ಅದಕ್ಕೇ ನಿನಗೆ ಇಷ್ಟು ಜಂಭ ಮೂತಿ ಉದ್ದ ಮಾಡಿದಳು. ಗೀತ ನಕ್ಕಳು.

ನನ್ನ ವಿಚಾರಬೇರೆ. ಮುರಳಿ ನನ್ನ ಅಜ್ಜಿ ಮಾಡಿರುವ ನಿರ್ಧಾರ,ಮುಂದೆ ನನಗಿಷ್ಟವಿಲ್ಲದಿದ್ದರೆ, ಅದನ್ನೂ ಬೇಡ ಅಂತ ನಿರಾಕರಿಸುವ ಹಕ್ಕು ನನಗಿದೆ''

''ಅದು ನಿನ್ನ ಹಣೇ ಬರಹ. ನೀನೂ ಮದುವೆಯಾಗಿ ಹೊರಟು ಹೋದರೆ ,ನನಗ್ಯಾರೇ ಗತಿ? ನನಗೆ ಮನೋಜನೊಬ್ಬನೇ ದಿಕ್ಕು. ಅವನೇ ನನ್ನ ಕಸಿನ್..ಅವನೇ ಮುಂದೆ ನನ್ನ ಗಂಡವಾಗುವನವನು...ಹಾಗಂತ ತಿಳ್ಕೊಂಡಿದೀನಿ.''

''ಬೇರೆ ಯಾರಿಗಾದ್ರೂ ಈ ಮಾತುಗಳು ಕೇಳಿಸಿದರೆ ನಗ್ತಾರೆ. ಈಗ ನಿಲ್ಲಿಸು ನಿನ್ನ ಮಾತನ್ನೂ. ಅವನಿಗೆ ಹೇಳ್ತೀನಮ್ಮಾ...ಅವನ ಎದುರಿಗೆ ಏನೇನು ಬೇಕಾದ್ರೂ ಹೇಳಿಕೋ...''

''ಅಷ್ಟು ಮಾಡು ಪುಣ್ಯಾತ್ಗಿತ್ತಿ ಕೈ ಮುಗಿದಳು.

ಗೀತ ಮುರಳಿಯ ಹತ್ತಿರ ಎಲ್ಲಾ ಹೇಳಿ,ಅವಳು ಮನೋಜನ ಹತ್ತಿರ ಮಾತನಾಡಬೇಕಂತೆ ಅವನಿಗೆ ಸ್ವಲ್ಪ ಹೇಳಿಬಿಡು ಎಂದಳು.

ಅವನು ಹೋಗುಕ್ಕೆ ಒಪ್ಪಬೇಕಲ್ಲ. ಹೇಗಾದರೂ ರೀಧಿಕಾನ್ನೇ ಮನೆಯಿಂದ ಹೊರಗೆ ಕರೆತರಬೇಕು. ಮೊದಲು ಅದಕ್ಕೆ ಏನಾದರೂ ಪ್ಲಾನ್ ಮಾಡಬೇಕು. ಅದಕ್ಕೆ ನೀನೇ ಸರಿ. ಅವಳ ಅಮ್ಮನ ಹತ್ತಿರ ಮಾತನಾಡಿ, ನಿಮ್ಮ ಮನೆಗೆ ಕರೆದುಕೊಂಡುಬಾ. ಅಲ್ಲಿಂದ ಮನೋಜನ ಮನೆಗೆ ಕರೆದುಕೊಂಡು ಹೋಗೋಣ.

ಅಮ್ಮನಿಗೆ ಗೊತ್ತಾದ್ರೆ ನನ್ನನ್ನ ಬೈತಾಳೆ ಅಷ್ಟೇ...ಗೊಣಗಿದಳು

ಹಾಗಾದ್ರೆ...ನಮ್ಮ ಮನೆಗೆ ಕರೆದುಕೊಂಡು ಬಾ. ಆಮೇಲೆ ನೋಡೋಣ''

''ಎಲ್ಲಾ ನಿಂದೇ ಜವಾಬ್ದಾರಿ. ನಂದೇನಿಲ್ಲ.''

''ಥೂ ಎಷ್ಟು ಹೆದರಿತೀಯೆ?ಇಬ್ಬರು ಸಚ್ಚಾ ಪ್ರೇಮಿಗಳ ಸಮಾಗಮಕ್ಕೆ ಸಹಾಯ ಮಾಡಿದ ಪುಣ್ಯ ನಿನಗೆ ಸಿಗುತ್ತದೆ.''

''ಪುಣ್ಯವೋ ...ಪಾಪವೋ...ರಾಧಿಕಾಳ ನಡೆವಳಿಗೆ ಅತಿಯಾಗಿ ಕಾಣುತ್ತೆ ನನಗೆ''

''ಅವಳು ಹೇಳಿದ ಹಾಗೆ, ನಿನಗೆ ರೆಡಿಮೇಡ್ ಗಂಡ ನಾನದೀಇ. ಅದಕ್ಕೇ ಸುಮ್ಮನಿದೀಯು., ಇಲ್ಲದಿದ್ರೆ ನೀನೂ ಹೀಗೇ ಆಡ್ತಿದ್ದೆಯೋ ಏನೋ...''

''ಮುರಳಿ, ಇದೇ ಮಾತನ್ನು ಬೇರೆ ಇನ್ಯಾರಾದ್ರೂ ಹೇಳಿದ್ದಿದ್ರೇ...ಎಂದು ಅವನನ್ನು ದುರುಗುಟ್ಟಿಕೊಂಡು ಅಲ್ಲಿ ನಿಲ್ಲದೇ ಹೊರಟು ಹೊದಳು. ಅವಳ ಹಿಂದೆ ಅವನು ಬಾಯ್ತುಂಬಾ ನಕಕ್ಕ.

ಮನೋಜನ ಮನೆಗೆ ಕಬಂದ, ಸ್ನೇಹಿತನ ಕಿವಿಯಲ್ಲಿ ಪಿಸುದನಿಯಲ್ಲಿ ಹೇಳಿದ. ಲೋ ಮಜನೂ, ಅಲ್ಲಿ ನಿನಗಾಗಿ ಲೈಲಾ ಹಂಬಲಿಸುತ್ತಾಇದಾಳೆ. ಮೊದಲಿಗೆ ಮನೋಜನಿಗೆ ಅರ್ಥವಾಗಲಿಲ್ಲ.

''ಈ ನಾಟಕದ ಡೈಲಾಗ್ ಎಲ್ಲಾ ಬೇಡ. ಸರಿಯಾಗಿ ಹೇಳು''

''ರಾಧಿಕಾ ನಿನ್ನನ್ನ ನೋಡ್ಬೇಕಂತೆ, ನಿನ್ನ ಹತ್ತಿರ ಮಾತಾಡ್ಬೇಕಂತೆ. ನಿನಗೂ ಹಾಗೇ ಅನ್ನಿಸುತ್ತಾ? ಕೇಳಿದ, ಅದಕ್ಕೆ ಉತ್ತರವಾಗಿ,

ಅವಳ ಮನೆಗ ಹೇಗೋ ಹೋಗೋದು?ನನಗಿಷ್ಟವಿಲ್ಲ ಎಂದ

''ಹಾಗಾದ್ರೆ ಅವಳನ್ನೇ ನಿಮ್ಮ ಮನೆಗೆ ಕರೆದುಕೊಂಡು ಬಾ''

''ಅವರಮ್ಮ ಏನಂತಾರೋ.....?ಅವರನ್ನು ಕೇಳಬೇಕಲ್ಲ.

ಅವರಮ್ಮನ್ನ ಕೇಳಿ ನೀವಿಬ್ರೂ ಸ್ನೇಹಿತರಾದ್ರಾ?''ಕೆಣಕಿದ. ನಿಮ್ಮ ಮಾವ ಹೇಗೂ ರಾಧಿಕಾಳ ಕಡೆಗೆ ನಿಮ್ಮಮನೇಗೇ ಅವಳು ಬಂದರೆ ಇವರದ್ದೇನೂ ಅಭ್ಯಂತರವಿಲ್ಲವಲ್ಲ.''

''ಹಾಗಾದ್ರೆ ಅವಳಿಗೆ ಹೇಳು.ನಮ್ಮ ಮನೆಗೆಬರಬೇಕಂತೆ ಅಂತ

"ಹೂಂ ಸರಿ. ಆದರೆ ಈ ಮೇಘದೂತನಿಗೆ ಏನು ಕೊಡ್ತೀಯ?"

"ನೀನೇ ಕೇಳು."

"ಹಾಗಾದ್ರೆ...ರಾಧಿಕಾನ್ನ ನನಗೆ ಕೊಡಬೇಕು"

''ಈಡಿಯಟ್...ಇದೆಂತಹ ತಮಾಷೆ? ಗೀತಾ ಒಬ್ಬಳು ಸಾಲದಾ ನಿನಗೆ? ನನ್ನ ಹತ್ತಿರ ಹೀಗೆಲ್ಲಾ ಮಾತನಾಡ್ತೀಯಲ್ಲ. ನಿನಗೆ ನಾಚಿಕೆ ಆಗುಲ್ವಾ?"ಎಂಥಾ ಸ್ನೇಹಿತಾನೋ ನೀನು?"

''ನನಗೇಕೆ ನಾಚಿಕೆಯಾಗಬೇಕು?ನಾನೆಂತಹ ಸ್ನೇಹಿತ ಅಂತ ನಿನಗಿನ್ನೂ ಅರ್ಥವಾಗ್ಲಿಲ್ವಾ?ನನಗೆ ನನ್ನ ತಂಗೀನ ಕೊಡು ಅಂತಕೇಳಿದ್ರೆ ನೀನ್ಯಾಕೆ ಅಪಾರ್ಥ ಮಾಡ್ಕೋತೀಯ? ನೀನೇ ಈಡಿಯಲ್ ಸ್ನೇಹಿತನ ಎದೆಗೆ ಲಘುವಾಗಿ ಹೊಡೆದ,

ಓ..... ಮನೋಜ ನಕ್ಕ. ನೀನೊಳ್ಳೆ ಜೋಕರ್ ಕಣಯ್ಯಾ...ಒಂದು ಗಳಿಗೆ ನಿನ್ನ ಮೇಲೆ ಎಷ್ಟು ಕೋಪ ಬಂದಿತ್ತು ಅಂತ ಅಂದರೇ...''

''ತೆಗೆದು ಕೆನ್ನೆಗೆ ಬಾರಿಸವಷ್ಟು..ಸಧ್ಯ ಹೊಡೆಯಲಿಲ್ಲವಲ್ಲ. ಬಚಾವಾದೆ. ಎಂದು ಕೆನ್ನೆ ಸವರಿಕೊಂಡ. ಇಬ್ಬರೂ ಸುಮ್ಮನೇ ನಕ್ಕರು. ಅಷ್ಟರಲ್ಲಿ ಅಲ್ಲಿಗೆ ರಂಗನಾಥ ಬಂದವನು ಕೇಳಿದ.

ಏನಪ್ಪಾ...? ರಾಧಿಕಾ ಹೇಗಿದಾಳೆ?"

"ಅವಳು ನಿಮ್ಮನ್ನು ನೋಡ್ಬೇಕಂತೆ ಸಲೀಸಾಗಿ ಹೇಳಿದ.

ಹೌದಾ?ನೋಡ್ಬೇಕಂತಾ ಸಂತೋಷದಿಂದ ರಂಗನಾಥನ ಕಣ್ಣುಗಳು ಅರಳಿದವು. ಮನೋಜ ಮುರಳಿಯ ಮುಖ ನೋಡಿದ.

ಹೌದು .ಸಾರ್ . ಮನೇಲಿ ಅವಳಿಗೆ ಕಾಲು ಕಟ್ಟಿ ಹಾಕಿ ಕೂರಿಸಿದಂತಾಗಿದೆ. ಅದಕ್ಕೆ ಅವರಮಮ್ಮ ಪರ್ಮಿಷನ್ ತಕೊಂಡು , ಅವಳನ್ನು ಹೊರಗೆ ಎಲ್ಲಾದರೂ ತಿರುಗಾಡಿಸಿಕೊಂಡು ಬರೋಣ ಅಂತ ಗೀತ ಹೇಳಿದಳು. ಮನೋಜ. ಮರೆಯಲ್ಲಿ ನಕ್ಕ. ರಂಗನಾಥ ನುಡಿದ.

ಕುಂಟಿಕೊಂಡು ಹೊರಗೆ ಎಲ್ಲಿ ತಿರುಗಾಡಬೇಕು?ನಮ್ಮ ಮನೆಗ ಕರೆದುಕೊಂಡು ಬರುಕ್ಕೆ ಹೇಳು. ನಾನೂ ನೋಡಿದ ಹಾಗಾಗುತ್ತೆ ಅವಳನ್ನು ನೋಡಿ ತಿಂಗಳ ಮೇಲಾಗಿತ್ತು ಅಂತ ಅವನ ಮನಸ್ಸು ಕುಂದಿತ್ತು.

ಹುಂ, ಹೇಳ್ತಿವಿ ಸಾರ್ ಎಂದ ವಿದೇಯತೆಯಿಂದ. ಮನೋಜ ಮತ್ತೊಮ್ಮೆ ಮುಗುಳ್ನಕ್ಕ. ಮುರಳಿ ಬಾಯಿ ಮೇಲೆ ಬೆರಳಿಟ್ಟು ಶ್ ಎಂದುಹೇಳಿ ಕಣ್ಣು ಬಿಟ್ಟು ಹೆದರಿಸಿದ.

ಗೀತನ ಮಾತಿಗೆ ಮೊದಲು ನಿರ್ಮಲ ಒಪ್ಪಲಿಲ್ಲ.

ನಮ್ಮ ತಾಯಿಗೆ ರಾಧಿಕನ್ನ ಕಂಡರೆ ಇಷ್ಟು...ಅವರೇ ಹೇಳಿದರು. ಪಾಪ ಹುಡುಗಿಗೆ ಎಷ್ಟು ಬೇಜಾರೋ ಏನೋ, ಒಂದು ದಿನ ಕರೆದುಕೊಂಡು ಬಾ ಅಂತ ಅನಾಯಸವಾಗಿ

ಸುಳ್ಳು ಹೇಳಿ ನಂಬಿಸಿದಳು. ಮನೆಯಿಂದ ಕಳಿಸುವ ಮುಂಚೆ ನಿರ್ಮಲ ಕರಾಧಿಕಾಗೆ ಹೇಳುವ ಬುದ್ಧಿವದವನ್ನೆಲ್ಲಾ ಹೇಳಿ. ಆದಷ್ಟು ಬೇಗ ಮನೆಗೆ ವಾಪಸ್ಸು ಬರುವಂತೆ ಹೇಳಿದಳು.

ಸಾಕು. ಸಾಕು . ನಾನು ನಿನ್ನ ಪೇಶೆಂಟ್ ಅಲ್ಲ. ನನಗೆಲ್ಲಾ ಗೊತ್ತು. ರಾಧಿಕಾ ಗೀತಳ ಜೊತೆಯಲ್ಲಿ ಹೊರಟಳು. ನಿರ್ಮಲಾ ಮುಖ ಚಿಕ್ಕದ್ನ ಮಾಡಿದುದ್ದನ್ನ ಗೀತ ಗಮನಿಸಿದಳು. ಆಟೋ ಗೀತಾಳ ಮನೆ ದಾಟೆ ಮುಂದೆ ಹೋದಾಗ ಅವಳಿಗೆ ಅಚ್ಚರಿ.

ಇದೇನೇ? ಎಲ್ಲಿಗೆ ಹೋಗ್ತಿದೀನಿ ನಾವು..? ಕಾಲೇಜಿಗೆ ಕರೆದುಕೊಂಡು ಹೋಗ್ತಿಲ್ಲ. ತಾನೇ?"

"ಶ್. ಸುಮ್ಮನೇ ಬಾ. ಇವತ್ತು ಭಾನುವಾರ. ಅದೂ ಮರೆತು ಹೋಯ್ತು ನಿಂಗೆ?"

"ನಂಗೀಗ ಶನಿವಾರ , ಭಾನುವಾರ ಎಲ್ಲಾ ಒಂದೇ. ಎಲ್ಲಿಗೆ ಹೋಗ್ತಿದೀವಿ ಅಂತ ಹೇಳಬಾರದಾ?ನನ್ನ ಡ್ರೆಸ್ ಸುಮಾರಾಗಿದೆ.

ಮನೋಜನ ಮನೆಗೆ . ನಿನ್ನ ಡ್ರೆಸ್ ಚೆನ್ನಾಗೇ ಇದೆ.

ನಿಜವಾಗಲೂ...ಲವ್ಲೀ...ಅಂತ ಚಪ್ಪಾಳೆ  ತಟ್ಟಿದಳು.

ನಾವು ಕೂತಿರುವುದು ಆಟೋದಲ್ಲಿ. ಸಿನಿಮಾ ಥಿಯೇಟರ್ ಅಲ್ಲ ಡ್ರೈವರ್ ನಗ್ತಾನೆ ಪಿಸುದನಯಲ್ಲಿ ಹೇಳಿ ಸ್ನೇಹಿತೆಯನ್ನು ಎಚ್ಚರಿಸಿದಳು .

ಏನಿವೇ...ಥ್ಯಾಂಕ್ಸ್ ಕಣೇ. ನಿನಗೆ ಹೇಗೆ ಹೊಳೀತು ಈಪ್ಲಾನು

ಅಥವಾ ಮುರಳಿಯ ಪ್ಲಾನ್ ಸ್ನೇಹಿತೆಯ ಕೈ ಕುಲಕಿದಳು.

ನಾನೂ ಅಲ್ಲಿ ಮುರಳೀನೂ ಅಲ್ಲ. ಮನೋಜನ ಮಾವನ ಪ್ಲಾನ್.

ರಾಧಿಕಾಳ ಮನ ಮುದುಡಿತು. ಅವರು ಹೀಗೆ ನಮ್ಮಮ್ಮನಿಗೆ ಸುಳ್ಳುಹೇಳಿ, ನಮಮ ಮನೆಗೆ ಕರೆದುಕೊಂಡು ಬಾ ಅಂದ್ರಾ ಅಂಕಲ್‌ಗೆ ಸುಳ್ಳು ಹೇಳುವ ಅವಶ್ಯಕತೆ ಏನಿದೆ?"

"ಛೆ. ಅವರ‍್ಯಾಕೆ ಸುಳ್ಳು ಹೇಳ್ತಾರೆ? ಸುಳ್ಳು ಹೇಳಿದ್ದು ನಾನು. ಅವರು,ನಮ್ಮ ಮನೆಗೆ ಬನ್ನಿ ಅಂತ ಮುರಳಿಯ ಕೈಲಿ ಹೇಳಿದ್ರಂತೆ ಮನೋಜನ  ಮನೆಗೆ ಕರೆದುಕೊಂಡು ಹೋಗ್ತೀವಿ. ಅಂತ ಅಂದಿದ್ರೆ, ನಿಮಮ ತಾಯಿ ಒಪ್ಪಿ ಕಳಿಸ್ತಿದ್ರಾ ನೀನೇ ಹೇಳು.

ಬಹುಶಃ ಖಂಡಿತಾ ಇಲ್ಲ ಆದರೆ ಅಮ್ಮಂಗೆ ಗೊತ್ತಾದ್ರೆ ಏನಂತಾಳೋ?

"ನಿಮ್ಮಮ್ಮಂಗೆ ಹೆದರ‍್ತೀಯಾ ನೀನು?"ಕೆಣಕಿದಳು

" ಹೆದರಿಕೆ ಏನಿಲ್ಲ. ನನ್ನಿಂದಾಗಿ , ಅಮ್ಮ ಮನೋಜನ್ನ ಅವರ ಮಾವನ್ನ ತಪ್ಪಾಗಿ ತಿಳಿದುಕೊಂಡು ಏನಾದರೂ ಅಂದ್ರೆ ಅಂತ ಅಷ್ಟೇ

ಅಬ್ಬಾ...ಇಷ್ಟಾದ್ರೂ ಯೋಚಿಸಿದೆಯಲ್ಲ. ಅದಕ್ಕೇ ಹೇಳಿದ್ದು ಈಗಿನಿಂದ ಈ ಪ್ರೀತಿ ಪ್ರೇಮ ನಿನಗೆ ಬೇಡವೇ ಅಂತ"

ಅಜ್ಜೀ ತರಹ ಮಾತ್ನಾಡಬೇಡ ನೀನು. ಪ್ರೀತಿ ಪ್ರೇಮ ಅಂತ ನಾನಾಗಿಯೇ ಮಾಡಿಕೊಂಡ್ನಾ? ಅದು ತಾನಾಗಿಯೇ ಆದದ್ದು. ಮನೋಜನಂತಹವನು ಸಿಗ್ತಾನೆ. ನನಗೂ ಅವನಿಗೂ ಸ್ನೇಹ ಬೆಳೆಯುತ್ತೇ. ಅಂತ ಕನಸಿನಲ್ಲಿ ಸಹ ಬೆಳೆಯುತ್ತೆ. ಅಂತ ಕನಸಿನಲ್ಲಿ ಸಹ ಯೋಚಿಸಿರಲಿಲ್ಲ ನಾನು  ಗೊತ್ತಾ?"

"ಎಷ್ಟೋ ಜನರಿಗೆ ಹೀಗಾಗುತ್ತೆ. ಅದ್ಸರಿ, ನೀನೇನೋ ಮನೋಜನ್ನ

ಇಷ್ಟೋಂದು ಪ್ರೀತಿಸ್ತಿದೀಯ. ನಿಮ್ಮ ಅಮ್ಮ ಒಪ್ಪದಿದ್ದರೆ ಏನ್ಮಾಡ್ತೀಯ?

ಯಾಕೆ ಒಪ್ಪ್ವಲ್ಲ?ನನಗಿಂತ ಯಾವುದರಲ್ಲಿ ಕಮ್ಮಿ ಆಗಿದಾನೆ?ಅಮ್ಮ ಒಪ್ಪದಿರುವುದಕ್ಕೆ ಯಾವ ಕಾರಣವು ಇಲ್ಲ. ನಿನಗ್ಯಾಕೆ ಬಂತು ಈ ಡೌಟು?

ಸುಮ್ಮನೇ ಕೇಳಿದೆ. ಆ ಪಾಯಿಂಟನ್ನು ಯೋಚಿಸು ಬೇಕು ಅಲ್ವಾ?

ಹಾಗೇನಾದ್ರೂ ಆದರೆ, ನಾನು ಆ ಮನೆ ಬಿಟ್ಟು ಓಡಿ ಹೋಗಿ, ಮನೋಜನ ಮನೆ ಸೇರ್‍ಕೋತೀನಿ. ನಾನು ಮೆಜಾರಿಟೀಗೆ ಬಂದಿದೀನಿ."

"ನೀನು ಅಂಥವಳೇ . ಹಾಗೆ ಮಾಡಿದ್ರೂ ಮಾಡ್ತೀಯ...?

"ಮತ್ತೆಯ ರಾಧಿಕಾ ಅಂದ್ರೆ ಏನೂಂತ ತಿಳಿದುಕೊಂಡಿದೀಯ

ಆದಿಶಕ್ತಿ ಅಂತ ತಿಳಿದು ಕೊಂಡಿದೀನಿ ಎಂದಳು ಕೈ ಜೋಡಿಸಿ.

ರಂಗನಾಥನ ಮನೆಯಲ್ಲಿ ಮುರಳಿಯೂ ಇದ್ದ. ಎಲ್ಲರೂ ಇವರಿಬ್ಬರಿಗೆ ಕಾಯುತ್ತಿದ್ದಂತೆಕಂಡಿತು. ರಾಧಿಕಾ ಮುಗುಳ್ನಗುತ್ತಾ ಹಲೋ ಎಂದಳು ಎಲ್ಲರನ್ನು ಕುರಿತು. ನಿಧಾನವಾಗಿ ಕುಂಟುತ್ತಾ ಬಿಂದು ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತಳು. ಆ ಕ್ಷಣದಲ್ಲಿ ರಂಗನಾಥನಿಗೆ ಮೊದಲು ನೆನಪಾದವಳು ನಿರ್ಮಲೆಯೇ....ನನ್ನ ಮಗಳು ಸದಾ ನನ್ನ ಜೊತೆಯಲ್ಲೇ ಇರುವುದಕ್ಕೆ ನಿರ್ಮಲಾ ಒಪ್ಪುವಳೇ. ಅವಳಿಗಿನ್ನೂ ರಾಧಿಕಾನಮ್ಮ ಬಗ್ಗೆ ಹೇಳಲಿಲ್ಲ ಅಂತ ಅನ್ನಿಸುತ್ತೆ ಎಂದುಕೊಂಡು ನಿಟ್ಟುಸಿರು ಬಿಟ್ಟ.

ಮನೆಗೆ ಮಗಳು ಬರುತ್ತಿದಾಳೆ ಎನ್ನುವ ಸಂತೋಷದಲ್ಲಿ ರಂಗನಾಥ ವಿಶೇಷ ವಾದ ಅಡಿಗೆ ತಯಾರಿಸಿದ್ದ. ಮನೋಜ ಮುರಳಿ ಇಬ್ಬರೂ ತಟ್ಟೆ ಲೋಟಗಳನ್ನಿಟ್ಟು ಬಡಿಸಿದರು. ಅಡಿಗೆ ತುಂಬಾ ರುಚಿಯಾಗಿತ್ತೆನಿಸಿತು ರಾಧಿಕಾಗೆ.

ತುಂಬಾ ಚೆನ್ನಾಗಿದೆ ಅಡಿಗೆ ಎಲ್ಲಾ, ನಮ್ಮ ಮನೆ ಅಡಿಗೆಯವಳು ಒಂದು ದಿನವೂ ಇಷ್ಟು ಚೆನ್ನಾಗಿ ಅಡಿಗೆ ಮಾಡಿಲ್ಲ. ಅಳುಕು ಸಂಕೋಚವಿಲ್ಲದೇ ಕಹೇಳಿದಳು. ರಂಗನಾಥ ನಸುನಕ್ಕ. ಮುರಳಿ ಕೇಳಿದ. ಅದಕ್ಕೆ ಕಾರಣ ಗೊತ್ತಾ ರಾಧಿಕಾ.

ಇಲ್ಲವೆನ್ನುವಂತೆ ತಲೆಯಾಡಿಸಿದಳು.

ಇದು ನಳಪಾಕ.ಯ ಇವರ ಮನೇಲಿ ನಳನೂ ಇದ್ದಾರೆ. ಭೀಮಸೇನನೂ ಇದಾನೆ. ಅದಕ್ಕೇ ಅಷ್ಟು ರುಚಿ, ನಿಮ್ಮನೆ ಅಡಿಗೆಯವರು, ನಳನೂ ಅಲ್ವ ಭೀಮನೂ ಅಲ್ಲ ಬರೀ ಅಡಿಗೆಯವಳು.

ಅದಕ್ಕೆ ಎಲ್ಲರೂ ನಕ್ಕಿದ್ದರು. ಮುರಳಿ ಎಷ್ಟು ಚೆನ್ನಾಗಿ ಮಾತನಾಡುತ್ತಾನೆ. ಸತ್ಯ ಮೂರ್ತಿಗೆ ತಕ್ಕ ಮಗ ಎಂದುಕೊಂಡ ರಂಗನಾಥ.

ನಿಂಗೆ ಅಡಿಗೆ ಕೆಲಸ ಬರುತ್ತೆನಮ್ಮಾ?ಇದ್ದಕ್ಕಿದ್ದಂತೆ ರಂಗನಾಥ ಕೇಳಿದಾಗ ಅವಳು ಗಲಿಬಿಲಿಗೊಂಡಳು.

ಇಲ್ಲ...ನಮ್ಮಮ್ಮನಿಗೇ ಬರುಲ್ವ. ಇನ್ನೂ ನನಗೆಲ್ಲಿ?ಗೀತ ನಿನಗೆ ಬರುತ್ತೇನೆ? ನೀನು ಕಲಿತಿದೀಯಾ?ಗೀತ ಉತ್ತರಿಸುವ ಮೊದಲೇ ಮುರಳಿ ನಂಗೆ ಬರುತ್ತೆ ಪರವಾಗಿಲ್ವ. ಎಂದಾಗ ಎಲ್ಲರೂ ನಕ್ಕರು. ಮತ್ತೊಮ್ಮೆ.

ಆಮೇಲೆ ಮನೋಜ ಮುರಳಿ ಇಬ್ಬರೂ ಕುಳಿತು ಊಟಮಾಡಿದರು.

ಹೌದು ಕಣೋ ಮನೋಜ. ರಾಧಿಕಾ ಹೇಳಿದ್ದು ನಿಜ. ನಿಮ್ಮ ಮಾವ ತುಂಬಾ ಚೆನ್ನಾಗಿ ಅಡಿಗೆ ಮಾಡ್ತಾರೆ. ನೀನೂ ಇಷ್ಟೇ ಚೆನ್ನಾಗಿ ಅಡಿಗೆಮಾಡ್ತೀಯ ಅಂತ ನನಗೆ

ಗೊತ್ತು. ಇದೆಲ್ಲಾ ನಿನಗೆ ಹೇಗೆ ಸಾಧ್ಯವಾಯಿತು.

ಅದೆಲ್ಲಾ ನನ್ನ ಸಾಧನೆಯ ಗುಟ್ಟು. ಎಂದ ರಾಗವಾಗಿ.

ರಾಧಿಕಾ ತುಂಬಾ ಲಕ್ಕಿ ಕಣಯ್ಯಾ...

ಪ್ಲೀಸ್ ಕೀಪ್ ಕ್ವೈಟ್...ಎಂದ ಮನೋಜ. ಅವನ ಮುಖ ಅರಕ್ತವಾಗಿತ್ತು.

ರಂಗವಾಥ ಕೇಳಿದ. ಏನಮ್ಮಾ ಹೇಗೆ ಓದ್ತಾ ಇದೀರಿ?ಪರೀಕ್ಷೆಗೆ ರೆಡಿಯಾಗ್ತಿದೀರಿ ತಾನೆ?"

"ಗೀತಾ ಚೆನ್ನಾಗಿ ಪ್ರಿಪೇರ್ ಆಗ್ತಿದಾಳೆ. ಆದರೆ ನಾನು ನಿಲ್..ಜೀರೋ. ಎಎಂದಳು ರಾಧಿಕಾ ಯಾವ ಸಂಕೋಚವಿಲ್ಲದೇ.

ಯಾಕಮ್ಮಾ..ಒಂದೂವರೆತಿಂಗಳಿಂದ ಕಾಲೇಜಿಗೂ ಹೋಗಿಲ್ಲ. ಮನೇಲಿ ಟೈಂ ಇರುತ್ತಲ್ಲ. ನಿಮ್ಮ ತಾಯೀನೇ ಡಾಕ್ಟರು. ಗೈಡ್ ಮಾಡ್ತಾರೆ. ಚೆನ್ನಾಗಿ ಪ್ರಿಪೇರ್ ಆಗಬಹುದಲ್ಲಾ..

ಸಾರಿ. ಅಂಕಲ್. ನನಗೆ ನನ್ನ ಸ್ಟಡೀ ಬಗ್ಗೆ ಮಾತಾಡುಕ್ಕೇ ಬೇಜಾರು. ಬೇರೆ ಮಾತನಾಡಿ ಪ್ಲೀಸ್...ರಂಗನಾಥ ಬೆರಗಾದ.

" ಬೇರೆ ಎಷ್ಟೇ ಮಾತನಾಡಿದರಕೂ, ಸಧ್ಯದ ಮಾತು ಮುಖ್ಯವಾದದ್ದು. ನಿನ್ನ ಸ್ಟಡೀ ನಿನ್ನ ಕೆರಿಯರ್‌ನ ನಿರ್ಧರಿಸುತ್ತೆ. ಅದೂ ಮುಕ್ಯತಾನೇ?'

"ಇರಬಹುದೇನೋ. ಆದರೆ ಸಧ್ಯಕ್ಕೆ ಕಾಲು ಮುರಿದುಕೊಂಡು ಮನೇಲೇ ಕೂತಿರುವ ನನಗೆ ಕಾಲೇಜಿಲ್ಲ. ಸ್ಟಡೀಸ್ ಬಗ್ಗೆಇಂಟರೆಷ್ಟ್ ಇಲ್ಲ. ಆದರಿಂದ ಈ ವರ್ಷದ ಎಕ್ಸಾಮ್ಸ್‌ಗೆ ನಾನು ಅಪಿಯರ್ ಆಗ್ತಿಲ್ಲ. ದೃಢವಾಗಿ ಹೇಳಿದಳು. ಎಲ್ಲರೂ ಅವಳನ್ನೇ ನೋಡಿದರು. ತಮಾಷೆ ಮಾಡ್ತಿದಾಳೇನೋ ಅಂತ. ಆದರೆ ರಾಧಿಕಾ ಗಂಭೀರವಾಗಿದ್ದಳು. ಗೀತಾ ಕೆಳದನಿಯಲ್ಲಿ ಕೇಳಿದಳು. ಈಗ ಇಲ್ಲೂ ಅದೇ ಮಾತನಾಡಬೇಕಾ?"

"ತಪ್ಪೇನೆ?ನನಗನ್ನಿಸಿದ್ದನ್ನೂ ಹೇಳಿದೆ. ಅವತ್ತೇ ಹೇಳಿದ್ನಲ್ಲ. ನನಗೀ ಕೋರ್ಸ್ ಇಷ್ಟವಿರಲಿಲ್ಲ. ಅಮ್ಮನ ಬಲವಂತಕ್ಕೆ ಸೇರಿದ್ದೆ ಅಂತ. ಈಗಿ ಇದನ್ನು ಬಿಡುವ ನಿರ್ಧಾರ ನನ್ನದು. ಯಾರೂ ಬಲವಂತ ಮಾಡುವ ಹಾಗೇ ಇಲ್ಲ ಗೀತಾ ಪೆಚ್ಚಾದಳು.

ಏನಮ್ಮಾ ಹೀಗೆ ಹೇಳಿತೀಯ. ವಿಧ್ಯಾಭ್ಯಾಸ ಕೂಡಾ, ಮನುಷ್ಯನ ಜೀವನದಲ್ಲಿ ಒಂದು ಮುಖ್ಯವಾದ ಗುರಿ. ಅದೂ ಅಲ್ಲದೇ ನೀನು ಓದುತ್ತಿರುವುದು ಸಾಧಾರಣ ವಾದ ಕೋರ್ಸ್ ಅಲ್ಲಮ್ಮ. ಜೀವನದಲ್ಲಿ ಸಾರ್ಥಕತೆಯನ್ನೂ ಹೊಂದುವ ಕೋರ್ಸ್. ಅದರ ಮಹತ್ವ ಎಷ್ಟು ಅಂತ ನಿನಗಿನ್ನೂ ಅರ್ಥವಾಗಿಲ್ಲ.

ಅದೇನೆ ಇರಲಿ. ನನಗಿಷ್ಟವಿಲ್ಲ. ಪ್ಲೀಸ್ ಅಂಕಲ್. ಈಗ ಈ ಮಾತು ಬೇಡ. ಮಗಳ ಮ್ರಾತಿನಿಂದ ಅವನಿಗೆ ಬೇಸರವಾದರೂ.

ಇವಳಿಗೆ ಬುದ್ದಿ ಹೇಳಲು ಇದ ಸಮಯವೂ ಅಲ್ಲ., ಅಲ್ಲದೇ ನಾನು ಬುದ್ದಿ ಹೇಳ್ತೀನಿ ಅಂತ ದೂರ ದೂರವೇ ಇದ್ದು ಬಿಟ್ಟರೇ....?ಮಗಳು ಸಿಕ್ಕಳು ಅಂತ ಸಂತೋಷವಿರುವಾಗಲೇ ಮಗಳನ್ನೂ ದೂರಮಾಡಿಕೊಳ್ಳುವುದು ಮುರ್ಖತನ ವಾಗುತ್ತೆ. ನಿಧಾನವಾಗಿ ತಿಳುವಳಿಗೆ ಹೇಳಿದರಾಯ್ತು ಎಂದು ಕೊಂಡು ಸುಮ್ಮಾದ.

ಮನೋಜ ಎದ್ದು ಹೋಗಿ ಎಲ್ಲರಿಗೂ ಬಿಸಿ ಬಿಸಿ ಕಾಫಿ ತಂದಿರಿಸಿದ. ಕಾಫಿ

ಕುಡಿದು ರಂಗನಾಥ ಹೇಳಿದ. ನಾನು ಹೀಗೇ ತಿರುಗಾಡಿಕೊಂಡು ಬರ್ತೀನಿ. ನೀನೆಲ್ಲಾ ಮಾತಾಡ್ತಾ ಇರಿ. ಎಂದು ಹೇಳಿ ಹೊರಗೆ ಹೊರಟ ಅವನು ಒಂದು ಟ್ಯೂಷನ್ ಕ್ಲಾಸ್ ತಗೋ ಬೇಕಿತ್ತು.

ಏಕೋ ಏನೋ ರಾಧಿಕಾಳ ಮೂಡ್ ಕೆಟ್ಟು ಹೋಗಿತ್ತು. ಒಂದೇ ಕಡೆ ಕೂತು ಕೂತು ಕಾಲು ನೋಯುತ್ತಿತ್ತು.

ಗೀತಾ ಮನೆಗೆ ಹೋಗೋಣ್ವೇನೆ?ಎಷ್ಟು ಹೊತ್ತಾಯ್ತಲ್ಲ ಬಂದು?" ಮುರಳಿ ತಕ್ಷಣವೇ ಒಂದು ಆಟೋ ತಂದ. ಅವರಿಬ್ಬರಿಗೂ ಹತ್ತಿದ ಮೇಲೆ ತಾನೂ ಹತ್ತಿ ಕುಳಿತ. ಇರಿಬ್ಬರನ್ನು ಮನೆ ತಲುಪಿಸಿ ನಾನೂ ಮನೆಗೆ ಹೋಗ್ತೀನಿ ಎಂದ. ಮನೋಜ ಹೊರಬಾಗಿಲಲ್ಲಿ ನಿಂತು ಎಲ್ಲರಿಗೂ ಕೈ ಬೀಸಿದ. ಎಷ್ಟ್ ದಿನಗಳ ನಂತರ ರ ಧಿಕಾ ಳನ್ನೂ ನೋಡಿದ್ದು ಸಂತೋಷವೆನಿಸಿದರೂ ಜಾಲಿಯಾಗಿ ಮಾತವಾಡಲಿಲ್ಲವಲ್ಲ ಎಂದೂ ಅನ್ನಿಸಿತ್ತು.

ರಂಗನಾಥ ಟ್ಯೂಷನ್ ಕ್ಲಾಸ್ ಮುಗಿಸಿಕೊಂಡು ಮನೆಗೆ ಸೀದಾ ಬರುವ ಬದಲು , ನಿರ್ಮಲೆಯ ಕ್ಲಿನಿಕ್‌ಹುಡುಕಿಕೊಂಡು ಹೊರಟ. ಟೆಲಿಫೋನ್ ಡೈರೆಕ್ಟರಿಯಲ್ಲಿ ಅವಳ ಹೆಸರನ್ನು ಹುಡುಕಿ ಫೋನ್ ನಂಬರ್ರು ಹಾಗೂ, ಕ್ಲಿನಿಕ್‌ನ ಅಡ್ರೆಸ್ಸನ್ನು ಪತ್ತೆ ಮಾಡಿದ.. ಕ್ಲಿನಿಕ್‌ಗೆ ಡಯಲ್ ಮಾಡಿ, ಡಾಕ್ಟರು ಇದರೋ ಇಲ್ಲವೋ ಅಂತ ತಿಳಿದಕೊಂಡ. ತನಗೊಂದು ಅಪಾಯಿಂಟ್‌ಮೆಂಟ್ ಬೇಕೆಂದು ಕೇಳಿದ.

ಕಷ್ಟಪಟ್ಟು ಕ್ಲಿನಿಕ್ ಹುಡುಕಿ, ಬಂದು ಸೇರಿದಾಗ, ಸಾಕಷ್ಟು ಜನ ಪೇಶೆಂಟ್ಸ್‌ಗಳು ಕಾಯುತ್ತಾ ಕುಳಿತಿರುವುದನ್ನೂ ಗಮನಿಸಿದ. ಪರವಾಗಿಲ್ವೇ..ಈಗಲೂ ಇಷ್ಟು ಜನ ಪೇಶೆಂಟ್ಸ್‌ಗಳು!ಅಂತ ಅನಿಸಿದರೂ ಬೇಸರವೆನಿಸಿತು. ಅಲ್ಲಿದ್ದ ಕಾಂಪೌಂಡರ್‌ನ್ನು ,ಡಾಕ್ಟರ ಮನೆ ಎಲ್ಲಿದೆ?"ಅಂತ ಕೇಳಿದ.

ಇದೇ ಮನೆ. ಮನೆಯ ಒಂದು ರೂಮಿನಲ್ಲಿ ಕ್ಲಿನಿಕ್‌ನ ನಡೆಸ್ತಿದಾರೆ. ಅಂತ ಹೇಳಿದಳು. ಸರಿ ಹಾಗಾದ್ರೆ...ನಾನು ಅವರ ಹತ್ತಿರ ಪರ್ಸನಲ್ ಆಗಿ ಮಾತವಾಡಬೇಕು. ಎಂದು ಅಲ್ಲೇ ಕಾಯುತ್ತಾ ಕುಳಿತ.ಕಡೇ ಪೇಶೆಂಟ್ ಹೋದಮೇಲೆ, ಕಾಂಪೌಂಡರ್ ಸಹ ಹೊರಟು ಹೋದಳು. ನಿರ್ಮಲ ಇನ್ನೇನು ಏಳುವುದರಲ್ಲಿದ್ದಳು. ಅಷ್ಟರಲ್ಲಿ ರಂಗನಾಥ, ಪರದೆಸರಿಸಿ, ಸೀದಾ ಒಳಗೆ ಹೋದ. ಒಂದು ಗಳಿಗೆ ನಿರ್ಮಲ ತಬ್ಬಿಬ್ಬಾದಳು. ಎಸ್. ಏನಾಗಬೇಕಾಗಿತ್ತು?ಕೇಳಿದಳು.

ನಿರ್ಮಲಾ..ನನ್ನ ಗುರುತು ಸಿಗಲಿಲ್ವಾ?"ಉಗುಳು ನುಂಗಿದ.

ನಿರ್ಮಲಾ ಅನುಮಾನದಿಂದ ನೋಡಿದಳು. ಅವಳ ಮೈಯ ರಕ್ತವೆಲ್ಲಾ ಸರ್ರನೆ ತಲೆಗೆ ಏರಿ ತಲೆ ತಿರುಗಿದಂತಾಯಿತು. ಗುರುತು ಸಿಕ್ಕಿದರೂ, ಯಾವ ಭಾವನೆಯನ್ನೂ ತೋರಿಸಿಕೊಳ್ಳದೇ ಯಾರೋ ಗೊತ್ತಾಗುಲಿಲ್ಲ ಎಂದಳು.

ಸುಳ್ಳು ಹೇಳಬೇಡ. ನನ್ನ ಗುರುತು ಸಿಕ್ಕಿದೆ ಅಂತ ನಿನ್ನ ಮುಖವೇ ಹೇಳ್ತಿದೆ.

ಸುಳ್ಳು ಹೇಳುವ ಅಗತ್ಯ ನನಗಿಲ್ಲ. ಅಲ್ಲದೇ ನೀವು ಯಾರೋ ಏನೋ ತಿಳಿದು ನನಗೇನೂ ಆಗ ಬೇಕಾಗಿಲ್ಲ. ನನ್ನಿಂದ ಈಗ ಏನಾಗಬೇಕಾಗಿದೆ ಅಂತ ಬೇಗ ಹೇಳಿಬಿಡಿ. ಅದೂ ಮೆಡಿಸಿನ್‌ಗೆ ಸಂಬಂದಿಸಿದ್ದು, ನನಗೀನಾಗಲೇ ಹೊತ್ತಾಗಿದೆ. ಕ್ಲಿನಿಕ್ ಮುಚ್ಚಬೇಕು , ನಿರ್ವಿಕಾರವಾಗಿ ಅವಳು ನುಡಿದಾಗ, ಇವಳ ಜಂಭ ಇನ್ನೂ ಅಡಗಿಲ್ಲ.

ಅಂತ ತನ್ನಲ್ಲೇ ಅಂದುಕೊಂಡ ರಂಗನಾಥ.

ನಾನು ಸ್ವಲ್ಪ ಮಾತನಾಡ ಬೇಕಾಗಿತ್ತು. ಅದೂ ರಾಧಿಕಾಳ ವಿಚಾರ ನಿರ್ಮಲ ಅಧೀರಳಾದರೂ, ಅದನ್ನು ತೋರಗೊಡದೇ ರಾಧಿಕಾಳ ವಿಚೀರ ಮಾತನಾಡುಕ್ಕೆ ನಿಮಗೇನು ಅಧಿಕಾರವಿದೆ? ನೀವಿನ್ನೂ ಹೋಗಬಹುದು. ಎಂದು ತಾನೂ ಎದ್ದಳು.

ರಾಧಿಕಾ ನನ್ನ ಮಗಳು.ಅವಳ ಮೇಲೆ ನನಗೆ ಅದಿಕಾರವಿದೆ.

ನಿರ್ಮಲ ಬೆಚ್ಚಿದಳು. ಆದರೂ ವಿಚಲಿತಳಾಗದೇ.

ನೀವು ಯಾರೋ ನನಗೆ ಗೊತ್ತಿಲ್ಲ.ಅಂಥಾದ್ದರಲ್ಲಿ ಏನೋನೋ ಮಾತನಾಡುತ್ತಿದೀರಲ್ಲ. ತಲೆ ಸರಿಇಲ್ಲದಿದ್ದರೆ ಬೇರೆ ಡಾಕ್ಟರ ಹತ್ತಿರ ಹೋಗಿ ಚೆಕಪ್ ಮಾಡಿಸಿಕೊಳ್ಳಿ.."

"ನೀನೂ ಬೇಕೂಂತ ನನಗೆ ಅವಮಾನ ಮಾಡ್ತಾ ಇದೀಯ,. ರಾಧಿಕಾ ನನ್ನ ಮಗಳು ಅಂತ ಅಂದ ಮೇಲೆ, ನಾನ್ಯಾರೂ ಅಂತ ತಿಳಿದೂ ಹೀಗೆ ಮಾತನಾಡಬಹುದಾ ನೀನು?"

"ನಾನು ಏನು ಬೇಕಾದ್ರೂ ಮಾತನಾಡ್ತೀವಿ. ಇದು ನನ ಕ್ಲಿನಿಕ್ಕು.

ಗೊತ್ತು. ಇದು ನಿನ್ನ ಕ್ಲಿನಿಕ್ಕು ಇದು ನಿನ್ನ ಮನೆ. ಹೀಗೇ ಅಹಂಕಾರದಿಂದ ಮಾತನಾಡಿ ನಾನು ದೂರ ಹೋಗುವಂತೆ ಮಾಡಿದೆ ನೀನು

ತಾನಾಗಿಯೋ ದೂರ ಹೋದವರು, ನನ್ನ ಭಾಗಕ್ಕೆ ಇಂದಿಲ್ವಲ. ಹಿಂದಿನದನ್ನೆಲ್ಲಾ ನಾನು ಮರೆತು ಬಿಟ್ಟಿದೀನಿ. ಈಗ ನೀವ್ಯಾರು ಅಂತ ತಿಳಿದು ನಗೇನೂ ಆಗ ಬೇಕಾಗಿಲ್ಲ. ದಯವಿಟ್ಟು ಹೊರಟು ಹೋಗಿ. ಇಲ್ಲದಿದ್ದರೆ ಪೋಲಿಸರನ್ನು ಕರೆಸಬೇಕಾಗುತ್ತದೆ.

ಪೋಲಿಸರನ್ನು ಕರೆಸಿ, ನಿನ್ನ ಗಂಡನ ಮೇಲೆ ಆರೋಪ ಹೊರಿಸುವುದಾದರೆ ಹೊಲಿಸು. ಆದರೆ ನಾನು ನೀನು ಪತಿ ಪತ್ನಿಯಾಗಿದ್ದೆವು ಏನ್ನೋ ವಿಷಯ ಎಲ್ಲರಿಗೂ ತಿಳಿಯುತ್ತೆ. ರಾಧಿಕಾಗೂ ತಿಳಿಯುತ್ತೆ ರಾಧಿಕಾಗಿ, ನಾನಾಗಿಯೇ ಇದುವರೆಗೂ ತಿಳಿಸಿಲ್ಲ. ನೀನು ಏನು ಹೇಳಿದೀಯೋ ನನಗೆ ಗೊತ್ತಿಲ್ಲ.

ನಿರ್ಮಲಳ ಮುಕ ಬಿಳುಪೇರಿತು.

ರಾಧಿಕಾ ನಿಮಗೆ ಹೇಗೆ ಗೊತ್ತು? ಎಷ್ಟು ದಿನದಿಂದ ಗೊತ್ತು?

ನನ್ನ ಮಗಳನ್ನೂ ನಾನು ಗುರುತು ಹಿಡಿಯುಕ್ಕೆ ಕಷ್ಟವೇನೂ ಪಡಬೇಕಾಗಿಲ್ಲ. ಕಂಕಡ ತಕ್ಷಣ ತಿಳಿಯಿತು. ನಕ್ಕ.

ರೀ ...ಮೀಸ್ಟರ್ , ರಾಧಿಕಾ ನನ್ನ ಮಗಳು. ನಿಮ್ಮ ಮಗಳಲ್ಲ. ನೀವು ಯಾರೋ ನನಗೆ ತಿಳಿಯದು ಅಂದೆನಲ್ಲ. ಮತ್ತೆ ನುಡಿದಳು.

ಇ ಸರಿ ಹಾಗಾದ್ರೆ ಇದುವರೆಗೂ ತಿಳಿಯದ ವಿಚಾರ, ರಾಧಿಕಾಳಿಗೆತಿಳಿಯುತ್ತೆ. ಅವಳು ತಾನಾಗಿಯೇ ನನ್ನ ಬಳಿಗೆ ಬರ್ತಾಳೆ.

ಖಂಡಿತಾ ಇಲ್ಲ.ಕಾಣದ ಅಪ್ಪನ ಮೇಲೆ ಅವಳಿಗೆ ಯಾವ ಆದರವೂ ಇಲ್ಲ. ಅಭಿಮಾನವೂ ಇಲ್ಲ"

"ಹಾಗಾದ್ರೆ ಈಗ ಕರೆಸು. ಕೇಳಿ ಬಿಡೋಣ"

"ಸಾಕು ತಮಾಷೆ. ಸುಮ್ಮನಿದೀನಿ. ಅಂತ ಏನೇನು ಆಡ್ತಿದೀರಿ? ನೀವಾಗೇ ಹೋಗ್ತೀರೋ ಇಲ್ಲವೋ.....?"

"ಹೋಗ್ತೀರೋ ಇಲ್ಲವೋ....?"

" ಹೋಗ್ತೀವಿ. ಆದರೆ ಹೋಗುಕ್ಕೆ ಮುಂಚೆಒಂದುಮಾತು ಹೇಳ್ತೀವಿ. ರಾಧಿಕೆ ಮನೋಜನ್ನ ಪ್ರೀತಿಸ್ತಾಳೆ. ನನ್ನನ್ನ ಗೌರವಿಸುತ್ತಾಳೆ. ನೀನು ಇಷ್ಟು ವರ್ಷ ಸಾಕಿ ಬೆಳೆಸಿದರೂ ಅವಳಿಗೇಇಲ್ಲಿ ಸುಖವಿಲ್ಲ. ಅವಳು ಇಲ್ಲಿ ಹ್ಯಾಪಿಯಾಗಿಲ್ಲ.

ಈ ಮಾತಿನಿಂದ ನಿರ್ಮಲೆಗೆ ರೇಗಿ ಹೋಯ್ತು.

ಗೆಟ್ ಔಟ್..ಇಪ್ಪತ್ತು ವರ್ಷಗಳಿಂದ ಸಾಕಿ ಬೆಳೆಸಿದವಳು ನಾನು . ಅವಳಿಗೆ ಏನು ಕೊರತೆ ಅಂತ ನನಗೆ ಗೊತ್ತಿಲ್ಲ. ನಿಮಗೆ ಗೊತ್ತೆ?

"ಗೊತ್ತು. ನನಗೆ ಗೊತ್ತಚು. ಅವಳು ಹ್ಯಾಪಿಯಾಗಿಲ್ಲ. ಹಠದ ಸ್ವಭಾವದವಳು. ಮೆಜಾರಿಟಿಗೆ ಬಂದಿದಾಳೆ. ಒಂದು ದಿನ ನಿನ್ನ ಮನೆ ಬಿಟ್ಟು ನನ್ನ ಮನೆಗೆ ಓಡಿ ಬಂದರೂ ಓಡಿ ಬರಬಹುದು ಎಂದ ವ್ಯಂಗ್ಯವಾಗಿ,

ಆ ಮಾತಿನಿಂದ ನಿರ್ಮಲೆಯ ಹೊಟ್ಟೆ ಉರಿದು ಹೋಯ್ತು.

ಅವಳಿಗೆ ಏನು ಕೊರತೆ? ಅಪ್ಪ ಇಲ್ಲ ಅನ್ನುವುದೊಂದೇ ಕೊರತೆ. ಅದು ನನ್ನ ತಪ್ಪಲ್ಲ. ಅಪ್ಪನ್ನ ತಂದು ಕೂಡಲಿಲ್ಲ ಇನ್ನೂ ಮತ್ತೆ ಮತ್ತೆ ಅದೇ ಮಾತುಗಳನ್ನಾಡಿ ನನ್ನನ್ನೂ ನೋಯಿಸಬೇಡಿ. ಇವೆಲ್ಲಾ ನಾನು ಮರೆತಿರುವ ಚಿತ್ರಗಳು. ಅವನ್ನೂ ಕೆದಕಿ ಬೆದಕಿ ನೋಡುವ ಇಚ್ಛೆ ನನಗಿಲ್ಲ.

ಇಷ್ಟು ವರ್ಷಗಳ ನಂತರ ನಿನ್ನನ್ನು ನೋಯಿಸುವ ಉದ್ದೇಶದಿಂದ ನಾಇಲ್ಲಿಗೆ ಬರಲಿಲ್ಲ. ಸಾರಿ. ನನ್ನನ್ನು ಕ್ಷಮಿಸು. ಎಂದು ಅಲ್ಲಿಂದ ದುಡು ದುಡುನೆ ಹೊರಟು ಹೋದ.

ಅವನು ಆ ಕಡೆ ಹೋದ ಮೇಲೆ ಎಷ್ಟೋ ಹೊತ್ತಿನ ಬೆಪ್ಪಳಂತೆ ಕುಳಿತೇ ಇದ್ದಳು. ಕನಸಿನಲ್ಲೂ ಯೋಚಿಸಿದ ಘಟನೆ ಇದು ಎನಿಸಿತು. ಮನೆಗೆ ಹೋಗುವ ಮನಸ್ಸಾಗಲಿಲ್ಲ., ಮಗಳ ಮೇಲೆ ಕೋಪ ಬಂದಿತ್ತೂ ಸುಮ್ಮನೇ ಕುಳಿತೇ ಇದ್ದಳು. ಇಷ್ಟು ವರ್ಷಗಳ ನಂತರ ಮತ್ತೆ ಇವನೇಕೆ ಬಂದ? ಬರದೇ ಇದ್ದಿದ್ದರೆ ಚೆನನಲಆಗಿತ್ತೆನಿಸಿತು. ಅಡಿಗೆಯವರು ಬಂದು ಕರೆದರು.

ಅಮ್ಮಾ ಹತ್ತು ಗಂಟೆಯಾಗಗ್ತಾ ಬಂದಿದೆ. ಬೇಬಿ ಕರೀತದಾರೆ ಬರ್ತಿಲಾ?"

ಒಲ್ಲದ ಮನಸ್ಸಿನಿಂದ ಎದ್ದು, ಕ್ಲಿನಿಕ್‌ಬಾಗಿಲನ್ನು ಮುಚ್ಚಿ ಮನೆಗೆ ಬಂದಳು. ಮಗಳ ಮುಖವನ್ನೂ ನೋಡಬೇಕೆನಿಸಲಿಲ್ಲ.

ನನಗೆ ಹಸಿವಿಲ್ಲ. ಅವಳಿಗೆ ಬಡಿಸಿ, ನೀವೂ ಊಟ ಮಾಡಿ. ಎನ್ನುತ್ತಾ ತನ್ನ ಪಾಡಿಗೆ ತಾತನು ತನ್ನ ರೂಮಿಗೆ ಹೊರಟು ಹೋದಳು.

ಮಮ್ಮೀ ಎಂದೂ ಗುಡ್‌ನೈಟ್ ಹೇಳದೇ ಮಲಗಲು ಹೋದವಳಲ್ಲ.ಇಂದೇಕೆ ನನ್ನನ್ನ ನೋಡಲು ಸಹ ಬರಲಿಲ್ಲ. ನಾನು ಮನೋಜನ ಮನೆಗೆ ಹೋದುದು ಗೊತ್ತಾಗಿರಬಹುದು. ಅದಕ್ಕೇ ಸಿಟ್ಟು ಬಂದಿದೆಯೇನೋ ಎಂದುಕೊಂಡು ಸುಮ್ಮಾದಳು.ಸಿಟ್ಟು ಬಂದರೆ ಬರಲಿ..ನನಗೇನು ಅಂತನ್ನಿಸಿತು.

ಅಡಿಗೆಯವರು ಅನ್ನ ಕಲೆಸಿ ತಂದಿತ್ತಾಗ ಹೇಳಿದಳು. ನನಗೂ ಹಸಿವಿಲ್ಲ. ಒಂದು ಲೋಟ ಹಾಲು ತಂದು ಕೊಡಿ ಸಾಕು,

ಕಲಿಸಿದ ಅನ್ನ ದಂಡ ಮಾಡಬಾರದಮ್ಮ.ಎಷ್ಟು ಸೇರುತ್ತೋ ಅಷ್ಟು ತಿನ್ನೂ.

ಉಪವಾಸ ಮಲಗಬಾರದು. ಮೈಗೆ ಒಳ್ಳೆದಲ್ಲ.

ನಾನೇನೂ ಉಪವಾಸ ಮಾಡ್ತಿಲ್ಲ. ನನಗೆ ಸೇರ್ತಿಲ್ಲ. ಪ್ಲೀಸ್ ನೀವು ಹೋಗ್ತೀರಾ?" ಮುಖ ಬೇರೆ ಕಡೆಗೆ ತಿರುಗಿಸಿದಳು.

ಅಡಿಗೆಯವರಿಗೆ ಮುಖ ಭಂಗವಾದಂತಾಯಿತು. ರಾಧಿಕೆಯ ಒರಟು ಮಾತು ಅವರಿಗೆ ಹೊಸದೇನಲ್ಲ. ಆದರೂ, ಡಾಕ್ಟರು ಎಂದೂ ಊಟ ಮಾಡದೇ ಮಲಗಿದವರಲ್ಲ. ಏನಾಗಿದೆ ಇವತ್ತು ಇವರಿಬ್ಬರಿಗೂ. ಚಿಕ್ಕ ಹುಡುಗಿ ಕಾಲು ,ಮುರಿದುಕೊಂಡಿದೆ ಅಂತ ಕರುಣೆಯಾದರೂ ಬೇಡವೇ? ಬೇಟ ಅಂದ್ರೂ ಮನೆಯಿಂದ ಆಚೆ ಹೋದುದಕ್ಕೆ ಕೋಪವೇನೋ...ಹೋಗಲಿ ನನಗೇನಾಗಬೇಕು ಎಂದುಕೊಂಡು ಅನ್ನ ತೆಗೆದು ಒಳಗಿಟ್ಟು, ಹದವಾಗಿಬಿಸಿ ಮಾಡಿದ ಹಾಲಿಗೆ ಸಕ್ಕರೆ ಹಾಕಿ, ಕಲಕಿ ತಂದತ್ತಳು.

ಹಾಲು ಕುಡಿದು ಮುಗಿಸಿ ಲೋಟವನ್ನು ವಾಪಸ್ಸು ಕೊಡುವಾಗಿ ಹೇಳಿದಳು.

ಥ್ಯಾಂಕ್ಸ್ ರಂಗಮ್ಮ ಬಿಸಿ ಹಾಲು ಹಿತವಾಗಿತ್ತು. ಅಮ್ಮ ಯಾಕೆ ಊಟ ಮಾಡಲಿಲ್ಲ. ಕೋಪ ಬಂದಿದೆಯಾ?" ಹೊಟ್ಟೆಯ ತಳಮಳ ಕಮ್ಮಿಆಗಿತ್ತು.

ಏನೋ ನಂಗೆ ಗೊತ್ತಿಲ್ಲ., ಕೋಪ ಬಹುವಂಥೆದ್ದು ಏನು ಮಾಡಿದೆ?"

"ಏನಿಲ್ಲ ರಂಗಮ್ಮ. ಕೂತ್ಕೊಳ್ಳಿ ಎಲ್ಲಾ ಹೇಳ್ತೀವಿ ಎಂದು ತನಗೂ ಮನೋಜನಿಗೂ ಸ್ನೇಹ ಬೆಳೆದಿದ್ದು, ತಾನು ಇವತ್ತು ಗೀತನ ಮನೆಗೆ ಹೋಗದೇ ಮನೋಜನ ಮನೆಗೆ ಹೋದದ್ದನ್ನು ತಿಳಿಸಿದಳು. ರಂಗಮ್ಮನಿಗೆ ಇದು ಹೊಸ ಸುದ್ದಿ.

ಹೌದಾ ಬೇಬಿ.....ನಿಮ್ಮ ತಾಯಿಗೆ ಕೋಪ ಬರದೇ ಇರುತ್ತಾ?"

ಹಾಗಾದ್ರೆ ನನ್ನದು ತಪ್ಪು ಅಂತೀರಾ?" ಮುಗ್ಧಳಂತೆ ಕೇಳಿದಳು.

ತಪ್ಪೋ...ನೆಪ್ಪೋ...ಇವತ್ತಿಗೆ ಸರಿ. ಇನ್ನೂ ಮೇಲೆ ಹೀಗೆ ಮಾಡಬೇಡಿ. ಸಾಕಿ ಬೆಳೆಸಿದ ನಿಮ್ಮ ತಾಯಿಯ ಮನಸ್ಸು ನೋಯುತ್ತೆ.

ಈ ಮಾತು ರಾಧಿಕಾಳಿಗೆ ಸರಿ ಹೋಗಲಿಲ್ಲ.

ಹೋಗಲಿ ಬಿಡಿ. ಆದದ್ದಾಗಲಿ. ನೀವು ಮಲಗೆ. ನಾನೂ ಮಲಗ್ತೀವಿ.

ತನ್ನ ರೂಮಿನಲ್ಲಿ ಮಲಗಿದ್ದ ನಿರ್ಮಲೆಗೆ ನಿದ್ದೆ ಇಲ್ಲ. ಮನಸ್ಸು ಕಲಕಿದ ಕೊಳದಂತೆ ಕದಡಿ ರಾಡಿಯಾಗಿತ್ತು.

ಛೆ. ನನ್ನ ಪಾಡಿಗೆ ನಾನು ಎಲ್ಲವನ್ನು ಮರೆತು ಬದುಕಲು ಪ್ರಯತ್ನಿಸಿದ್ದೆ. ಇವನೇಕೆ ಮತ್ತೆ ಅದೂ ಈಗ ಬಂದ?ನನ್ನ ಮಗಳನ್ನು ನನ್ನಿಂದ ದೂರಮಾಡಿ ನನ್ನನ್ನು ಮತ್ತೆ ಮತ್ತೆ ನೋಯಿಸುವ ಹಂಚಿಕೆ ಇರಬೇಕು. ಅಪ್ಪನಂತೆ ಅಪ್ಪ? ಮಗು ಹುಟ್ಟುವ ಮೊದಲೇ ಹೋದವನು ಇವನು ಅಪ್ಪನ ಸ್ಥಾನಕ್ಕೆ ಅರ್ಹನಲ್ಲ. ನಾನು ಅಂದು, ಎಲ್ಲಾ ದುಗುಡವನ್ನೂ ನುಂಗಿ, ನನಗೆ ನಾನೇ ಸಮಾಧಾನ ಹೇಳಿಕೊಂಡಿದ್ದೆ.

ಗೋಕರ್ಣಕ್ಕೆ ಹೋದವನು, ಕ್ರಿಯೆ, ಕರ್ಮ ಎಲ್ಲಾ ಮುಗಿದು ವಾರ ಕಳೆದರೂ ವಾಪಸ್ಸು ಬರದಿದ್ದಾಗ ನನಗೆ ಚಿಂತೆ ಆಗಿತ್ತು. ಒಂದು ಕಾಗದವಿಲ್ಲ. ಯಾವ ಸುಳಿವೂ ಇಲ್ಲ. ಅವನ ಸ್ನೇಹಿತ ಸತ್ಯ ವಿಚಾರಿಸಿಕೊಂಡು ಹೋಗಲು ಬಂದಿದ್ದ. ಸತ್ಯನ ತಂದೆಗೆ ಹುಶಾರಿಲ್ಲದ್ದರಿಂದ ಅವನು ಗೋಕರ್ಣಕ್ಕೆ ಹೋಗಲೇ ಇಲ್ಲವಂತೆ...ಏನಾಗಿರಬಹುದು? ಚಿಕ್ಕ ಮಗು ಮನೋಜನೂ ಜೊತೆಯಲ್ಲಿದ್ದವನಲ್ಲ

ಅಂತ ಕಳವಳವಾದರೂ ಊರು ಸುತ್ತಾಡಿ ಬರಲು ತಡವಾಗಿರಬಹುದು ಎಂದು ಕೊಂಡಿದ್ದೆ.

ಆದರೆ? ಸತ್ಯ ಮತ್ತೆ ಬಂದು ವಿಚಾರಿಸಿದಾಗ ಹೇಳಿದ್ದೆ.

ನನಗೇನೂ ಮಾಡಬೇಕೆಂದು ತಿಳೀತಿಲ್ಲ. ಪೋಲಿಸ್ ಕಂಪ್ಲಂಟ್ ಕೊಟ್ಟರೆ ಹೇಗೆ? ನಾನೂ ಗೋಕರ್ಣಕ್ಕೆ ಹೋಗಿ ಬಂದರೆ?

ಸತ್ಯನಿಗೂ ಆತಂಕನಾಗಿರಬೇಕು.

ನಾನು ಹೋಗಿ ಏನಾಗಿರಬಹುದು ಅಂತ ತಿಳಿದುಕೊಂಡು ಬರ್ತಿನಿ. ನಿಮಗೆ ಒಬ್ಬರಿಗೇ ಇರಲೂ ಗಾಭರಿ ಎನಿಸಿದರೆ. ನಿಮ್ಮ ತಂದೆಯ ಮನೆಯಲ್ಲಿರಿ. ಅಥವಾ ,ನಿಮ್ಮ ಸ್ನೇಹಿತರು ಯಾರಾದರೇನು ನಿಮ್ಮ ಜೊತೆಯಲ್ಲಿರುವಂತೆ ಕೇಳಿಕೊಳ್ಳಿ. ಎಂದು ನುಡಿದು ಅವನು ಹೊರಟು ಹೋಗಿದ್ದ.

ಯಾಕ ಇಷ್ಟು ದಿನಗಳಾದರೂ ವಾಪಸ್ಸು ಬರಲಿಲ್ಲ.?ಏನಾದರೂ ದುರ್ಘಟನೆ ನಡೆದಿರಬಹುದೇ? ಹಾಗೇನಾದರೂ ಆಗಿದ್ದರೆ ತಿಳಿಯಬೇಕಿತ್ತಲ್ಲ. ಏನೋ ಸಂದೇಹ. ಇದ್ದಕ್ಕಿದ್ದಂತೆ ಅವಳಿಗೆ ಇನ್ನೇನೋ ಅನ್ನಿಸಿತ್ತು. ಅವನು ತನ್ನಿಂದ ದೂರವಾಗಿದ್ದಾನೆ. ಇಲ್ಲಿದಿದ್ದರೆ ಖಂಡಿತಾ ವಾಪಸ್ಸು ಬರುತ್ತಿದ್ದ... ಕಾರಣ.? ನನ್ನ ಮೇಲೆ ತಿರಸ್ಕಾರ ಮುಡಿರುಬಹುದು. ನಾನು ಕೇಳಿದಾಗ ಹಣ ಕೊಡಲಿಲ್ಲವೆಂದು ನನ್ನ ಮೇಲೆ ತಿರಸ್ಕಾರ ಮೂಡಿರಬಹುದು. ನಾನು ಕೇಳಿದಾಗ ಹಣ ಕೊಡಲಿಲ್ಲವೆಂದು ನನ್ನ ಮೇಲೆ ಕೋಪ ಬಂದಿತ್ತು. ತಾಯಿಗೆ ಹುಶಾರಿಲ್ಲವೇ, ಅವರು ಆಸ್ಪತ್ರೆಯಲ್ಲಿದ್ದಾಗ ಇವನು ಬದಲಾಗಿದ್ದ. ಪ್ರೀತಿಯ ಮಾತುಗಳನ್ನೇ ಆಡಿರಲಿಲ್ಲ. ತನಗೆ ಮಗುವಾಗಲಿರುವ ಸಂತಸವಿದ್ದಂತೆ ಅನ್ನಿಸಲಿಲ್ಲ. ಅವನಿಗೆ ಮನೋಜನ ಚಿಂತೆ ಅಧಿಕಾವಾಗಿತ್ತೂ. ಮನೋಜನ ಯಾವ ಕೆಲಸವನ್ನು ನನಗೆ ವಹಿಸಿರಲಿಲ್ಲ. ನನ್ನ ಮೇಲೆ ನಂಬಿಕೆ ಇರಲಿಲ್ಲ. ತಾನು ಸದಾ ಮನೋಜನ ಜೊತೆ ಜೊತೆಯಲ್ಲಿದ್ದು ನನ್ನಿಂದ ದೂರ ದೂರವಾಗಿಯೇ ಇದ್ದ. ನನ್ನ ಮೇಲಿನ ಆಸಕ್ತಿ ಕಡಿಮೆಯಾಗಿತ್ತು. ತಾಯಿ ಸತ್ತ ದುಃಖವೋ, ಮನೋಜನ ಚಿಂತೆಯೋ ನನ್ನ ಮೇಲಿನ ಅಸಮಾಧಾನವೋ, ನನ್ನ'ನ್ನಂತೂ ದೂರಮಾಡಿದ್ದ. ಆ ಸಂದೇಹ ನನ್ನಲ್ಲಿ ಮೂಡಿ ಪ್ರಬಲವಾಯಿತುಯ ಅದೇ ಕಾರಣ, ಮನೋಜನನ್ನು ತನ್ನ ಜೊತೆಗೆ ಕರೆದೊಯ್ದಿರುವುದು...ಎಂದು ಪದೇ ಪದೇ ಅನ್ನಿಸತೊಡಗಿ ಹತಾಶಳಾಗಿದ್ದಳು.

ಮನೋಜನ ಪೋಷಣೆಗಾಗಿ, ಅವನು ತನ್ನಿಂದ ದೂರವಾಗಿರಬಹುದು ಎನ್ನುವುದನ್ನು ಪೂರ್ಣ ನಂಬಲು ಮನಸ್ಸು ಒಪ್ಪುತ್ತಿರಲಿಲ್ಲ. ಅದೇ ಕಾರಣವಾಗಿದ್ದರೆ, ಬಹುಶಃ ಅದರಲ್ಲಿ ತನನ ತಪ್ಪೂ ಇದೆ ಅಂತೆನಿಸುತ್ತಿತ್ತು.ಆದರೂ ಅವನ ಬಹವನ್ನೂ ನಿರೀಕ್ಷಿಸುತ್ತಿದ್ದಳು.

ಸತ್ಯ ಗೋಕರ್ಣದಿಂದ ವಾಪಸ್ಸುದವನು ಹೇಳಿದ್ದ.

ಹಾಗೇ ಅಲ್ಲಿ ಯಾವ ಆಕ್ಸಿಡೆಂಟ್ ಆಗಲಿ, ಸಮುದ್ರದಲ್ಲಿ ಮುಳುಗಿ ಹೋಗಿರುವ ಕೇಸುಗಳು ಕಂಡು ಬರಲಿಲ್ಲ. ಅರ್ಚಕರ ಪ್ರಕಾರೆ ಕರ್ಮಾಂತರ ಗಳೆಲ್ಲ.ಮುಗಿದ ಮಾರನೇ ದಿನವೇ ಛತ್ರವನ್ನು ಬಿಟ್ಟಿದಾನೆ. ಆದರೆ ಎಲ್ಲಿಗೆ ಹೋದ? ಎನ್ನುವ ವಿಚಾರ ಯಾರಿಗೂ ತಿಳಿದಿಲ್ಲ. ನನಗೂ ಅದೇ ಚಿಂತೆ. ಎಲ್ಲಿಗೆ ಹೋದ?ಯಾಕೆ ಹೋದ?

ವಾಪಸ್ಸು ಏಕೆ ಬರಲಿಲ್ಲ? ಮನೋಜನ ಜೊತೆ ಎಲಿ ತಿರುಗ್ತಿದಾನೆ ಒಂದೂ ಅರ್ಥವಾಗ್ತಿಲ್ಲ. ಅವನೇಕೆ ಹೀಗೆ ಮಾಡಿದ?

ಅವನೇಕೆ ಹೀಗೆ ಮಾಡಿದ ಎಂದು ಅವಳಿಗೆ ಅರ್ಥವಾಗಿತ್ತು ಅವಳು ತಲೆ ತಗ್ಗಿಸಿದಳು ದುಃಖ ಸಂಕಟ, ಅವಮಾನಗಳಿಂದ ತತ್ತರಿಸಿ ಹೊದಳು. ಕಡೆಗೂ ಅಮ್ಮ ಹೇಳಿದಂತೆಯೇ ಆಯಿತು. ಏನೋ ಒಂದು ಕಾರಣ.ಯ ನನ್ನಿಂದ ದೂರಹೊರಟು ಹೋದ. ಅಮ್ಮ ಹಂಗಿಸಿ ಅನ್ನೂನಂತೆ ಆಯಿತು. ಅವನು ಹೀಗೆ ಮಾಡಬಹುದೇ?

ಇದರ ಜೊತೆಗೆ ಸತ್ಯ ಇನ್ನೂ ಒಂದು ಸುದ್ದಿ ಹೇಳಿದ್ದ.

ಅವನು ಸ್ಕೂಟರ್ನ ಮಾರಿ ಬಿಟ್ಟನಂತೆ. ಅದನ್ನೂ ಕೊಂಡು ಕೊಂಡವನು ಸಿಕ್ಕಿದ್ದ. ಆದರೆ ತಮಗೆ ಕೊಡಬೇಕಾದ ಹಣದ ಬಗ್ಗೆ ತಿಳಿಸಲಿಲ್ಲ.

ಈಗ ನಿರ್ಮಲೆಗೆ ಖಂಡಿತವಾಯಿತು. ಇದನ್ನೆಲ್ಲಾ ಇಲ್ಲಿಂದ ಹೊರಡುವ ಮೊದಲಯೆ ಯೋಚಿಸಿದ್ದಾನೆ. ನನಗೆ ಸುಳಿವೇ ಕೊಟ್ಟಿಲ್ಲ. ಅಮ್ಮ ಹೇಳಿದ್ದು ನಿಜ. ನನ್ನಿಂದ ಹಣ ಸಿಗುವುದಿಲ್ಲವೆಂದು ಹೀಗೆ ಮಾಡಿದ್ದಾನೆ. ಹಾಗಾದರೆ ನನ್ನ ಸಂಪಾದನೆಯ ಆಸೆಯಿಂದ ನನ್ನನ್ನು ಮದುವೆಯಾಗಿದ್ದನೆ? ಇರಬಹುದು. ಇಲ್ಲದಿದ್ದರೆ, ನಾನು ಕುಂಟಿ ಎಂದು ತಿಳಿದೂ ನನ್ನನ್ನು ಮದುವೆಯಾಗುವ ಆಸೆ ಅವನಿಗೇಕೆ ಹುಟ್ಟುತ್ತಿತ್ತು?

ಸ್ಕೂಟರನ್ನು ಮಾರುವಂಥಾದ್ದೇನಾಗಿತ್ತು.? ಅಷ್ಟು ನಿರ್ಗತಿಕನಾಗಿದ್ದಾನೆ? ಅವನ ಸ್ನೇಹಿತೆಯರಿಗೆಲ್ಲಾ ನನ್ನ ಬಗ್ಗೆ ಏನನ್ನಿಸಬಹುದು. ಅವಳು ಮಾನಸಿಕವಾಗಿ ಕುಗ್ಗಿ ಹೋದಳು.ಆದರೂ ಅವನಿಗಾಗಿ ಕಾದಳು. ಹುಟ್ಟಲಿರುವ ಮಗುವಿನ ಆಕರ್ಷಣೆ ಅವನನ್ನು ಸೆಳೆಯ ಬಹುದು ಎಂದು ಭಾನಿಸಿದ್ದಳು. ತಿಂಗಳುಗಳು ಕಳೆದು ಹೋದವಿ. ಅವನು ಬರಲಿಲ್ಲ. ಅವನನನಲು ಹುಡುಕಿಸುವ ಪ್ರೇಮಿತ್ತ್ವವನ್ನು ಮಾಡಲಿಲ. ಅವನಾಗಿಯೇ ಮನೆ ಬಿಟ್ಟು ಹೋಗಿದಾನೆ. ಬರುವ ಆಸೆ ಇದ್ದಿದ್ದರೆ ಬಂದೇ ಬರುತ್ತಿದ್ದ...... ಎಂದುಕೊಂಡಳು.

ನಂತರ ಸತ್ಯನೂ ಅವನ ಬಗ್ಗೆ ಯಾವ ವರ್ತಮಾನವನ್ನು ತಿಳಿಸಲಿಲ್ಲ. ಇವಳೂ ಅವನನ್ನು ಏನೂ ಕೇಳಿಲಿಲ್ಲ. ಅಲ್ಲಿಗೆ ಎಲ್ಲಾ ಮುಗಿದ ಕತೆ. ಒಂದು ತಿಂಗಳ ತನಕ ಅವಳು ಎರಡು ಹೊತ್ತೂ, ಹೋಟೆಲ್ಲಿನಿಂದ ಊಟವನ್ನು ತರಿಸಿಕೊಂಡಳು. ಕೌಂಪೌಂಡರ್ ಇವಳಿಗೆ ಸಹಾಯಕ ಳಾಗಿದ್ದಳು. ಆ ಮನೆಯಲ್ಲಿ ಒಬ್ಬಳೇ ಇರುವುದು ಸರಿಯಲ್ಲ ಅಂತನ್ನಿಸತೊಡಗಿತ್ತು. ಅಕ್ಕಪಕ್ಕದವರು ಬಂದು ಏನನ್ನಾದರೂ ವಿಚಾರಿಸುವುದೂ ಅವಳಿಗೆ ಬೇಕಿರಲಿಲ್ಲ. ಅವರ ಕೂತೂಹಲದ ಕಣ್ಣುಗಳನ್ನೂ ತಪ್ಪಿಸಲೆಂದು ಆದಷ್ಟೂ ಸಮಯ ಕ್ಲಿನಿಕ್‌ನಲ್ಲಿಯೇ ಕಳೆಯುತ್ತಿದ್ದಳು. ಆದರೆ ತಂದೆಯ ಮನೆಗೆ ಹೋಗುವುದು ಇಷ್ಟವಾಗಲಿಲ್ಲ.

ಮಗು ಹುಟ್ಟಲಿರುವ ವಿಷಯ ಇನ್ಯಾರಿಗೂ ತಿಳಿದಂತಿರಲಿಲ್ಲ. ಈ ಸ್ಥಿತಿಯೊಂದು ತನಗಿರದೇ ಇದ್ದಿದ್ದರೇ....ಎಂದು ಎಷ್ಟೋ ಸಲ ಅನ್ನಿಸಿದ್ದೂ ಉಂಟು. ರಂಗನಾಥ ಅವಳ ಖರ್ಚಿಗೆಂದು ಸ್ವಲ್ಪ ಹಣವನ್ನೂ ಇಟ್ಟು ಹೋಗಿದ್ದ. ಆ ಹಣವೂ ಕರಗಿತ್ತು. ಏನು ಮಾಡಬೇಕೆಂದು ತೋಚದೇ, ಯೋಚಿಸಿ ಯೋಚಿಸಿ ಒಂದು ನಿರ್ಧಾರಕ್ಕೆ ಬಂದುಳು ಒಂದು ದಿನ , ತನ್ನ ಸ್ವಾಭಿಮಾನವನ್ನೂ ಬದಿಗೊತ್ತಿ, ತನ್ನ ತಂದೆಯೊಡನೆ,ತಾಯಿಗೆ ತಿಳಿಯದಂತೆ ತನಗೊದಗಿದ ಸ್ಥಿತಿಯನ್ನು ತಿಳಿಸಿದಳು.

ನನ್ನ ದುರಾದೃಷ್ಟ ಹೀಗಾಗಬಹುದು ಅಂತ ನಾನು ಭಾನಿಸಿಯೇ ಇರಲಿಲ್ಲ. ನನ್ನದೂ ಸಾಕಷ್ಟು ತಪ್ಪಿದೆ. ಅವರ ಕಷ್ಟ ತಿಲಿದಿದ್ದೂ, ಅವರ ಕಷ್ಟದಲ್ಲಿ ನಾನು ಹಣದ ಸಹಾಯ ಮಾಡಲಿಲ್ಲ. ಆದರೆ ನನ್ನ ಬಳಿ ಹಣವೂ ಇರಲಿಲ್ಲ. ಎಲ್ಲಾ ನಿಮಗೆ ಕೊಟ್ಟು ಬಿಟ್ಟಿದ್ದೆ. ಆದರೆ ಈ ಒಪ್ಪಂದವನ್ನು ಅವರಿಗೆ ತಿಳಿಸಲೂ ಇಲ್ಲ. ನನ್ನ ಬಗ್ಗೆ ಅಸಮಾಧಾನ ಮಾಡಲು ಈಹಣವೇ ಕಾರಣ. ನಾನೀಗ ಏನು ಮಾಡಲಿ?ನಾನು ಈಗ ಒಬ್ಬಳೇ ಇಲ್ಲ. ನನಗೆ ಹುಟ್ಟಲಿರುವ ಮಗುವಿನ ಜವಾಬ್ದಾರಿಯೂ ನನ್ನ ಮೇಲಿದೆ. ಆದರೆ ನಾನು ಯಾವುದೇ ಕಾರಣಕ್ಕೂ ನಿಮ್ಮ ಮನೆಗೆ ಮತ್ತೆ ಬಂದು ನನ್ನ ತನವನ್ನು ಕೀಳು ಮಾಡಿಕೊಳ್ಳುವುದಿಲ್ಲ. ಅಮ್ಮನಿಗೆ ಇದೆಲ್ಲಾ ತಿಲಿಯುವುದು ನನಗಿಷ್ಟವಿಲ್ಲ. ಅವಳು ನನ್ನನ್ನೂ ಹೀಯಾಳಿಸುವುದೂ ಬೇಡ. ನನ್ನ ಪಾಡಿಗೆ ನಾನು ಇರುತ್ತೀನಿ. ಆದರೆ ನನಗೆ ಈಗ ಹಣದ ಅವಶ್ಯಕತೆ ಇದೆ. ನಾನು ಏನು ಮಾಡಲಿ ನೀವೇ ಏನಾದರೂ ಉಪಾಯ ತಿಳಿಸಿ.

ತಂದೆ ಗೊಂದಲದಲ್ಲಿ ಸಿಕ್ಕಿ ಬಿದ್ದಿದು. ಅವರಿಗೂ ಏನೂ ತೋಚದಂತಾಗಿತ್ತೂ. ಆದರೂ ಹೇಳಿದ್ದರು. ನಿರ್ಮಲಾ ಎಲ್ಲಾ ತಪ್ಪು ನಿನ್ನದೇ. ವಿಷಯ ಹೀಗಿದೆ ಅಂತ ನನಗೆ ಈ ಮೊದಲೇ ತಿಳಿಸಬಾರದಾಗಿತ್ತಾ?ನಾನು ನಿನಗೆ ಸಹಾಯ ಮಾಡ್ತಿದ್ದೆ. ಆಕೆ ಆಸ್ಪತ್ರೆಗೆ ಸೇರಿದ್ದಾಗಲೀ, ಸತ್ತಿದ್ದಾಗಲೀ, ನಮಗೆ ತಿಲಿಯದು. ನೀನು ತಪ್ಪು ಮಾಡಿದೆ. ಏನೋ ಹಠದಿಂದ ಅವನನ್ನೂ ಮದುವೆಯಾದೆ. ಮದುವೆ ಆದಮೇಲ ಗಂಡನ ಸುಖ,ದುಃಖ ನಿನ್ನದು. ಬೈಪ್ ಲಾಂಗ್ ನಿಮ್ಮ ಅಮ್ಮನಿಗೆ ದುಡ್ಡು ಕೊಡ್ತೀನಿ ಅಂತ ನೀನೇನೂ ಬರೆದುಕೊಟ್ಟಿರಲಿಲ್ಲ. ಅವಳಿಗೆ ತಿಳಿದಿದ್ದರೆ, ಇನ್ನೊಂದು ಹಗರಮವಾಗುತ್ತಿದ್ದುದೇನೋ ನಿಜ. ಆದರೆ ನಿನ್ನ ಸಂಸಾರ ಹೀಗಾಗುತ್ತಿರಲಿಲ್ಲ. ಪಶ್ಚಾತ್ತಾಪದ ಧ್ವನಿಯಲ್ಲಿ ಹೇಳಿದ್ದರು. ಮತ್ತೆ ನುಡಿದಿದ್ದರು.

ದುಃಖದಿಂದ, ಸಿಟ್ಟಿನಿಂದ, ಅಸಹಾಯಕತೆಯಿಂದ, ಆ ಅನಾಥ ಮಗುವಿನೊಂದಿಗೆ, ಹುಚ್ಚನಂತೆ ಅಲ್ಲಿ ಇಲ್ಲಿ ತಿರುಗುತ್ತಿರಬಹುದು. ನಿನ್ನ ಗಂಡ. ಎಂದಾದರೂ, ಮತ್ತೆ ತಿರುಗಿ ಬಹಬಹುದು. ಆದರೆ ಆಗ ಮೂರ್ಖಳಾಗಬೇಡ. ಆಗ ಯಾವುದೇ ಕಾರಣಕ್ಕೂ ಅವನನ್ನು ತಿರಸ್ಕರಿಸಬೇಡ. ನಿನ್ನ ತಪ್ಪನ್ನು ಒಪ್ಪಿಕೊಂಡು, ತಿದ್ದಿಕೊಂಡು ನೆಮ್ಮದಿಯಿಂದಿರು.

ತಂದೆಯ ಈ ಉಪದೇಶ ಅವಳಿಗೆ ಸರಿ ಎನಿಸಲಿಲ್ಲ.

ನನಗೀಗ ದುಡ್ಡಿನದೇ ಚಿಂತೆ. ನನ್ನ ಬಳಿ ಹಣವೇ ಇಲ್ಲದಿದ್ದರೆ ನಾನು ಬದುಕುವುದಾದರೂ ಹೇಗೆ? ನಾನು ಸಂಪಾದಿಸುವ ಹಣ ನನ್ನದೂ ಅಂತ ನಾನು ಇಟ್ಟುಕೊಳ್ಳುವ ಹಾಗಿಲ್ಲ. ಅಮ್ಮನಿಗೆ ಎಲ್ಲಾ ಹಣವನ್ನು ಕೊಟ್ಟು ಬಿಟ್ಟರೆ ನನಗೇನೂ ಉಳಿಯುವುದಿಲ್ಲ. ನಾನು ಏನು ಮಾಡಲಿ! ಈ ಕ್ಲಿನಿಕ್‌ನ ಮುಚ್ಚಿ ಯಾವುದಾದರೂ ಬೇರೆ ಊರಿಗೆ ಹೊರಟು ಹೋಗ್ತೀವಿ.

ಹಾಗೆಲ್ಲಾ ಏನೂ ಮಾಡುವ ಅವಶ್ಯಕತೆ ಇಲ್ಲ. ಮುಂಚಿನಂತೆ ನಮ್ಮ ಜೊತೇನೇ ಇದ್ದು ಬಿಡು.

ಅದು ಮಾತ್ರ ಈ ಜನ್ಮದಲ್ಲಿ ಸಾಧ್ಯವಿಲ್ಲ. ನಿಮ್ಮ ಮಗಳಾಗಿ ಹುಟ್ಟಿದ್ದಕ್ಕೆ ನನಗೆ ಸಹಾಯ ಮಾಡ್ತೀರೋ ಇಲ್ಲವೋ ಅಷ್ಟು ಹೇಳಿ

ಛೆ...ಎಂಥಾ ಮಾತನಾಡ್ತೀಯ?ನಿನಗೆ ಸಹಾಯ ಕಮಾಡದೇ ಇರುವುದು ,ಸರೀನಾ?ಖಂಡಿತಾ ಸಹಾಯ ಮಾಡ್ತಿವಿ. ಅದೇ ನನ್ನ ಧರ್ಮ ಒಂದು ಕೆಲಸ ಮಾಡು. ನೀನು ಸಂಪಾದಿಸಿದ್ದಲ್ಲಿ ಅರ್ಧಭಾಗ ಮಾತ್ರ ಕೊಡು. ಅವಳೇನಾದರೂ ಕೇಳಿದರೆ, ನಿನ್ನ ಪರಿಸ್ಥಿತಿ ಹೇಳಿ, ನಾನು ಹೆಚ್ಚಿಗೆ ಪೇಶೆಂಟ್ಸನ್ನೂ ಅಟೆಂಡ್ ಮಾಡುತ್ತಿಲ್ಲ ಅಂತ ನಾನು ಹೇಳ್ತಿವಿ.

ಅವಳಿಗೆ ಈ ಮಾತಿನಿಂದ ತೃಪ್ತಿ ಆಗಿರಲಿಲ್ಲ. ತಂದೆಯ ಸಂಧಾನ ಸರಿ ಎನಿಸಿರಲಿಲ್ಲ. ಆದರೆ ತಂದೆ ಅಸಹಾಯಕರು, ಅಮ್ಮನ ಕೈಗೊಂಬೆ ಎನ್ನುವುದು ಅವಳಿಗೆ ತಿಳಿಯದ ವಿಷಯವೇನಲ್ಲ. ತಂದೆಯ ಈ ಹುಲ್ಲುಕಡ್ಡಿಯ ಸಹಾಯ ತನಗಾಗಿ ಅಲ್ಲವಾದರೂ, ಹುಟ್ಟಲಿರುವ ಮಗುವಿಗಾಗಿ ಬೇಕೇ ಬೇಕು ಅಂತನ್ನಿಸಿದ್ದರಿಂದ ಸುಮ್ಮಾನಾದಳು.

ನನಗೆ ಆ ಮನೇಲಿ ಇರುಕ್ಕೆ ಇಷ್ಟವಿಲ್ಲ. ಬೇರೆ ಮನೆ ಹುಡುಕಿ ಕೊಡ್ತೀರಾ?

"ಆ ಮನೆ ಅವರ ಸ್ವಂತದ್ದೋ........ಬಾಡಿಗೆಯದೋ......."

"ಬಾಡಿಗೆಯದು ಅಂತ ಕಾಣುತ್ತೆ. ಅವರ ಸ್ನೇಹಿತ ಸತ್ಯನಿಗೆ ಎಲ್ಲಾ ತಿಳಿದಿರುತ್ತೆ. ಅವರನ್ನೇ ಕೇಳಬೇಕು........ ಸತ್ಯನಿಗೂ ಏನೂ ಹೇಳದೇ ಹೋಗಿದಾರೆ."

"ಆತನಿಗೆ ಹೇಳಿ ಎಲ್ಲಾ ಸೆಟ್ಲ್‌ಮಾಡು. ಬೇರೆ ಮನೆ ಸಿಕ್ಕಿದಮೇಲೆ ನಿನ್ನ ಅಮ್ಮನಿಗೆ ನಾನು ಏನೋ ಒಂದು ಹೇಳ್ತಿವಿ.

ಇಷ್ಟು ಮಾತನಾಡಿದರೂ, ಇಬ್ಬರಿಗೂ ವ್ಯಥೆಯಾಗಿತ್ತು. ನಿರ್ಮಲೆಗೆ ಇದು ಅತ್ಯಂತ ಹೀನಾಯದ ಸಂಗತಿ. ತಂದೆಗೆ ಮಗಳು ದುಡುಕಿದಳು ಅನ್ನೋ ಚಿಂತೆ. ಅವಳು ಮತ್ತೊಮ್ಮೆ ಕೇಳಿಕೊಂಡಳು. ಅಮ್ಮನಿಗೆ ಯಾವುದನ್ನು ತಿಳಿಸಬೇಡಿ ಪ್ಲೀಸ್. ನನಗೆ ಇಷ್ಟು ಉಪಕಾರ ಮಾಡಿ.

ಮಗಳು ತಮ್ಮ ಮನೆಯಲ್ಲಿ ಬಂದಿದಲು ಒಪ್ಪದೇ ಇದ್ದುದರಿಂದಲೂ, ದಿನ ನಿತ್ಯ ನಡೆಯಬಹುದಾದ ಹಗರಣ ತಪ್ಪಿತೆಂದು ಅನ್ನಿಸಿದದ್ದರಿಂದಲೂ. ಅತಿ ಶೀಘ್ರದಲ್ಲಿ ಅವಳಿಗೊಂದು ಮನೆ ಹುಡುಕಿ ಕೊಟ್ಟರು. ಒಂದು ರೂಮಿನ ಮನೆ, ಪಕ್ಕಕೆ ಅಂಟಿಕೊಂಕಡಿದ್ದ ಇನ್ನೊಂದು ಮನೆಯಲ್ಲಿ ಒಂದು ಸಂಸಾರವಾಗಿದ್ದಿತು. ಅಕ್ಕ ಪಕ್ಕದಲ್ಲಿ ಮನೆಗಳದ್ದು ಮಗಳಿಗೆ, ಸಮಯ ಎಂದರೆ ತೊಂದರೆಯಾಗಲಾರದು ಎನ್ನುವ ಭಾವನೆ ಅವರದು.

ನಿರ್ಮಲ ಸತ್ಯನಿಗೆ ತಾನು ಬೇರೆ ಮನೆಗೆ ಷಿಪ್ಟ್ ಮಾಡುತ್ತಿರುವ ವಿಷಯ ತಿಳಿಸಿ. ಮನೆ ಚಿಕ್ಕದು. ಆದ್ದರಿಂದ ದಯವಿಟ್ಟು ನಿಮ್ಮ ಸ್ನೇಹಿತರ, ಕೆಲವು ಸಾಮಾನುಗಳನ್ನೂ ನಿಮ್ಮ ಮನೆಯಲ್ಲಿಡಲು ಜಾಗ ಕೊಡಬೇಕೆಂದು ಕೇಳಿಕೊಂಡಳು. ಸತ್ಯ ಒಪ್ಪಿದ. ತನ್ನಿ ಕೈಲಾದ ಸಹಾಯವನ್ನು ಮಾಡಿದ್ದ.

ತನಗೆ ಬೇಡವಾದ, ಹಳೆಯ ಸಾಮಾನುಗಳನ್ನು ಸತ್ಯನ ಮನೆಯಲ್ಲಿರಿಸಿದಳು. ಸ್ವಾಭಿಮಾನವನ್ನು ಬಿಟ್ಟು. ತನಗೆ ಅಗತ್ಯವೆನಿಸಿದ ಕೆಲವು ಸಾಮಾನುಗಳನ್ನು ತನ್ನ ಮನೆಗೆ ತೆಗಿಸಿಕೊಂಡು ಹೋದಳು. ಆಗ, ಇನ್ನು, ಒಂದಲ್ಲ ಒಂದು ದಿನ ರಂಗನಾಥ, ತನ್ನ ಹೆರಿಗೆಗೆ ಮೊದಲು ಬಂದರೂ ಬಹಬಹುದು ಎಂಬ ಆಸೆ ಅವಳಲ್ಲಿತ್ತು.

ಇ ಹೊಸ ಮನೆಯಲ್ಲಿ ದಿನಚರಿ ಪ್ರಾರಂಭವಾಯಿತು. ಮೊದಲಿಗೆಒಬ್ಬಳು

ಅಡಿಗೆಯವಳನ್ನು ಕೆಲಸದವಳನ್ನು ಗೊತ್ತು ಮಾಡಿಕೊಂಡಳು. ತನಗೆ ಮನೆಕೆಲಸಕ್ಕೆ ಕಲವರಿಬ್ಬರೂ ಅತ್ಯಗತ್ಯವೆಂದು ಅವಳಿಗೆ ತಿಳಿದಿತ್ತು. ಯಥಾ ಪ್ರಕಾರ, ಕ್ಲಿನಿಕ್‌ಗೆ ಹೋಗಿ ಬರುತ್ತಿದ್ದಳು. ದಿನದ ಸಂಪಾದನೆಯಲ್ಲಿ ಅರ್ಧದಷ್ಟನ್ನು ತೆಗೆದಿಟ್ಟುಕೊಂಡು ಉಳಿದುದನ್ನು ತಂದೆಯ ಕೈಗೆ ಕೊಡುತ್ತಿದ್ದಳು. ತಂದೆ. ತಾಯಿಗೆ ಏನು ಕಾರಣ ಹೇಳಿದ್ದರೋ, ಇವಳೂ ಕೇಳಲಿಲ್ಲ. ಅವರೂ ಹೇಳಲಿಲ್ಲ.

ತನ್ನ ಆರೋಗ್ಯದಕಡೆ ತಾನೇ ನಿಗಾವಹಿಸಿ, ಉಪಚರಿಸಿಕೊಳ್ಳುತ್ತಿದ್ದಳು. ಹೆರಿಗೆ ದಿನಗಳು ಸಮೀಪಿಸಿತ್ತು. ಪಕ್ಕದ ಮನೆಯವರು, ಅವಳಿಗೆ ತುಂಬಾ ಸಹಾಯ ಮಾಡಿದರೂ. ಪರಿಚಯದ ಒಂದು ನರ್ಸಿಂಗ್ ಹೋಂನಲ್ಲಿ ಒಂದು ದಿನ ನಿರ್ಮಲ ಹೆಣ್ಣು ಮಗುವನ್ನು ಹೆತ್ತಳು. ಯಾವ ತೊಂದರೆಯೂ ಇಲ್ಲದೇ ತಾನು ಸುಖವಾಗಿ ತಾಯಿಯಾದುದನ್ನು ಕಂಡು ಅವಳಿಗೆ ನೆಮ್ಮದಿ ಉಂಟಾಗಿತ್ತು. ಆದರೂ, ಮಗು ಹುಟ್ಟುವ ಮೊದಲೇ ಅಪ್ಪನೆನಿಸಿಕೊಂಡವನು ದೂರ ಹೊರಟು ಹೋಗಿದಾನಲ್ಲ ಎನ್ನುವ ಕೊರಗೂ ಇತ್ತು.

ಇನ್ನು ಈ ಮಗುವಿಗೆ ತಂದೆ ತಾಯಿ ಎಲ್ಲಾ ನಾನೇ...ನನ್ನ ಜವಾಬ್ದಾರಿ ಮತ್ತು ಹೆಚ್ಚಿತು ಅಂತೆನ್ನಿಸಿದಾಗ, ರಂಗನಾಥನ ಮೇಲಿನ ಅಸಮಾಧಾನ ಅಧಿಕವಾಗಿತ್ತು.

ನಿರ್ಮಲಿಯ ತಂದೆ ಮಾತ್ರ, ಮಗುವನ್ನು ನೋಡಲು ಬಂದಿದ್ದರು. .ತಾಯಿ ಬರಲಿಲ್ಲ. ನಮ್ಮ ಇಷ್ಟಕ್ಕೆ ವಿರೋಧವಾಗಿ ಮದುವೆಯಾಗಿ ಹೋದವಳು ಅವಳ ಮಗುವನ್ನೇನು ನೋಡುವುದು. ಎನ್ನುವ ತಾತ್ಸಾರದಿಂದ, ಹೋಗಲಿಲ್ಲ. ಅಲ್ಲದೇ ಇನ್ನೇರಡು ತಿಂಗಳುಗಳ ಕಾಲ ಅವಳು ಕ್ಲಿನಿಕ್‌ಗೆ ಬರುವಂತಿಲ್ಲ. ಇದರಿಂದ ತನಗೆ ನಷ್ಟ ಎನ್ನು ವ ಅಸಮಾಧಾನ.

ನಿರ್ಮಲ ಪಕ್ಕದ ಮನೆಯಾಕೆಯ ಸಹಾಯದಿಂದ ತನಗೆ ತಿಳಿದಂತೆ ಬಾಣಂತನ ಮಾಡಿಸಿಕೊಂಡಳು. ಔಷಧೋಪಚಾರಗಳನ್ನು ನೋಡಿಕೊಂಡಳು. ಮಗುವನ್ನು ಮುದ್ದಿನಿಂದ ಪೋಷಿಸಿದಳು. ತಂದೆಯನ್ನು ಬಿಟ್ಟರೆ ಬೇರೆ ಗತಿಯಿರಲಿಲ್ಲ. ತಂದೆಯೇ ಆಗಾಗ್ಗೆ ಹಣವನ್ನು ತಂದು ಕೊಡುತ್ತಿದ್ದರು. ಕೆಲಸದವಳ, ಅಡಿಗೆಯವಳ ಸಹಕಾರದಿಂದ ಮಗು ಬೆಳೆಯಿತು. ಬರ್ತ್ ಸರ್ಟಿಫಿಕೇಟ್ ಮಾಡಿಸುವಾಗ ತೋಚಿದ ಹೆಸರು. ರಾಧಿಕಾ ಅದೇ ನಾಮಕರಣ.

ರಾಧಿಕಾ ಐದು ತಿಂಗಳ ಮಗುವಾಗಿದ್ದಾಗ, ನಿರ್ಮಲಳ ತಂದೆ ಇಪ್ಪತ್ತೈದು ಸಾವಿರ ರೂಗಳ ಚೆಕ್ಕೊಂದನ್ನು ಕನಿರ್ಮಲೆಯ ಕೈಗಿತ್ತರು. ಇದು ನಿನ್ನ ತಾಯಿಗೆ ಅವಳ ತವರು ಮನೆಯಿಂದ ಬಂದ ಹಣ. ಇದು ನಿನಗೆ ಸೇರಬೇಕು ತಂದೆಯನ್ನೇ ಸಂದೇಹದಿಂದ ನೋಡಿದಳು.

ನಿರಾಕರಿಸಲು ಮನಸ್ಸು ಒಪ್ಪದಿದ್ದರೂ ಅಮ್ಮನ ನೆನಪೇ ನನಗಿಲ್ಲ. ಅವಳ ಹಣ ನನಗೇಕೆ?" ಎಂದಳು. ನಿನಗೆ ಬೇಕಾಗದೇ ಇರಬಹುದು ಆದರೆ ನಿನ್ನ ಮಗಳ ಪೋಷಣೆಗೆ ಹಣದ ಅಗತ್ಯವಿದೆ.ಎಂದಾಗ ನಿರ್ಮಲ ಮತ್ತೆ ಮಾತಾಡಲಿಲ್ಲ. ಹಣವನ್ನು ರಾಧಿಕಾಳ ಹೆಸರಿನಲ್ಲಿ ಬ್ಯಾಂಕಿನಲ್ಲಿ ಜಮಾ ಮಾಡಿದಳು.

ಮತ್ತೆ ಕ್ಲಿನಿಕ್‌ಗೆ ಹೋಗಲು ಪ್ರಾರಂಭಿಸಿದ ಮೇಲೆ, ಹೆಚ್ಚು ಹೆಚ್ಚು ಪೇಶೆಂಟ್ಸ್ ಗಳನ್ನು ನೋಡ ತೊಡಗಿದಳು. ತೆಗೆದುಕೊಳ್ಳುವ ಫೀಸ್‌ನ ದರವನ್ನು ಹೆಚ್ಚಿಸಿದ್ದಳು.

ಒಮ್ಮೊಮ್ಮೆ ಅನ್ನಿಸುತ್ತಿತ್ತು. ಇದೇ ಕೆಲಸವನ್ನು ಮದುವೆಯಾದಾಗಲೇ ಮಾಡಿದ್ದರೆ. ನಮ್ಮಿಬ್ಬರಲ್ಲಿ ಭಿನ್ನಾಭಿಪ್ರಾಯ ಮಾಡುತ್ತಿರಲಿಲ್ಲವೇನೋ, ರಂಗನಾಥ ಹೀಗೆ ದೂರ ಹೋಗುತ್ತಿರಲಿಲ್ಲವೇನೋ ಅಂತನ್ನಿಸುತ್ತಿತ್ತು . ಆದರೆ ಆಗ ಅನ್ನಿಸಿದ್ದೇ ಬೇರೆ.

ನನ್ನ ಅಗತ್ಯಗಳನ್ನು ನನ್ನ ಗಂಡವಾದವನು ಪೂರೈಸಬೇಕು ಅದು ಅವನ ಧರ್ಮ ಅಂತ. ಅವನ ಅನಾನುಕೂಲತೆ, ಅಸಹಾಯಕತೆಗಳು ಏನಿರಬಹುದು ಅಂತ ಯೋಚಿಸಿರಲೇ ಇಲ್ಲ. ಆದರೂ ಅವನು ಮಾಡಿದ್ದು ಸರಿಯಲ್ಲ ಎಂದೇ ಅನ್ನಿಸುತ್ತಿತ್ತು. ಜಗಳ ವಾಡಿದ್ದರೂ ಸರಿ, ಕಾಡಿ ಬೇಡಿದ್ದರೂ ಪರವಾಗಿರಲಿಲ್ಲ, ಈ ದುರ್ಬುದ್ಧಿ ಅವನಿಗೆ ಬರಬಾರದಾಗಿತ್ತು ಎನಿಸುತ್ತಿತ್ತು. ಇಷ್ಟಕ್ಕೆಲ್ಲಾ ಮನೋಜನೇ ಕಾರಣ ಅಂತ ಅನ್ನಿಸಿದಾಗ, ಅವನ ಮೇಲೆ ಅಸೂಯೆಯುಂಟಾಗುತ್ತಿತ್ತು. ಅಸಹನೆ ಹೆಚ್ಚು ತ್ತಿತ್ತು. ಸ್ವಂತ ಮಗುವಿಗೆ ಇಲ್ಲದ ಅಪ್ಪನ ಪ್ರೇಮ ಆ ಅನಾಥನಿಗೆ ದೊರಕುತ್ತಿದೆ ಎಂದು ಕೊಂಡಾಗ ಹೊಟ್ಟೆಯ ಉರಿ ಹೆಚ್ಚಾಗುತ್ತಿತ್ತು...ಒಂದಲ್ಲ ಒಂದು ದಿನ ಅವನು ಬದುಕಿದ್ದರೆ, ನನ್ನ ಮನೆ ಬಾಗಿಲಿಗೆ ಬಂದೇ ಬರುತ್ತಾನೆ. ಆಗ ಚೆನ್ನಾಗಿ ಹೀಯಾಳಿಸಿ, ಅವಮಾನ ಮಾಡಲೇಬೇಕೆಂದು ನಿರ್ಧರಿಸಿದ್ದಳು. ಮನಸ್ಸು ಅಷ್ಟು ಕೆಟ್ಟು ಹೋಗಿತ್ತು.

ರಾಧಿಕಾ ಅಡಿಗೆಯವರ, ಕೆಲಸದವಳ ಕೈ ಗೂಸಾಗಿ ಬೆಳೆದಳು. ಮಗುವಿಗೆ ಯಾವುದಕ್ಕೂ ಕಮ್ಮಿ ಇರಲಿಲ್ಲ. ಕೊರತೆ ಇರಲಿಲ್ಲ ತನಗೆ ಬೇಕೆನಿಸಿದ್ದೆನ್ನೆಲ್ಲಾ ತಂದು ಕೊಟ್ಟಿದ್ದಳು. ಹತ್ತಿರದ ಸ್ಕೂಲಿಗೆ ಸೇರಿಸಿದ್ದಳು.

ರಾಧಿಕಾ ಮೂರು ವರ್ಷದ ಮಗುವಾಗಿದ್ದಾಗ, ನಿರ್ಮಲಳ ತಂದೆ ತೀರಿಕೊಂಡರು. ತಾಯಿ, ಮನೆಯನ್ನು ಮಾರಿ, ತನ್ನ ತವರು ಮನೆಗೆ ಹೊರಟು ಹೋದಳು. ತನ್ನ ತಾಯಿಯದೇ ಆದ ಕೆಲವು ವಸ್ತುಗಳನ್ನು ಮಾತ್ರ ನಿಮಗಲ ಕೇಳಿ ಪಡೆದಳು. ತಂದೆ ವಿಲ್ ಬರೆಸಿದ್ದರು. ಅದರ ಪ್ರಕಾರ, ಅವಿರ ಅಕೌಂಟ್‌ನಲ್ಲಿದ್ದ ಹಣವನನಲು ಮಾತ್ರ ಮೂರು ಜನ ಮಕ್ಕಳು ಹಂಚಿಕೊಂಡರು. ಸಿಕಕ್ಕ ಮೊತ್ತ ಹೆಚ್ಚಿನದಾಗಿರಲಿಲ್ಲ. ನಿರ್ಮಲೆಯ ತಮ್ಮನಾಗಲೀ, ತಂಗಿಯಾಗಿ ಇವಳ ಬಗ್ಗೆ ವಿಶೇಷ ಗಮನ ತೋರಲಿಲ್ಲ. ಅವರವರ ಸಂಸಾರ ತಾಪತ್ರಯ ಅವರಿಗೆ. ಎಲ್ಲಾ ಮುಗಿದ ಮೇಲೆ ತಮ್ಮ ಪಾಡಿಗೆ ತಾವು ಹೊರಟು ಹೋಗಿದ್ದರು. ಮಲತಾಯಿ, ಮನೆಯನ್ನು ಮಾರುತ್ತಿದ್ದಾಳೆಂಬ ವಿಷಯ ತಿಳಿದ ಕೂಡಲೇ ನಿರ್ಮಲ ಬೇರೆ ಕಡೆಗೆ ಕ್ಲಿನಿಕ್‌ನ್ನು ವರ್ಗಾಯಿಸಿಕೊಂಡಳು.

ಆ ಮೇಲಿನ ದಿನಚರಿಯೇ ಬೇರೆ. ಅವಳು ಸಂಪಾದಿಸುವ ಹಣವೆಲ್ಲಾ ಅವಳದೇ. ಯಾರಿಗೂ ಕೊಡಬೇಕಾಗಿರಲಿಲ್ಲ. ಬಸವನಗುಡಿಯಿಂದ, ಜಯನಗರಕ್ಕೆ ಮನ ಬದಲಾಯಿಸಿದಳು. ಮನೆಯ ಮುಂದಿನ ಒಂದು ರೂಮನ್ನು ಕ್ಲಿನಿಕ್‌ನ್ನಾಗಿ ಪರಿವರ್ತಿಸಿಕೊಂಡು, ಪ್ರಾಕ್ಟೀಸ್ ಮುಂದುವರೆಸಿದಳು. ಈಗ ಪೇಶೆಂಟ್ಸ್‌ಗಳ ಜೊತೆ ಕಳೆಯುವುದು ಮಾಮೂಲಿನ ವಿಷಯವಾಯಿತು.

ರಾಧಿಕಾ, ಯಾವುದಕ್ಕೂ ತಾಯಿಯನ್ನು ಏನೂ ಕೇಳುತ್ತಿರಲಿಲ್ಲ. ದಿನದಲ್ಲಿ ಹೆಚ್ಚು ಹೊತ್ತು ಅಮ್ಮ ಕ್ಲಿನಿಕ್‌ನಲ್ಲಿಯೇ ಇರುತ್ತಿದುದರಿಂದಲೋ ಏನೋ ತಾಯಿ ಮಗಳಿಗೆ ಒಟ್ಟಾಗಿ ಇರುವುದಕ್ಕೆ ಸಿಗುತ್ತಿದ್ದ ಸಮಯವೇ ಕಡಿಮೆ.

ಓದುವುದರಲ್ಲಿ ಚುರುಕಾಗಿದ್ದ ರಾಧಿಕಾ, ಆಸಕ್ತಿಯಿಂದ ಸ್ಕೂಲಿಗೆ ಹೋಗಿ ಬರುತ್ತಿದ್ದಳು ಯಾವ ಅಡೆ ತಡೆಗಳಿಲ್ಲದೇ ಪ್ರೈಮರಿ ತರಗತಿಗಳನ್ನು ದಾಟಿ ಹೈಸ್ಕೂಲಿಗೆ

ಕಾಲಿಟ್ಟಳು. ದಿನ ದಿನಕ್ಕೆ ಬೆಳೆದು ದೊಡ್ಡ ವಳಾದ ಮಗಳು ಸುಂದರಿ ಎನ್ನುವುದರಲ್ಲಿ ಯಾವ ಸಂಶಯವೂ ಇರಿಲಿಲ್ಲ. ನನ್ನ ಮಗಳು ರೂಪವತಿ ಎಂಬ ಹೆಮ್ಮೆಯ ಜೊತೆಗೆ, ಇಂಥ ಮಗಳ ಎದುರಿಗೆ ಇದ್ದು ಸಂತಸವನ್ನು ಅನುಭವಿಸುವ ಪುಣ್ಯವಿಲ್ಲದೇ ಎಲ್ಲಿ ಅಲೆದಾಡಿಕೊಂಡು ಕಷ್ಟಪಡುತ್ತಿದಾನೋ ಎಂದು ಒಮ್ಮೊಮ್ಮೆ ರಂಗನಾಥನ ನೆನಪಾಗುತ್ತಿತ್ತು. ತಂಗಿಯ ಮಗನನ್ನೂ ಉದ್ಧಾರ ಮಾಡಲು ಹೋಗಿ, ಸ್ವಂತ ಮಗಳಿಂದ ದೂರವಿರುವವನ ಬಗ್ಗೆ ಮರುಕವೂ ಮೂಡುತ್ತಿತ್ತು. ಆದರೆ ಮರುಗಳಿಗೆಯಲ್ಲೇ ಅವನ ಬಗ್ಗೆ ಹೃದಯ ಕಠಿಣವಾಗುತ್ತಿತ್ತು.

ತಿಳುವಳಿಕೆ ಬಂದಾಗಿನಿಂದ, ರಾಧಿಕಾ ಅಪ್ಪನ ಬಗ್ಗೆ ಕೇಳುತ್ತಿದ್ದುದು ಉಂಟು. ಚಿಕ್ಕವಳಾಗಿದ್ದಾಗ, ಬೇರೆ ಊರಿಗೆ ಹೋಗಿದ್ದಾರೆ. ಯಾವಾಗ ಬರ್ತಾರೋ ಗೊತ್ತಿಲ್ಲ ಎಂದೇ ಹೇಳುತ್ತಿದ್ದಳು. ಎಷ್ಟು ವರ್ಷ ಕಳೆದರೂ ಎಂದೆ ಬರದಿದ್ದಾಗ ಒಂದು ದಿನ ಕೇಳಿದ್ದಳು. ರಾಧಿಕಾ ಈಗ ಬೆಳೆದು ದೊಡ್ಡವಳಾಗಿದ್ದಳು.

ನಿಜವಾದ ವಿಷಯ ಏನೂಂತ ಹೇಳು. ಬದುಕಿದ್ದಾರೋ, ಇಲ್ಲವೋ ಅದನ್ನಾದರೂ ಹೇಳು...ಬದುಕಿದ್ದರೆ, ನಿನ್ನ ಜೊತೆ ಯಾಕಿಲ್ಲ?"

ಈ ಮಾತಿಗೆ ಏನು ಉತ್ತರ ಹೇಳಬೇಕೂಂತ ತಿಳಿಯುತ್ತಿರಲಿಲ್ಲ. ನಿಜ ಏನುಂತ ತಿಳಿಸುವ ಧೈರ್ಯವಿರಲಿಲ್ಲ. ಬೆಳೆದಿರುವ ಮಗಳಿಗೆ ಸುಳ್ಳು ಹೇಳಿ ಬಚಾಯಿಸಿಕೊಳ್ಳುವುದು ಅಸಾಧ್ಯ...ಅಂತನ್ನಿಸಿದಾಗ ತನ್ನ ಮೇಲೆ ಕೋಪ ಬರುತ್ತಿತ್ತು. ಆ ಕೋಪವನ್ನು ಮಗಳ ಮೇಲೆ ಕಾರುತ್ತಿದ್ದಳು.

ಅಪ್ಪನ ಬಗ್ಗೆ ಕೇಳದಿದ್ದರೆ ನಿನಗೆ ಊಟ ಸೇರುಲ್ವಾ? ನಿನ್ನ ಎದುರಿಗೆ ಇಲ್ಲದ ಅಪ್ಪನ ಚಿಂತೆ ನಿನಗ್ಯಾಕೆ? ನಿನ್ನ ಎದುರಿಗೆ ಗೂಟದಂತೆ ನಾನಿದೀನಿ. ನಿನಗೇನು ಬೇಕೋ. ನನ್ನನ್ನು ಕೇಳು. ನಿನ್ನ ಅಪ್ಪನ ವಿಷಯ ಮಾತ್ರ ಕೇಳಬೇಡ.

ಇಂಥಾ ಮಾತಿಗೆ ಮೊದ ಮೊದಲು ರಾಧಿಕಾ ಅಳುತ್ತಿದ್ದಳು. ಆದರೂ ಎಂದಾದರೂ ಮತ್ತೆ ಮತ್ತೇ ಅದೇ ಪ್ರಶ್ನೆ ಬರುತ್ತಿತ್ತು.

ನಗೂ ಅವರು ಬದುಕಿದ್ದಾರೋ ಸತ್ತಿದ್ದರೋ ಗೊತ್ತಿಲ್ಲ. ಬದುಕಿದ್ದರೆ ಇಷ್ಟು ವರ್ಷಗಳಲ್ಲಿ ಒಂದು ಸಲವಾದರೂ ಬರುತ್ತಿರಲಿಲ್ಲವೆ? ಆದರೆ ಅವರು ಸತ್ತು ಹೋಗಿರಬಹುದು ಎನ್ನುವೂದನ್ನು ಈ ಹಾಳು ಮನಸ್ಸು ಒಪ್ಪಿಕೊಳ್ಳುತ್ತಿಲ್ಲವಲ್ಲ ಈ ಅನಿಸಿಕೆಗಳನ್ನು ಬರಿರಂಗವಾಗಿ ಆಡುತ್ತಿರಲಿಲ್ಲ.

ಇದ್ದಕ್ಕಿದ್ದ ಹಾಗೆ ಕಣ್ಮರೆಯಾಗುವುದಕ್ಕೆ ಅವರೇನು ಅಂತಹ ಪ್ರಸಿದ್ಧ ವ್ಯಕ್ತಿನೇ. ಯಾರಾದರೂ ಕಿಡ್ನಾಪ್ ಮಾಡುಕ್ಕೆ ಅವರೇನು ರಾಜಕಾರಮಿಯೇ. ಅಥವಾ ಏನಾದರೂ ಮಾಡಬಾರದ ಕೆಲಸ ಮಾಡಿ ತಲೆ ತಪ್ಪಿಸಿಕೊಂಡಿದ್ದಾರೆಯೇ ಅಥವಾ ಪೋಲಿಸರ ಕೈಯಲ್ಲಿ ಸಿಕ್ಕಿಬಿದ್ದು ಜೈಲಿನಲ್ಲಿ ಕೊಳೆಯುತ್ತಿದ್ದಾರೆಯೇ? ತನ್ನಲ್ಲೇ ಉದ್ಭವವಾಗುತ್ತಿದ್ದ ಈ ಪ್ರಶ್ನೆಗಳಿಂದ ನಿರ್ಮಲೆಯ ತಲೆ ಕೆಟ್ಟು ಹೋಗುತ್ತಿತ್ತು.

ಮಗಳು ಏನೇನು ಊಹಿಸಿದ್ದಾಳೋ...? ಇವಳ ಯಾವ ಪ್ರಶ್ನೆಗೂ ನನ್ನಲ್ಲಿ ಉತ್ತರವಿಲ್ಲ. ಅವನು ಎಲ್ಲಿದಾನೆ? ಯಾಕೆ ಹೋದ ಎನ್ನುವುದು ನನಗೂ ತಿಳಿಯದು. ಆದರೆ ಈ ನಿಜವನ್ನೂ ಅವಳು ನಂಬುತ್ತಾಳೆಯೆ? ಈ ಮಗಳಿಗೆ ಹೇಗೆ ತಿಳಿಸಬೇಕೆಂದು ಗೊತ್ತಾಗುತ್ತಿಲ್ಲ.

ಆಮ್ಮಾ ಇನ್ನೊಂದು ಪ್ರಶ್ನೆ ಕೇಳ್ತೀನಿ. ತಪ್ಪು ತಿಳಕೋ ಬೇಡ. ನಿನಗೆ ಮದುವೆಗೆ ಮುಂಚೇನೇ ಕಾಲು ಹೀಗಿತ್ತಾ?" ಒಂದು ದಿನ ಇದ್ದಕ್ಕಿದ್ದಂತೆ ಕೇಳಿದದಳು.

ನಿರ್ಮಲಳಿಗೆ ಈ ಪ್ರಶ್ನೆಯ ಅರ್ಥ ಸಿಕ್ಕಿತ್ತು. ಹೆಂಡತಿ ಕುಂಟಿ ಅಂತ ಗಂಡ ಬಿಟ್ಟು ಹೋಗಿರಬಹುದೇನೋ ಎಂಬ ಸಂಶಯ. ಈ ಕುಂಟಿಯನ್ನೂ ಮೆಚ್ಚಿ ಮದುವೆಯಾದವನು ನಿನ್ನ ತಂದೆ ಅಂತ ಹೆಳಿ ಕೊಳ್ಳುವಂತಿಲ್ಲ. ಅದೇನು ಅವನ ಉದಾರತೆಯೋ, ಅದೈವಾ ಲಾಭದ ಆಸೆಯಿಂದ ಮದುವೆಯಾದನೋ ಹೇಳು ವಂತಿಲ್ಲ. ಆದರೆ ನನ್ನನ್ನು ಆ ಮೇಲೆ ಬಿಟ್ಟು ಹೋದದ್ದಂತೂ ನಿಜ. ನೇರವಾಗಿ ಮಗಳಿಗೆ ತಿಳಿಸಲು ಹೀನಾಯವೆನಿಸಿತು. ಆದರೂ.

ನನ್ನ ಕಾಲು ಯಾವಾಗ್ನಿಂದ ಹೇಗಿದ್ದರೆ ನಿನಗೇನು? ಆದರಿಂದ ನನಗೇ ಎಂದು ತೊಂದರೆ ಬರಲಿಲ್ಲ. ಇನ್ನು ನಿನಗ್ಯಾವ ತೊಂದರೆ?"

"ಸಾರಿ. ಮಮ್ಮಿ...ರಾಧಿಕಾ ತಲೆ ತಗ್ಗಿಸಿದ್ದಳು,

"ನಂಗೊತ್ತು...ನಿನ್ನ ಮನಸ್ನಲ್ಲಿ ಏನಿದೆ ಅಂತ...ಏನೋ ಇದ್ದಕ್ಕಿದ್ದ ಹಾಗೆ ವೈರಾಗ್ಯ ಬಂದು, ತೀರ್ಥಯಾತ್ರೆ ಮಾಡಿಕೊಂಡು. ಬರ್ತೀನಿ ಅಂತ ಹೋದವರು ಮತ್ತೆ ಬರಲೇ ಇಲ್ಲ....

ಹಾಗಾದರೆ ಆಕ್ಸಿಡೆಂಟ್‌ನಲ್ಲಿ ಏನಾದರೂ ಆಗಿ ಹೋಗಿದ್ದರೆ ನೀನು ಪೋಲಿಸ್ ಹೆಲ್ಪ್ ತಗೊಳ್ಳಲಿಲ್ವಾ?"

ಎಲ್ಲಾ ಆಯಿತು. ಅವರು ಸಿಗಲಿಲ್ಲ.

ಹಾಗಾದರೆ ಅಪ್ಪ ಸನ್ಯಾಸಿಯಾಗಿ ಹೊರಟು ಹೋಗಿರಬೇಕು. ನಿನಗೇನನ್ನಸುತ್ತೆ? ಕಾರಣ ಏನಿರಬಹುದು? ಮಗಳ ಪ್ರಶ್ನೆ ರೇಗಿತ್ತು.

ಸಾಕು ನಿನ್ನ ಅಪ್ಪನ ಪುರಾಣ ಹೆಂಡತಿ ಮಗಳ ಚಿಂತೆ ಇಲ್ಲದೇ, ಹೇಳದೇ ಕೇಳದೇ ತಲೆ ಮರೆಸಿಕೊಂಡು ತಿರುಗುವವರ ವಿಚಾರಾನಾ ಮತ್ತೆ ಮತ್ತೆ ಕೇಳಿ ನನ್ನ ತಲೆ ಕೆಡಿಸಬೇಡ. ನಿನ್ನ ಅಪ್ಪ ಅಮ್ಮ ಎಲ್ಲಾ ಜೋರು ಧ್ವನಿಯಲ್ಲಿ ಹೇಳಿದಳು

ಆಮೇಲೆ ಎಂದೂ ರಾಧಿಕಾ, ಅಪ್ಪನ ಬಗ್ಗೆಕೇಳಲಿಲ್ಲ. ಆದರೆ ಆ ಕೊರಗು ಅವಳಲ್ಲಿದೆ ಎನ್ನುವುದು ಅವಳ ನಡವಳಿಕೆಯಿಂದ ಗೊತ್ತಾಗುತ್ತಿತ್ತು. ತನ ಜೊತೆ ಮಾತನಾಡುತ್ತಿದ್ದುದೇ ಕಮ್ಮಿ. ಆಡಿದಾಗಲಿಲ್ಲಾ, ತನ್ನ ಸ್ನೇಹಿತೆಯರ ಅಪ್ಪನ ಬಗ್ಗೆ ಏನಾದರೂ ಆಡುತ್ತಿದ್ದಳು.

ಪಿ .ಯು. ಸಿಗೆ ಬಂದಾಗ ಅವಳ ಸ್ವಭಾವ ಮತ್ತು ಬದಲಾಯಿತು. ಓದಿನಲ್ಲಿ ಆಸಕ್ತ ಕಡಿಮೆ ಆಗಿತ್ತು ಕಂಡೂ ಕಾಣದಂತೆ ಕಥೆ ಪುಸ್ತಕಗಳನ್ನು ಓದುವ ಹವ್ಯಾಸ ಬೆಳೆಸಿಕೊಂಡಳು. ಸುಮ್ಮನೆ ಎಂಥೆಂಥದೋ ಕತೆ ಪುಸ್ತಕ ಓದಬೇಡ. ತಲೆ ಕೆಟ್ಟು ಹೋಗುತ್ತೆ ಅಂತ ಹೇಳಿದರೆ,

ಈಗ ನನ್ನ ತಲೆ ಕೇನೇನೂ ಸರಿ ಇಲ್ಲ. ಸರಿ ಮಡ್ಕೋಳ್ಳೋಕೆ ಅವರಿವರು ಬರೆದೆ ಒಳ್ಳೆ ಕತೆಗಳನ್ನ ಓದಿ ತಿಳ್ಕೋತಿದೀನಿ ಎನ್ನುತ್ತಿದ್ದಳು ಪುಸ್ತಕಗಳನ್ನು ಅವಳ ಸ್ನೇಹಿತರು ತಂದು ಕೊಡ್ತಾ ಇದ್ದರೇನೋ...

ಪಿ. ಯು., ಸಿಯ ಪರೀಕ್ಷೆಯಲ್ಲಿ ಫಾಸ್ಟ್‌ಕ್ಲಾಸ್‌ನಲ್ಲಿ ಪಾಸಾದಳು ಎಂಟ್ರೆನ್ಸ್ ಎಕ್ಸಾಮ್ ತಗೋ ಅಂತ ಹೇಳಿದಾಗ ಕೂಗಾಡಿದ್ದಳು. ನನಗೆ ಪ್ರೋಫೆಷನಲ್

ಕೋರ್ಸ್‌ಗೆ ಹೋಗುಕ್ಕೆ ಇಷ್ಟವಿಲ್ಲ ಅಂತ.

ನಾನೂ ಕೂಗಾಡಿದ್ದೆ. ಇಷ್ಟು ವರ್ಷವೂ ಸಾಕಿ ಬೆಳೆಸಿದ್ದಕ್ಕೆ ಇಷ್ಟೇನಾ ನನ್ನ ಮಾತಿಗೆ ಬೆಲೆ? ನನ್ನ ಭವಿಷ್ಯದ ನಿರ್ಧಾರ ನನ್ನ ಕೈಲಿದೆ.

ಅದನ್ನು ನಿರ್ಧರಿಸುವ ಹಕ್ಕು ನನಗೂ ಇದೆ. ನಾನೀಗ ಚಿಕ್ಕ ಮಗುವೇನಲ್ಲ. ಕಾಲೇಜಿನಲ್ಲಿ ಓದುತ್ತಿರುವ ಯುವತಿ ಎದೆ ಉಬ್ಬಿಸಿ ನುಡಿದಾಗ ನಿರ್ಮಲಾ ನಕ್ಕಿದ್ದಳು.

ಆದರೆ ಯಾವುದು ತಪ್ಪು ಯಾವುದು ಸರಿ ಅಂತ ನಿನಗಿನ್ನೂ ತಿಳಿಯಲಿಲ್ಲ. ಆ ವಿಚಾರದಲ್ಲಿ ನೀನು ಇನ್ನು ಚಿಕ್ಕವಳು ಸಮಾಜಾಯಿಸಿ ಹೇಳಿದಳು.

ನಾನಲ್ವಾ ಓದೋಳು. ನನಗೇನು ಇಷ್ಟವೋ ಅದನ್ನೇ ಓದ್ತೀನಿ. ಅದಕ್ಕೂ ಫ್ರೀಡಮ್ ಇಲ್ವಾ?" ಹುಬ್ಬು ಗಂಟಿಕ್ಕಿದ್ದಳು.

ಫ್ರೀಡಮ್ಸ್ ಇದೆ. ಹೋಗಲಿ ಹೇಳು, ನಿನಗೇನು ಓದಬೇಕು ಅಂತ ಆಸೆ. ಅರ್ಧ ವಂಗ್ಯದಿಂದ ಕೇಳಿದ್ದಳು.

ನನಗೆ ಸೈನ್ಸ್ ಇಷ್ಟವಿಲ್ಲ. ಲಿಟರೇಚರ್ ಓದ್ತೀನಿ.

ನಿರ್ಮನ ಕಲ್ಲಾದಳು. ಆ ಅಪ್ಪನ ಮಗಳೇ ಸರಿ ಇವಳು ಎಂದುಕೊಂಡಳು.

ಕಷ್ಟಪಟ್ಟು ಓದುಕ್ಕೆ ಇಷ್ಟವಿಲ್ಲದವರು. ಸುಲಭವಾಗಿ ಹೆಚ್ಚಿನ ಖರ್ಚು ಇಲ್ಲದೇ ಓದುವವರು, ಕಲಿಯುವ ಸಬ್ಜೆಕ್ಟ್ ಅದು. ಆದನ್ನ ಏನೂ ಅಂತ ಓದ್ತೀಯಾ? ನೀನು ಜಾಣೆ ಅಲ್ವಾ? ಕಷ್ಟ ಪಟ್ಟು ಕಲಿ ಸುಲಭದಲ್ಲಿ ಡಾಕ್ಟರಾಗ್ತೀಯ

ನೀನೊಬ್ಬಳು ಡಾಕ್ಟರಾಗಿರುವುದು ಸಾಕು. ನನಗೆ ಈ ಕೋರ್ಸು ಬೇಡ. ಈ ಪ್ರೋಪೇಶನ್ನು ಬೇಡ.

ಈಗ ನೀನಿನ್ನೂ ಚಿಕ್ಕವಳು ತಿಳಿವಳಿಕೆ ಸಾಲದು. ಈ ಪ್ರೋಪೇಷನಲ್ಲಿ ಎಷ್ಟು ಬೆನಿಫಿಟ್ಸ್ ಇದೆ ಅಂತ ನಿನಗೇ ಗೊತ್ತಾಗುತ್ತೆ ಆಮೇಲೆ.

ಅನುಭವಿಸ್ತಾ ಇದೀನಲ್ಲ. ಅದರ ಬೆನಿಫಿಟ್ಸ್‌ನ ಗೊಣಗಿದಳು.

ಏನಿದು? ಜೋರಾಗಿ ಹೇಳು. ಗೊಣಗಬೇಡ. ನನ್ನ ಮಾತಿಗೆ ಬೆಲೆ ಕೊಡುವುದಾದರೆ, ಈ ಕೋರ್ಸ್‌ಗೆ ಸೇರ್ತೀಯ. ಇಲ್ಲದಿದ್ದರೆ ನಿನ್ನ ಇಷ್ಟ. ಏನು ಬೇಕಾದ್ರು ಮಾಡ್ಕೋ...ನನ ಅನುಭವದಿಂದ ನಾನು ಈ ಮಾತುಗಳನನ್ನು ಹೇಳ್ತಿದೀನಿ. ನನ್ನ ಮಾತನ್ನು ಒಪ್ಕೋ....."

"ರಾಧಿಕಾ ಮತ್ತೆ ಮಾತನ್ನಾಡಿರಲಿಲ್ಲ. ಸುಮ್ಮನಾಗಿದದಳು. ಆ ಮೇಲೆಂದೂ ಮತ್ತೆ ಈ ಚರ್ಚೆ ಬಂದಿರಿಲಿಲ್ಲ. ಮೆಡಿಕಲ್ ಕೋರ್ಸ್‌ಗೇ ಸೇರಿದ್ದಳು ಆ ಮೇಲೆ ಹಠ ಮಾಡಿ ಲೂನಾ ತೆಗೆಸಿಕೊಂಡಿದ್ದಳು. ಗೀತ ಒಬ್ಬಳೇ ಗೆಳತಿ. ಅವಳನ್ನೂ ಬಿಟ್ಟರೆ ಬೇರೆ ಯಾರ ಸ್ನೇಹವೂ ಇಲ್ಲ...ಎಂದೇ ತಿಳಿದುಕೊಂಡಿದ್ದೆ ಆದರೆ ಈಗ? ಮುರಳಿಯಂತೆ? ಮನೋಜನಂತೆ!

eಆ ಮನೋಜ ಯಾರು ಅಂತ ಗೊತ್ತಾಯ್ತಲ್ಲ. ಇದೆಲ್ಲಾ ಅವಳ ಅಪ್ಪನದೇ ಮಸಲತ್ತು ಇರಬೇಕು. ಇದೇ ಊರಿನಲ್ಲಿದ್ದುಕೊಂಡು, ನಮ್ಮ ವಿಷಯಗಳನ್ನೆಲ್ಲ ತಿಳಿದುಕೊಂಡು, ಈಗ ಮಗಳು ಒಂದು ನೆಲೆಗೆ ಬರುತ್ತಿರುವಾಗ ನನ್ನ ಮಗಳು ಅಂತ ಹೇಳಿ ಕೊಳ್ಳುವಷ್ಟು ಧೈರ್ಯ? ಈಗ ಮಾತನ್ನಾಡುತ್ತಲ್ಲೈಲಾ ಹೀನಾಯವಾಗುವುದಿಲ್ಲವೇ?

ರಾಧಿಕೆಗೆ, ಮನೋಜನ ಸ್ನೇಹ ಎಷ್ಟು ವರ್ಷದಿಂದ ಇದೆಯೋ? ಅದರಿಂದಲೇ,

ಮೊದಲು ಈ ಕೋರ್ಸ್ ಬೇಡ ಎಂದವವಳು. ಆ ಮೇಲೆ ಹೆಚ್ಚಿಗೆ ವಾದಿಸದೇ ಮೆಡಿಕಲ್ ಕಾಲೇಜಿಗೆ ಸೇರಿದ್ದಳು. ಇದರಲ್ಲೂ ಅವನ ಚಿತಾವಣೆ ಇರಬಹುದು ಅಂತೆನ್ನಿಸಿದಾಗ ಮಗಳ ಮೇಲೂ ಕೋಪ ಬಂತು. ನನಗೆ ತಿಳಿಯದಂತೆ, ಒಳಗೊಳಗೇ ಎಲ್ಲಾ ಕುತಂತ್ರ ನಡೆಸಿದ್ದಾರೆ. ಎಷ್ಟಾಗಲೀ ಅದೇ ರಕ್ತ. ಅವರ ಪರಿಚಯವಾದುದನ್ನು ನನಗೆ ತಿಳಿಸೇ ಇಲ್ಲ. ಇನ್ನೇನು ಬೇಕು?....ಆದರೆ ಇದನ್ನೆಲ್ಲಾ ಅವಳಿಗೆ ತಿಳಿಸಿ ಹೇಳುವುದಾದರೂ ಹೇಗೆ?

ನನ್ನ ಮಗಳು ಇನ್ನೋಸೆಂಟ್ ಏನ್ನ. ಆದರೂ ಚಿಕ್ಕವಳು. ದುಡುಕು ಸ್ವಭಾವ ಇದೇ ರೀತಿ ಏನೋ ಒಂದು ಆಕರ್ಷಣೆಗೆ ಒಳಗಾಗಿ ನಾನು ಮೋಸ ಹೋಗಿದ್ದೆ. ಈಗ ರಾಧಿಕಾ ಅದೇ ಹಾದಿಯಲ್ಲಿದ್ದಾಳೆ. ಅವಳಿಗೆ ಹಾಗೆ ಆಗಬಾರದು. ಅವಳನ್ನು ಎಚ್ಚರಿಸಬೇಕು. ಅವರಿಬ್ಬರಿಂದ ದೂರವಿರುವಂತೆ ಹೇಳಬೇಕು.

ಆದರೆ ಈಗ ಅದು ಸಾಧ್ಯವೇ? ನನ್ನ ಮಾತಿಗೆ ಅವಳು ಒಪ್ಪುತ್ತಾಳೆಯೆ?ಕಾರಣ ಕೇಳಿದರೆ ಏನೆಂದು ಹೇಳುವುದು? ಅವನೇ ಅಪ್ಪ ಎಂದು ತಿಳಿದಿರುವಂತೆ ಅನ್ನಿಸುವುದಿಲ್ಲ. ತಿಳಿದರೆ...ಏನು ಮಾಡುವಳೋ ನನ್ನನ್ನು ಬಿಟ್ಟು ಅವನ ಬಳಿಗೆ ಹೋದರೆ? ಅಥವಾ ನಾವಿಬ್ಬರೂ ಮತ್ತೆ ಒಟ್ಟಿಗೇ ಇರುವಂತೆ ಕೇಳಿಕೊಂಡು ಬಲಸಂತ ಮಾಡಿದರೆ?.. ಅದು ಈಜನ್ಮದಲ್ಲಿ ಮತ್ತೆ ಸಾಧ್ಯವಿಲ್ಲ. ಅದು ಮರೆತು ಹೋದ ದಿನಗಳು. ಆ ಜೀವನ ನನ್ನನ್ನು ಖಂಡಿತಾ ಸೆಳೆಯುವುದಿಲ್ಲ. ಆದರೆ ಇದೆಲ್ಲಾ ರಾಧಕಂಗೆ ಖಂಡಿತಾ ತಿಳಿಯುವುದಿಲ್ಲ. ತಿಳಿಸಲೂ ಆಗುವುದಿಲ್ಲ. ...ನಮ್ಮಿಬ್ಬರಿಂದ ದೂರಇರು ಎಂದು ಅವನಿಗೇ ತಿಳಿಸಿ ಹೇಳಬೇಕು. ಅದೇ ಸರಿ. ಅವನು ಮತ್ತೆ ಬಂದೇ ಬರುತ್ತಾನೆ. ಆ ಈ ಮಾತನ್ನು ಹೇಳಲೇಬೇಕು. ಹಾಗೇ ರಾಧಿಕಾಳಿಗೂ ಸ್ವಲ್ಪ ತಿಳುವಳಿಕೆ ಹೇಳಬೇಕು. ಇದುವರೆಗೂ ಸಾಕಿ ಸಲಹೆ ಮಾಡಿದ್ದೆಲ್ಲಾ ವ್ಯರ್ಥ ವಾಗುತ್ತದೆ. ನನ್ನ ಆತ್ಮಾಭಿಮಾನಕ್ಕೆ ಧಕ್ಕೆ ಉಂಟಾಗುತ್ತದೆ. ನನಗೆ ದ್ರೋಹ ಮಾಡಿದ ಅವನಿಗೆ ನೆಮ್ಮದಿ ಸಿಗದಿರುವಂತೆ ಮಾಡಬೇಕು. ಏನೇ ಆಗಲಿ ಅವರೆಲ್ಲಾ ಮತ್ತೆ ಒಂದಾಗುವುದಕ್ಕೆ ಬಿಡಬಾರದು...ಇದೇ ಆಲೋಚನೆಗಳಲ್ಲಿ ರಾತ್ರಿಯನ್ನು ಕಳೆದಳು.

ಹೀಗೇ ಒಂದೆರಡು ದಿನಗಳು ಕಳೆದವು. ತಾಯಿ ಮಗಳು ಒಬ್ಬರ ಮುಖವನ್ನು ಒಬ್ಬರು ನೋಡಿರಲಿಲ್ಲ. ರಾಧಿಕಾಗೆ ಟೈಂ ಕಳೆಯುವುದೇ ಕಷ್ಟ. ಗೀತಾ ಕೂಡಾ ದಿನಬಿಟ್ಟು ದಿನ ಬರುತ್ತಿದ್ದಳು. ಒಮ್ಮೆ ಗೀತ ಬಂದಾಗ ತನ್ನ ಬೇಸರವನ್ನು ತಿಳಿಸಿದ್ದಳು.

ಮನೇಲಂತೂ, ಒಬ್ಬಳಿಗೇ ಇದ್ದೂ ಇದ್ದೂ ಬೇಜಾರಾಗಿದೆ. ನಾಳೆಯಿಂದ ಕಾಲೇಜಿಗೆ ಬರ್ತೀನಿ. ಇಬ್ಬರೂ ಒಟ್ಟಿಗೇ ಹೋಗೋಣ. ನನಗೆ ಹೆಲ್ಪ್ ಮಾಡುಕ್ಕೆ ಆಗುತ್ತಾ?

ನಿಮ್ಮ ಅಮ್ಮ ಒಪ್ಪಿದಾರಾ?ಒಂದು ಮಾತು ಕೇಳಿದ್ರೆ ಚೆನ್ನಾಗಿತ್ತು.

ಅಮ್ಮ ಒಪ್ಪಲಿ ಬಿಡಲಿ, ನಾನು ಕಾಲೇಜಿಗೆ ಬರ್ತೀನಿ. ನಾನು ಮತ್ತೆ ಮತ್ತೆ ಕೇಳುಲ್ಲ. ನೀನು ಬೇಕಾದ್ರೆ ಕೇಳು.

ಗೀತಾ ಹೊರಟಿದ್ದಾಗ, ನಿರ್ಮಲ ಹೊರಗಿನಿಂದ ಬಂದಳು. ರಾದಿಕಾ ಗೀತಾಳ ಮೊಣಕೈ ಮುಟ್ಟಿ ಸಂಜ್ಞೆ ಮಾಡಿದಳು.

ಆಂಟಿ, ರಾಧಿಕಾ ನಾಳೆಯಿಂದ ಕಾಲೇಜಿಗೆ ಬರ್ತಾಳೆಂತೆ ಅವಳನನಲು ನಾನು

ನೋಡ್ಕೊಳ್ತೀನಿ. ನಾನು ಹೆಲ್ಪ್ ಮಾಡ್ತಿವಿ ಅವಳಿಗೆ.

ಇನ್ನೊಂದು ವಾರ ತಾನೇ? ಕಾಲೇಜಿಗೆ ಹೋಗಿ ಕುಂಟಿಕೊಂಡು ಒದ್ದಾಡುವುದೇಕೆ? ಏನೂ ಬೇಡ.

ನನಗೆ ಬೇಜಾರು ತಿರುಗಾಟವಿಲ್ಲ. ಫ್ರೆಂಡ್ಸ್ ಜೊತೆ ಮಾತಿಲ್ಲ. ರಾಧಿಕಾ ಗೊಣಗಿದಳು

ಕಾಲೇಜಿಗೆ ನೀನು ಹೋಗೋದು ಓದುಕ್ಕೆ ಮಜಾಮಾಡುಕ್ಕಲ್ಲ.

ನಾನು ಓದುತ್ತಿರುವುದು ನಿನಗೋಸ್ಕರ. ಮಜಾ ಮಾಡುವುದು ನನಗೋಸ್ಕರ

ಬಹಳ ಚೆನ್ನಾಗಿ ಮಾತನಾಡ್ತೀಯ? ಜವಾಬ್ದಾರಿ ಬೇಡವಾ ನಿನಗೆ?

ಎಲ್ಲಾ ನೋಡಿಕೊಳ್ಳೋಕೆ ನೀನು ಇರುವಾಗ. ನನಗೇಕೆ ಜವಾಬ್ದಾರಿ?

ಹಾಗಾದರೆ ನಾನು ಹೇಳಿದ ಹಾಗೆ ಕೇಳು. ನಿನಗಿನ್ನೂ ತಿಳುವಳಿಕೆ ಸಾಲದು. ಯಾವುದು ಸರಿ, ಯಾವುದು ತಪ್ಪು ಅಂತ ನಿನಗೇನು ಗೋತ್ತೂ? ಜೀವನದಲ್ಲಿ ಇನ್ನೂ ಏನೇನು ಎದುರಿಸಬೇಕಾಗುತತೆ ಅಂತ ನಿಗೇನು ಗೊತ್ತು?

ಈ ಉಪದೇಶವೆಲ್ಲಾ ಈಗ್ಯಾಕೆ? ನಾನು ಕಾಲೇಜಿಗೆ ಹೋಗಲೋ..... ಬೇಡವೋ.....?

"ಹೇಳಿದ್ದೇ ಮತ್ತೆ ಮತ್ತೆ ಹೇಳಿದ್ರೆ ಉಪದೇಶ ಅಂತೀಯ ಒಂದು ಸಲ ಹೇಳಿದ್ದು ನಿನಗರ್ಥವಾಗಲಿಲ್ಲಾ? ರೇಗಿದಳು.

ಎಲ್ಲಾದಕ್ಕೂ ರೇಗ್ತೀಯ. ನನಗಿನ್ನೇನೂ ಹೇಳ್ಬೇಕ. ಕಾಲೇಜಿಗೂ ಹೋಗುಲ್ಲ. ಎಕ್ಸಾಮ್ಸ್‌ಗೂ ಹೋಗುಲ್ಲ. ಮನೇಲೇ ಬಿದ್ದು ಸಾಯ್ತೀನಿ. ರಾಧಿಕಾ ತಾನೂ ಕಿರುಚಿದಳು.

ಗೀತಾ ತಾಯಿ ಮಗಳ ಸಂಭಾಷಣೆಗೆ ಹೆದರೆ, ಯಾರಿಗೂ ಹೇಳದೆ ಹೊರಟು ಹೋದಳು ನಿರ್ಮಲ ಮತ್ತೆ ಮಾತನಾಡಿದಳು.

ಏನು ಬೇಕಾದ್ರೂ ಮಾಡಿಕೊಂಡು ಹಾಳಾಗಿ ಹೋಗು. ಸುಮ್ಮನೇ ನನ್ನ ಹೊಟ್ಟೆ ಉರಿಸಬೇಡ. ರಂಗನಾಥನ ಮೇಲಿನ ಕೋಪವನ್ನೂ ಅವಳ ಮೇಲೆ ಕಾರಿದ್ದಳು.

ನಿನ್ನ ಹೊಟ್ಟೆ ಉರಿಯುವಂತೆ ನಾನೇನು ಮಾಡಿದೀನಿ?ನನ್ನ ಹೊಟ್ಟೆ ಉರಿಸುತ್ತಿರುವವಳು ನಾನು . ತಾಯಿಯನ್ನು ಹಂಗಿಸಿದಳು.

ನಿರ್ಮಲ ದಂಗಾದಳು . ಏನಂದೆ?ನಾನೇನು ಅನ್ಯಾಯ ಮಾಡಿದೀನಿ ನಿನಗೆ? ಇಂಥಾ ಮಾತಾಡ್ತಿಯಲ್ಲ. ಅಲ್ಲ, ಯಾರು ಹೇಳಿ ಕೊಟ್ಟರು ನಿನಗಿದನ್ನೆಲ್ಲಾ? ಅವಳಿಗೆ ರಂಗನಾಥನ ಮೇಲೆ ಬಲವಾದ ಅನುಮಾನ.

ಯಾರೂ ಹೇಳಿ ಕೊಡಬೇಕಾಗಿಲ್ಲ. ನನಗೇ ಎಲ್ಲಾ ತಿಳಿಯುತ್ತೆ. ನಾನೇನು ಚಿಕ್ಕಮಗುವಲ್ಲ. ಚಿಕ್ಕವಯಸ್ಸಿನಿಂದ ನನಗೆ ದ್ರೋಹ ಆಗಿದೆ ಈಗ ಅದರ ಅರಿವಾಗಿದೆ. ಲೈಪ್‌ನಲ್ಲಿ ನನಗೆಷ್ಟು ಲಾಸ್ ಆಗಿದೆ. ಅಂತ ನಂಗೆ ಗೊತ್ತು.

ಚೆನ್ನಾಯಿತು. ನಿನ್ನ ಮಾತು ಕೇಳಿದ್ರೆ ನಗುಬರುತ್ತೆ.

ನಿನಗೆ ನಗು ಬರುತ್ತೆ. ನನಗೆ ದುಃಖವಾಗುತ್ತೆ. ಇಷ್ಟು ವರ್ಷ ಒಂಟಿಯಾಗಿ ಬೆಳೆದು ನನ್ನ ದುಃಖ ಹಂಚಿಕೊಳ್ಳಲು. ಒಬ್ಬರೂ ಇಲ್ಲವಲ್ಲ ಅಂತ ವ್ಯಥೆ ಆಗುತ್ತೆ. ನನ್ನ ವ್ಯಥೆ ನಿನಗೇನು ಇಳಿಯುತ್ತೆ?

"ಇದು ಖಂಡಿತಾ ನಿನ್ನ ಮಾತುಗಳಲ್ಲ. ನಿನಗ್ಯಾರೋ ಹೇಳಿ ಕೊಟ್ಟಿದಾರೆ,

ನನಗಾಗಿರುವ ದ್ರೋಹಾನ ಹೇಳುಕ್ಕೆ. ಇನ್ಯಾರು ಯಾಕೆ ಹೇಳಿ ಕೊಡ್ತಾರೆ? ಚಿಕ್ಕವಯಸ್ಸಿನಲ್ಲಿ ನೀನು ಹೇಳಿದ ಹಾಗೆ ಕೇಳಿದ್ದೇ ತಪ್ಪು. ನನಗೂ ಇನ್ಯಾರಿರಲಿಲ್ಲ. ನೀನು ಹೇಳಿದ ಹಾಗೇ ಕೇಳಿದೆ. ನೀನು ಹೊಲಿಸಿದ ಬಟ್ಟೆಗಳನ್ನೇ ಹಾಕಿಕೊಂಡೆ. ನೀನು ತಂದು ಕೊಟ್ಟ ಆಟದ ಸಾಮಾನುಗಳ ಜೊತೆ ಆಟ ಆಡಿದೆ. ನೀನು ಸೇರಿಸಿದ ಸ್ಕೂಲಿಗೆ ಸೇರಿದೆ. ನೀನು ಹೇಳಿದ್ದನ್ನೇ ಓದಿದೆ. ಕಡೆಗೆ ನಿನ್ನಾಸೆಯನ್ನು ಮೀರದೆ ಮೆಡಿಕಲ್ ಕಾಲೇಜಿಗೂ ಸೇರಿದೆ. ಆದರೆ ಈಗ ಮೆಜಾರಿಟಿಗೆ ಬಂದಿದೀನಿ. ಯಾವುದು ಇಷ್ಟ. ಯಾವುದು ಇಷ್ಟವಿಲ್ಲ ಅಂತ ತಿಳಿಯುತ್ತೆ. ಅದನ್ನು ನಿರ್ಧರಿಸುವ ಹಕ್ಕು ನನ್ನದು. ನೀನು ನನ್ನನ್ನು ಸಾಕಿ ಸಲಹಿದ ತಾಯಿ ಅಂತ ಇದುವರೆಗೂ ನೀನು ಹೇಳಿದ ಹಾಗೇ ಕೇಳಿದೀನ. ಆದರೆ ಇನ್ನೂ ಮುಂದೆ ಪ್ಲೀಸ್ ....ನನಗೆ ಯಾವುದಕ್ಕೂ ಬಲವಂತ ಮಾಡಬೇಡ. ಬಲವಂತ ಮಾಡಿದರೆ ಸೂಯಿಸೈಡ್ ಮಾಡ್ಕೋತೀನಿ.

ಆ ಮಾತು ನಿರ್ಮಲಳನ್ನು ಹೆದರಿಸಿತ್ತು.

ಏನಾಗಿದೆ ನಿನಗೆ? ತಾಯಿ ಅನ್ನು ವ ಮರ್ಯಾದೆ ಸಹ ಇಲ್ಲದೇ ಏನೇನೋ ಮಾತಾಡ್ತಿದೀಯಲ್ಲ.

ತಾಯಿ ಅಂತ ಯಾವಾಗಲೂ ಮರ್ಯಾದೆ ಕೊಟ್ಟಿದೀವಿ . ಯಾವತ್ತು ನಿನಗೆ ಅವಮಾನವಾಗುವಂತಹ ಕೆಲಸ ಮಾಡಿಲ್ಲ. ಮಾಡುಲ್ಲ. ನನಗೆ ದ್ರೋಹ ಆಗಿದೆ. ಆದರೆ, ನಾನು ನಿನಗೆ ದ್ರೋಹ ಮಾಡುಲ್ಲ. ತಿಳೀತಾ?

ಸಾಕು ನಿಲ್ಲಿಸು ರೆಕ್ಕೆ ಪುಕ್ಕ ಬಲಿತ ಮೇಲೆ ಹಾರಿ ಹೋಗುವ ಸಮಯ ಬಂದಿದೆ ನಿನಗೆ. ಅದಕ್ಕೇ ಹೀಗೆಲ್ಲಾ ಆಡ್ತಿದೀಯ. ಇನನಊ ಮೇಲೆ ನನ್ನ ಅಗತ್ಯ ನಿನಗಿಲ್ಲ. ಇನ್ನು ನಾನೇನು ಹೇಳುಲ್ಲ ಅವಳು ಕಟುವಾಗಿ ನುಡಿದಳು.

ನಿರ್ಮಲ ಕುಪಿತಳಾಗಿದ್ದಳು. ಹಾಗಾದರೆ ತಪ್ಪೆಲ್ಲಾ ನನ್ನದೇನಾ? ಇದುವರೆಗೂ ಸಾಕಿ ಸಲಹಿ ಬೆಳೆಸಿದ್ದೂ ತಪ್ಪೇನಾ? ಏನೋ ನನ್ನ ಜೀವನದಲ್ಲಿ ನಡೆದ ಕಹಿ ಘಟನೆಯ ನೆರಳು ಅವಳ ಮೇಲೆ ಬೀಳದಂತೆ ಜಾಗ್ರತೆ ವಹಿಸಿ, ನನಗೆ ಬೇಕಾದಂತೆ ಬೆಳೆಸಿದೆ. ಆಗೆಲ್ಲಾ ಸುಮ್ಮನಿದ್ದ ಇವಳು ಈಗ ಎಗರಿ ಬೀಳುತ್ತಿದಾಳೆ. ಹಾಗಾದರೆ ನನ್ನ ಕಷ್ಟಕ್ಕೆ ಬೆಲೆಯೇ ಇಲ್ಲವೇ? ನನ್ನ ಮನಸ್ಸಿಗೆ ಎಂದೂ ನೆಮ್ಮದಿ ಇರಲಿಲ್ಲ. ತಂದೆ, ತಾಯಿ, ತಮ್ಮ ತಂಗಿಯಿದ್ದೂ ನಾನು ಬೆಳೆದಿದ್ದು ಒಂಟಿಯೇ. ಪ್ರೀತಿಯ ಆಕರ್ಷಣೆಗೆ ಒಳಗಾಗಿ ಮದುವೆಯಾದರೂ ಮತ್ತೆ ನಾನು ಒಂಟಿಯೇ. ನನ್ನ ಒಂಟಿತನವನ್ನೂ ಕಡಿಮೆ ಮಾಡಿದ್ದು ಕ್ಲಿನಿಕ್ ಒಂದೇ. ಅದಿಲ್ಲದಿದ್ದರೆ ಹುಚ್ಚಿಯಾಗಿ ಬಿಡುತ್ತಿದ್ದೆನೋ ಏನೋ ಅದೇ ನನ್ನ ನಿಜವಾದ ಸಂಗಾತಿ. ಆದರೆ ಇದನ್ನ ತನ್ನ ಮಗಳು ಮಲತಾಯಿ ಅಂತ ಭಾವಿಸಿದಾಳೆ. ಇವಳು ನನ್ನೇದೆರು ನಿಂತು ಎಂದೂ ಇಷ್ಟು ವಾದಿಸಿದವಳಲ್ಲ. ಈ ಧೈರ್ಯ ಇವಳಿಗೆ ಹೇಗೆ ಬಂತು? ಕಾರಣ ಯಾರು? ಅವನೇ ಇರಬಹುದು. ನನ್ನ ಮಗಳ ಮನಸ್ಸನ್ನು ನನ್ನ ವಿರುದ್ದ ತಿರುಗಿಸುತ್ತಿದಾನೆ. ನನ್ನ ಮಗಳು ನನ್ನಿಂದ ದೂರವಾಗುವಂತೆ ಪ್ರಯತ್ನ ಮಾಡುತ್ತಿದಾನೆ. ಈ ಹಕ್ಕು ಅವನಿಗಿಲ್ಲ. ಅಪ್ಪ ಎಂಬ ಒಬ್ಬ ಕಾರಣದಿಂದ ತಾಯಿ ಮಗಳನ್ನು ದೂರ ದೂರ ಮಾಡಲು ನೋಡುದ್ತಿರುವಂತಿದೆ. ಅವನ್ಯಾರೂ? ಈಗ ಇಷ್ಟು ವರ್ಷಗಳ ಮೇಲೆ ಬಂದು ಹಕ್ಕು

ಚಲಾಯಿಸುವವನು...ಅವನ ಮೇಲಿನ ಕೋಪ ಏರಿದಂತೆ , ಎದೆಯಲ್ಲಿ ನೋವು...ಒತ್ತಡ..... ಹೆಚ್ಚಿದಂತಾಗಿ ನಿಂತಿರಲು ಆಗದೆ ಅಲ್ಲಿ ಕುಸಿದು ಕುಳಿತಳು.

ರಾಧಿಕಾ ಅಲ್ಲಿ ಇರಲಿಲ್ಲ. ಅಲ್ಲಿಂದ ಹೊರಟು ಹೋಗಿದ್ದಳು ತನ್ನ ಹಬಗ್ಗೆ ಮಗಳಿಗೆ ಆದರ ಪ್ರೀತಿ ಕಡಿಮೆಯಾಗುತ್ತಿರುವುದನ್ನು ಕಂಡು ಅವಳ ಎದೆ ಭಾರವಾಯಿತು. ನಮ್ಮಿಬ್ಬರ ಮಧ್ಯೆ ಅಡ್ಡ ಬರಬೇಡ ನಮ್ಮ ಪಾಡಿಗೆ ನಮ್ಮನಿರಲು ಬಿಡು ಎಂದು ಖಡಾ ಖಂಡಿತಾವಾಗಿ ಹೇಳಿ ಬಿಡಬೇಕು. ಅವನು ಎಂದು ಬಂದಾನೋ, ಆದಷ್ಟು ಬೇಗ ಬರಲಿ ಎಂದು ಅವನಿಗಾಗಿ ಕಾದಳು.

ಮೂರು ನಾಲ್ಕು ದಿನಗಳು ಕಳೆದರೂ, ರಾಧಿಕಾ ತಾಯಿಯೊಡನೆ ಮಾತಾಡಲಿಲ್ಲ. ನಿರ್ಮಲ ಅಡಿಗೆಯವರ ಮುಖಾಂತರ ರಾಧಿಕಾಳ ಬಗ್ಗೆ ಎಲ್ಲಾ ಕೇಳಿ ತಿಳಿದು ಕೊಳ್ಳುತ್ತಿದ್ದಳು. ಅವಳಂತೂ ಚಿಕ್ಕವಳು, ಹೀಗಾಡ್ತಾಳೆ. ಅಂತಂದರೆ, ದೊಡ್ಡವಳು ತಾನು ಉಬಾಸೀನ ಮಾಡಬಾರದು ಅಂತನ್ನಸಿದರೂ, ಮೊದಲು ಅವರ ಪೊಗರು ಕಡಿಮೆಯಾಗಲಿ. ಇಲ್ಲದಿದ್ದರೆ ಏನೇನು ಮಾತಾಡಿ ಬಿಡುತ್ತಾಳೋ ಎಂದುಕೊಂಡು ಸುಮ್ಮನಾಗಿದ್ದಳು.

ಒಂದು ವಾರ ಕಳೆದರೂ ಗೀತ ಆಗಲಿ, ಬೇರೆ ಯಾರೂ ಅವಳನನಲು ನೋಡಲು ಬಂದಿರಲಿಲ್ಲ. ರಾಧಿಕಾಗೆ ತುಂಬಾ ಬೇಜಾರಾಗಿತ್ತು. ಆದರೂ ಏನೋ ಹಠ ಏನೋ ಕೋಪದಿಂದ ಸದಾ ಮಲಗಿ ಕಾಲ ಕಳೆದಳು. ನಿರ್ಮಲೆಳಿಗೆ ನೋಡಿ ನೋಡಿ ರೇಗಿ ಹೋಗುತ್ತಿತ್ತು ಹೇಳಲಾರಳು. ಹೇಳದೇಇರಲಾಳು.

ಮನೋಜನಿಗೆ, ಮುರಳಿಯಿಂದ ರಾಧಿಕಾ ಅಪ್ಸೆಟ್ ಆಗಿದಾಳೆನ್ನುವುದು ತಿಳಿದಿತ್ತು. ಅವಳಿಗಾದರೂ ಯಾಕಿಷ್ಟು ಹಠ? ಕಾಲು ಪೂರ್ತಿ ಸರಿಯಾದ ಮೇಲೆ ಕಾಲೇಜಿಗೆ ಬಂದರೆ ಆಗುಲ್ವಾ? ಅದಕ್ಕೆ ಅವಳ ಅಮ್ಮನ ಹತ್ತಿರ ಯಾಕೆ ವಾದಿಸಬೇಕು?"

"ರಾಧಿಕಾಳ ಸ್ವಭಾನ ಸ್ವಲ್ಪ ಹಾಗೇ. ಅವರಮ್ಮ ಮುದ್ದಿನಿಂದ ಬೆಳೆಸಿ ಬಿಟ್ಟಿದಾರೆ. ಹಠ ಮೊಂಡುತನ ಸ್ವಲ್ಪ ಜಾಸ್ತಿ . ಆದರೆ ಕೆಟ್ಟವಳಲ್ಲ...."

"ಸ್ವಲ್ಪ ಏನಲ್ಲ. ತುಂಬಾ ಜಾಸ್ತಿ ಆದರೆ ನಾವ್ಯಾರು? ಏನೂ ಹೇಳುಕ್ಕಾಗುಲ್ಲ. ಏನೂ ಮಾಡುಕ್ಕಾಗುಲ್ಲ. ಮನೋಜನ ಚಿಂತೆ ಕಂಡುಮುರಳಿಗೆ ನಗುಬಂತು.

ಯಾಕೆ? ಹೆದರಿ ಬಿಟ್ಟೇನೋ... **?**ನಿನ್ನ ಗರ್ಲ್ ಫ್ರೆಂಡ್ ಹಠವಾದಿ ಮೊಂಡು ಅಂತ, ನಾನು ಅವಳನ್ನು ಸರಿಮಾಡಬಹುದು. ಡೋಂಟ್ ವರಿ".

"ನನಗ್ಯಾಕೆ ಹೆದರಿಕೆ? ಆದರೂ ಅವಳು ಮಾಡಿದ್ದು ತಪ್ಪು"

"ಯೂ ಆರ್ ರೈಟ್. ಅವಳದು ತಪ್ಪು. ಆ ಮೇಲೆ ಅವಳು ಕಾಲೇಜಿಗೆ ಬಂದ ಮೇಲೆ ಎಲ್ಲರೂ ಸೇರಿ ತಿಳುವಳಿಕೆ ಹೇಳಿದರಾಯ್ತು. ಮನೋಜ ತಲೆಯಾಡಿಸಿದ.

ಕಾಲೇಜಿಗೆ ಬರುಲ್ಲ. ಎಕ್ಸಾಮ್ಸ್ ತಗೊಳ್ಳಲ್ಲ ಅಂತ ಗೀತನ ಕೈಲಿ ಹೇಳಿದಾಳಂತೆ. ಅವಳು ಹಾಗೆ ಮಾಡಿದರೂ ಮಾಡಿಯಾಳೇ.

ಅದು ಸರೀನು ಅಲ್ಲ. ಅವಳು ಎಕ್ಸಾಮ್ಸ್ ತಗೋಳ್ಳದಿದ್ದರೆ ಒಂದು ವರ್ಷ ಲಾಸ್ ಹೋಗುತ್ತೆ. ಅವರಮ್ಮ ಹೇಗೆ ಸುಮ್ಮನಿದ್ದರೆಯೆ ಗೀತ....?

ಸುಮ್ಮನೇ ತಮಾಷೆಗೆ ಹೆದರಿಸ್ತಿದಾಳೆ ಅಂತ ಅಂದುಕೊಂಡಿರಬಹುದು, ಸೀರಿಯಸ್ ಆಗಿ ತಗೊಂಡಿಲ್ಲ ಅಂತ ಕಾಣುತ್ತೆ. ನಾವು ಸ್ನೇಹಿತರಾಗಿದ್ದುಕೊಂಡು

ಸುಮ್ಮನಿರಬಾರದು. ಮೊದಲು ರಾಧಿಕಾಗೆ ತಿಳುವಳಿಕೆ ಹೇಳಬೇಕು. ಅವಳು ಪರೀಕ್ಷೆಗೆ ಬಂದು ಬರೆಯುವಂತೆ ಮಾಡಲೇ ಬೇಕು.

ಮುರಳಿಯ ಮಾತು ಸರಿ ಎನಿಸಿತು ಮನೋಜನಿಗೆ . ಮನೆಯಲ್ಲೂ ಅದೇ ಮಾತು ಬಂದಾಗ, ಮಾವನೊಡನೆ ಹೇಳಿದ.

ನನಗೆ ತಾಯಿಯಲ್ಲವಲ್ಲ ಅಂತ ಒಂದೊಂದು ಸಲ ಅನ್ನಿಸುತ್ತೆ. ಆದರೆರಾಧಿಕಾಗೆ ಯಾಕೆ ಅಷ್ಟು ಕೆಟ್ಟ ಬುದ್ದಿ? ಅವರಮ್ಮನ್ನ ಯಾಕೆ ಅಷ್ಟು ಗೋಳು ಹುಯ್ಕೋ ಬೇಕು? ನೀನು ಯಾಕೆ ಅಷ್ಟು ಮೆಚ್ಚಿದೀಯೋ ಅವಳನ್ನೂ?

"ಎಲ್ರೂ ಹಾಗೇ ಕಣೋ ಅಪ್ಪಾ ...ಇದೋರ ಬೆಲೆ ಗೊತ್ತಾಗಲ್ಲ. ಗೋಳು ಹುಯ್ಕೋತಾರೆ...ಅದೇ ಇಲ್ಲದಿದ್ದಾಗ ಪರಿತಪಿಸ್ತಾರೆ.

ಹಾಗಾದ್ರೆ...ಅವಳು ಮಾಡ್ತಿರುವುದು ಸರಿ ಅಂತೀಯಾ?

ಸರಿ ಇಲ್ಲ ...ಆದರೆ ತಿಳುವಳಿಕೆ ಸಾಲದು

ಕರೆಸಿ ಬುದ್ದಿ ಹೇಳು. ಜೊತೆಗೆ ನಾನೂ, ಮುರಳಿ , ಗೀತಾ ಎಲ್ರೂ ತಿಳುವಳಿಕೆ ಹೇಳ್ತೀವಿ.

ಎಲ್ರೂ ತಿಳುವಳಿಕೆ ಹೇಳಿದ್ರೆ, ಅವಳ ಹಠ ಇನ್ನು ಜಾಸ್ತಿ ಯಾಗುತ್ತೆ. ಅವರ್ಮನೇ ಅವಳಿಗೆ ಸರಿಯಾಗಿ ತಿಳುವಳಿಕೆ ಹೇಳಬೇಕು ಅದೇ ಸರಿ."

"ಹಾಗಾದ್ರೆ..ನೀನು ಅವರಮ್ಮನಿಗೆ ಹೇಳು ರಂಗನಾಥ ಬೆಚ್ಚಿದ.

ಅವರಮ್ಮನಿಗೆ....ನಾನು ಏನು ಹೇಳಲಿ?...ಅವರ ಮಗಳ ಬಗ್ಗೆ ಮಾತನಾಡಿದರೆ ಏನಾದ್ರೂ ಅಂದ್ಕೊಂಡ್ರೆ....ನನಗೆ ಪರಿಚಯಲಿಲ್ಲವಲ್ಲ...ತಡವರಿಸಿದ.

ಸರಿಬಿಡು. ಇಷ್ಟೇನಾ ನಿನ್ನ ಪ್ರೀತಿ? ಅನೂರಾಧ ಇದ್ದ ಹಾಗೆ ಇದಾಳೆ ಅಂತ ಅಷ್ಟು ಸಂಭ್ರಮ ಪಡ್ತೀಯ.....? ಒಂದು ವೇಳೆ ಅನೂರಾಧಾನೇ ಹೀಗೆ ಮಾಡಿದ್ದಿದ್ರೆ ಬುದ್ದಿ ಹೇಳುತ್ತಿರಲಿಲ್ವಾ?"

"ಹುಂ ಹೇಳುತ್ತಿದ್ದೆ. ಖಂಡಿತಾ ಹೇಳುತ್ತಿದ್ದೆ. ಈಗ ನಿನ್ನ ಮಾತಿಗೆ ಬೆಲೆ ಕೊಟ್ಟು ಅವರ ಮನೆಗೆ ಹೋಗ್ತೀನಿ. ಮಾತಾಡ್ತೀವಿ...ಯಾಕೇಂದ್ರೆ ನನಗಿಂತ ಹೆಚ್ಚಿನ ಪ್ರೀತಿನಿನಗೆ ಅವಳ ಮೇಲೆ...ಅಲ್ವಾ? ನಿನಗೊಸ್ಕರನಾದ್ರೂ ನಾನು ಹೋಗಲೇ ಬೇಕು.

ಇದು ಪ್ರೀತಿಯ ವಿಚಾರ ಅಲ್ಲ ಮಾವ. ಒಬ್ಬರ ಕೆರಿಯರ್ ಕಪ್ರಶ್ನೆ...

ಅವಳ ಕೆರಿಯರ್ ಬಗ್ಗೆ ನಿನಗೇಕೆ ಇಷ್ಟು ಚಿಂತೆ? ಅವಳು ಯಾರೋ ನಾವು ರ್ಯಾರೋ? ನೀನು ಅವಳನ್ನು ಇಷ್ಟ ಪಟ್ಟಿದೀಯ ಅಂತ ಹೇಳಿಬಿಡು. ಒಪ್ಕೋತೀನಿ. ನಾಚಿಕೆ ಏಕೆ?"ಮನೋಜನ ಅಂತರ್ಯದಿಂದ, ಅವಳು ನನ್ನ ಮಗಳು ಅಂತ ತಿಳಿದ ದಿನದಿಂದ, ನನಗೆ ಮುಂಚಿನಂತೆ ಇರುಕ್ಕೆ ಆಗ್ತಿಲ್ಲ. ಅವಳು ನನ್ನನ್ನೂ ಅಪ್ಪಾ ಅಂತ ಕರೆಯಬೇಕು. ನಾನು ಅವಳನ್ನು ಮತೆಯಿಂದ ಮುದ್ದಸಬೇಕು ಎನ್ನುವ ಆಸೆ ಆಗ್ತಿದೆ.

ಅದು ಈ ಜನ್ಮದಲ್ಲಿ ಸಾಧ್ಯವಿಲ್ಲ. ಅಂಥ ಆಸೆ ಇರುವವರು, ಹೇಡಿಯಂತೆ ಓಡಿ ಹೋಗ್ತರಿಲಿಲ್ಲ. ಹಲ್ಲು ಮಸೆದಳು.

ನನ್ನನ್ನು ಹಾಗೆಲ್ಲಾ ಹಂಗಿಸಬೇಡ. ನಾನಾಗ ಹೋಗದೇ ಇದ್ದಿದ್ರೆ ಈ ದಿನ ಈ ಮಕ್ಕಳು ಇಷ್ಟು ವಿದ್ಯಾವಂತರಾಗುತ್ತಿರಲಿಲ್ಲ. ಹೀಗೆ ಮುಂದೆಬರುತ್ತಿರಲಿಲ್ಲ. ಅದು ಸತ್ಯ.

ನಿರ್ಮಲ ಸೋಟ್ಟಿಗೆ ನಕ್ಕಳು

ಯಾವ ತಂದೆಯೂ, ಮಕ್ಕಳು ವಿದ್ಯಾವಂತರಾಗಲು, ಈ ಪದ್ಧತಿಯನ್ನು ಅನುಸರಿಸಿದ್ದನ್ನು ನಾನು ಕಂಡಿಲ್ಲ. ಕೇಳಿಲ್ಲ. ಇದೆಲ್ಲಾ ಬೇಡದ ಮಾತು?ಈಗ ಏನಾಗಬೇಕು ನಿಮಗೆ? ಅದೇನು ಹೇಳಬೇಕೋ ಅದನ್ನು ಹೇಳಿ ಮುಗಿಸಿ, ಹೊರಡಿ.

ರಾಧಿಕಾಳ ಮನಸ್ಸಿನಲ್ಲಿ ಏನಿದೆ ಅಂತ ನಿನಗೆ ಗೊತ್ತಾ?

'ತಾಯಿಯನ್ನೂ ಏಕಾಏಕಿ ಬಿಟ್ಟು ಹೋದ ತಂದೆಯ ಬಗ್ಗೆ ಅವಳಿಗೆ ಯಾವ ಭಾವನೆಯೂ ಇಲ್ಲ. ಅಭಿಮಾನವೂ ಇಲ್ಲ. ಅವಳು ನಿಮ್ಮನ್ನು ತಂದೆಯೆಂದು ಒಪ್ಪಿಕೊಳ್ಳುವುದಿಲ್ಲ. ಅಷ್ಟು ನನಗೆ ಗೊತ್ತು.

ಇಲ್ಲ. ಒಪ್ಪುತ್ತಾಳೆ. ಅವಳಿಗೆ ನನ್ನ ಬಗ್ಗೆ ಆದರವಿದೆ. ವಿಶ್ವಾಸವೂ ಇದೆ.

ಆದರೆ ನನಗಿಲ್ಲವಲ್ಲ. ನಾನು ಸಾಕಿ ಬೆಳೆಸಿದ ಮಗಳು ನನ್ನ ಮಾತನ್ನು ನಂಬ್ತಾಳೆ. ನೀವೇ ತಂದೆ ತಿಳಿದ ಗಳಿಗೆಯೇ ನಿಮ್ಮನ್ನೂ ದ್ವೇಷಿಸ್ತಾಳೆ.

ನಿನ್ನ ನಂಬಿಕೆ ತಪ್ಪು ನಿರ್ಮಲಾ. ಅವಳ ಮಾತುಕತೆ, ನಡೆವಳಿಕೆ ನೋಡಿದ್ರೆ, ಅವಳು ಒಳಗೊಳಗೇ ನಿನ್ನನ್ನು ದ್ವೇಷಿಸುತ್ತಾಳೆ. ಆವಳ ತಂದೆಯಲ್ಲಾಲ್ಲ

ಸುಳ್ಳು...ಇದನ್ನ ಹೇಳುಕ್ಕೆ ಬಂದ್ರಾ?ಪ್ಲೀಸ್ ಗೆಟೌಟ್.

ನಾನು ಹೋಗ್ತಿವಿ. ಅದರೆ ನಾನು ಹೇಳುಕ್ಕೆ ಬಂದಿರುವ ವಿಷಯವನ್ನು ಹೇಳಲೇಬೇಕು. ಅವಳನ್ನು ನೀನು ಸಾಕಿ ಬೆಳೆಸಿರುವ ರೀತಿ ಅವಳಿಗೆ ಸರಿ ಇಲ್ಲ. ನೀನು ನಿನ್ನ ಇಷ್ಟದಿಂದ ಸೇರಿಸಿರುವ ಕೋರ್ಸ್ ಅವಳಿಗೆ ಇಷ್ಟವಿಲ್ಲ...ಅವಳು, ಇನ್ನು ಮುಂದೆ ತಾನು ಕಾಲೇಜಿಗೇ ಹೋಗುವುದಿಲ್ಲ. ಎಕ್ಸಾಮ್‌ಗೂ ಹೋಗುಲ್ಲ ಅಂತ ಅಂದಳಂತೆ...ನಿರ್ಮಲ ಮೆತ್ತಗಾದಳು. ಈ ಮಾತನ್ನೆಲ್ಲಾ ಆಡ್ತಿದಾನೆ ಅನ್ನಿಸಿತ್ತು.

ನನಗೆ ಗೊತ್ತು. ನೀನೂ ಸಹ ಅವಳನ್ನು ಕಷ್ಟಪಟ್ಟು ಬೆಳೆಸಿದ್ದೀಯ., ಮುಂದೆ ತುರುತ್ತಿದೀಯ. ಅವಳು ಹೀಗೆಲ್ಲಾ ಆಡುವುದು ಸರಿ ಅಲ್ಲ. ಅವಳಿಗೆ ಸರಿಯಾಗಿ ತಿಳುವಳಿಕೆ ಹೇಳು. ಕಲಿಯುತ್ತಿರುವ ವಿದ್ಯೆಯ ಉದ್ದೇಶ, ಆದರ್ಶ ಸಾರ್ಥಕತೆಯನ್ನೆಲ್ಲ ಅರ್ಥವಾಗುವಂತೆ ಹೇಳು ಹಠ ಮಾಡಬೇಡ ಎಂದು ಬುದ್ದಿ ಹೇಳು.

ನನ್ನ ಮಗಳಿಗೆ ನಾನು ಏನನ್ನ ಹೇಗೆ ಹೇಳಬೇಕು ಅಂತ ನನಗೆ ಚೆನ್ನಾಗಿ ಗೊತ್ತು. ಈಗ ನಿಮ್ಮಿಂದ ಕಲಿಯಬೇಕಾಗಿಲ್ಲ. ನನಗೆ ಎಲ್ಲಾ ಗೊತ್ತು. ಏನು ನಿಮಮ ಪ್ಲಾನು ಅಂತ...ನನ್ನಂದ ನನ್ನ ಮಗಳನ್ನೂ ಕಿತ್ಕೊಕೊಳ್ಳುವ ಪ್ಲಾನು ನಿಮಮ್ದು. ಅದಕ್ಕೇ ಮತ್ತೆ ಮತ್ತೆ ಬರುತ್ತಿದೀರಿ ದಯವಿಟ್ಟು ಹೊರಟು ಹೋಗಿ.

ನೀನು ತಪ್ಪು ತಿಳಿದುಕೊಂಡಿದೀಯ ನಿಮಗಲಾ. ನಿನ ಮಗಳನ್ನೂ ಖಂಡಿತಾ ನಿನ್ನಿಂದ ದೂರ ಮಾಡುವ ಆಸೆ ನನಗಿಲ್ಲ. ಈಗಲೂ ನಿನಗೆ ಸಮ್ಮತವಾದರೆ, ನಾವೆಲ್ಲಾ ಒಟ್ಟಿಗೇ ಇರಬಹುದು ನಾಲಿಗೆ ತೊದಲಿತ್ತು.

ನಾಚಿಕೆಯಾಗುಲ್ಲ ನಿಮಗೀ ಮಾತು ಹೇಳುಕ್ಕೆ? ಯಾವ ಧೈರ್ಯದಿಂದ ಈ ಮಾತುಗಳನ್ನಾಡುದದಿದೀರಿ.? ಮತ್ತೊಮ್ಮೆ ನಿಮ್ಮ ಮಾತುಗಳಿಗೆ ಸೋತು, ನೀವು ಹೇಳಿದ ಹಾಗೆ ಕೇಳ್ತಿವಿ. ಅಂತ ಅಂದ್ಕೊಂಡ್ರಾ? ಈಗ ನೀವು ಯಾವ ಸುಖ, ಯಾವ ನೆಮ್ಮದಿ ಕೊಡಬಲ್ಲಿರಿ? ಏನು ಕೊಡಬಲ್ಲಿರಿ? ಕಳೆದು ಹೋದ ಕ್ಷಮಗಳನ್ನು ವಾಪಸ್ಸು ಕೊಡಬಲ್ಲಿರಾ? ಏನು ಕಮಾಡಬಲ್ಲಿರಿ? ಯಾವುದೋ ಒಬ್ಬ ಅನಾಥ

ಹುಡುಗನ್ನ ಉದ್ಧಾರ ಮಾಡುಕ್ಕೆ ಹೋಗಿ, ನನಗೆ ದ್ರೋಹ ಮಾಡಿ, ಈಗ ಮಾತಾಡ್ತೀತೀರಾ?

ಅವನು ಯಾವುದೋ ಅನಾಥ ಹುಡುಗನಲ್ಲ. ನನ್ನ ತಂಗಿಯ ಮಗ. ನಿನಗೆ ದುರಬಂಕಾರ ಜಾಸ್ತಿ. ಅದೇ ಕಾರಣ, ನಾನು ನಿನ್ನಿಂದ ದೂರ ಹೋಗುಕ್ಕೆ ತಿಳಿ.

ನಿಮಗೆ ಹುಟ್ಟಲಿರುವ ಮಗು ಅನಾಥವಾಗುತ್ತೆ ಅಂತನ್ನಿಸಲಿಲ್ವಾ?

ನೀನಿದ್ದೆಯಲ್ಲಾ. ನೀನು ನಿನ್ನ ಮಗುವನ್ನು ಚೆನ್ನಾಗಿ ಸಾಕ್ತೀಯ ಅನ್ನುವ ನಂಬಿಕೆ ನನಗಿತ್ತು. ಮನೋಜನ್ನ ಕಂಡರೆ ನಿನಗೆ ಅನಾದರಣೆ ಎನ್ನುವಿದೂ ತಿಳಿದಿತ್ತು. ನಮ್ಮೆಲ್ಲರ ಒಳಿತಿಗೇ ನಾನು ಹಾಗೆ ಮಾಡಿದ್ದು.

ನಿಮಗೆ ಎಲ್ಲಾ ತಿಳಿದಿತ್ತು, ತಿಳಿದೂ ತಿಳಿದೂ ನನಗೆ ಮೋಸ ಮಾಡಿದಿರಿ. ಈಗ್ಯಾವ ಹೊಸ ಕಥೆನೆ ಶುರು ಮಾಡುಕ್ಕೆ ಬಂದಿದೀರಿ?"

"ಶುರು ಮಾಡೋದೆನು? ಶುರುವಾಗಿ ಹೋಗಿದೆ. ರಾಧಿಕಾ ನನ್ನ ಮಗಳು ಅವಳು ನನ್ನ ಜೊತೆಯೂ ಇರಬೇಕು. ಅವಳನ್ನೂ ಕರೆಸು ಅವಳು ನನ್ನನ್ನು ಅಪ್ಪ ಅಂತ ಸ್ವೀಕರಿಸದೇ ಇದ್ರೆ, ಆಮೇಲೆ ಬೇರೆ ಮಾತು

ಈ ನಾಟಎಕವೆಲ್ಲಾ ನಗೆ ಬೇಕಿಲ್ಲ. ಅವಳು ನಿಮ್ಮ ಮಗಳು ಅಂತ ಊರಿಗೆಲ್ಲಾ ಪ್ರಚಾರವಾಗುವುದು ನನಗಿಷ್ಟವಿಲ್ಲ. ಕೇಳಿದವರಿಗೆಲ್ಲಾ ನಿಮ್ಮ ಹಾಗೆ ಕತೆ ಹೇಳಿಕೊಂಡು ತಿರುಗುವ ಆಸೆ ನನಗಿಲ್ಲ.

ಆ ಆಸೆ ನನಗೂ ಇಲ್ಲ. ಆದರೆ ಅವಳನ್ನು ಬಿಟ್ಟಿರಲು ನನ್ನಿಂದ ಆಗುಲ್ವಲ. ಅವಳನ್ನೂ ನನ್ನಿಂದ ದೂರ ಮಾಡಬೇಡ ನಿರ್ಮಲಾ. ಕಡೆಪಕ್ಷ ನಮ್ಮ ಮನೆಗೆ ಬರಲಿ ಕಳಿಸು...ಇದಿಷ್ಟನ್ನೇ ನಾನು ಕೇಳಿಕೊಳ್ಳುವುದು. ಇದರಿಂದ ನಿನಗಾಗುವ ತೊಂದರೆ ಏನು?"

ನಿರ್ಮಲ ಯೋಚಿಸುದಳು. ರಾಧಿಕಾನ್ನ ಅವರ ಮನೆಗೆ ಹೋಗಬೇಡ. ಅವರುಗಳನ್ನು ಭೇಟಿಯಾಗಬೇಡ ಅಂತ ಹೇಳಿದರೆ, ನನಗೆ ತಿಳಿಯದಂತೆ ಹೋಗಬಹುದು. ಅಥವಾ ನನ್ನ ಮಾತನ್ನು ಮೀರಿ ಹೋಗಬಹುದು. ಇದುವರೆಗೂ ಎಷ್ಟು ಸಲ ಹೋಗಿ ಬಂದಿದಾಳೋ...ಆದರೂ ಇದುವರೆಗೂ ಇವನೇ ತನ್ನ ಅಪ್ಪ ಅಂತ ಅವಳಿಗೆ ಗೊತ್ತಾಗಿಲ್ಲ. ಆ ರಹಸ್ಯ ಹಾಗೇ ಉಳಿಯಲಿ ಎಂದುಕೊಂಡು ಬಹುಕಷ್ಟದಿಂದ ನುಡಿದಳು.

ರಾಧಿಕಾನಿಮ್ಮನ್ನು ನೋಡುಕ್ಕೆ, ಮಾತಾಡುಕ್ಕೆ. ನಾನು ಬೆಡ ಅಂತ ಅನ್ನುಲ್ಲ. ಆದರೆ, ಅವಳು ನಿಮಮ ಮಗಳು ಅನ್ನುವುದು ಅವಳಿಗೆ ತಿಳಿಯಕೂಡದು

ಯಾಕೆ ತಿಳಿದರೆ ತಪ್ಪೇನು?' ನಿರ್ಮಲಳ ಮಾತು ವಿಚಿತ್ರವಾಗಿ ತೋರಿತ್ತು ಅವನಿಗೆ.

ತಿಳಿದರೆ, ಅವಳು ನಿಮ್ಮ ಮುಖ ಕೂಡಾ ನೋಡೋಕೆ ಇಷ್ಟಪಡುಲ್ಲ. ಆ ಮೇಲೆ ಅವಳು ನನ್ನಿಂದಲೂ ದೂರ ಹೊರಟು ಹೋಗ್ತಾಳೆ. ಅವಳ ಭವಿಷ್ಯ ಹಾಳಾಗುತ್ತದೆ. ನಾನು ಕಟ್ಟಿರುವ ಕನಸು ಚೂರಾಗಿ ಹೋಗುತ್ತದೆ. ನಿಮಮ ಮಗಳ ಬಾಳು ಹಾಳಾಗುವುದು ನಿಮಗೆ ಇಷ್ಟಾನಾ? ಸವಾಲು ಹಾಕಿದಳು.

ಛೆ..ಛೆ.... ಎಂಥಾ ಮಾತಾಡ್ತೀಯ ನಿರ್ಮಲಾ...ನನ್ನ ಮಗಳ ಬಾಲು ಸದಾ ಚೆನ್ನಾಗಿರಲಿ ಅಂತ ನನ್ನ ಆಸೆ. ಅದಕ್ಕೂ ಇದಕ್ಕೂ ಏನು ಸಂಬಂಧ?"

"ಸಂಭಂಧ ಇದೆ. ಏನೇನೋ ತಲೆಗೆ ಹಚ್ಚಿಕೊಂಡು, ಅವಳು ಬುದ್ದಿ ಕೆಟಟವಳಂತೆ ಆಡ್ತಾಳೆ. ಯಾರ ಯಾರೋ ಮಾತನ್ನು ಕೇಳಿಕೊಂಡು ಏನೇನೋ ಮಾತಾಡ್ತಾಳೆ. ತಿಳುವಳಿಕೆ ಸಾಲದು. ಅವಳಿಗೆ ನೀವು ತಿಳುವಳಿಕೆ ಹೇಳಬೇಕು. ಅವಳಿಗೆ ಓದಿನಲ್ಲಿ ಆಸಕ್ತಿ ಹುಟ್ಟಿಸಬೇಕು. ಪರೀಕ್ಷೆಗೆ ಹೋಗುವುದಕ್ಕೆ ಒಪ್ಪಿಸಬೇಕು ಇದು ನಿಮ್ಮಿಂದ ಸಾಧ್ಯಾನಾ?'

''ಇದನ್ನೆಲ್ಲಾ ನೀನೇ ಮಾಡಬಹುದಲ್ಲ. ನನಗೇಕೆ ಹೇಳಿದೀಯ?'

ನಾನು ತಾಯಿಯಾಗಿ ಹೇಳುವುದನ್ನೆಲ್ಲಾ ಹೇಳಿಯಾಗಿದೆ. ಈ ಮುಂಚೆ ಅವಳೆಂದೂ ನನ್ನ ಮಾತನ್ನು ಮೀರಿದವಳಲ್ಲ. ಆದರೆ ಈಗ, ನಿಮ್ಮ ಪರಿಚಯವಾದ ಮೇಲೆ, ಮನೋಜನ ಸ್ನೇಹ ದೊರಕಿದ ಮೇಲೆ ಅವಲ ಬುದ್ದಿ ಅವಳ ಕೈಯಲಿಲ್ಲ.

ರಂಗನಾತ ನಕ್ಕು ಬಿಟ್ಟ. ಅಂತೂ ತಪ್ಪನ್ನೆಲ್ಲಾ ನಮ್ಮ ತಲೆಯ ಮೇಲೆ ಹಾಕ್ತಿದೀಯ,,,,, ರಾಧಿಕಾ ತಾನಾಗಿಯೇ ನಮ್ಮ ಸ್ನೇಹ ಮಾಡಿಕೊಂಡಿದಾಳೆ...

ಹಾಗಾದ್ರೆ...ಇಪ್ಪತ್ತು ವರ್ಷಗುಳ ಕೆಳಗೆ. ಮಾಡಿದಂತೆ, ನಮ್ಮಿಬ್ಬರನ್ನೂ ನಮ್ಮ ಪಾಡಿಗೆ ಬಿಟ್ಟು ದೂರ ಹೊರಟು ಹೋಗಿ. ನಾಲ್ಕು ದಿನ ವ್ಯಸನ ವಾಗಬಹುದು ಅವಳಿಗೆ. ಆಮೇಲೆ ಕೆಟ್ಟ ಕನಸು ಎಂಬಂತೆ, ತಾನಾಗಿಯೇ ಮರೆಯುತ್ತಾ ಖಂಡಿತಾ..."

ಅಂತೂ ನಾನು ಸೋಲಬೇಕು. ಇದು ನಿನ್ನ ಆಸೆ. ಆಗಲಿ...ಇದರಿಂದ ನಿನ್ನ ಮಗಳಿಗೆ ಒಳ್ಳೆಯದಾಗುತ್ತೆ ಅಂತ ನಿನ್ನ ಮನಸ್ಸಿನಲ್ಲಿ ದ್ದರೆ ಅದೇ ಆಗಲಿ. ಮನೋಜ ತುಂಬಾ ಒಳ್ಳೆಯ ಹುಡುಗ. ನನ್ನ ಮಾತನಉ ಮೀರುವುದಿಲ್ಲ. ಆದರೆ ಒಂದುಮಾತು. ರಾಧಿಕಾ ಕಮನೋಜನ್ನ ಪ್ರೀತಿಸ್ತಿದಾಳೆ. ಪ್ರೀತಿಸಿದವನನ್ನು ಬಿಟ್ಟು ಇರುಕ್ಕೆ ಅವಳಿಂದ ಆಗದೇ ಎಂದಾದರೂ ನಮ್ಮ ಮನೆಗೆ ಬಂದರೆ, ನಾನು ಅವಳನ್ನು ಆದರೆಂದ ಬರಮಾಡಿಕೊಲ್ತಿವಿ. ಆಗ ನೀನು ಏನೂ ಮಾಡುಕ್ಕಾಗುಲ್ಲ.

ಹೆದರಿಸ್ತದೀರಾ? ರಾದಿಕಾ ನನಗೆ ಮೋಸಮಾಡಿ ನಿಮ್ಮ ಬಳಿಗೆ ಖಂಡಿತಾ ಬರುವುದಿಲ್ಲ....ಅಲ್ಲದೇ, ಮನೋಜ, ನಿಮ್ಮಂತೆಯೇ ರಾಧಿಕಾಗೆ ದ್ರೋಹ ಮಾಡ್ತಾನೆ ಅಂತ, ನಾನು ಹೇಳಿದರೆ..?

ರಂಗನಾಥ ಪೆಚ್ಚಾದ. ಈ ನುಡಿ ಅವನನ್ನೂ ಘಾಸಿ ಗೊಳಿಸಿತ್ತು.

ನೀನು ನನ್ನನ್ನು ಏನು ಬೇಕಾದರೂ ಅನ್ನು ಮನೋಜನ್ನ ಅನ್ನಬೇಡ ಅಂತಹ ಹುಡುಗ ಬಹಳ ಅಪರೂಪ. ಅವನಲ್ಲಿ ಯಾವ ದುರ್ಗುಣಗಳಿಲ್ಲ. ಯಾರನ್ನೂ ನೋಯಿಸುವ ಹುಡುಗ ಅವನಲ್ಲ. ರಾಧಿಕಾ ಅವನನ್ನು ಪ್ರೀತಿಸುತ್ತಿದಾಳೆ ಅಂತಂದ್ರೆ ಅದು ಅವಳ ಅದೃಷ್ಟ.

ನೀವಲ್ಲದೇ ಇನ್ಯಾರು ಹೊಗಳಬೇಕು ನಿಮ್ಮ ಮನೋಜನ್ನ?"

" ಅನುಮಾನವಿದ್ದರೆ ರಾಧಿಕಾನ್ನ ಕೇಲು. ಮುರಳೀನ ಕೇಳು... ಅವನ ಸ್ನೇಹಿತರನ್ನ ಕೇಟಳುಇ...

ಅದರೆ ಅಗತ್ಯ ನನಗಿಲ್ಲ. ಅದನ್ನೆಲ್ಲಾ ಕನಾನೇಕೆ ಮಾಡಲಿ

ಅದಕಕ್ಕೆ ನಾನೇನೂ ಹೇಳುಲ್ಲ. ನಿನ್ನಿಷ್ಟ. ಕ್ರಮೇಣ ನಿನಗೇ ಗೊತ್ತಾಗುತ್ತೇ.... ಸರಿ, ಈಗ ರಾಧಿಕಾ ಎದ್ದಿದ್ದರೆ, ಒಂದು ಸಲನಾ ನು ಅವಳನ್ನು ನೋಡಿ ಹೋಗ್ತೀವಿ..

ನೀವು ಇಲ್ಲೆ ಇರಿ. ನಾನು ಅವಳನ್ನು ಕಳಿಸ್ತಿವಿ. ಎಂದು ಹೇಳಿ ತನ್ನ ಪಾಡಿಗೆ

ತಾನು ಹೊರಟು ಹೋದಳು. ಅವಳ ವರ್ತನೆ ಅವನನ್ನೂ ರೇಗೆಸಿದ್ದರೂ, ಅದಕ್ಕೆ ತಾನೇ ಕಾರಣ ಅಂತ ತಿಳಿದಿದ್ದರೆಂದ ಸುಮ್ಮನಾದ. ಕುಂಟುತ್ತಾ ನಿಧಾನವಾಗಿ ಹೋದವಳನ್ನೇ ಅವಲ ಕಣ್ಣುಗಳು ಹಿಂಬಾಲಿಸಿದವು ನಂತರ, ಕೆಲವೇ ನಿಮಿಷಗಳಲ್ಲಿ ರಾಧಿಕಾ ಕುಂಟತ್ತಾ ಬಂದಳು.

ಹಲೋ ಅಂಕಲ್ ...ಎಂದಳು ಉತ್ಸಾಹದಿಂದ. ಅತ್ತಿತ್ತ ಕಣ್ಣಾಡಿಸಿಕೇಳಿದಳು. ಒಬ್ಬರೇ ಬಂದ್ರಾ? ಮನೋಜ ಬರಲಿಲ್ವಾ?"

"ಇಲ್ಲಮ್ಮಾ...ನಾನೊಬ್ಬನೇ ಬಂದಿದೀನಿ. ಈಗ ಹೇಗಿದೀಯ?"

" ಆರಾಮವಾಗಿದೀನಿ. ಊಟ ನಿದ್ದೆ ಅಷ್ಟೇ. ಸೋಮಾರಿಯಾಗಿ ಕಾಲ ಕಳಿತದೀನಿ ಕಾಲಿನ ಭಾರ ಸ್ವಲ್ಪ ಸತಾಯಿಸುತ್ತೆ.

ನೀನು ತುಂಬಾ ಆಕ್ಟಿವ್, ತುಂಬಾ ಜಾಣೆ ಅಂತ ನಿಮ್ಮಮ್ಮ ಇಷ್ಟೊತ್ತು ನಿನ್ನನ್ನೇ ಹೊಗಳುತ್ತಕಿದ್ದರು ಕಾಲು ಪ್ರಾಕ್ಚರ್ ಆಗಿರುವುದರಿಂದ ಬಹಳ ಅಪ್ಸೇಟ್ ಆಗಿದಾಳೆ ಅಂತ ತುಂಬಾ ನೊಂದು ಕೊಂಡರು. ಮಗಳ ಮುದ್ದು ಮುಖವನ್ನೇ ನೋಡುತ್ತಾ ಹೇಳಿದ.

ಅಮ್ಮ ನನ್ನನ್ನ ಹೊಗಳಿದಳಾ?ನಾನು ನಂಬುಲ್ಲ...ಕಾಲು ಮುರಿದ ಕೋಳಿ ತರಹ ಆಗಿದೀನಿ. ಆಪ್ಸೇಟ್ ಆಗದೇ ಇರುತ್ತಾ?"

ಇನ್ನೆಷ್ಟು ದಿನ ಈ ತೊಂದರೆ? ಯಾವಾಗ ಬಿಚ್ತಾರಂತೆ?"

" ಮುಂದಿನ ವಾರ. ಆಮೇಲೂ ಸ್ವಲ್ಪ ದಿನ ಫಿಸಿಯೋಥೆರಪಿ ಮಾಡಿಸ್ಕೋಬೇಕು ಅಷ್ಟಂಯ

ಹಾಗಾದ್ರೆ ಮುಂದಿನ ಸಲ ನಾನು ಬರುವ ಹೊತ್ತಿಗೆ ಮುಂಚಿನ ಹಾಗೇ ನಗುನಗುತ್ತಾ ಜಾಲಿಯಾಗಿರಬೇಕು. ಡ್ಯಾನ್ಸಿಂಗ್ ಕ್ಲಾಸಿಗೆ ಹೋಗುವ ಹುಮ್ಮಸು ಇರಬೇಕು ನಕ್ಕ. ಅವಳೂ ಸಪ್ಪಗೆನಕ್ಕಳು.

ನಿನ್ನಂತಹ ಹುಡುಗಿ ಹೀಗೆ ಸಪ್ಪಗೆ ನಕ್ಕರೆ ಚೆನ್ನಾಗಿರುಲ್ಲ ಬಾಯ್ತುಂಬಾ ನಗಬೇಕು. ನಗುನಗುತ್ತಾ ಇರಬೇಕು ಎಂದ.

ಅವನ ಮಾತಿಗೆ ಅವಳು ಬಲವಂತವಾಗಿ ಮುಗುಳ್ನಕ್ಕಳು.

ಮನೋಜ, ಮುರಳಿ, ಗೀತಾ ಯಾರೂ ಬರ್ತಾನೇ ಇಲ್ಲ. ಅವರೆಲ್ಲಾ ಅಮ್ಮನಿಗೆ ಹೆದರಿರಬೇಕು. ಮತ್ತೆ ನಕ್ಕಳು.

ಅವರೆಲ್ಲಾ ಚಿಕ್ಕಮಕ್ಕಳಲ್ಲ... ಡಾಕ್ಟರು ಇಂಜೆಕ್ಷನ್ ಚುಚ್ಚಿ ಬಿಡ್ತಾರೆ ಅಂತ, ನಿಮ್ಮಮ್ಮನಿಗೆ ಹೆದರುಕ್ಕೆ.. ಅವರೆಲ್ಲಾ ನಿನಗೆ ಹೆದರ್ತಾರೆ ತಮಾಸೇ ಮಾಡಿದ.

ನನಗಾ? ಸುಳ್ಳು ನಾನೇನು ರಾಕ್ಷಸೀನಾ ಅವರೆಲ್ಲ ಕಹೆದರುಕಕ್ಕೆ ತಾನೂ ತಮಾಶೆಯಾಗಿ ಪ್ರಶ್ನಿಸಿದಳು.

ನೀನು ಅಪ್ಸರೆ..ಎಂದುಕೊಂಡ ಮನಸ್ಸಿನಲ್ಲಿ ಸುಮ್ಮನೇ ತಮಾಸೇ ಮಾಡಿದೆ ಅಷ್ಟೇ. ಎಷ್ಟು ಚೆನ್ನಾಗಿ ನಗು ಬಂತು. ನನ್ನ ಮಾತಿನಿಂದ. ಅವರಿಗೆಲ್ಲ ನಾನು ಹೇಳ್ತೀನಿ. ನಾಳೇ ನೇ ಬರ್ತಾರೆ ದೃಢ ವಿಶ್ವಾಸದಿಂದ ಹೇಳಿದ. ರಾಧಿಕೆಯ ಮನಸ್ಸು ಹೂವಾಗಿತ್ತು. ರಂಗನಾಥನೂ ಮುದಗೊಂಡಿದ್ದ.

ಬರ್ತಿನಮಮ..ನಿನ್ನ ತಾಯಿಗೆ ಹೇಳಿಬಿಡು. ಯಾವ ಚಿಂತೆಯೂ ಬೇಡ. ಎಂದು

ನಾಲ್ಕಾರು ಅರ್ಥಗಳಲ್ಲಿ ಹೇಳಿ ಹೊರಟ.

ನಗುನಗುತ್ತಾ ಒಳ ಬಂದ ಮಗಳನ್ನು ದುರುದುರನೆ ನೋಡಿದಳು ನಿರ್ಮಲಾ . ಏನು ಮೋಡಿ ಮಾಡದಾನೋ ಮಗಳ ಮೇಲೆ ಎಂದು ಅವನನ್ನು ಬೈದು ಕೊಂಡಳು.

ಅಂಕಲಂ ಹೋರಟು ಹೋದ್ರು...ಎಂದಳು. ನಿರ್ಮಲ ಏನ್ನು ಹೇಳಲಿಲ್ಲ. ಅಮ್ಮ ಅವರು ಎಷ್ಟು ಒಳ್ಳೆಯವರು ಗೊತ್ತಾ? ನನ್ನನ್ನ ಕಂಡರೆ ಎಷ್ಟು ಪ್ರೀತಿ?ನಮಗೆ ಯಾರೂ ನೆಂಟರಿಷ್ಟರಲ್ಲಲದೇ ಒಂಟಿಯಾಗಿ ಬಿಟ್ಟಿದ್ದೆವು. ಈಗ ಇವರು ನೆಂಟರಿಗಿಂತ ಆತ್ಮೀಯರಾಗಿದ್ದಾರೆ ಅಲ್ವಾ? ಅಂಕಲ್‌ಗೆ ಕಾಫೀನಾದ್ರೂ ಆಫರ್ ಮಾಡಬೇಕಾಗಿತ್ತು...ತಾಯಿ ಏನೂ ಉತ್ತರಿಸದಿದ್ದಾಗ ಅಸಹನೆ ಮೂಡಿತು. ಈ ಅಮ್ಮನಿಗೆ ಅಸೂಯೆ ಎಂದು ತನ್ನಲ್ಲೇ ಬೈದುಕೊಂಡು, ತನ್ನ ಪಾಡಿಗೆ ತಾನು ಒಳಗೆ ಹೊರಟು ಹೋದಳು. ನಿರ್ಮಲ ರಂಗನಾಥನ ಬಗ್ಗೆಯೋ ಚಿಂತಿಸುತ್ತಿದ್ದಳು.

ಅವನು ಒಳ್ಳೆಯವನಾಗಲಿಲ್ಲ ನನ್ನ ಭಾಗಕ್ಕೆ. ಆದರೆ ಕೆಟ್ಟವನೂ ಅಲ್ಲ. ಮನೋಜನಿಗೋಸ್ಕರ ನನ್ನನ್ನು ಬಿಟ್ಟು ಹೋದ ಅನ್ನುವ ತಪ್ಪು ಒಂದನ್ನ ಬಿಟ್ಟರೆ ಬೇರೆ ಯಾವ ದುರ್ಗುಣಗಳೂ ಅವನಲ್ಲಿಲ್ಲ. ಅದಕ್ಕೇ ಏನೋ ಅಪ್ಪ ಬದುಕಿದಾಗ ನನಗೆ ಹೇಳಿದ್ದು ಅವನು ಯಾವಾಗ ವಾಪಸ್ಸು ಬಂದರೂ ತಿರಸ್ಕರಿಸಬೇಡ ಅಂತ...ಆದರೆ ಅದು ಅಷ್ಟು ಸುಲಭವಲ್ಲ. ಇಪ್ಪತ್ತೂ ವರ್ಷಗಳ ನಂತರ ಮತ್ತೆ ಬಂದವನೂ ಆದರದಿಂದ ಕಾಣುವುದಂತೂ ಸಾಧ್ಯವಿಲ್ಲ. ಅವನು ನನಗೆ ಮಾಡಿದ ಅನ್ಯಾಯವನ್ನು ಮರೆಯಲು ಸಾಧ್ವೇ? ಅವನು ಮಾಡಿದ್ದು ಒಂದೇ ಒಂದು ತಪ್ಪಾದರೂ, ಅದು ನನ್ನ ಜೀವನದ ಸಂತೋಷವನ್ನೆಲ್ಲಾ ಕಬಳಿಸಿದೆ. ಅಂತಹವನನ್ನೂ ನಾನಾಗಿಯೇ ಖಂಡಿತಾ ಮಾತನ್ನಾಡಿಸುತ್ತಿರಲಿಲ್ಲ. ಇದಕ್ಕೆಲ್ಲಾ ಕಾರಣ ಈ ರಾಧಿಕಾನೇ...ಮನೋಜನಂತೆ, ಅವನ ಮಾವನಂತೆ ನನ್ನ ಮನಸ್ಸಿಗೆವಿರುದ್ದವಾದ ಕೆಲಸವನ್ನು ನನ್ನಿಂದ ಮಾಡಿಸುತ್ತಿದಾಳೆ. ಮೊದಲು ಇವಳನ್ನೇ ಚೆನ್ನಾಗಿ ಬೈಯಬೇಕು.

ನಿರ್ಮಲ ಎಂದೂ ಇಷ್ಟು ಆತಂಕಗೊಂಡಿರಲಿಲ್ಲ. ರಂಗನಾತ ವಾಪಸ್ಸು ಬರದೇ ಇದ್ದಾಗ, ಸ್ವಾಭಿಮಾನ ಬಿಟ್ಟು ಹಣಕ್ಕಾಗಿ ತಂದೆಯ ಬಳಿ ಕೈಯೊಡ್ಡಿದಾಗ ,ಕ ಏನೋ ಒಂದು ತರಹ ಹುಶಾರು ತಪ್ಪಿದ ಹಾಗಾಗಿತ್ತು...ಆದರೆ ಆಗ ಇನ್ನು ರಕ್ತ ಬಲವಿತ್ತು. ಅಲ್ಲದೇ ಹುಟ್ಟಲಿರುವ ಮಗುವಿಗಾಗಿ ಎಲ್ಲಾ ಸಹಿಸಿಕೊಂಡಿದ್ದಲೇನೋ...

ಔ ಆದರೆ ಈಗ?ರಾಧಿಕಾ ದೊಡ್ಡವಳಾಗಿದ್ದಾಳೆ. ಮನಸ್ಸಿನ ನಾಳ ಭಾವನೆಗಳು ಬೆಳೆಯುತ್ತಿರಬಹುದು. ಸ್ವಂತ ಮನೋಭಾವ ದೃಢವಾಗುತ್ತಿರಬಹುದು. ಏನೇನೋ ಮಾಡ್ತಾಳೋ...?ಇವಳಿಂದ ಇನ್ನು ಏನೇನು ಅನುಭವಿಸಬೇಕೋ..ಚಿಂತೆ ಅಧಿಕವಾದಂತೆ ಹೃದಯ ಭಾರವಾಯಿತು ಎದ್ದು ಒಂದು ಸಣ್ಣ ಮಾತ್ರೆ ನುಂಗಿದಳು.

ಮಾರನೇ ದಿನ ಭಾನುವಾರವಾಗಿತ್ತು. ರಂಗನಾಥ ಹೇಳಿದ್ದಂತೆ, ಗೀತ ಮುರಳಿ ಇಬ್ಬರೂ ಬಂದರು. ನಿರ್ಮಲನ್ನ ಗೌರವದಿಂದ ಮಾತವಾಡಿಸಿದರು.. ತಾಯಿಯ ಎದುರಿಗೇ ರಾಧಿಕಾ ಯಾವ ಅಳುಕೂ ಇಲ್ಲದೇ ಕೇಳಿದಳು.... ಏನೇ..? ನೀವಿಬ್ರೆ ಬಂದ್ರಿ? ಮನೋಜ ಬರಲಿಲ್ವಾ?" ನಿರ್ಮಲೆಯ ಹುಬ್ಬುಗಳು ಹತ್ತಿರವಾದವು.

ಇಲ್ಲ ಅವರ ಮಾವನಿಗೆ ಹುಶೀರಿಲ್ಲವಂತೆ

ನಿರ್ಮಲ ಮೊದಲಿಗೆ ಕೇಳಿಸಿದವಳಂತೆ ಸುಮಮ್ಮಿದ್ದಳು. ಸುಳ್ಳಿರಬಹುದು

ಎಂದುಅನುಮಾನಿಸಿದಳು. ಮನೋಜನ್ನ ನಮ್ಮ ಮನೆಗೆ ಕಳಿಸಲು ಇಷ್ಟವಿಲ್ಲದಿರಬಹುದು. ಅಥವಾ ಅವನಿಗೆ ಬರಲು ಇಷ್ಟವಿಲ್ಲದಿರಬಹುದು ಒಳ್ಳೆಯದೇ ಆಯಿತು. ಅಂತೆನ್ನಿಸಿದರೂ, ಮಗಳ ಮುಖ ಪೆಚ್ಚಾದುದನ್ನ ಕಂಡು ಮನದ ಆತಂಕ ಹೆಚ್ಚಾಗಿತ್ತು. ಅವನ ಮೇಲಿನ ಇವಳ ಮೋಹ ಅತಿಯಾಯತು ಎನಿಸಿ ಬೇಸರವಾಯಿತು. ನಿರ್ಮಲ ಅಲ್ಲಿಂದ ಎದ್ದು ಹೋದಳು. ನಿರ್ಮಲ ಆ ಕಡೆ ಎದ್ದು ಹೋದ ಮೇಲೆ ರಾಧಿಕಾ ಮತ್ತೆ ಕೇಳಿದಳು.

ಮನೋಜ ಯಾಕೇ ಬರಲಿಲ್ಲ? ನಿಜವಾಗ್ಲೂ ಅಂಕಲ್‌ಗೆ ಹುಶಾರಿಲ್ವಾ?

ಏನೋ ನನಗೆ ಗೊತ್ತಿಲ್ಲ. ಅವರೇ ಹೇಳಿದ್ದು...ಅವನು ಬರುಲ್ಲ, ನನಗೆ ಹುಶಾರಿಲ್ಲ ಅಂತ ಹೇಳಿಬಿಡಿ ಎಂದರು ಮುರಳಿ ನುಡಿದ.

ನೆನ್ನೆ ಅಂಕಲ್ ಬಂದಾಗ, ಅಮ್ಮ ಏನೋ ಆಡಿರಬೇಕು. ಅವರ ಮನಸ್ಸಿಗೆ ನೋವಾಗಿರಬೇಕು ತಾಯಿಯ ಮೇಲೆ ಸಂದೇಹ ಮೂಡಿತ್ತು.

ಹೋಗಲಿ ಬಿಡು. ನೀನೇ ಏನೇನೋ ಯೋಚಿಸಿಕೊಂಡು ಅಪ್ಸೆಟ್ ಆಗ್ತೀಯ...ನೀನು ಮತ್ತೆ ಪ್ಲಾಸ್ಟರ್ ಬಿಚ್ಚಿಸಿಕೊಳ್ಳಲು, ನರ್ಸಿಂಗ್ ಹೋಂಗೆ ಹೋಗುವ ದಿನ ತಿಳಿಸಿದರೆ, ಖಂಡಿತಾ ಬರ್ತಾನೆ

ಅಲ್ಲಿಯವರೆಗೆ ಕಾಯಬೇಕಲ್ಲ...ಗೊಣಗಿದಳು.

ಬರದೇ ಇರುವವನನ್ನು ನೆನೆಸಿಕೊಂಡು ಕೊರಗ್ತೀಯೋ...ಅಥವಾ ಬಂದವರ ಜೊತೆ ಮಾತಾಡ್ತೀಯೋ...ಗೀತ ಜಬರದಸ್ತಾಗಿ ಕೇಳಿದಳು.

ಸಾರಿ ಕಣೆ...ಮಾತ್ನಾಡು... ತುಂಬಾ ಮಾತ್ನಾಡು..ಕಾಲೇಜಿನ ವಿಚಾರವನ್ನೆಲ್ಲಾ ಹೇಲು...ಎನ್ನುತ್ತಾ ಅವಳ ಕೈಹಿಡಿದು ಕೂರಿಸಿಕೊಂಡಳು. ನೀವಿಬ್ಬರೂ ಮಾತ್ನಾಡ್ತಾ ಇರಿ. ನಾನು ಸ್ವಲ್ಪ ಹೊರಗೆ ತಿರುಗಾಡಿಕೊಂಡು ಬರ್ತೀವಿ ಎನ್ನುತ್ತಾ ಹೊರಗೆ ಹೋದ, ಆಚೆ ಬಾಗಿಲಿನಲ್ಲಿ ನಿಂತಿದ್ದ ನಿರ್ಮಲ ಮುರಳಿ ಹೋದದ್ದನ್ನು ನೋಡಿಯೂ ಸುಮ್ಮನಿದ್ದಳು.

ಮುರಳಿ ಏಕೆ ಹೊರಟು ಹೋದ? ಹಾಗಾದರೆ ರಂಗನಾಥನಿಗೆ ನಿಜವಾಗಿಯೂ ಹುಶಾರಿಲ್ಲವೇ? ಏನಾಗಿರಬಹುದು? ಬಿ. ಪಿ. ಹೆಚ್ಚಾಗಿರ ಬಹುದೇನೋ...ನೆನ್ನೆ ನನ್ನ ಮಾತುಗಳು ಅವನ ರಕ್ತದ ಒತ್ತಡ ಹೆಚ್ಚಿಸಿರ ಬಹುದೇ... ಆತಂಕಗೊಂಡು ಅವನು ಬಿ.ಪಿ. ಹೆಚ್ಚಿಸಿಕೊಂಡಿದ್ದರೇ... ಅವನಿಗೂ ವಯಸ್ಸಾಗಿದೆ... ಅವರಮ್ಮನಿಗೆ ಆದ ಹಾಗೆ ಏನಾದರೂ ಆಗಿಹೋದರೇ... ಅದಕ್ಕೇ ಮನಾನೇ ಕಾರಣಳಾಗುತ್ತೇನೆ...ರಾಧಿಕಾಳ ವಿಷಯವನ್ನು ಅವನು ಮನಸ್ಸಿಗೆ ಹಚ್ಚಿಕೊಂಡು ಕೊರಗುತ್ತಿರಬಹುದೇ... ಏನಾದರೂ ಆಗಲಿ, ಹಾಳಾಗಿ ಹೋಗಲಿ ಅಂತ ನನಗೇಕೆ ಅನ್ನಿಸುತ್ತಿಲ್ಲ?... ನನ್ನ ಮಗಳ ತಂದೆಯಾದವನು ಅಂತಲೇ...ಅಥವಾ ಹಿಂದೊಮ್ಮೆ ನನ್ನ ಬಾಳಿನಲ್ಲಿ ಬಂದು ಹೋದವ ಅಂತಲೇ... ಅಥವಾ ನನ್ನ ಸ್ವಭಾವವೇ ಹಾಗೇನೋ...

ತಾಯಿ ನನ್ನನ್ನೂ ಕೆಟ್ಟವಾಗಿ ನಡೆಸಿಕೊಂಡರೂ, ನಾನು ಅವಳಿಗೆ ಕೇಡು ಬಯಸಿರ ಲಿಲ್ಲ. ತಂಗಿ, ತಮ್ಮ ಮದುವೆಯಾಗಿ ಹೋದಾಗಲೂ, ನಾನು ಕೆಟ್ಟ ಮಾತುಗಳನ್ನಾಡಿರ ಲಿಲ್ಲ. ತಾಯಿ ಮಲತಾಯಿ ಅಂತ ಗೊತ್ತಾದಾಗ, ಹಣದ ಆಸೆಯಿಂದ ನನ್ನ ವಿರುದ್ಧವಾಗಿ ಮಾತಾನಾಡಿ ದಾಗಲೂ ಸಹ ಅವಳಿಗೆ ಕೆಡುಕೆಣಿಸಿರಲಿಲ್ಲ. ಅದೇ ರೀತಿ ರಂಗನಾಥ

ದೂರ ಹೋಗಿ ವಾಪಸ್ಸು ಬರದೇ ಇದ್ದಾಗ ಅವನನ್ನು ದ್ವೇಷಿಸಿದ್ದೆವೇ ಹೊರತು ಅವನಿಗೆ ಕೇಡಾಗಲಿ ಎಂದು ನನಗನ್ನಿಸಿರಲಿಲ್ಲ. ಮನೋಜನೇ ಇದಕ್ಕೆಲ್ಲ ಕಾರಣ ಅಂತನ್ನಿಸಿದ್ದರೂ ಅವನ ಬಗ್ಗೆ ಕೆಟ್ಟ ಭಾವನೆಗಳಿರಿಲಲ್ಲ. ನನ್ನನ್ನು ನಾನು ಒಳ್ಳೆಯವಳು ಅಂತ ಹೇಳಕೋ ಬೇಕೋ..ಕೆಟ್ಟವಳು ಅಂತ ತಿಳಕೋಬೇಕೋ... ಛೆ ಈಚೆಗೆ ಸಮಸ್ಯೆಗಳು ಜಾಸ್ತಿಯಾಗುತ್ತಿವೆ. ಮನಸ್ಸಿನ ಸ್ಥಿರತೆ ಕಮ್ಮಿ ಆಗ್ತಿದೆ... ಏಕೋ ಏನೋ ಎದೆಯ ನೋವು ಹೆಚ್ಚಿ ಜುಳ್ ಎಂದಿತ್ತು. ಬೆನ್ನು ಕೈಗಳು ಸ್ವಲ್ಪ ಭಾರ ವಾದಂತೆನಿಸಿತು... ಛೆ ನನಗೇನಾಯುತು ಅಂತ ಅಂದುಕೊಳ್ಳುವಷ್ಟರಲ್ಲಿ, ಮೈಯೆಲ್ಲಾ ಬೆವರಿತು. ನಿಲ್ಲಲು ತ್ರಾಣವಿಲ್ಲವೆನಿಸಿ, ಗೋಡೆಗೆ ಆತುನಿಂತು, ಹಾಗೇ ಸುಧಾರಿಸಿ ಕೊಂಡು, ಒಳಗೆ ಹೋಗಿ, ಒಂದು ಮಾತ್ರೆ ನುಂಗಿದಳು. ಹಾಗೇ ಸೋಫಾದ ಮೇಲೆ ಒರಗಿ ಕುಳಿತಳು.

ಮುರಳಿ ಬಂದವನು ಸೋಫಾದ ಮೇಲೆ ಕುಳಿತಿದ್ದ ಆಕೆಯನ್ನು ಕಂಡು ಯಾಕೋ ಬಳಲಿದ್ದಾರೆನಿಸಿತ್ತು. ಏನಾದರೂ ಕೇಳಿದರೆ ಆಕೆ ಮಿಸ್ಟೇಕ್ ಮಾಡಿಕೊಂಡಾಳೆಂದು, ಹಿಂದೆಂದೂ ಹೀಗಿರಲಿಲ್ಲ. ಯಾವಾಗಲೂ, ಆಕ್ಟಿವ್ ಆಗಿ ತಮ್ಮ ಕರ್ತವ್ಯದ ಕಡೆ ಗಮನ ಕೊಡುತ್ತಿದ್ದವರು. ಇಂದು ಹೀಗೆ ಸುಸ್ತಾಗಿ ಕುಳಿತಿರಲು ಕಾರಣ? ಹಾಗಾದರೆ, ರಾಧಿಕಾ ಅಷ್ಟು ಸತಾಯಿಸುತ್ತಿದಾಳೆಯೇ? ಅಲ್ಲಿ ಮನೋಜನ ಮಾವ ಸಹ ಹುಶಾರಿಲ್ಲವೆಂದರು. ನೆನ್ನೆ ದಿನ ಇಲ್ಲಿಗೆ ಬಂದಿದ್ದರಂತೆ. ಅಂದಮೇಲೆ ಏನೋ ಮಾತುಕತೆಯಾಗಿರಬಹುದು. ಈ ರಾಧಿಕಾಳ ದೆಸೆಯಿಂದ ಅವರೆಲ್ಲರಿಗೂ ಸಮಸ್ಯೆ ಆತಂಕ ಏನು ರಹಸ್ಯವಿರಬಹುದು?ಗ್ರೀಕರ ರಾಣಿ ಹೆಲೆನ್‌ಗೋಸ್ಕರ ಭಾರಿ ಭಾರಿ ಯುದ್ದವೇ ನಡೆಯಿತು ಅವನಪ್ಪನ ಹಾಗೆ, ಈ ರಾಜ ಕುಮಾರಿಯ ದೆಸೆಯಿಂದ ನಿರ್ಮಲಂಗೆ ಶಾಂತಿ ಇಲ್ಲ. ರಂಗನಾಥನಿಗೆ ನೆಮ್ಮದಿ ಇಲ್ಲ... ಆದರೆ ಅವರಿಗೇಗೆ ನೆಮ್ದಿ ಕೋಡಬೇಕು? ಅವರಿಗೂ ಇವಳಿಗೂ ಸಂಬಂಧ? ತಂಗಿಯ ರೂಪವನ್ನು ಹೊಂದಿದಾಳೆ ಎಂದ ಮಾತ್ರಕ್ಕೆ ನೆಮ್ಮದಿಗೆಡುವಷ್ಟು ಮೂರ್ಖರು ಯಾರಿರುತ್ತಾರೆ? ಹಾಗಾದರೆ ಬೇರೆ ಏನೋ ರಹಸ್ಯವಿರಬೆಕು. ಅದನ್ನೂ ಹೇಗಾದರೂ ಸರಿ, ತಿಳಿದುಕೊಳ್ಳ ಬೇಕು ಎನ್ನುವ ಕುತೂಹಲ ಮೂಡಿತು. ಯಾರನ್ನ ಕೇಳುವುದು? ಎಂಬುದೆ ತಿಳಿಯಲಿಲ್ಲ. ಗೀತಳನ್ನು ಕೇಳಿದ.

ರಾಧಿಕಾ ಮನೋಜನ್ನ ಪ್ರೀತಿಸ್ತಿದಾಳೆ ಅಂತ ಅವರಮ್ಮನಿಗೆ ಅಸಮಾಧಾನವಿರಬಹುದು. ಅದಕ್ಕೆ ಏನಾದರೂ ಅಂದಿರಬಹುದು. ಆಕೆ ಒಂದು ತರಹದವರು ನಿನಗೆ ಗೊತ್ತಲ್ಲ. ಅವಳ ಮಾತು ಅವಳಿಗೆ ಸರಿಹೋಗುಲ್ಲ"

"ನಿನ್ನ ಹತ್ತರ ಏನೂ ಹೇಳಲಿಲ್ವಾ ಅವಳು?"

"ಮನೋಜ ಯಾಕೋ ಬರಲೇ ಇಲ್ಲ ಅಂದಳು. ಅದೇ ಚಿಂತೆ ಈ ಪ್ರೇಮಿಗಳ ವಿರಹ ಸಾಕಾಗಿದೆ. ನಾನು ಬರದಿದ್ದರೆ ನಿನಗೆ ಹೀಗೇ ಅನ್ನಿಸುತ್ತಾ?"

"ನಾನು ಅದನ್ನೆಲ್ಲ ತಲೆಗೇ ಹಚ್ಚಿಕೊಂಡಿಲ್ಲ."

"ಸಧ್ಯ ಬೇರೆ ಯಾರನ್ನಾದ್ರೂ ಪ್ರೀತಿಸ್ತಿಲ್ಲ ತಾನೇ?"

" ನಾನು ಯಾರನ್ನು ಪ್ರೀತಿಸ್ತಿಲ್ಲ. ನಿನ್ನನ್ನು ಸಹ."

"ಎಷ್ಟು ಧೈರ್ಯವಾಗಿ ಹೇಳ್ತೀಯ. ತಡಿ ಅಚ್ಚಿಗೆ ಹೇಳ್ತೀನಿ."

"ನಾನು ಅತ್ತೆ ಹತ್ತಿರ ಹೇಳ್ತಿವಿ ಓದು ಬರಹ ಬಿಟ್ಟು ನನ್ನನ್ನು ಸತಾಯಿಸ್ತಾನೆ ಅಂತ."

"ಹೇಳ್ಕೋ... ಅಮ್ಮನಿಗೆ ನನ್ನ ಗುಣ ಗೊತ್ತು... ಹೋಗಲಿ ಬಿಡು. ಅಮ್ಮ ಹೇಳ್ತಿದ್ದಳು. ಗೀತ ಬಂದು ತುಂಬಾ ದಿನವಾಯ್ತು ಅಂತ. ಬರ್ತಿಯಾ ಆಮೇಲೆ ನಾನೇ ನಿನ್ನನ್ನು ಮನೆಗೆ ಬಿಟ್ಟು ಬರ್ತಿನಿ."

ಗೀತ ಒಪ್ಪಿ ಅವನ ಮನೆಗೆ ಬಂದಳು. ಅವನ ತಾಯಿ ವಿಶ್ವಾಸದಿಂದ ಗೀತಳನ್ನು ವಿಚಾರಿಸಿಕೊಂಡರು.

"ಯಾಕಮ್ಮಾ ಗೀತ ಅಪರೂಪವಾದೆ? ನಿನ್ನ ಸ್ನೇಹಿತೆಗೆ ಕಾಲು ಫ್ರಾಕ್ಚರ್ ಆದ ಮೇಲೆ ಬಂದೇ ಇಲ್ಲ? ಇವನೂ ಅಷ್ಟೇ ... ಅದಲ್ಲೆಲ್ಲಿ ತಿರುಗ್ತಾನೋ ಮನೆಗೆ ಸರಿಯಾಗಿ ಬರೋಲ್ಲ" ಆಕ್ಷೇಪಣೆ ಮಾಡಿದರು.

"ಎಲ್ಲಿ ಹೋದರೂ ರಾತ್ರಿ ಮನೆಗೆ ಬಂದೇ ಬರ್ತಿನಲ್ಲ. ನನ್ನಿಂದ ಏನಾಗಬೇಕಾಗಿದೆ ಈಗ?"

" ಏನಿಲ್ಲ. ಮನೆಗೆ ಸುಣ್ಣ ಬಣ್ಣ ಹೊಡಿಸಬೇಕು. ಮಹಡಿ ಮೇಲಿನ ರೂಮು ಖಾಲಿ ಮಾಡಬೇಕು. ನಾನು ಹತ್ತಿ ಇಳಿದು ಮಾಡಲಾರೆ.

ಓ...ಅಷ್ಟೇ ತಾನೇ. ಮಾಡಿದ್ರಾಯ್ತುಚು. ನಾಳೇನೇ ಮಾಡಿ ಮುಗಿಸ್ತಿವಿ. ಏನೇ ಗೀತಾ ನಂಗೆ ಸಹಾಯ ಮಾಡ್ತೀಯಾ?"

"ಅವಳ್ಯಾಕೋ...ಅವಳಿಗೆ ಕಷ್ಟವಾಗುಲ್ವೆ?"

"ಕಷ್ಟಪಟ್ಟರೆ ಏನಾಯ್ತು ನಾಳೆ ಈ ಮನೆಗೆ ಸೊಸೆಯಾಗಿ ಬಂದಮೆಲೆ ಕಷ್ಟ ಪಡಲೇ ಬೇಕಲ್ವಾ?'

"ಹಾಗಂತ? ಈಗಲಿಂದ ದುಡಿಸಿಕೊಂಡರು ಅನ್ನೋ ಕೆಟ್ಟ ಹೆಸರು ಬರಬೇಕಾ?"

"ಯಾರೂ ಏನೂ ಅನನಲುಲ್ಲ ಅತ್ತೆ. ನಾನೇ ಸಂತೋಷದಿಂದ ಮಾಡ್ತವಿ

ಅದುಪ ನಿನ ಇಷ್ಟ ನಾನು ಹೇಳಿ ಮಾಡಿಸಿದೆ ಅಂತ ಮಾತ್ರ ಯಾರೂ ದೂಷಿಸಹಾರದು ಎಂದು ಆಕೆ ಒಳಗೆ ಹೊರಟು ಹೋದರಿ. ಗೀತ ಮುಗಳ್ನಕ್ಕಳು.

ಗೀತ, ನಿನ್ನ ಈ ನಗುವಿಗೆ ಏನನ್ನು ಕೊಡಲಿ?"

"ಏನನ್ನು ಕೊಡಬೇಡ. ಈಗ ನನ್ನ ಮನೆಗೆ ನನನ್ನು ತಲುಪಿಸಿಬಿಡು. ಬರ್ತಾ ಬರ್ತಾ ನಿನ್ನ ರಸಿಕತೆ ಹೆಚ್ಚಿದೆ. ಯಾವ ಗಾಳಿ ಬೀಸುತ್ತಿದೆ.

ಗಾಳಿಯೂ ಇಲ್ಲ. ಗಂಧವೂ ಇಲ್ಲ. ವಯೋಧರ್ಮ. ಬ್ರಹ್ಮಚಾರಿಯ ಕೈಗೂಸಾಗಿ ಬೆಳೆದವನು. ಋಶಿಸ್ರಂಗದ ತರಹ ಮಡಿ ಮಡಿಯಾಗಿದ್ದವನು. ಹೆಲೆನ್ ಆಫ್ ಟ್ರಾಯ್ ಹಿಂದೆ ಬಿದ್ದಿಲ್ವಾ?"

"ಯಾರ ವಿಚಾರ ಹೇಳಿತಿದೀಯ ನೀನು?ತಬ್ಬಿಬ್ಬಾಗಿದ್ದಳು.

ಇನ್ಯಾರು?ನನ್ನ ಗೆಳೆಯ ಮನೋಜಯ ನಿನ್ನ ಗೆಳತೆ ರಾಧಿಕಾಳ ವಿಚಾರ ಹೇಳ್ತಿದೀವಿ. ಬತ್ತಿ ಹೇಳಿದ.

ರಾಧಿಕಾಳಾದು ತಪ್ಪು . ಇಷ್ಟು ಬೇಗ ಹೀಗೆಲ್ಲಾ ಮಾತವಾಡಬಾರದು ಅವಳು

ಇಾ ಈ ಮಾತನ್ನು ಅವಳಿಗೇ ಹೇಳು. ನಿನನ ಅಡ್ವೈಸ್‌ಗೆ ಸಹಸ್ರವಾಮ ಹಾಕ್ತಾಳೆ ಅವಳು.

ತಾಯಿಗೇ ಚಳ್ಳೆಹಣ್ಣು ತಿನ್ನಿಸ್ತಿದಾಳೆ. ಇನ್ನು ನನ್ನ ಆಡ್ವೈಸ್‌ಗೆಲ್ಲಿ ಬೆಲೆ? ಅವಳು ಕಾಲೇಜಿಗೆ ಬಂದು, ಎಕ್ಸಾಮ್ಸ್‌ಗೆ ತಗೊಂಡರೆ ಅದೇ ಒಂದು ಪವಾಡ.

ಹಾಗಾಂತೀಯ? ಹಾಗಾದ್ರೆ ಏನೇನು ಹೇಳಿದಳು.?

"ಹೇಳದ್ದು. ಬೇಕಾದಷ್ಟು. ಆದರೂ ಈಗ ಹೇಳುಕ್ಕೆ ನನಗೆ ಪುರಸೊತ್ತಿಲ. ನನಗೆ ಹೊತ್ತಾಯ್ತು. ನನ್ನನ್ನು ಮನೆಗೆ ಬಿಟ್ಟು ಬಿಡು.

ಗೀತ ಅತ್ತಿಗೆ ಹೇಳಿ ಹೊರಟಳು. ಸಾಕಷ್ಟು ಹೊತ್ತಾಗಿದಂದುದರಿಂದ ಮುರಳಿ ಅವಳ ಜೊತೆ ನಡೆದು.ಅವಳನ್ನು ಮನೆ ತಲುಪಿಸಿ ವಾಪಸ್ಸು ಬಂದ.

ರಾಧಿಕಾ ನರ್ಸಿಂಗ್ ಹೋಂಗೆ ಬರುವ ಮೊದಲೇ, ರಂಗನಾತ ಮುರಳಿ, ಮನೋಜ ಬಂದಿದ್ದು. ಅವಳಿಗಾಗಿ ಕಾಯುತ್ತಾ ನಿಂತಿದ್ದರು ರಾಧಿಕಾಳ ಜೊತೆ  ಯಲಿದ್ದ ನಿರ್ಮಲಂಗೆ ಅವರುಗಳು ಬಂದದ್ದು ಹಿತವೆನಿಸಲಿಲ್ಲ. ಈ ಜನ್ಮದಲ್ಲಿ ಇವರುಗಳ ಕಾಟ ತನಗೆ ತಪ್ಪುವುದಿಲ್ಲವೇನೋ ಎಂದುಕೊಂಡಳು.

ಡಾಕ್ಟರ್, ಪ್ಲಾಸ್ಟರ್ ಬಿಚ್ಚಿ, ಪರೀಕ್ಷಿಸಿ ಗುಡ್ ಎಂದರು ನಥಿಂಗ್ ಟು ವರಿ, ಫಿಸಿಯೋ ಥೆರಪಿ ಆಗಿ ಬಿಟ್ಟರೆ, ಎಲ್ಲಾ ಸರಿ ಹೋಗುತ್ತೆ..ಸಲೀಸಾಗಿ ಓಡಾಡಬಹುದು.

ಎಲ್ಲರಿಗೂ ಸಂತೋಷವಾಗಿತ್ತು. ಅಷ್ಟರಲ್ಲಿ ಅಲ್ಲಿಗೆಗೀತಾ ಬಂದಳು ರಾಧಿಕಾಳ ಕೈ ಹಿಡಿದು . ಕುಲಕಿ, ಅಬ್ಬಾ ಅಂತೂ ಗೆದ್ದೆ ನೀನು ಎಂದಳು

ಇಲ್ಲಾ ಕಣೇ.... ನಾನಿನ್ನು ಪೂರ್ತಿಗೆದ್ದಿಲ್ಲ ಎಂದಳು ಮನೋಜನ ಕಡೆ ನೋಡುತ್ತಾ. ನಿರ್ಮಲ ಅದನ್ನು ಬೇರೆ ರೀತಿಯಲ್ಲಿ ಅರ್ಥಮಾಡಿಕೊಂಡಳು. ಈ ಹುಡುಗಿಗೆ, ನನನ್ನೂ ಹಂಗಿಸಿ ಅನ್ನದಿದ್ದರೆ ಆಗುವುದಿಲ್ಲವೇನೋ ಎಂದುಕೊಂಡು, ರಾಧಿಕಾ...ನಡೀ ಹೊರಡೋಣ...ಹೊತ್ತಾಯ್ತು. ಎಂದಳು.

ರಾಧಿಕಾ ಎಲ್ಲರ ಮುಖ ನೋಡಿದಳು ಗೀತಾ ಧೈರ್ಯ ತಂದುಕೊಂಡು ಕೇಳಿದಳು ಆಂಟಿ ಎಷ್ಟೋ ದಿನದ ನಂತರ ಹೊರಗೆ ಬಂದಿದಾಳೆ. ನಮ್ಮ ಮನೆಗೆ ಕರೆದುಕೊಂಡು ಹೋಗ್ತೀವಿ...ಆಮೇಲೆ ನಾನಮೇ ಕರೆದುಕೊಂಡು ಬಂದು ಬಿಡ್ತಿವಿ.

ನಿರ್ಮಲಂಗೆ ಅದು ಸಮ್ಮತವಿಲ್ಲದಿದ್ದರೂ, ಎಲ್ಲರ ಎದುರಿಗೆ ಹಾಗೆ ಹೇಳಲಾಗದೇ, ಹಾಗಾದ್ರೇ...ನಾನು ಹೋಗ್ತಿವಿ ಎಂದು ಹೊರಟಳು. ಮನೋಜ, ಮುರಳಿ, ಯಾರಾದ್ರೂ ಆಂಟಿಗೆ ಒಂದು ಆಟೋ ತಂದು ಕೊಡಿ ಎಂದ ರಂಗನಾಥ. ನಿರ್ಮಲ ಅವನನ್ನೇ ದೀರ್ಘವಾಗಿ ನೋಡಿದಳು., ರಂಗನಾಥ ತಲೆತಗ್ಗಿಸಿದ. ಮುರಳಿ ಮನೋಡಜ ಇಬ್ಬರೂ ಆಟೋ ಬಹತ್ತಿದಳು ಆಟೋ ಚಲಿಸಿತು.

ಮುಐಳಿ ಕೇಳಿದ. ಈಗ ಗೀತನ ಮನೆಗೆ ಬೋಗ್ತೀಯೋ ಅಂಕಲ್ ಮನೆಗೆ ಹಬೋಗಗ್ತೀಯೋ?

ಯೆಆರ ಮನೆಗೂ ಬೇಡ. ಎಲ್ರೂ ಹೋಟೆಲಋಲಿಗೆ ಹೋಗೋಣ. ಅಲ್ಲಿ ಳೆಯ ಊಟ ಮಾಡಿ, ಆಮೇಲೆ ರಾಧಿಕಾನ್ನ ಅವಳ ಮನೆ ತಲುಪಿಸಿದರೆ ಸರಿ. ಏನಂತೀರಿ?' ರಂಗನಾಥ ಎಲ್ಲರನ್ನೂ ಉದ್ದೇಶಿಸಿ ಕೇಳಿದ್ದ. ನಿರ್ಮಲಳೂ ತಮ್ಮ ಜೊತೆಗೆ ಇದ್ದಿದ್ದರೆ ಚೆನ್ನಾಗಿತ್ತೆನಿಸಿತ್ತು ಆದರೆ ಅದನ್ನೂ ಪ್ರಕಟಗೊಳಿಸುವಂತಿಲ್ಲ.

ರಂಗನಾಥನ ಮಾತಿಗೆ ಎಲ್ಲರೂ ಒಪ್ಪಿದರು. ಮುರಳಿ, ಗೀತಾ ರಾಧಿಕಾ ಒಂದು ಆಟೋ ಹಿಡಜಿದರು. ಮನೋಜ ರಂಗನಾಥ ಸ್ಕೂಟರ್ ಹತ್ತಿದರು. ಹೋಟೆಲಿಲಿನಲ್ಲ

ಊಟ ಮಾಡಿ, ಮಗುನಗುತ್ತಾ., ಮಾತವಾಡುತ್ತಾ ಕಾಲ ಕಳೆದರು. ರಂಗನಾಥ ಒಂದಿಷ್ಟು ಸ್ವೀಟ್ಸ್ ಪ್ಯಾಕ್ ಮಾಡಿಸಿ ಕೊಂಡ ರಾಧಿಕೆಆನ ಕೈಗಿತ್ತೂತ್ತ ನುಡಿದ. ನಿನ್ನ ತಾಯಿಈನೂ ಬಂದಿದ್ದರೆ ಚೆನನಆಗಿತ್ತೂ . ಅವರಿಗೆ ಈ ಸ್ವೀಟ್ಸ್‌ನನಊ ಕೊಟ್ಟು ಬಿಡು. ಅವನಿಗೆ ಹಿಂದಿನ ದಿನಗಳು ನೆನಪಿಗೆ ಬಂದವಿ.

ಅಮ್ಮ ಒಂದು ತರಹ, ಅವಳಿಗೆ ಹಾಗೆ ಎಲ್ಲರಪ ಜೊತೆ ಮಿಕ್ಸ್ ಆಗಿ ಇರೂವುದೇ ಇಷ್ಟವಿಲ್ಲ ಒರಟಾಗಿ ಹೇಳಿದಳು.

ಒಬ್ಬೊಬ್ಬರ ಸ್ವಭಾವ ಒಂದೊಂದು ತರಹ ಇರುತಿತ್ತು. ಅದ ಅದನ್ನೆಲ್ಲ ಖಂಡಿಸಬಾರದು. ರಂಗನಾತ ಮೆದುವಾಗಿ ಹೇಳಿದ.

ರಾಧಿಕಾ ಸುಮ್ನೇ ಮೂತಿ ಉದ್ದ ಮಾಡಿದಳು. ಗೀತಾ ರಾಧಿಕಾ ಒಟ್ಟಿಗೆ ಹೊರಟರು. ಎಲ್ಲರೂ ಅವರವರ ಮನೆ ಕತಲುಪಿದರು. ರಾಧಿಕಾ ಸ್ವೀಟ್ಸ್ ಪ್ಯಾಕೆಟ್ಟನ್ನು ತಾಯಿಯ ಕೈಗಿತ್ತಳು.

ನೋಡಿದ್ಯಾ ಅಂಕಲ್ ಎಷ್ಟು ಒಳ್ಳೆಯವರು? ನಿನಗೋಸ್ಕರ ಸ್ವೀಟ್ಸ್ ಕಳಿಸಿದ್ದಾರೆ.

ಯಾಕೆ ತಂದೆ ಅದನ್ನು ಬೇಡ ಅನ್ನಬೇಕಾಗಿತ್ತು. ನಂಗೆ ಸ್ವೀಟ್ಸ್ ಬೇಕಿಲ್ಲ. ನಾನು ತಿನ್ನಲ್ಲ.

ನಿಂಗೆ ಬೇಡದಿದ್ದರೆ ಬಿಡು ಎನ್ನುತ್ತಾ ಅದನ್ನು ಟೇಬಲ್ ಮೇಲೆ ಇಟ್ಟು ತನ್ನ ಪಾಡಿಗೆ ತಾನು ಒಳಗೆ ಹೋದಳು. ನಿರ್ಮಲ ಆ ಕಡೆ ತಿರುಗಿ ಸಹ ನೋಡಿಲಿಲ್ಲ. ಸ್ವೀಟ್ಸ್ ಎಲ್ಲಾ ಸರಿ ಮಾಡ್ಕೋಳ್ತಿವಿ. ಅಂತ ಅಂದು ಕೊಂಡಿದ್ದಾನೇನೋ... ಅಂದುಕೊಂಡಳು ತನ್ನಲ್ಲಿಯೇ. ತನ್ನ ಈ ಸುಗುಮಗಳನ್ನು ತೋರಿಸಿ, ಮಗಳನ್ನು ತನ್ನ ಕಡೆಗೆ ಸೆಳೆದು ಕೊಲ್ಳುತ್ತಿದಾನೆ ಎನಿಸಿತ್ತು.

ಎರಡು ಮೂರು ದಿನಗಳಲ್ಲಿ ರಾಧಿಕಾ, ಸರಿಯಾಗಿ ನಡೆಯುವಿದನ್ನು ಅಭ್ಯಸ ಮಾಡಿಕೊಂಡಳು ಆವಂತರವೂ ಮನೆಯಲ್ಲಿ ಕುಳಿತೆರುವಿದನ್ನು ಕಂಡು ನಿರ್ಮಲ ಕೇಳಿದಳು ಕಾಲೇಜಿಗೆ ಹೋಗುಲ್ವೇನೆ?"

" ಇಲ್ಲ ಚುಟುಕಾಗಿ ಹೇಳಿದಳು ಮಾತನ್ನೂ ಮುಂದುವರೆಸಲು ಹಿಂಜರಿದು ನಿರ್ಮಲ ಸುಮ್ಮನಾದಳು. ಮಾತಾಡಿದರೆ ಜಗಳವೇ ಎಂದು ಅವಳಿಗೆ ಅರ್ಥ ವಾಗಿತ್ತು. ಅವಳು ಯಾರ ಮಾತನ್ನು ಕೇಳಬಹುದದು ರಂಗನಾಥವದೇ ಮನೋಜವದೇ ತಥೂ ದಿನಾ ಇದೇ ಚಿಂತೆಯಾಗಿ ಹೋಯ್ತು. ಇವಳಂದ ನನ್ನ ಸುಖ ಕನೆಮ್ಮದಿ ಎಲ್ಲಾ ಹಾಳಾಗಿಹೋಯ್ತು... ಹೃದಯ ಭಾರವಾಯಿತು. ತಲೆ ಧಿಂ ಎಂದಿತು. ಎದ್ದು ಒಂದು ಮಾತ್ರೆ ನುಂಗಿದಳು.

ಇಡೀ ದಿನವೆಲ್ಲಾ ಮನೆಯಲ್ಲೇ ಕಾಲ ಕಳೆದ ರಾಧಿಕಾ, ಸಾಯಂಕಾಲ ಗೀತಳ ಮನೆಗೆ ಹೊರಟಳು. ನಿರ್ಮಲ ಕ್ಲಿನಿಕ್‌ನ್ನು ಬೇಗ ಮುಚ್ಚಿ ಮನೆಗೆ ಬಂದಳು. ವೆರಾಂಡಾದಲ್ಲಿ ಕೂತು ಚಿಂತಿಸುತ್ತಿದ್ದವಳನ್ನೂ ಸ್ಕೂಟರ್‌ನಿಂತ ಶಬ್ದ ಎಚ್ಚೆಚರಸಿತು.

ಸ್ಕೂಟರ್ನಿಂದ ಇಳಿದು ನಿಂತ ರಾಧಿಕಾ, ಮನೋಜವೊಡನೆ ನಗುನಗುತ್ತಾ ಮಾತಾಢುತ್ತಿದ್ದಳು ಇವನ ಜೊತೆಯಲ್ಲಾದರೆ ಎಷ್ಟು ಖುಷಿ? ಅವನ ರೂಪಿಗೆ, ಪರ್ಸನಾಲಿಟಿಗೆ ಮರುಳಾಗಿರಬೇಕು. ವಯಸ್ಸಿನ ಆಕರ್ಷಣೆ, ಹುಚ್ಚು ಮನಸ್ಸು ಎಂದುಕೊಂಡಳು. ಮಗಳ ಬಗ್ಗೆ ಅಯ್ಯೋ ಅಂತೆನಿಸಿತ್ತು. ಜತೆಗೆ ಅಸಹನೆ ಹೆಚ್ಚಿತ್ತು.

ರಾಧಿಕಾ ಒಳಬರುವುದನ್ನೇ ಕಾದಿದ್ದು ಕೇಳಿದಳು.

ಗೀತನ ಮನೆಗೆ ಹೋಗ್ತಿವಿ ಅಂತ ಸುಳ್ಳು ಹೇಳಿ, ಮನೋಜನ ಮನೆಗೆ ಹೋಗಿದ್ಯಾ? ಈ ಕೆಟ್ಟ ಬುದ್ದಿ ಯಾವಾಗ್ನಿಂದ?"

ನಂಗೇನು ಕೆಟ್ಟ ಬುದ್ದಿ ಇಲ್ಲ. ಮನೋಜನ ಮನೆಗೆ ಹೋಗುವಿದಕ್ಕೆ ಸುಳ್ಳು ಯಾಕೆ ಹೇಳಬೇಕು? ನಿಜಾನೇ ಹೇಳ್ತಿವಿ ನನಗೇನೂ ಹೆದರಿಕೆ ಇಲ್ಲ..

ಓ...ಅಷ್ಟು ಧೈರ್ಯಾನಾ ನಿನಗೆ?"

ಹೆದರುವಂತಹ ಕೆಲಸ ನಾನೇನೂ ಮಾಡಿಲ್ಲ ಅವನನ್ನು ಮೆಚ್ಚಿದೀನಿ. ಐ ಲವ್ ಹಿಮ್

ನನಗಿಂತಾ ಅವನು ಹೆಚ್ಚಾ? ನನ್ನೆದುರಿಗೆ ಅವನನ್ನು ಲವ್ ಮಾಡ್ತಿವಿ ಅಂತ ಹೇಳ್ತಿದೀಯಲ್ಲ. ಕಸ್ವಲ್ಪನಾದ್ರೂ ನಾಚಿಕೆ ಬೇಡ್ವಾ?

ಹೆಚ್ಚು ಕಮ್ಮಿ ಪ್ರಶ್ನೆ ಯಾಕೆ? ನೀನು ನನ್ನ ಮಮ್ಮಿ, ಅವನು ನನ್ನ ಫ್ರೆಂಡ್, ಇದಕಕ್ಕೆ ನಾಚಿಕೆ ಏಕೆ?"

" ಅವನ ಫ್ರೆಂಡ್‌ಷಿಪ್ ನಿನಗೆ ಬೇಡ ಅಂತ ನಾನು ಹೇಳ್ತಿದೀನಿ.

ಯಾಕೆ? ಏನಾಗಿದಾನೆ ಅವನು? ಅವನೆಂತಹವನು ಅಂತ ನನಗೆ ಗೊತ್ತು. ಮನೋಜ ನನಗೆ ಸಿಕ್ಕಿರುವುದು ನನ್ನ ಅದೃಷ್ಟ ....ಮುಂದೆ ಅವನನ್ನೇ ಮದುವೆಯಾಗುವುದು ಅಂತ ಡಿಸೈಡ್ ಮಾಡಿದೀನಿ.

ವ್ಹಾ,. ನನ್ನೆದುರು ಇಷ್ಟೆಲ್ಲಾ ಮಾತಾಡುವುದನ್ನು ಕಲಿತಿದೀಯ. ನಾನೂ ಒಪ್ಪದಿದ್ದರೆ?'

" ನಿನ್ನ ಓಪ್ಪಿಗೆ ನನಗೆ ಬೇಕಿಲ್ಲ. ನಿರ್ಮಲ ಇದೇ ಮಾತನ್ನೂ ತನ್ನ ತಾಯಿಗೆ ಹೇಳಿದ್ದು ನೆನಪಿಗೆ ಬಂತು. ನನ್ನ ಮಗಳೇ ಸರಿ ಎಂದುಕೊಂಡಳು.

ಎಷ್ಟು ದಿನದಿಂದ ನಿನ್ನ ಅವನ ಸ್ನೇಹ?

ಎರಡು ವರ್ಷದಿಂದ . ನೀನೇನೂ ಗಾಭರಿಯಾಗಬೇಡ.ನಾನು ನಿನಗೆ ತಿಳಿಸಿಯೇ ಅವನನ್ನು ಮದುವೆ ಆಗ್ತಿವಿ. ಅಥವಾ ನೀನೇ ನಿಂತು ಮದುವೆ ಮಾಡಿದರೆ ಇನ್ನೂ ಒಳ್ಳೆಯದೆ.

ಕಾಲೇಜು, ಪರೀಕ್ಷೆ ಬೇಕಿಲ್ಲ ನಿನಗೆ. ಸ್ನೇಹ. ಮದುವೆ ಚಿಂತೆನಾ ನಿಗೀಗಲೇ. ಇದೆಲ್ಲಾ ಸರಿಯಲ್ಲ ನೋಡು.

ಅದರಲ್ವಿ ತಪ್ಪೇನು? ನನಗೇನು ಇಷ್ಟವೋ ಅದನ್ನ ಹೇಳಿದೆ.

ಅವನೂ ಹೀಗೇ ಆಡ್ತಾನಾ?"

"ಅವನಾ?ಖಂಡಿತಾ ಇಲ್ಲ. ಜೆಮ್ ಆಫ್ ಎ ಮ್ಯಾನ್ ಅವನು ಅದಕ್ಕೇ ಅವನನ್ನು ಮೆಚ್ಚಿದ್ದು. ಅವನು ಅಲ್‌ರೌಂಡ್ ಬ್ರಿಲಿಯಂಟ್. ನಿನಗೆ ಗೊತ್ತಾ? ಓದಿನಲ್ಲಿ ಎಷ್ಟು ಜಾಣನೋ...ಮನೆ ಕೆಲಸದಲ್ಲೂ ಪರ್ಫೆಕ್ಟ್

ಮತ್ತೆಅವನೆಂಥವನು?ನಿನ್ನಂಥೋಳನ್ನ ಮೆಚ್ಚಿದಾನಲ್ಲ...ವ್ಯಂಗ್ಯದಿಂದ ಮುಡಿದಳು. ನಿಮ್ಮಿಬ್ಬರಿಗೂ ಖಂಡಿತಾ ಸಾಮ್ಯವಿಲ್ಲ.

ನನ್ನನ್ನು ಮೆಚ್ಚದಿರುವುದಕ್ಕೆ ನನ್ನಲ್ಲಿ ಎನು ಕಮ್ಮಿ ಆಗಿದೆ ? ಸವಾಲೆಸೆದಳು. ನಾವಿಬ್ಬರೂ ಮೇಡ್ ಫಾರ್ ಇಚ್ ಅದರ್ ಗೊತ್ತಾ?'

ಹುಚ್ಚು. ನಿಮ್ಮಿಬ್ಬರಿಗೂ ಹುಚ್ಚು ಕಿರುಚಬೇಕೆನ್ನಿಸಿತ್ತು. ಅಂದ್ರೇ ನನ್ನ ಹಿಂದೆ ಮಾಡುಲ್ಲ.

ನನಗೇನೋ ಅವರಿಬ್ಬರನ್ನ ಕಂಡರೆ ಅನುಮಾನ. ನಂಬಿಕೆಗೆ ಅರ್ಹರಲ್ಲ ಅಂತ ಅನ್ನಿಸುತ್ತೆ. ಅವರನ್ನೆಲ್ಲಾ ಮರೆತುಬಿಡು.

ಪ್ಲೀಸ್. ಷಟಪ್ ಮಮ್ಮಿ. ನನಗೆ ಅವಮಾನ ಮಾಡ್ತಾ ಇದೀಯ ನೀನು. ನಿನಗೇ ಯಾರಾದ್ರೂ ಹೀಗೆ ಹೇಳಿದ್ರೆ ಒಪ್ಪುತ್ತಿದ್ದೆಯಾ? ನಿನಗೆ ಲವ್ ಅಂತ ಅಂದ್ರೆ ಏನೂಂತ ಗೊತ್ತಿದೆಯೋ ಇಲ್ಲವೋ...ಎಷ್ಟೋ ವರ್ಷದಿಂದ ಸನ್ಯಾಸಿನಿ ತರಹವೇ ಜೀವನ ನಡೆಸ್ತಿದೀಯ ? ಅದ್ಸರಿ ಇವತ್ತೇಕೆ ಇಷ್ಟೆಲ್ಲಾ ಮಾತಾನಾಡ್ತಿದೀಯ? ಅವಳ ಮಾತಿನಿಂದ ನಿರ್ಮಲ ಮೂಕಳಾದಳು. ಈ ಹುಡುಗಿ ಹತ್ತಿರ ಮಾತಾಡು ತ್ತಿದ್ದರೆ, ಇನ್ನೂ ಏನೇನು ಆಡಿ ಬಿಡ್ತಾಳೋ ಎನಿಸಿ ಸುಮ್ಮನಾದು. ಆದರೆ ದೂಗುಡ ಮಾತ್ರ ಹೆಚ್ಚಾ.ಗಿತ್ತು. ಮಗಳ ಮೇಲೆ ಇಟ್ಟಿದ್ದ ಪ್ರೀತಿ ವಿಶ್ವಾಸವೆಲ್ಲಾ ಮಣ್ಣು ಪಾಲಾದವು. ಇವಳು ಎಲ್ಲಾ ಮೀರಿನಿಂತಿದಾಳೆ. ನನ್ನ ಮಾತಿಗೆ ಯಾವ ರೀತಿಯಲ್ಲೂ ಬಗ್ಗುವವಳಲ್ಲ ಎನಿಸಿ ಸಂಕಟ ಹೆಚ್ಚಾಯಿತು. ಕಣ್ಣು ಕತ್ತಲಿಟ್ಟಂತೆ ಅನ್ನಿಸಿ ಬೀಳು ವಂತಾಯಿತು. ಎದೆಯಲ್ಲಿ ಏನೋ ಒತ್ತಿದ ಅನುಭವ ಭಾರ..ಉಸಿರು ಸಿಕ್ಕಿಕೊಂಡ ಅನುಭವ...ನಿಂತಂತೆಯೋ ದೊಪ್ಪನೆ ಬಿದ್ದು ಬಿಟ್ಟಳು.

ರಾಧಿಕಾಗೆ ಗಾಭರಿಯಾಯಿತು. ಮಮ್ಮಿಗೇನಾಯಿತು?ಅಂಥಾದ್ದೇನು ಮಾತಾಡಿದೆ ತಾನು ಎಂದು ಅರ್ಥವಾಗಲಿಲ್ಲ. ಗಾಭರಿಯಿಂದ ಹತ್ತಿರಕ್ಕೇ ಬಂದಳು. ನಿರ್ಮಲ ಸಂಜ್ಞೆಯಿಂದ ಏನೋಹೇಳಿದಳು. ರಾಧಿಕಾಗೆ ಅರ್ಥವಾಗಲಿಲ್ಲ. ಅಡಿಗೆಯವಳನ್ನೂ ಕೂಗಿದಳು. ಆಕೆ ಬಂದು ನೋಡಿ ಹೆದರಿರ್ದಳು. ತಕ್ಷಣ ಕತನಗೆ ತೋಚಿದಂತೆ, ಮುಖಕ್ಕೆ ನೀರು ಚುಮುಕಿಸಿ, ಎಬ್ಬಿಸಿ ಕೂರಿಸಿ, ಮುಖ ಒರೆಸಿದಳು.

ರಾಧಿಕ ನೀನು ಇಲ್ಲೇ ಇವರ ಬಳೀನೇ ಕೂತಿರು. ನಾನು ಹೋಗಿ ಡಾಕ್ಟರನ್ನ ಕರೆದುಕೊಂಡು ಬರ್ತೀನಿ ಅಂತ ಹೇಳಿ ಹೊರಟಳು. ರಾಧಿಕಾಗೆ ಅಳು ಬರುವಂತಾಗಿತ್ತು ಅಮ್ಮ ಎಂದು ಹೀಗೆ ಸುಸ್ತಾಗಿ ಬಿದ್ದುದನ್ನು ಅವಳು ಕಂಡಿರಿಲಲಿಲ್ಲ.. ತಾನು ಡಾಕ್ಟರಳಾಗುವವಳು. ಆದರೂ ತನಗೇನೂ ತೋಚಿತ್ತಿಲ್ಲ...ಏನಾಯ್ತು ಮಮ್ಮಿ? ಏನಾಯ್ತು ನಿನಗೆ?ಆತಂಕದಿಂದ ಕೇಳಿದಾಗ, ಏನೂ ಇಲ್ಲ ಇಲ್ಲವಂತೆ ನಿರ್ಮಲ ತಲೆ ಆಡಿಸಿದಳು.

ಹತ್ತಿರದಲ್ಲಯೆ ಇದ್ದ ಡಾಕ್ಟರೊಬ್ಬರನ್ನು ಅಡಿಗೆಯವಳು ತಕ್ಷಣವೇ ಕರೆತಂದಳು. ಅವರು ಕೂಲಂಕಷವಾಗಿ ಪರೀಕ್ಷಿಸಿ ನೋಡಿ,

ಇ ನರ್ಸಿಗ್ ಹೋಂಗೆ ಸೇರಿಸಿದರೆ ಒಳ್ಳೆಯದು. ಅಬ್ಸರ್ವೇಏಚಶನ್ ನಲ್ಲಿಡಬೇಕು ಇವರನ್ನ. ಆದಷ್ಟು ಬೇಗ ಸೇರಿಸಿಬಿಡಿ..ಎಂದರು. ತನಗೇನಾಗಿರಬಹುದು ಎಂಬ ಅನೂಮಾನ ನಿರ್ಮಲೆಗಿರಲಿಲ್ಲ. ಅವಳೇ ಡಾಕ್ಟರಾಗಿದ್ದುದರಿಂದ ಹೆಚ್ಚ್ರಚಿಗೆ ಹೇಳಬೇಕಾಗಿಲ್ಲವೆಂದು ತಿಳಿದಿತ್ತು. ಸಲಹೆಯನ್ನಿತ್ತು. ರಾಧಿಕಾಳ ಕಡೆ ನೋಡಿದರು. ತಾವೇ ಮುಂದೆ ನಿಂತು, ಆಂಬ್ಯಲೆನ್ಸ್‌ನಲ್ಲಿ ತಾಯಿಯನ್ನು ಮಲಗಿಸಿ, ಸಮೀಪದಲ್ಲಿದ್ದ ನಸಿಂಂಗ್ ಹೋಂಗೆ ಆಡ್ಮಿಟ್ ಮಾಡಿದಳು. ಅಮ್ಮಂಗೆ ಯಾಕೆ ಹೀಗಾಯ್ತು ರಂಗಮ್ಮಾ...ಅಳುತ್ತಾ ಕೇಳಿದಳು.

ಏನೋಮ್ಮ...ನನಗೆ ಸರಿಯಾಗಿ ಗೊತ್ತಿಲ್ಲ. ನೀನೂ ಡಾಕ್ಟರಾಗೋಳು ನಿನಗೂ ತಿಳೀಲಿಲ್ವಾ?..... ಮನೇಲಿ ಒಂದು ಗಂಡು ಪಿಳ್ಳೆ ಇಲ್ಲ. ಯಾರನ್ನ ಕರೆಯೋದು? ಯಾರಿಗೆ ಹೇಳೋದು? ನನಗೂ ತೋಚ್ತಾಇಲ್ಲ.

ನನ್ನ ಫ್ರೆಂಡ್‌ಗೆ ಫೋನ್ ಮಾಡ್ತಿವಿ ರಂಗಮಮ. ಅವರೇ ನನ್ನಬಂದು , ಎಂದು ಹೇಳಿ ಆಕೆಯನ್ನು ಅಲ್ಲಿಯೇ ಬಿಟ್ಟು ಅಲ್ಲೇ ಇದ್ದ ಪಬ್ಲಿಕ್ ಫೋನನ್ನೆತ್ತಿ ಕೊಂಡಳು. ರಾತ್ರೆ ಹತ್ತುಗಂಟೆಯಾಗುತ್ತಾ ಬಂದಿತ್ತು. ಮೊದಲು ಗೀತಳಿಗೆ ವಿಷಯ ತಿಳಿಸಿದಳು.

ಗೀತಳಿಂದ ಮುರುಳಿಗೆ ವಿಷಯ ತಿಳಿಯಿತು. ಮುರಳಿ ಅತ್ಯಂತ ವ್ಯಸನಗೊಂಡ. ಒಂದು ಆಟೋ ಹಿಡಿದು ಮನೋಜನ ಮನೆಗೆ ಬಂದ. ವಿಷಯ ತಿಳಿದು ರಂಗನಾಥನ ಮುಖ ಬಿಳುಚಿಕೊಂಡಿತು. ಗಾಭರಿಯಿಂದ ಪಿಳಿ ಪಿಳಿ ಅವನನ್ನೇ ನೋಡಿದ. ಏನಾಗಿರಬಹುದು ಅವಳಿಗೆ? ಎಲ್ಲಿರೆದುರಿಗೆ ತನ್ನ ಅಳಲನ್ನು ಹೇಳಿಕೊಳ್ಳೂ ವಂತಿಲ್ಲ...ಆತಂಕವನ್ನು ಪ್ರಕಟಿಸುವಂತಿಲ್ಲ. ಆದರೂ, ರಾಧಿಕಾಳ ಬಗ್ಗೆ ಮರುಕ.

ಪಾಪ, ರಾಧಿಕಾ ಏನೂ ತಿಳಿಯದ ಹುಡುಗಿ, ಗಾಭರಿಗೊಂಡಿರುತ್ತಾಳೆ. ಈಗಲೇ ಹೋಗೋಣ ಬನ್ನಿ ಎಂದ. ಮೂರು ಜನವೂ ಮತ್ತೆ ಆಟೋ ಹತ್ತಿ ನರ್ಸಿಂಗ್ ಹೋಂಗೆ ಬಂದರು. ಅವರುಗಳನ್ನೂ ಕಂಡಕೂಡಲೇ ರೀಧಿಕಾ ದುಃಖ ತಡೆಯಲಾರದೇ ಬಿಕ್ಕಿ ಬಿಕ್ಕಿ ಅತ್ತಳು.

ನಾವಿಬ್ಬರೂ ಮಾತಡ್ತಾ ಇದ್ದೆವಿ. ಇದ್ದಕ್ಕಿದ್ದಂತೆ ಅಮ್ಮ ಕೂಸಿದು ಬಿದ್ದಳು. ಏನಾಯ್ತು ಅಂತ ಗೊತ್ತಾಗ್ಲೇ ಇಲ್ಲ ಅಳುತ್ತಾ ನುಡಿದಳು.

ನಾವೆಲ್ಲಾ ಬಂದಿದೀವಲ್ಲ ಇನ್ನೂ ನಿನ್ನ ಅಮ್ಮನಿಗೆಏನೂ ಆಗೂಲ್ಲ. ಹೆದರಬೇಡ. ರಂಗನಾತ ಮಗಳ ತಲೆ ಸವರಿ ಸಮಾಧಾನ ಹೇಳಿದೆ. ಅವನ ಕೈತನ್ನ ತಲೆಯನ್ನೂ ಸ್ಪರ್ಸಿಸಿದ ಕೂಲೆಅವಳಲ್ಲಿ ಒಂದು ತರಹದ ಆತ್ಮ ವಿಶ್ವಾಸ ಮೂಡಿತು.

ಮುರಳಿ ಕೇಳಿದ. ನಿಮ್ಮ ತಾಯಿ ಎಲ್ಲಿದಾರೆ? ನೋಡಬೇಕಲ್ಲ

ಡಾಕ್ಟರು ಅಲ್ಲಿ ಒಳಗೆ ಯಾರನ್ನೂ ಬಿಡುವೂದಿಲ್ಲವಂತೆ. ಅವರಿಗೆ ತೊಂದರೆ ಆಗಬಾರದಂತೆ ಆಡಿಗೆಯ ರಂಗಮ್ಮ ಹೇಳಿದಳು

. ಎಲ್ಲರೂ ಆಚೆ ಹೋರಗಿನ ಕಾರಿಡಾರಿನಲ್ಲಿ ನಿಂತು ಮಾತನ್ನಾಡುತ್ತಿದ್ದರು. ಹನ್ನೊಂದು ಗಂಟೆ ಆಗಿದೆ. ರಾಧಿಕಾ ನೀನು. ಅಡಿಗೆಯವರ ಜೊತೆಯಲ್ಲಿ ಮನೆಗೆ ಹೋಗು. ನಾನು ಇಲ್ಲಿರ್ತಿವಿ ಎಂದ ರಂಗನಾಥ.

ಇಲ್ಲೇ ಇರ್ತಿವಿ. ನನಗೆ ಮನೆಗೆ ಹೋಗುತಕ್ಕೆ ಇಷ್ಟವಿಲ್ಲ. ಎಂದಳು. ಎಲ್ಲರಪಿಗೂ ಮತ್ತೆ ಚಿಂತೆ ಆಯಿತು.

ಹೆಣ್ಣು ಹುಡುಗಿ , ನೀನು ಹೀಗೆ ಹೊರಗೆ ರಾತ್ರೆ ಕಳೆಯುವಿದು ಚೆನ್ನಾಗಿರುಲ್ಲ ನೀನೂ ಮನೆಗೆ ಹೋಗು...ಮುರಳಿ, ಮನೋಜ, ನೀವೂ ಮನೆಗಳಿಗೆ ಹೋಗಿ.ನಾನು ಇಲ್ಲಿರ್ತೀವಿ. ರಂಗಮ್ಮ ಹೌದು ಸರಿ ಎಂದಳು.

ನಾವು ಇಲ್ಲಿ ಇದ್ದರೆ, ಆಂಟಿಗೆ ಏನಾದರೂ ಅನುಕೂಲವಾಗ ಬಹುದೇನೋ... ಮುರಳಿ ನುಡಿದ.

ಏನೂ ಆಗುಲ್ಲ. ನೀವಿನ್ನು ಮೆಡಿಕಲ್ ಸ್ಟೂಡೆಂಟ್ಸು. ಇಲ್ಲಿ ಅನುಭವಸ್ಥ ಡಾಕ್ಟರು ಗಳಿರುತ್ತಾರೆ. ಅವರುಗಳು ನೋಡಿಕೊಳ್ತಾರೆ..ಹೇಕೂ ಅಬ್ಬರ್ವೇಶನ್ ಅಂದರೆ ಒಳಗೆ

ಯಾರನ್ನೂ ಬಿಡುವುದಿಲ್ಲ. ನಾನು ಇಲ್ಲೇ ಈ ಬೆಂಚಿನ ಮೇಲೆ ಕೂತಿರ್ತೀನಿ. ರಾಧಿಕಾನ್ನ ಮನೆಗೆ ಬಿಟ್ಟು, ನೀವುಗಳೂ ಹೋಗಿ ಏನೂ ಬಯ ಪಡಬೇಡಿ. ಅವರಿಗೆ ಏನೂ ಆಗುವುದಿಲ್ಲ. ರಂಗನಾಥ ಆಶ್ವಾಸನೆ ಕೊಡುವವನಂತೆ ನುಡಿದಾಗ, ಅವರಿಬ್ಬರೂ ಕಮುಖಿ ಮುಖ ನೋಡಿಕೊಂಡರು.

ಮಾವ ಹೇಳುವುದು ಸರಿ. ಡ್ಯೂಟಿ ಡಾಕ್ಟರ್ಸ್ ಇರ್ತಾರೆ. ನಾವು ಇಲ್ಲಿ ಇದ್ದರೂ, ಕೇನೂ ಹೇಳುಕ್ಕಾಗುಲ್ಲ. ಕೇಳುಕ್ಕಾಗುಲ್ಲ. ನಾವುಗಳೂ ಇಲ್ಲೇ ಇದ್ದರೂ, ರಾಧಿಕಾ ಮನೆಗೆ ಹೋಗುವುದಿಲ್ಲ. ಹಟ ಮಾಡ್ತಾಳೆ. ಈಗ ಹೋಗೋಣ. ಬೆಳಿಗ್ಗೆ ಬೇಗ ಬರೋಣ. ಮುರಳಿ ನುಡಿದಾಗ ಮನೋಜ ತಲೆ ಆಡಿಸಿದ. ಎಲ್ರೂ ಹೊರಟು ಹೋದರು.

ರಂಗನಾಥ ಇಡೀ ರಾತ್ರೆ ಕಾರಿಡಾರಿನಲ್ಲಿ ನಿಂತು ಕೂತು ಅತ್ತಿಂದಿತ್ತ ಓಡಾಡಿ ಕಳೆದ. ಬೆಳಕಾಗ ಕಮೇಲೆ ಒಬ್ಬೊಬ್ಬರಾಗಿ ಗೀತಾ, ರಾಧಿಕಾ ಮುರಳಿ ಮನೋಜ ಎಲ್ಲರೂ ಬಂದರು. ರಾತ್ರೆಯೆಲ್ಲಾ ನಿದ್ದೆಗೆಟ್ಟು ರಂಗನಾಥ ಬಳಲಿ ಹೋಗಿದ್ದ. ಯಾರಿಗೂ ಹೇಳದೇ ಅವರುಗಳನನಲು ಅಲ್ಲಿಯೇ ಬಿಟ್ಟು ಮನೆಗೆ ಹೋದ. ಬಳಲಿದ್ದ ರಾಧಿಕಾಳ ಮುಖ ನೋಡಿ ಅವನ ಆತಂಕ ಹೆಚ್ಚಾಗಿತ್ತು.

ಒಂದು ಸಮಸ್ಯೆ ಕಳೆಯಿತು ಅಂದರೆ ಇನ್ನೊಂದು. ಇಷ್ಟು ವರ್ಷಗಳ ನಂತರ ಮತ್ಯಾಕೆ ಈ ಸಮಸ್ಯೆಗಳು ನನ್ನ ಮಾತುಗಳಿಂದ ಇವಳಿಗೆ ಹೀಗೆ ಆಗಿರಬಹುದೆ ಇನ್ನು ಏನೇನು ಚಿಂತೆಗಳೋ ಇದ್ದನೋ ಇಲ್ಲವೋ ಎಂಬ ಅರಿವಿಲ್ಲದೇ ನೆಮ್ಮದಿಯಿಂದ ಇದ್ದ ಬಾಳಿನಲ್ಲಿ ಮತ್ತೆ ಪ್ರವೇಸಿಸಿ, ಅವಳ ನೆಮ್ಮದಿ ಹಾಳೂ ಮಾಡಿದವನು ನಾನೇ. ಮಗಳೆ ತನ್ನ ಸರ್ವಸ್ವ ಎಂದು ಸಾಕಿ ಹೆಳೆಸಿದಲಳನ್ನು ನಾನು ನನ್ನ ಮಗಳು ಎಂದು ಮತ್ತೆ ಮತ್ತೆ ಹೇಳಿದ್ದು ಅವಳಿಗೆ ತಡೆಯಲಾಗದೇ ಷಾಕ್ ಆಗಿರಬಹುದೆ?ಮಗಳ ಬಗ್ಗೆ ಏನೇನು ಆಸೆ ಆಕಾಂಕ್ಷೆಗಳನ್ನಿಟ್ಟು ಕೊಂಡಿದ್ದಳೋ... ಅದನ್ನೆಲ್ಲಾ ಮಗಳು ಕೆಡಿಸಿ ಬಿಟ್ಟಳು ಎನ್ನುವ ಕೋಪ ಕಾರಣ ವಾಗಿರಬಹುದೇ? ರಂಗನಾಥ ಬಹಳವಾಗಿ ನೊಂದ ತೊಳಲಾಡಿದ.

ಬಹು ಹೊತ್ತಿನ ಮೇಲೆ ನಿರ್ಮಲಳಿಗೆ ಎಚ್ಚರವಾಗಿತ್ತು ರಾತ್ರಿ ಕಳೆದಿತ್ತು. ಇಂಜೆಕ್ಷನ್ ಪ್ರಭಾವದಿಂದ ನಿದ್ದೆ ಬಂದಿತ್ತು. ತಾನು ಎಲ್ಲಿದ್ದೀನಿ ಎನ್ನುವ ಅರಿವಾದ ಕೂಡಲೇ,ಹಿಂದಿನ ರಾತ್ರಿ ನಡೆದುದು ನೆನಪಿಗೆ ಬಂದು ಮತ್ತೆ ಮನಸ್ಸು ಹೆಪ್ಪುಗಟ್ಟಿತು. ಅಲ್ಲೇ ಕೂತಿದ್ದ ಅಡಿಗೆಯವಳನನಲು ಕಂಡಳು.

ರಾಧಿಕಾ ಎಲ್ಲಿ ಕ್ಷೀಣ ಸ್ವರದಲ್ಲಿ ಕೇಳಿದಳು

ಹೊರಗೆ ಮಾತಾಡ್ತಾ ನಿಂತಿದಾಳೆ

ಯಾರ ಜೊತೆ? ಡಾಕ್ಟರ ಹತ್ತಿದಾನಾ?

" ಅವಲ ಸ್ನೇಹಿತರ ಜೊತೆ. ಅವರೆಲ್ಲಾ ರಾತ್ರೀಏ ಬಂದಿದ್ದರು. ಅವರು ರಾತ್ರಿ ಯೆಲ್ಲಾ ಇಲ್ಲೇ ಇದ್ದರು. ರಾಧಿಕಾ ಹಾಗೂ ನಾನೂ ಮನೆಗೆ ಹೋಗಿದ್ದೆವು

ಯಾರು?ಮುರುಳಿನಾ?

"ಮುರಳಿ, ಮನೋಜ, ಯಾರೂ ಅಲ್ಲ. ಅವರ ಮಾವ ರಂಗನಾತ ಅನ್ನೋರು. ಅವರು ರಾತ್ರಿಯೆಲ್ಲಾ ಇಲ್ಲೇ ಹೊರಗೇ ಕಳೆದರು

ಅವರಿಗೆಲ್ಲ ಯಾರು ತಿಳಿಸಿದರುಲಕ್ಷೀಯ? ಇದೆಲ್ಲ ಸರಿ ಎನಿಸಿರಲಿಲ್ಲ. ಮನಸ್ಸು ಕುಗ್ಗಿತ್ತು.

ರಾಧಿಕಾನೇ...ಪಾಪ. ಹುಡುಗಿ ಒಂಟಿಯಾಗಿ ನಿಂತ್ಕೊಂಡು ಅಳುತ್ತಿತ್ತು. ಅವರು ತಬ್ಬಿಕೊಂಡು ಸಮಾಧಾನ ಮಾಡಿದ ಮೇಲೇ ಅಳೋದನ್ನ ನಿಲ್ಲಿಸಿದ್ದು. ನಿರ್ಮಲಳ ಹಣೆಯ ಮೇಲಿನ ನೆರಿಗೆಗಳು ಹೆಚ್ಚಾದವಿ. ಅಂದ್ರೆ.....ರಾಧಿಕಾ ಒಂಡಿಯಾಗಿ ಏನನ್ನೂ ನಿಭಾಯಿಸಲಾರಳು ಅವಳಿಗೆ ಅವರೆಲ್ಲರೂ ಬೇಕು. ಅಪ್ಪಬೇಕು. ಗಂಡವಾಗುವವನು ಬೇಕು. ಇನ್ನು ನನ್ನ ಅಗತ್ಯ ಏನಿದೆ? ಅವಳಿಗೆ ಸಂಗಾತಿ ಸಿಕ್ಕಿರುವಾಗ ನಾನು ಸತ್ತರೂ ಚಿಂತೆ ಇಲ್ಲ ಮನದ ತುಂಬಾ ಮೋಡ ಕವಿದು ಕೊಂಡಿತು.

ನಾನು ರಾಧಿಕಾಳನ್ನೂ ನೋಡಹಬೇಕು . ಅವಳ ಹತ್ತಿರ ಮಾತನಾಡಬೆಕು. ಅವಳೊಬ್ಬಳನ್ನೂ ಮಾತ್ಪ ಕರೀರಿ. ಅಡಿಗೆಯವರು ಕರೆದ ಕೂಡಲೇ ರಾಧಿಕಾ ಆತುರಾತುರವಾಗಿ ಬಂದಳು.

ಏನು ಮಮ್ಮಿ ಈಗ ಹೇಗಿದೀಯ ಮುಗುಳ್ನಕ್ಕು ಕೇಳಿದಳು.

ಒಂದು ರಾತ್ರಿಯಲ್ಲಿ ಮಗಳು ಎಷ್ಟು ಬಳಲಿ ಹೋಗಿದ್ದಾಳೆನ್ನುವುದು ಅವಳ ಮುಕ ನೋಡಿದರೆ ತಿಳಿಯುತ್ತಿತ್ತು. ವ್ಯಥೆಯಾಯಿತು ಮಗಳ ಮೇಲಿನ ಮಮತೆ ಉಕ್ಕಿ ಹರಿಯಿತು. ಇವಳ ಬಗ್ಗೆ ತಾನು ಕಠಿಣವಾಗಬಾರದು ಎನಿಸಿತು. ರಾಧಿಕಾ...ಬಾ ಇಲ್ಲಿ ಕೂತ್ಕೋ...ತನ್ನ ಬಳಿಗೆ ಕರೆದಳು.

ಮಮ್ಮಿ. ನೀನು ರೆಸ್ಟ್ ತಗೋ. ಸುಸ್ತು ಮಡ್ಕೋ ಬೇಡ..ಎಂದಳು ಹಿರಿಯಳಂತೆ.

ಪರವಾಗಿಲ್ಲ ಬಿಡು ರಾಧಿಕಾ. ನನಗೇನಾಗಿದೆ ಅಂತ ನಗೆ ಗೊತ್ತಾ್ಎದ. ನಿನಗೂ ಗೊತ್ತಾಗಿರಬಹುದು. ನಾನು ಇನ್ನು ಕೆಲವಾರುದಿನಗಳಾದರೂ ಈ ನರ್ಸಿಂಗ್ ಹೋಂನಲ್ಲಿದ್ದರೆ...ನನಗೆ ರೆಸ್ಟು ಸಿಗುತ್ತೆ. ನೀನು ಮನೇಲಿ ಒಬ್ಬಳೇ ಇರಬೇಡ. ನಿನಗೆ ಭಯವಾಗುತ್ತೆ. ನೀನು ಮನೋಜನ ಮನೆಯಲ್ಲಿ ಹೋಗಿ ಇರು.

ರಾಧಿಕಾ ನಕ್ಕಳು. ಮಮ್ಮೀ...ನಿನದಗೆ ಹುಷಾರಿಲ್ಲದಿರುವಾಗ ಇದೆಲ್ಲ ಏನು ತಮಾಷೆ? ಅಡಿಗೆಯವರು ನನ ಜೊತೆ ಗಿರ್ತಾರಲ್ಲ.

ಅಡಿಗೆಯವರು ಇಲ್ಲಿ ನಿನಗೆ ಅವರಿಬ್ಬರನ್ನು ಕಂಡರೆ ಆಗುತ್ತಿರಲಿಲ್ಲವಲ್ಲ. ಅವರ ಮೆಲೆ ಒಳ್ಳೆಯ ಅಭಿಪ್ರಾಯವಿಲ್ಲ. ಈಗ ಕಹೀಗೆ ಹೇಳ್ತೀದೀಯಲ. ತಾಯಿ ತನ್ನನ್ನು ಪರೀಕ್ಷಿಸಲು. ವ್ಯಂಗ್ಯವಾಗಿ ಹೀಗೆ ನುಡಿಯುತ್ತಿರಬಹುದೇ ಎಂಬ ಅನುಮಾನ'ದಿಂದ ನೋಡಿದಳು.

ಒಂದು ರಾತ್ರಿಯಿಡೀ. ಇಂಜಕ್ಷನ್ ಪ್ರಭಾವಕ್ಕೊಳಗಾಗಿ ಕಣ್ಣು ಮುಚ್ಚಿ ಮಲಗಿದವಳಿಗೆ ಜ್ಞಾನೋದಯವಾಗಿದೆ ಅಂತಲೇತಿಳಿ. ನಾನು ಹೀಗೇ ಹೇಳಿದೆ ಅಂತ ಅವರಿಗೆಲ್ಲ ಹೇಳಿಬಿಡು. ಅವರುಗಳಿಗೆ ಅರ್ಥವೆಆಗುತ್ತೆ ಸಂತೋಷವಾಗಿ ಒಪ್ಕೋತಾರೆ. ಮಗಳ ಸಂತೋಷವೇ ತನ್ನ ಸಂತೋಶ ಎಂಬ ನಿರ್ಧಾರಕ್ಕೆ ಬಂದಿದ್ದಳು ನಿರ್ಮಲಾ.

ಒಳ್ಳೆ ಜೋಕ್ ಮಾಡ್ತಿದೀಯ ಮಮ್ಮಿ ನೀನು. ನಿನಗೆ ಇಷ್ಟವಿಲ್ಲದಿದ್ದರೆ ಹಾಗೇ ಹೇಳಿಬಿಡು. ನಿನಗೋಸ್ಕರ ಮನೋಜನ್ನ ಸ್ಯಾಕ್ರಿಫೈಸ್ ಮಾಡಿಬಿಡ್ತೀನಿ ಬೇಕಾದ್ರೆ..

ನನಗೊಸ್ಕರ ಅವನನ್ನು ತ್ಯಾಗ ಮಾಡಿ ಸನ್ಯಾಸಿಣಿಯ ತರಹ ಇರ್ತೀನಿ ಅಂತೀಯ ಅದನ್ನು ನೋಡಿ ನಾನು ದುಃಖಿಸಬೇಕಾ?

ಸಾರಿ ಮಮ್ಮೀ...ನಿನ್ನನ್ನ ಹರ್ಟ್ ಮಾಡುವ ಉದ್ದೇಶನನಗಿಲ್ಲ. ನಿನ್ನ ಮನಸ್ನಲ್ಲಿ ಏನಿದೆ ಹೇಳು. ನೀನು ಏನೋ ಮುಚ್ಚಿಡ್ತಾ ಇದೀಯ ಅಂತ ಅನ್ನಿಸ್ತಿದೆ ಅದೇನೂಂತ ಹೇಳು...ಪ್ಲೀಸ್.ಯ

ಮಗಳ ಹತ್ತಿರ ಏನು ಮುಚ್ಚಚುಮರೆ? ನಾನು ಯಾವುದನನವಿ ಹೇಳಶಿದರೂ ಅದು ನಿನ್ನ ಒಳ್ಳೇದರಕ್ಕೇ ಅಂತ ತಿಳಕೋ. ಈಗ ನೀನು ಹೋಗು ನನಗೆ ಸ್ವಲ್ಪ ರೆಸ್ಟ್ ಬೇಕು...ಡ್ಯೂಟಿ ಡಾಕ್ಟರು ನೋಡಿದರೆ ನಮ್ಮಿಬ್ಬರನ್ನು ಗದರಿಸ್ತಾರೆ ಅಷ್ಟೇ. ರಾಧಿಕಾ ವಿಚಿತ್ರವಾಗಿ ತಾಯಿಯ ಕಡೆ ನೋಡಿದಾಗ ಹುಂ ಹೋಗು ಎನ್ನುವಂತೆ ಸಂಜ್ಞೆ ಮಾಡಿದ್ದಳು. ಪ್ರೇಮಿಗಳ ನಡುವೆ ಅಡ್ಡ ಬರಬಾರದೆಂದ ನಿರ್ಧರಿಸಿ ಹೇಳಿದ್ಧಳು.

ರಾಧಿಕಾ ಬಲವಂತವಾಗಿ ಹೊರಗೆ ಬಂದಳು. ಅವಳಿಗೆ ಏನೋ ಅಊಮಾನ. ಮಮ್ಮೀ ಎಂದೂ ಹೀಗೆ ತನ್ನ ಹಠವನ್ನು ಬಿಟ್ಟು ಮತವಾಡಿದವಳಲ್ಲ. ಏನಾಗಿದೆ ಇವಳಿಗೆ? ಹೊರಗೆ ನಿಂತಿದ್ದ ಮನೋಜ ನಿಗಾಗಲೀ ಮುರಳಿಗಾಗಲೀ ಈ ವಿಷಯವನ್ನು ಹೇಳಲಿಲ್ಲ.

ಅದೇ ರಾತ್ರಿ ನಿರ್ಮಾಲಾ ಯಾರಿಗೂ ಯಾವ ಸುಳಿವೂ ಕೊಡದೇ ಹಿಂತಿರುಗಿ ಬರಲಾಗದ ದಾರಿಯಲ್ಲಿ ಹೊರಟೇ ಹೋದಳು. ಯಾರಿಗೂ ಅದನ್ನೂ ನಂಬುಕ್ಕೇ ಆಗಿರಲಿಲ್ಲ. ಡಾಕ್ಟರು ಹೇಳಿದ್ದರು

ರಾದ್ರ ಮತ್ತೊಂದು ಅಟ್ಯಾಕ್ ಬಂದಿದೆ. ನಿದ್ದೇಲೆ ಹೋಗಿ ಬಿಟ್ಟಿದಾರೆ. ರಾಧಿಕಾ ನಂಬದವಳಂತೆ ತಲೆ ಅಲಆಡಿಸಿ ಬಿಕ್ಕಿ ಬಿಕ್ಕಿ ಅತ್ತಳು. ಅವಳ ದುಃಖ ಮನೋಜನಿಗೆ ವ್ಯಥೆ ಯಾಗಿತ್ತು ತನ್ನ ತಾಯಿಯ ಬಗಗೆ ಎಂದೂ ಕಣ್ಣೀರು ಸುರಿಸಿದವನಲ್ಲ. ನಿರ್ಮಲೆಯ ನಿಧನಕ್ಕಾಗಿ ಕಣ್ಣೀರು ಸುರಿಸಿದವನಲ್ಲ. ನಿರ್ಮಲೆಯ ನಿಧನಕ್ಕಾಗಿ ಕಣ್ಣೀರು ಮಿಡಿದ ಮುರಳಿ, ಗೀತ ರಾಧಿಕಾಳಿಗೆ ಸಮಾಧಾನ ಹೇಳಿದರು

ರಂಗನಾಥನಿಗೆ ಇರು ಭಾರಿ ಷಾಕ್. ನಿರ್ಮಲ ತನ್ನಿಂದಳೇ ಸತ್ತಳು ಎಂದೇ ಭಾವಿಸಿದ. ಸಾಯುವ ಮೊದಲು ಅವಳು ತನ್ನ ಹತ್ತಿರ ಮಾತವಾಡಲಿಲ್ಲ. ತನ್ನನ್ನು ಅವಳು ಕ್ಷಮಿಸಲಿಲ್ಲ. ಎನ್ನುವ ಚಿಂತೆ ಅವನನ್ನು ಕಾಡಿತ್ತು. ಅಂತೂ ಕಡೆಗೂ ತನ್ನನ್ನು ಅಪರಾಧಿಯನ್ನಾಗಿ ಮಾಡಿಬಿಟ್ಟಳು. ರಾಧಿಕಾಗೆ ಏನು ಸಮಾಧಾನ ಹೇಳ ಬೇಕೆಂದು ಕತೋಚಲಿಲ್ಲ. ರಾಧಿಕಾ ನಿನಗೆ ಅನ್ಯಾ.ಯವಾಯಿತು ನಿಜ. ಆದರೆ, ನನಗಾಗಿ ರುವ ಅನ್ಯಾಯವನ್ನು ನಾನು ಯಾರೊಡನೆ ಹೇಳಿಕೊಳ್ಳಲಿ? ಮನದಲ್ಲೇ ದುಖಿಸಿದ.

ಈಗ ಮುಂದಿನ ಕೆಲಸ .....ನರ್ಸಿಂಗ್ ಹೋಂನ ಕಡೆಯ ವಿಧಿಗಳೆಲ್ಲ ಮುಗಿದ ನಂತರ, ಶವವನ್ನು ಇವರುಗಳಿಗೆ ಒಪ್ಪಿಸಿದದರು. ಮುರಳಿ ಮನೋಜರೇ ಓಡಾಡಿದ್ದರು. ಆದರೆ ಈಗ ಮುಂದಿನ ಪ್ರಶ್ನೆ? ನಿರ್ಮಲಳ ಅಂತಿಮ ಕ್ರಿಯೆಯನ್ನು ಯಾರು ಮಾಡಬೇಕು? ಅವಳ ತಮ್ಮ ಎಲ್ಲಿದಾನೋ? ನನಗಂತೂ ತಿಳಿಯದು. ನ್ಯಾಯವಾಗಿ ಆ ಹಕ್ಕು ನನ್ನದು. ಆದರೆ ನಾನು ಯಾರು ಅಂತ ಇವರ್‍ಯಾರಿಗೂ ತಿಳಿಯದು. ಈಗ ಈ ಸಂಬಂಧವನ್ನು ಹೇಳಿಕೊಂಡರೆ, ನಿರ್ಮಲೆಯ ಆತ್ಮ ಕುಪಿತಗೊಳ್ಳುತ್ತದೆ ಎಂದು ಭಾವಿಸಿದ. ಶವವನ್ನು ನಿರ್ಮಲೆಯ ಮನೆಗೆ ಸಾಗಿಸಿದ್ದರು. ಅಕ್ಕಪಕ್ಕದವರು. ಗುರುತು ಪರಿಚಯದವರು, ಬಂದು ಅಂತಿಮದರ್ಶನ ವನ್ನು ಮಾಡಿಕೊಂಡು ಹೋದರು.,

"ಮುರಳಿ...ರಾಧಿಕಾಳ ಮಾವನಿಗೆ ತಿಳಿಸುವುದು ಹೇಗೆ? ಅವಳನ್ನು ಕೇಳು... "

ರಾಧಿಕಾ ಅಳುತ್ತಾ ನುಡಿದಳು.

"ನಾನು ಅವನ ಮುಖವನ್ನೇ ನೋಡಿಲ್ಲ. ಮೊದಲು, ಎಂದೂ ಬಂದು ನಮ್ಮ ದುಃಖವನ್ನು ವಿಚಾರಿಸಿದವನಲ್ಲ. ಅವನು ಈಗೇಕೆ? ಅದೇನೆನು ಮಾಡಬೇಕೋ ಅದನ್ನೆಲ್ಲಾ ಮನೋಜನೇ ಮಾಡಲಿ. ಅಮ್ಮನೇ ಮನೋಜನ್ನ ಒಪ್ಪಿಕೊಂಡಿದಾಳೆ. ಇನ್ನೇನು ಹೆದರಿಕೆ?"

ರಾಧಿಕಾಳ ಮಾತಿನಿಂದ ಎಲ್ಲರಿಗೂ ಆಶ್ಚರ್ಯ. ಇದ್ದಕ್ಕಿದ್ದಂತೆ ರಾಧಿಕಾ ಹೀಗೇಕೆ ನುಡಿದಳು? ಈ ಮಾತು ನಿಜವೆ ? ಗೀತ ಕೇಳಿದಳು.

"ನಿಮ್ಮ ತಾಯಿಗೆ ಅವನನ್ನ ಕಂಡರೆ ಅಷ್ಟಕ್ಕಷ್ಟೇ..ಎಂದು ಹೇಳಿದ್ದೆ. ಆದರೆ ಈಗ ಹೀಗೆ ಹೇಳ್ತಿದೀಯ...ಸರಿಯಾಗಿ ಯೋಚಿಸಿ ಹೇಳ್ತದೀಯಾ ತಾನೆ?"

"ಗೀತ ನನ್ನನ್ನೀಗ ಏನೂ ಕೇಳಬೇಡ. ನಾನೇನೂ ಸುಳ್ಳು ಹೇಳ್ತಿಲ್ಲ. ನಿಧಾನವಾಗಿ ಇನ್ನೊಂದು ದಿನ ನಾನೇ ಎಲ್ಲಾ ಹೇಳ್ತೀನಿ. ಮನೋಜನಿಗೆ ಮನಸ್ಸಿದ್ದರೆ ಮಾಡಲಿ ಅಷ್ಟೇ" ಎಂದು ಹೇಳಿ ತನ್ನ ರೂಮಿಗೆ ಹೊರಟು ಹೋದರು. ಮಿಕಿ ಮಿಕಿ ಅವಳನ್ನೇ ನೋಡುತ್ತಿದ್ದವರು. ಮುಖ ಮುಖ ನೋಡಿಕೊಂಡರು. ಎಲ್ಲರ ಮುಖದಲ್ಲೂ ಗೊಂದಲ.

ರಾಧಿಕ ಹಾಗೆ ಹೇಳಿದರೂ ಮನೋಜ ಹಿಂಜರಿದ. ಮನೋಜ ಇಕ್ಕಟ್ಟಿಗೆ ಸಿಕ್ಕಿ ಬಿದ್ದ. ಈಗ ತಾನಾಗಿಯೋ ಏನೂ ಹೇಳುವಂತಿಲ್ಲ. ಇವಳು ನನ್ನ ಮಗಳು. ಸತ್ತವಳು ನನ್ನ ಹೆಂಡತಿ ಎಂದು ಹೇಳಿಕೊಳ್ಳಲಾಗದ ಪರಿಸ್ಥಿತಿಗೆ ಮಿಡುಕಿದ ಮನೋಜ ಮಾವನ್ನ ಕೇಳಿದ.

"ಮಾವ, ಇದನ್ನೆಲ್ಲಾ ನಾನು ಮಾಡಿದರೆ ತಪ್ಪಾಗುಲ್ವಾ?"

"ತಪ್ಪೇನಿಲ್ಲ. ರಾಧಿಕಾ ಏನೋ ಯೋಚಿಸಿಯೇ ಹಾಗೆ ಹೇಳಿದ್ದಾಳೆ., ನಿನಗಿಷ್ಟವಿಲ್ಲದಿದ್ದರೆ ಮುರಳಿಗೆ ಹೇಳೋಣ. ಆದರೆ, ಅವರಮ್ಮ ಒಪ್ಪಬೇಕು. ಆದರೆ, ಸುಮ್ಮನೇ ಎಲ್ಲರನ್ನು ಕೇಳುವ ಬದಲು, ಇದು ಸರಿ ಅನ್ನಿಸುತ್ತೆ."

"ನೀನೇ ಒಪ್ಪಿದ ಮೇಲೆ ನನಗೇನೂ ಚಿಂತೆ ಇಲ್ಲ, ಮಾವ, ನಾನು ಮಾಡ್ತಿನಿ" ಎಂದ. ಅಲ್ಲಿಗೆ ಎಲ್ಲಾ ನಿರ್ಧಾರವಾಯಿತು.

ಯಾರೋ ಒಬ್ಬರು ಶಾಸ್ತ್ರಿಗಳು ಬಂದು ಎಲ್ಲಾ ಮಾಡಿಸಿದರು. ಆಕೆ ಮುತ್ತೈದೆ ಹೌದೋ ಅಲ್ಲವೋ ಎನ್ನುವ ಜಿಜ್ಞಾಸೆ ಬಂತು. ರಾಧಿಕಾ ಹೇಳಿದಳು. "ಅಮ್ಮ ಎಂದೂ ಅಪ್ಪ ಸತ್ತಿದಾರೆ ಎಂದು ಹೇಳಿರಲಿಲ್ಲ. ಆದ್ದರಿಂದ ಅವರು ಮುತ್ತೈದೆಯೇ." ರಂಗನಾಥನ ಕಣ್ಣುಗಳಲ್ಲಿ ಅಪರಾಧಿ ಛಾಯೆ ಮೂಡಿ ಮಾಯವಾಯಿತು. ರಂಗನಾಥ ನಿರಾಳವಾದ. ತಾನು ಬದುಕಿದ್ದೂ ಅವಳನ್ನೂ ಯಾರಾದರೂ ವಿಧವೆ ಎಂದು ಭಾವಿಸುವುದು ಅವನಿಗೆ ಅಸಹನೀಯವೆನಿಸಿತ್ತು.

ಶಾಸ್ತ್ರಿಗಳನ್ನೂ ಹೇಳಿದ್ದನ್ನೆಲ್ಲಾ ಮನೋಜ ಹೇಸರಿಸದೇ ಮಾಡಿದ . ಆದರೂ ಅವನ ಮನಸ್ಸು ಕ್ಷುಬ್ಧಗೊಂಡಿತು. ಈಕೆಗೆ ತಾನೇನಾಗಬೇಕು? ಇದೆಲ್ಲಿಯ ಅನುಬಂಧ? ಅವನಿಗೆ ಅರ್ಥವಾಗಲಿಲ್ಲ.

ರುದ್ರಭೂಮಿಯಿಂದ ಸೀದಾ ಎಲ್ಲರೂ ರಾಧಿಕಾಳ ಮನೆಗೆ ಬಂದರು. ಎಲ್ಲರಿಗೂ ತುಂಬಾ ಸುಸ್ತಾಗಿತ್ತು. ಮುರಳಿ ತನ್ನ ಮನೆಯಿಂದ ಒಗೆದ ಟವೆಲ್ಲು ಪಂಚೆಗಳನ್ನನೂ

ತಂದಿದ್ದ. ರಾಧಿಕಾಳ ಪಕ್ಕದ ಮನೆಯವರು ನಾಕೈದು ಜನಗಳಿಗಾಗುವಷ್ಟು ಊಟವನ್ನು ತಂದು ಇಟ್ಟಿದ್ದರು. ಮುರಳಿಯೇ ಎಲ್ಲರಿಗೂ ಬಿಡಿಸಿದ. ಯಾರಿಗೂ ಊಟ ಮಾಡಬೇಕೆನಿಸಿರಲಿಲ್ಲ. ಅಡಿಗೆಯವರು ಮಾಡಿಕೊಟ್ಟ ಕಾಫಿಯನ್ನು ಕುಡಿದು. ಇನ್ನು ಅಲ್ಲಿ ಕುಳಿತು ಮಾಡುವುದೇನು ಎಂದುಕೊಂಡು ಎಲ್ಲರೂ ಹೊರಟರು..

"ನಾನು ನಿಮ್ಮ ಜೊತೆ ಬರ್ತೀನಿ. ಅಮ್ಮ ಇಲ್ಲದ ಮನೇಲಿ ನಂಗೆ ಇರುಕ್ಕೆ ಆಗುಲ್ಲ" ಎಂದಳು ರಾಧಿಕಾ.

"ಬಾ....ಅದಕ್ಕೇನಂತೆ" ಎಂದ ರಂಗನಾಥ. ಮನೋಜನಿಗೆ ಅದು ಸರಿ ಎನಿಸಲಿಲ್ಲ.

"ಅಡಿಗೆಯವರು, ಇರ್ತಾರಲ್ಲ. ನಿನಗಿನ್ನೇನು?" ಎಂದ.

"ನಾನಿಲ್ಲೇ ಇದ್ದರೆ, ನನಗೆ ಹುಚ್ಚು ಹಿಡಿಯುತ್ತೆ ಅಷ್ಟೇ"

"ಗೀತಾ ನೀನಿರ್ತೀಯಾ ಇವಳ ಜೊತೆ?" ಮುರಳಿ ಕೇಳಿದ.

ಅವಳು ನಿರಾಕರಿಸಿದಳು.. ನನಗೆ ಬೇರೆಯವರ ಮನೆಯಲ್ಲಿ ಸರಿ ಹೋಗುಲ್ಲ. ನಿದ್ದೆ ಬರುಲ್ಲ. ರಂಗನಾಥನಿಗೆ ಸಂಕಟವಾಯಿತು. ಅವಳು ನಮ್ಮ ಮನೆಗೆ ಬಂದರೇನಂತೆ? ನನ್ನ ಮಗಳೇ ಅಲ್ಲವೇ ಅಂತ ಅನ್ನಿಸಿದರೂ ಅದನ್ನು ಮುರಳಿಗಾಗಲೀ, ಮನೋಜನಿಗಾಗಲೀ, ಅಥವಾ ಇನ್ನಾರಿಗೇ ಆಗಲಿ ತಿಳಿಸುವಂತಿಲ್ಲ. ಇದೆಂತಹ ಧರ್ಮ ಸಂಕಟ? ಎಲ್ಲರೂ ಅನುಮಾನಿಸುತ್ತಿರುವುದನ್ನು ಕಂಡು ಮುರಳಿಯೇ ಹೇಳಿದ.

"ಗೀತಾ ನಮ್ಮ ಮನೆಗೆ ಬಂದಿರ್ತಾಳೆ. ನೀನೂ ಬಂದು ಬಿಡು. ಇವತ್ತಿಂದ ನಾನು ನಿನ್ನ ಅಣ್ಣ ಅಂತ ತಿಳಕೋ..."

ರಂಗನಾಥ ಆ ಮಾತನ್ನೂ ಮೆಚ್ಚಿದ. ತನ್ನ ಸ್ನೇಹಿತ ಸತ್ಯಮೂರ್ತಿಯ ಮಗನೇ ಸರಿ. ಎಂದುಕೊಂಡ ಆದರೆ, ತನಗೆಂತಹ ಶಿಕ್ಷೆ? ಸಂಬಂಧ ಹೇಳಿಕೊಳ್ಳಲಾಗುತ್ತಿಲ್ಲ. ರಾಧಿಕಾ ಅನುಮಾನಿಸಿದ್ದನ್ನು ಕಂಡು ಮನಸ್ಸು ಮಿಡುಕಿತ್ತು..

ನಿಮಗೆಲ್ಲಾ ಸುಮ್ಮನೇ ತೊಂದರೆ?ನಿಮ್ಮ ತಾಯಿ ಏನಂದು ಕೊಳ್ತಾರೋ...? ರಾಧಿಕಾ ದುಃಖತಪ್ತಳಾಗಿ ಹೇಳಿದಳು.

"ಅಮ್ಮ ನನಗೆ ಹೇಳುವ ಕೆಲಸ ನನ್ನದು. ಸುಮ್ಮನೇ ಬಾ ರಂಗನಾಥನಿಗೆ ಖೇದವೆನಿಸಿತ್ತು. ತಾನೆಂತಹ ಅಪ್ಪ? ಮಗಳನ್ನು ಮನೆಗೆ ಕರೆಯಲೂ ಆಗದಷ್ಟು ವಂಚಕನಾದೇನೆ"

ಅಡಿಗೆಯವರು, ಕೆಲಸದವಳು ತಮ್ಮ ಜೊತೆಗೆ ಇರಲಿ, ಮನೆಗೆ ಬೀಗ ಹಾಕು. ಇದು ಬೇಡ. ನಾವಿಬ್ಬರೂ ಇಲ್ಲಿಯೇ ಮಲಗ್ತೀವಿ. ಎಂದಿದ್ದರು.

ರಂಗನಾಥ ಮನೋಜ ಬೆಳಿಗ್ಗೆ ಒಂದು ಸಲ ತಣ್ಣೀರಿನ ಸ್ನಾನ ಮಾಡಿದ್ದರು. ಮನೆಗೆ ಹೋದವನೇ ರಂಗನಾಥ ಬಿಸಿ ನೀರು ಕಾಯಿಸಿದ. ಏನು ಕರ್ಮವೋ ಯಾವ ಪಾಪನೊ, ಎಲ್ಲಾ ಕಳೆದು ಹೋಗಲಿ ಎನ್ನುವಂತೆ ಮನೋಜ ಸ್ನಾನ ಮಾಡು ಎಂದ. ನಿರ್ಮಲೆಯ ಋಣ ಇಂದಿಗೆ ತೀರಿಹೋಯಿತು. ಎಂದುಕೊಂಡು ತಾನೂ ಮತ್ತೆ ಸ್ನಾನ ಮಾಡಿದ. ಅಂತೂ ಕಡೆಗೂ ಶಿಕ್ಷೆ ಕೊಟ್ಟಳು ಎಂದು ನೊಂದುಕೊಂಡ.

ಮುರಳಿ ರಾಧಿಕಾಳನ್ನು ಕರೆತಂದು. ತನ್ನ ತಾಯಿಯೊಡನೆ ಹೇಳಿದ. ಇವಳು "ಇವತ್ತೂ ಅಥವಾ ಇನ್ನೊಂದೆರಡು ದಿನ ಇಲ್ಲಿ ನಮ್ಮ ಮನೆಯಲಿರುತ್ತಾಳೆ. ನಾನು ಹೋಗಿ ಗೀತನ್ನ ಕರೆದುಕೊಂಡು ಬರ್ತೀನಿ. ಇವಳ ಜೊತೆಗೆ ಇರಲಿ." ಎಂದ. "ಆಕೆ

ಸ್ವಲ್ಪ ಸಂಪ್ರದಾಯದವರು. ಆದರೂ ಮಗನ ಮಾತಿಗೆ ಎದುರಾಡದೇ ಕೂತ್ಕೋಮ್ಮಾ...ಕಾಫಿ ಕುಡೀತೀಯ" ಎಂದು ಕೇಳಿದರು. ಅವರು ಮಾತಾಡಿದ ಕೂಡಲೇ ಅಮ್ಮನ ನೆನಪಾಗಿ ರಾಧಿಕಾ ಮತ್ತೆ ಅಳತೊಡಗಿದಳು.

ಆಕೆಗೆ ಗಾಭರಿಯಾಯ್ತು. "ಸಮಾಧಾನ ಮಾಡ್ಕೋಮ್ಮಾ...ಏನು ಕಮಾಡುಕಕ್ಕೆ ಆಗುತ್ತೆ?ಅವರವರ ಹಣೆಯಲ್ಲಿ ಬರೆದಂತೆ ಆಗುತ್ತೆ" ಎಂದು ಸಮಾಧಾನ ಹೇಳಿ ಕಾಫಿ ತಂದಿತ್ತರು.

ಗೀತಾ ಬರುವವರೆಗೂ ರಾಧಿಕಾ ಅಳುತ್ತಲೇ ಇದ್ದಳು. ಆಕೆ ಬಿಸಿ ಬಿಸಿ ಅಡಿಗೆ ಮಾಡಿ ಬಡಿಸಿದರು. ಗೀತಾ ಕೂಡಾ ಮನೆಯಲ್ಲಿ ಮತ್ತೆಒಮ್ಮೆ ಸ್ನಾನ ಮಾಡಿದ್ದಳು. ಮುರಳಿಯೂ ಮನೆಗೆ ಬಂದು ಮತ್ತೆ ಸ್ನಾನ ಮಾಡಿದ್ದ. ಬೆಳಿಗ್ಗೆ ಯಾರೂ ಊಟ ಮಾಡದೇ ಇದ್ದುದರಿಂದ ಎಲ್ಲರಿಗೂ ಊಟ ಚೆನ್ನಾಗಿ ಸೇರಿತು. ಗೀತಾ ಪಿಸುದನಿಯಲ್ಲಿ ರಾಧಿಕಾಗೆ ಹೇಳಿದಳು.

"ಅತ್ತೆ ಸ್ವಲ್ಪ ಮಡಿ. ಏನಾದ್ರೂ ಅಂದರೆ ಬೇಜಾರು ಮಾಡ್ಕೋ ಬೇಡ., ನಿನ್ನ ತಟ್ಟೆ ಬಟ್ಟಲುಗಳನ್ನು ನೀನೇ ತೊಳೆದಿಟ್ಟುಬಿಡು. ನೀರು ಬೇಕಾದರೆ ನನ್ನನ್ನು ಕೇಳು. ನೀನೇ ಮುಟ್ಟ ಬೇಡ. ನಿನಗೆನು ಬೆಕೋ ನನ್ನನ್ನು ಕೇಳು." ರಾಧಿಕಾಳ ಮುಖ ಚಿಕ್ಕದಾಯಿತು.

ತಾಯಿಯ ಮನೆಯಲ್ಲಿರಬೇಕು. ಅಥವಾ ಗಂಡನ ಮನೆಯಲ್ಲಿರ ಬೇಕು. ಅದೇ ಸರಿ ನನ್ನಂತಹವಳಿಗೆ ಎಂದುಕೊಂಡಳು. ಮಲಗಲು ಬೇರೆ ಹಾಸಿಗೆ ಕೊಟ್ಟಿದ್ದರು. ಮಹಡಿಯ ಮೇಲಿನ ರೂಮಿನಲ್ಲಿ ಇಬ್ಬರೂ ಮಲಗಿದರು. ಮಾತ್ನಾಡ್ತಾನೇ ಇದ್ದರು. ನಿದ್ದೆ ಬರುವವರೆಗೂ,

ಮನೋಜನ ಮನೆಗೇ ಹೋಗಿದ್ದರೆ ಚೆನ್ನಾಗಿತ್ತೇನೋ...ಅವನೇಕೆ ಬೇಡ ಅಂದನೋ? ಅವಳಿಗೆ ಅಸಮಾಧಾನವಾಗಿತ್ತು.

ಅವರ ಮನೆಯಲ್ಲಿ ಯಾರೂ ಹೆಂಗಸರಿಲ್ಲ. ಹುಡುಗಿ ನೀನು ಅಲ್ಲಿದ್ದರೆ ಏನು ಚೆನ್ನ? ಜನ ಏನಾದ್ರೂ ಅಂದೇ ಅಂತಾರೆ.

"ಹಾಗಾದ್ರೆ ಅಮ್ಮ ಯಾಕೆ ಹಾಗೆ ಹೇಳಿದಳು.?"

"ಏನಂತ? ಏನು ಹೇಳಿದರು ನಿಮ್ಮ ತಾಯಿ?"

"ನೀನು ಒಬ್ಬಳೇ ಮನೇಲಿರಬೇಡ. ಮನೋಜನ ಮನೆಗೆ ಹೋಗು. ಅವರಿಬ್ಬರೂ ನಿನ್ನನ್ನು ಚೆನ್ನಾಗಿ ನೋಡ್ಕೋತಾರೆ" ಅಂತ ಅಂದಿದ್ದಳು.

ಈ ಮಾತನ್ನು ಆಗಲೇ ಯಾಕೆ ಹೇಳಲಿಲ್ಲ.?":

"ನೀನು ಒಬ್ಬಳೇ ಮನೇಲಿರಬೇಡ. ಮನೋಎಜನ ಮನೆಗೆ ಹೋಗು. ಅವರಿಬ್ಬರೂ ನಿನ್ನನ್ನ ಚೆನ್ನಾಗಿ ನೋಡ್ಕೋತಾರೆ ಅಂತ ಅಂದಿದ್ದಳು.

ಈ ಮಾತನ್ನು ಆಗಲೇ ಯಾಕೆ ಹೇಳಲಿಲ್ಲ?

"ಯಾಕೋ ಎಲ್ಲರೆದುರಿಗೆ ಹೇಳಲು ಇಷ್ಟವಾಗಿಲಿಲ್ಲ. ಅಮ್ಮ ಹಾಗೆ ಹೇಲಿದ್ದಳಲ್ಲ. ಅವಳಿಗೆ ತಾನು ಸತ್ತೂ ಹೋಗ್ತಿವಿ ಅಂತ ಗೊತ್ತಾಗಿತ್ತಾ?" ಬಿಕ್ಕಿ ಅಳಲಾರಂಭಿಸಿದಳು.

"ಸುಮ್ಮನೇ ಹಾಗಂದಿರಬಹುದು. ಅಳ್ತಾನೇ ಇದ್ರೆ ಆಗುತ್ತಾ ಸಮಾಧಾನ

ಮಾಡ್ಕೋ...."

"ಅಲ್ಲ...ಮನೋಜನೇ ಹಾಗೆ ಹೇಳಿಬಿಟ್ನಲ್ಲ. ನಾನು ಎಲ್ಲಿರಲಿ? ಆ ಮನೇಲಂತೂ ಇರುಕ್ಕಾಗುಲ್ಲ ನನ್ನ ಕೈಲಿ. ಲೇಡೀಸ್ ಹಾಸ್ಟೆಲ್ಲಿಗೆ ಸೇರ್ಕೋತೀನಿ ಅಷ್ಟೇ.."

"ನಾವೆಲ್ಲಾ ಇದ್ದು ನೀನು ಹಾಸ್ಟೆಲ್ಲಿಗೆ ಸೇರ್ಕೊಬೇಕಾ? ಸ್ನೇಹ ಅಂದ್ರೆ ಇಷ್ಟೇನಾ? ಎಲ್ಲಾ ಸೇರಿ ನಿನಗೆ ಹೆಲ್ಪ್ ಮಾಡ್ತಿವಿ."

"ನಂಗೇನೂ ಗೊತ್ತಾಗ್ತಿಲ್ಲ. ಯಾರು ಹೇಗೆ ಹೇಳಿದರೆ ಹಾಗೇ ನನಗಯಾಕೆ ಇಂಥಾ ಸ್ಥಿತಿ ಬಂತು?" ಮತ್ತೆ ಅಳತೊಡಗಿದಳು.

"ಛೆ...ಅಳಬೇಡ. ನಿಮ್ಮಮ್ಮನೂ ಒಂಟಿಯಾಗಿದ್ದರು. ಆದರೆ ಅವರು ಎಂದಾದರೂ ಅತ್ತಿದ್ದನ್ನ ಕಂಡಿದ್ಯಾ? ಹೇಗಿದ್ದರು ಧೈರ್ಯವಾಗಿ?"

"ಅಮ್ಮನ ತರಹ ಇರುಕ್ಕೆ ನನ್ನ ಕೈಲಿ ಆಗುಲ್ಲ. ಸೂಯಿಸೈಡ್ ಮಾಡ್ಕೋತೀನಿ ಅಷ್ಟೇ."

"ಸೂಯಿಸೈಡ್ ಒಂದೇ ಎಲ್ಲಾದಕ್ಕೂ ಪರಿಹಾರವಲ್ಲ. ಕೇನೇ ಬಂದ್ರೂ ಅದನ್ನು ಎದುರಿಸುವ ಎದೆಗಾರಿಗೆ ಬೇಕು. ಈಗ ಮಲಕ್ಕೊ ಬೆಳಿಗ್ಗೆ ಯೋಚಿಸಿದರಾಯ್ತು." ಇಬ್ಬರಿಗೂ ಸುಸ್ತಾಗಿತ್ತು. ಕಣ್ಣು ಮುಚ್ಚಿ ಮಲಗಿದರು.

ಮುರಳಿಯ ತಾಯಿ ಪಿಸುದನಿಯಲ್ಲಿ ಮಗನನ್ನು ಕೇಳಿದರು.

"ಇನ್ನು ಇವಳ ಗತಿ ಏನೂ? ಸುಮ್ಮನೇ ಅವರಿವರ ಮನೇಲಿರವ ಬದಲು, ಲೇಡೀಸ್ ಹಾಸ್ಟೆಲ್ಲಿಗೆ ಸೇರಲಿ. ಕೋರ್ಸ್ ಮುಗಿಸಬೆಕಲ್ಲ."

"ಅಬ್ಬಾ ಅವಳ ಕಥೆ ಏನು ಹೇಳ್ತೀ? ಕಾಲು ಮುರಿದದ್ದೇ ನೆವ ಮಾಡಿಕೊಂಡು ಕಾಲೇಜಿಗೆ ಹೋಗುಲ್ಲ. ಎಕ್ಸಾಮ್‌ಗೆ ಕಟ್ಟುಲ್ಲ ಅಂತ ಹೇಳುತ್ತಿದ್ದಳು. ಈಗ ಹೀಗಾಯ್ತು. ಏನೇನು ಮಾಡ್ತಾಳೋ...ನನಗೆ ಅನುಮಾನ."

"ತಿಳುವಳಿಕೆ ಹೇಳುವ ತಾಯಿಯೇ ಬದುಕಿಲ್ಲದ ಮೆಲೆ, ಇನ್ಯಾರು ದಿಕ್ಕು ಅವಳಿಗೆ? ಹೇಗಾದರೂ ಕೋರ್ಸ್ ಮುಗಿಸಿ, ಒಂದು ನೆಲೆಗೆ ಬಂದ ಮೇಲೆ ಚಿಂತೆ ಇಲ್ಲ. ಆದರೆ ಅವಳ ಅಮ್ಮನ ಕಡೆಯವರು ಯಾರೂ ಇಲ್ಲವೇ?"

"ಇದ್ದರೋ, ಇಲ್ಲವೋ...ಅಥವಾ ಇವರು ಹೋಗಿ ಬಂದು ಮಾಡುತ್ತಿರಲಿಲ್ಲವೋ... ನನಗೆ ಗೊತ್ತಿಲ್ಲ. ಅವರಮ್ಮ ಅಂತೂ ಒಬ್ಬರೇ ಎಲ್ಲಾ ನಿಭಾಯಿಸ್ತಾ ಇದ್ದರು. ರಾಧಿಕಾ ಹುಟ್ಟುವ ಮುಂಚೆನೇ ಅವಳ ತಂದೆ ಎಲ್ಲೋ ಹೋದವರು ಮತ್ತೆ ವಾಪಸ್ಸು ಬರಲೇ ಇಲ್ಲವಂತೆ...ಆದರೆ ಹಣಕಾಸಿಗೆ ತೊಂದರೆ ಏನೂ ಬರಲಿಲ್ಲ. ಆಕೆ ಮಕ್ಕಳ ಡಾಕ್ಟರು, ಬೇಕಾದಷ್ಟು ಸಂಪಾದಿಸುತ್ತಿದ್ದರು. ಒಂದು ಕಾಲು ಸ್ವಲ್ಪ ಕುಂಟಾಗಿತ್ತು. ಆದ್ರೂ ನೋಡೋಕೆ ಎಷ್ಟು ಚೆನ್ನಾಗಿದ್ರು ಅಂತ. ಆಕೆಯ ರೂಪವನ್ನು ಕಣ್ಣು ಮುಂದೆ ತಂದುಕೊಂಡು ನುಡಿದ. ಆಕೆಯ ನೆನಪು ಮರುಕಳಿಸಿತು."

ಈ ಮಾತು ಕೇಳಿ. ಮುರಳಿಯ ತಾಯಿ ಕಿವಿ ನಿಮಿರಿತು. ಮಲಗಿದ್ದವರು ಎದ್ದು ಕೂತರು.

"ಏನಂದೇ? ಆಕೆ ಡಾಕ್ಟರಕು...ಸ್ವಲ್ಪ ಕುಂಟುತ್ತಿದ್ದರು ಅಂತ ಅಂದೆಯಾ? ಆಕೆಯ ಹೆಸರು?"

"ಅವರ ಹೆಸರು. ನಿರ್ಮಲಾ ದೇವಿ ಅಂತ...ಯಾಕೆ ಕೇಳಿದೆ?"

"ಎಲ್ಲೋ ಈ ಹೆಸರು ಕೇಳಿದ ಹಾಗಿದೆ . ನಿನ್ನ ತಂದೆ ಹೇಳಿದ್ದೆಲ್ಲಾ ನೆನಪಾಗ್ತಿದೆ. ನಾನು ಮೋಹನನ ಬಾಣಂತನಕ್ಕೆ ಹೋಗಿದ್ದಾಗ, ನಿನ್ನ ತಂದೆಯ ಸ್ನೇಹಿತರೊಬ್ಬರ ಮದುವೆ ನೆರವೇರಿತು. ರಿಜಿಸ್ಟರ್ಡ್ ಮ್ಯಾರೇಜ್...ನಿಮ್ಮ ತಂದೆಯೂ ಸಾಕ್ಷಿ ಆಗಿದ್ದರು. ಆತ ಪಾರ್ಟ್‌ಟೈಂ ಲೆಕ್ಚರರ್ ಆಗಿದ್ದರಂತೆ. ಆಕಗೆ ಡಾಕ್ಟರು ಒಂದು ಕಾಲು ಸ್ವಲ್ಪ ಕುಂಟು ಅಂತಲೇ ಹೇಳಿದ ನೆನಪು. ಆಮೇಲೆ ಅವರಿಬ್ಬ ರ ಮಧ್ಯೆ ಏನಾಯ್ತು. ಏನು ನಡೀತು ಅಂತ ಗೊತ್ತಿಲ್ಲ."

"ಅವರ ತಾಯಿ ಸತ್ತು ಹೋದಾಗ ಆತನ ತಂಗಿಯ ಮಗುವಿನ ಜೊತೆ ಗೋಕರ್ಣಕ್ಕೆ ಹೋದವರು ವಾಪಸ್ಸು ಬರಲೇ ಇಲ್ಲವಂತೆ. ಅವರು ಏನಾದರು, ಎಲ್ಲಿಗೆ ಹೋದರು ಅಂತ ಯಾರಿಗೂ ತಿಳಿಯಲೇ ಇಲ್ಲ. ಆಮೇಲೆ ಆಕೆ, ಆ ಡಾಕ್ಟರು, ಆ ಮನೆ ಬಿಟ್ಟು ಬೇರೆ ಮನೆ ಮಾಡಿಕೊಂಡು ಹೊರಟು ಹೋದ್ರಂತೆ. ಆ ಮನೆಯ ಕೆಲವು ಹಳೇ ಸಾಮಾನುಗಳನ್ನು ನಮ್ಮ ಮನೆಗೆ ಕಳಿಸಿದ್ರು . ಸ್ನೇಹಿತನ ಮನೆಯ ಸಾಮಾನು ಅನ್ನುವ ಅಭಿಮಾನದಿಂದ ನಿಮ್ಮ ತಂದೆ ಇಟ್ಟುಕೊಂಡರು. ಈಗಲೂ ಅಟ್ಟದ ಮೇಲೆ ಬಿದ್ದಿದೆ. ಆಮೇಲೆ ಯಾರೂ ಬರಲಿಲ್ಲ. ಸ್ನೇಹಿತನ್ನ ಹುಡುಕಿಕೊಂಡು ನಿಮ್ಮ ತಂದೆ ಗೋಕರ್ಣಕ್ಕೆ ಸಹ ಹೋಗಿದ್ದರು, ಆತನ್ನ ಹುಡುಕಿಸಿದ್ದರು. ಆದರೆ ಯಾವ ಪ್ರಯೋಜನವೂ ಆಗಲಿಲ್ಲ. ಅವರೇ ಇರಬಹುದಾ ಅಂತ..."

"ನೀನು ಆಕೇನ ನೋಡಿದ್ಯಾ? ಹೇಗಿದ್ರು ಆಗ?"

"ಇಲ್ಲಪ್ಪಾ...ಆ ಅವಕಾಶವೇ ಆಗಲಿಲ್ಲ. ಹೆರಿಗೆಯ ಸಮಯ ದಲ್ಲು ಕೂಡಾ ಯಾರ ನೆರವು ಪಡೆಯದೇ ತಾನೇ ಎಲ್ಲಾ ಮಾಡಿಕೊಂಡ ರಂತೆ. ಆ ಮೇಲೆ ಅವರು ಏನಾದ್ರೊ, ಎಲ್ಲಿದಾರೋ, ನನಗಂತೂ ತಿಳಿಯದು. ಸ್ನೇಹಿತನೇ ಇರಿಲಿಲ್ಲವಾದ್ದರಿಂದ ಇವರೂ ಅವರುಗಳ ಬಗ್ಗೆ ಹೆಚ್ಚಿಗೆ ಆ ಸಕ್ತಿ ವಹಿಸಿ, ವಿಚಾರಿಸಲಿಲ್ಲ., ಅಂತ ಕಾಣುತ್ತೆ. ಆಕೆ ಎಂದೂ ವಮ್ಮ ಮನೆಗೆ ಬಂದಿರಲಿಲ್ಲ."

"ನೀನು ಹೇಳೋದನ್ನ ನೋಡಿದ್ರೆ...ಅವರೇ ಡಾ. ನಿರ್ಮಲಾ ಅಂತ ಅನ್ನಿಸುತ್ತೆ ಅವರ ಗಂಡನ ಹೆಸರು ನಿನಗೆ ಗೊತ್ತಾ? ಅಪ್ಪ ಹೇಳಿದ್ರಾ?"

"ಹೂಂ. ಅವರ ಹೆಸರು ರಂಗನಾಥ ಅಂತ ಹೇಳಿದ ನೆನಪು." ಮಲಗಿದ್ದ ಮುರಳಿ ಎದ್ದು ಕುಪ್ಪಳಿಸಿ ಕುಳಿತ.

"ಏನಂದೆ? ರಂಗನಾಥ ಅಂದ್ಯಾ? ಅಮ್ಮಾ ಯಾರು ಗೊತ್ತಾಯ್ತಾ? ಅವರೇ ಅವರೇ...ಮನೋಜನ ಮಾವ...ಅದಕ್ಕೇ ನೋಡು.."

"ಏನಂದೇ ನಿನ್ನ ಸ್ನೇಹಿತ ಮನೋಜನ ಮಾವನ ಹೆಸರು ರಂಗನಾಥ ಅಂತಲೇ"

"ಹೂಂ.. ಮನೋಜ ಅವರ ತಂಗಿಯ ಮಗ. ಹೂಂ ಅದಕ್ಕೇ ನೋಡು. ಅವರು ರಾಧಿಕಾನ ನೋಡಿ, ಅವರ ತಂಗಿ ಅನೂರಾಧಳ ತರಹಾನೇ ಇದಾಳೆ ಅಂತ ಆಗಾಗ್ಗೆ ಹೇಳ್ತಾನೇ ಇದ್ರಂತೆ. ಮನೋಜ ಹೇಳ್ತಿದ್ದ. ನೋಡಿದ್ಯಾ, ರಾಧಿಕಾ ಅವರ ಸ್ವಂತ ಮಗಳು. ನನಗೀಗ ಎಷ್ಟು ಸಂತೋಷ ಆಗಿದೆ ಗೊತ್ತಾ,. ನಾನೀಗಲೇ ಹೋಗಿ ರಾಧಿಕಾಗೆ ಹೇಳ್ತೀನಿ."

"ಆದರೆ ಅವರ್‍ಯಾಕೆ...ವಿಷಯ ಗೊತ್ತಿದ್ದೂ ಯಾರಿಗೂ ಹೇಳಲಿಲ್ಲ ಅಂತ."

"ತಡಿ...ತಡಿ ದುಡುಕಬೇಡ. ಇಪ್ಪತ್ತು ಇಪ್ಪತ್ತೆರಡು ವರ್ಷಗಳಿಂದ ದೂರ ದೂರವೇ ಇದ್ದವರು ಸಮಯ ಸಂದರ್ಭ ನೋಡಿಕೊಂಡು ತಿಳಿಸ್ಬೇಕು. ಏನಾದ್ರೂ ಎಡವಟ್ಟಾದರೆ.....?"

"ಅದ್ಸರಿ. ನನಗೊಂದು ಸಂದೇಹ... ಈಚೆಗೆ ಅವರಿಬ್ಬರೂ ಒಬ್ಬರನ್ನೊಬ್ಬರು ಬೇಟಿಯಾಗಿದ್ದರು. ಆದರೆ ಇಬ್ಬರಲ್ಲೂ ಏನು ಮಾತು ಕತೆ ನಡೆಯಿತು. ಅಂತ...ಆತ ಗುಟ್ಟ ಬಿಟ್ಟು ಕೊಟ್ಟಿಲ್ಲ . ಈಗ ಲಾದರೂ ಹೇಳಬಹುದಾಗಿತ್ತಲ್ಲ.ಏಕೆ ಸುಮ್ಮನಿದ್ದರು!."

"ಹೆಂಡತಿನ ಏಕಾಏಕಿ ಬಿಟ್ಟು ಹೋದವರು, ತಾನಾಗಿಯೇ ಹೇಳಿಕೊಳ್ಳಲು ಹೀನಾಯವೆನಿಸಿರಬೇಕು. ಈಗ ಬಂದು ತಾನು ಇಂಥವನು ಎಂದು ಕಹೆಳಿಕೊಳ್ಳುವುದು ಸುಲಭವಲ್ಲ."

"ಇದರಿಂದಲೋ ಏನೋ ಆಕೆ, ಮನೋಜನ್ನ ಕಂಡರೆ ಮುಖ ದಪ್ಪಗೆ ಮಾಡಿಕೊಳ್ಳುತ್ತಿದ್ದರು. ರಾಧಿಕಾ ಅವನೋಡನೆ ಸ್ನೇಹದಿಂದಿದ್ದುದು ಆಕೆಗೆ ಸಖ್ಯವಾಗಿರಲಿಲ್ಲ. ಆದರೆ, ಅವಳಿಗೆ ಯಾವ ವಿಷಯವನ್ನು ತಿಳಿಸಿರಲಿಲ್ಲ. ಅಂತ ಕಾಣಿಸುತ್ತೆ."

"ಮತ್ತಿನ್ನೇನು? ಎಂಥವರಿಗಾದರೂ ಹಾಗೇ ಅನ್ನಿಸುತ್ತೆ. ನೀನೇನೆ ಅನ್ನು. ಆತ ಮಾಡಿದ್ದು ಸರೀ ಅಲ್ಲ."

"ಅದಕ್ಕೇನಾದರೂ ಪ್ರಬಲವಾದ ಕಾರಣವಿರಲೇಬೆಕು. ನೋಡಿದರೆ ಆತ ಒಳ್ಳೆಯವರಂತೇನೇ ಕಾಣ್ತಾರೆ..."

"ಇನ್ನೇನು? ಮನೋಜನೇ ಕಾರಣ. ತಂಗಿಯ ಮಗುವನ್ನೂ ಬಿಟ್ಟು ಕೊಡಲು ತಯಾರಿರಿಲಿಲ್ಲವೇನೋ...ಆಕೆ ಜಗಳವಾಡಿರಬೇಕು."

"ಹಾಗಿದ್ರೆ ಆಕೇದೆ ತಪ್ಪು, ಹುಟ್ತಾನೇ ಅನಾಥವಾದ ಮನೋಜನಿಗೆ ಮಾವನಲ್ಲದೇ ಬೇರೆ ಇನ್ಯಾರಿದ್ದರು?'

"ಅದಷ್ಟೇ ಅಲ್ಲ. ಆತ ಬಡವ. ಈಕೆ ಅನುಕೂಲವಂತರ ಮನೆಯವಳು. ನಾಲ್ಕಾರು ದಿನಗಳು ಕಳೆದ ಮೇಲೆ. ಅವರವರಿಗೆ ಸರಿ ಹೋಗದೇ ಜಗಳವಾಗಿರಬಹುದು. ಅವರಿಬ್ಬರ ಮನಸ್ತಾಪದಿಂದ ಅನ್ಯಾಯವಾದ್ದು ರಾಧಿಕಾಗೆ."

"ಹೌದು. ಅದೇ ಕಾರಣ. ಅವಳು ಆಗಾಗ್ಗೆ ಎಕ್ಸೆಂಟ್ರಿಕ್ ತರಹ ಆಡಿ ಅವರಮ್ಮನಿಗೆ ಬೇಜಾರು ಮಾಡುತ್ತಿದ್ದಳು."

"ಪಾಪ. ಆಕೆದೇನು ತಪ್ಪು? ಅವರೇನು ಮಾಡ್ತಾರೆ? ಆಕೆ ಜೀವನ ಎಲ್ಲಿಂದೆಲ್ಲಿಗೋ ಹೋಗಿ ಮುಗಿದೇ ಹೋಯ್ತಿಲ್ಲ. ಅನ್ನು ಇವಳು, ಹೆಣ್ಣು ಹುಡುಗಿ, ಇವಳು ಎಲ್ಲಿರಬೇಕೋ ಅಲ್ಲಿದ್ರಾಯ್ತು. ಮನೋಜನ ಮನೆಗೆ ಹೋಗಬೇಕು. ಅದೇ ಸರಿ."

"ಯಾಕೋ ಮನೋಜ ಇದಕ್ಕೆ ಒಪ್ಪಲಿಲ್ಲ. ಅದಕ್ಕೆ ಅವಳನ್ನು ಇಲ್ಲಿಗೆ ಕರೆದುಕೊಂಡು ಬಂದೆ. ಯಾಕೋ ಅವನ ಮಾವನೂ ಸುಮ್ಮನಿದ್ದರು."

"ಯಾರೂ ಹೆಂಗಸರಿಲ್ಲದ ಮನೆ, ಅಪವಾದ ಬರುತ್ತೆ ಅಂತ ಹೆದರಿರಬಹುದು. ಇವಳೇ ನನ್ನ ಮೆಗಳು ಅಂತ ಹೆಳೋಕೂ ಹಿಂಜರಿಕೆ ಇರಬೇಕು."

"ಎಲ್ಲರೆದುರಿಗೆ, ಇವಳು ನನ್ನ ಮಗಳು ಅಂತ ಒಪ್ಕೊಂಡಿದ್ರೆ ಯಾವ ತಂಟೇನೂ ಇರಲಿಲ್ಲ.... ಆದರೆ ಮನೋಜನ ಮೇಲೆ ಖಂಡಿತಾ ಪರಿಣಾಮ ಬೀರುತ್ತಿತ್ತು."

"ಹೌದು ಮಾವನ ಮೇಲಿನ ಪ್ರೀತಿ ಕಡಿಮೆ ಆಗ್ತಿತ್ತು. ರಾಧಿಕಾಗೆ ಅಪ್ಪನ ಆಗ್ಗೇ ಏನನ್ನಿಸುತ್ತಿತ್ತೋ...ಈಗಿನ ಹಾಗೇ ಅಂಕಲ್ ಆಗಿದ್ರೇ ಸರಿ. ಅದ್ಸರಿ, ನೀನು ಅವರ ಸ್ನೇಹಿತನ ಮಗ. ಅವರಿಗೆ ಗೊತ್ತಾಗಿಲ್ವೇ?"

"ಏನೋ, ಒಂದು ದಿನವೂ ಹೇಳಿಲ್ಲ. ಆದರೆ ಅವತ್ತು ನಮ್ಮ ಮನೆಗೆ ಬಂದಿದ್ರಲ್ಲ. ಆಗ ಇದು ಸ್ನೇಹಿತ ಸತ್ಯ ಮೂರ್ತಿಯ ಮನೆ ಅಂತ ಗೊತ್ತಾಗಿರಲೇ ಬೇಕು."

"ಹಾಗಾದ್ರೆ ಆತ ಬಲೇ ಖಿಲಾಡಿ. ಎಲ್ಲಾ ಗೊತ್ತಿದ್ದು ಸುಮ್ಮನಿದಾರೆ. ಅದಕ್ಕೇನಾದರೂ ಬಲವಾದ ಕಾರಣವಿರಲೆಬೇಕು. ಇಲ್ಲದಿದ್ದರೆ, ಓದಿ ಬರೆದ ವಿದ್ಯಾವಂತ, ವಿನಯವಂತ ಮನುಷ್ಯ ಇದ್ದಕ್ಕಿದ್ದಂತೆ ಸಂಸಾರ ಬಿಟ್ಟು ಸನ್ಯಾಸಿಯಾಗಿ ಹೋಗಬೇಕಾದರೆ...? ಬಲವಾದ ಕಾರಣಗಳಿರಬೇಕು. ನಮಗ್ಯಾಕೆ ಹೋಗಲಿ ಬಿಡು. ಏನಾಗುತ್ತೋ ಆಗಲಿ...ಆತ ನಮಗೇನೂ ಅನ್ಯಾಯ ಮಾಡಿಲ್ಲವಲ್ಲ."

"ಹಾಗೆ ಹೇಳಿದ್ರೆ ಏನು ಬಂತು? ಅವರುಗಳನ್ನೂ ಒಂದು ಗೂಡಿಸಲೇ ಬೇಕು. ಗುಟ್ಟು ರಟ್ಟಾಗುತ್ತೆ ಅಂತ ಸುಮ್ಮನಿದ್ರೆ ರಾಧಿಕಾಳ ಲೈಫ್ ಹಾಳಾಗುತ್ತದೆ. ನನಗೆ ಅಕ್ಕತಂಗಿಯರ್ಯಾರೂ ಇಲ್ಲ. ಅವಳ್ನೇ ನನ್ನ ತಂಗಿ ಅಂತ ಭಾವಿಸ್ತೀನಿ."

"ನಿನ್ನ ತಂದೇನೂ ಅಷ್ಟೇ. ಆ ಮನೆಗೆ, ಆ ಸ್ನೇಹಿತಂಗೆ ಎಷ್ಟು ಸಹಾಯ ಮಾಡಿದರೂ ಸಾಲದು. ಆತ ಮನೆ ಬಿಟ್ಟು ಹೋದಾಗ ಕೊರಗಿದ್ದೂ ಕೋರಗಿದ್ದೇ."

"ಅವರ ಮಗ ಅಲ್ವಾ ನಾನು? ಅವರನ್ನೆಲ್ಲ ಒಂದು ಗೂಡಿಸುಕ್ಕೆ ಮತ್ತೆ ನನ್ನ ಸಹಾಯವೇ ಬೇಕಾಗಿದೆ." ಹೆಮ್ಮೆಯಿಂದ ಹೇಳಿಕೊಂಡ.

"ನೀನಿನ್ನೂ ಚಿಕ್ಕವ್ನು. ಅದೆಲ್ಲಾ ಮಾತಾಡಿದ್ರೆ ಚೆನ್ನಾಗಿರುಲ್ಲ. ಆತನ್ನ ಕರಕೊಂಡು ಬಾ.. ನಾನು ಮಾತನಾಡ್ತಿನಿ."

"ತಡಿಯಮ್ಮ...ಈ ಹತ್ತು ಹನ್ನೆರಡು ದಿನಗಳು ಕಳೆದು ಹೋಗಲಿ. ಆಮೇಲೂ ಬರೀ ಗಂಡು ಹುಡುಗರು. ಜನ ಆಡಿಕೋ ಬಾರದು."

"ನಮ್ಮ ಮೇಲೆ ನಂಬಿಕೆ ಇಲ್ವಾ ನಿನಗೆ? ಬೇಕಾದರೆ ಗೀತಾನು ಬಂದು ಇಲ್ಲಿರಲಿ. ಆಗ ಯಾರು ಏನಂತಾರೆ?"

"ಚೆನ್ನಾಗಿದೆ ನಿನ್ನ ಮಾತು. ಗೀತಾನೂ ಹೆಣ್ಣು ಹುಡುಗಿ. ಅವಳನ್ನು ಇಲ್ಲಿ ಬಿಡ್ತಾರಾ ನಿನ್ನ ಅತ್ತೆ ಮಾವ? ಇದೆಲ್ಲಾ ಆಗ ಹೋಗದ ಮಾತು. ರಾಧಿಕಾ ಅವಳ ತಂದೆಯ ಮನೆಯಲ್ಲಿರುವುದೇ ಸರಿ."

"ಸರಿ. ನೀನು ಹೀಗೆ ಹೇಳಿದ ಮೇಲೆ ಬೇರೆ ಮಾತಿಲ್ಲ. ಅವರನ್ನು ನಾಳೇನೇ ಕರೆದುಕೊಂಡು ಬರ್ತೀನಿ." ಮುರಳಿ ನಿದ್ರಿಸಲು ಪ್ರಯತ್ನಿಸಿದ.

ಬೆಳಗಾಯುತು. ರಾಧಿಕಾ, ಗೀತಳ ನೆರವಿನಿಂದ ಸ್ನಾನ ಇತ್ಯಾದಿ ಕೆಲಸಗಳನ್ನೂ ಮುಗಿಸಿ ತಿಂಡಿ ತಿಂದು ಕಾಫಿ ಕುಡಿದು ಕುಳಿತಳು.

"ಅತ್ತೆ, ನಾನು ಸ್ವಲ್ಪ ಮನೆಗೆ ಹೋಗಿಬರ್ತೀನಿ" ಎಂದಳು ಗೀತಾ.

ರಾಧಿಕಾನ್ನೂ ಕರೆದುಕೊಂಡು ಹೋಗು. ಒಬ್ಬಳೆ ಕೂತಿದ್ದರೆ. ಅವಳ ದುಃಖ ಹೆಚ್ಚಾಗುತ್ತೆ ಮುರಳಿ ರಂಗನಾಥನ್ನ ಕರೆದುಕೊಂಡು ಬರುವಾಗ ಅವಳು

ಮನೇಲಿರುವುದು ಸರಿಯಲ್ಲ ಎನಿಸಿತ್ತು.

"ನನ್ನಿಂದಾಗಿ ಇವರೆಲ್ಲಾ ಕಾಲೇಜು ಯಾಕೆ ತಪ್ಪಿಸ್ಕೋಬೇಕು. ಹೋಗಿಬರಲಿ" ಎಂದಳು ಮುರಳಿ ಗೀತನನ್ನೂ ಉದ್ದೇಶಿಸಿ.

"ಪರವಾಗಿಲ್ಲ ಬಿಡಮ್ಮಾ...ಒಂದೆರಡು ದಿನ ಹೋಗದಿದ್ದ ರೇನಂತೆ, ಆಮೇಲೆ ಹೆಗೋ ಅಡ್ಜಸ್ಟ್ ಮಾಡ್ಕೋತಾರೆ." ಮುರಳಿಯ ತಾಯಿ ಹೇಳಿದರು. ರಾಧಿಕಾ ಗೀತ ಹೊರಟರು. ಮುರಳಿ ತಕ್ಷಣ ಮನೋಜನ ಮನೆ ಹೋರಟ.

ರಂಗನಾಥ ಮನೆಯಲ್ಲಿರಲಿಲ್ಲ. ಮನೋಜನಿಗೆ ಹೇಳಿದ.

"ನಿಮ್ಮ ಮಾವನ್ನ ಸ್ವಲ್ಪ ನಮ್ಮ ಮನೆಗೆ ಕಳಿಸ್ತೀಯಾ? ನಮ್ಮ ತಾಯಿ ಅವರ ಹತ್ತಿರ ಮಾತನಾಡಬೇಕಂತೆ."

"ಯಾಕಪ್ಪಾ ಏನಾಯ್ತೂ? ರಾಧಿಕಾ ಏನಾದ್ರೂ ಸೀನ್ ಕ್ರಿಯೇಟ್ ಮಾಡಿದ್ಲಾ? ನಗೆ ಬೆರೆತ ವ್ಯಂಗ್ಯದಿಂದ ಕೇಳಿದ."

"ಛೆ...ಛೆ....ಅಂತಹ ಹುಡುಗಿ ಅಲ್ಲ ಅವಳು. ನಿರ್ಮಲಾ ದೇವಿಯವರ ಕ್ರಿಯಾಕರ್ಮಕ್ಕೆ ಸಂಬಂಧಿಸಿದ ವಿಷಯ ಏನಾದ್ರೂ ಹೇಳುಕ್ಕೆ ಅಂತ ಕಾಣಿಸುತ್ತೆ. ಏಕೆ ಅಂದ್ರೆ ಅದನ್ನೆಲ್ಲ ರಾಧಿಕಾಳ ಹತ್ತಿರ ಹೆಗೆ ಮಾತಾಡುವುದು ಅಲ್ವಾ?"

"ಮುರಳಿ. ಒಂದ್ವಿಷಯ ನಂಗೆ ಅರ್ಥವಾಗ್ತಿಲ್ಲ. ವಿಷಯ ಎಲ್ಲಿಂದೆಲ್ಲಿಗೋ ಹೋಗ್ತಿದೆ. ಅವಳು ನಮ್ಮ ಸ್ನೇಹಿತೆ. ಮಾವನಿಗೆ ಅವಳು ತಂಗಿಯ ತರಹ ಇದಾಳೆ ಅನ್ನುವ ಭ್ರಮೆ. ಇದಿಷ್ಟರಿಂದ, ನೆನ್ನೆ ದಿನ ನಾನು ಆಕೆಯ ದೇಹಕ್ಕೆ ಬೆಂಕಿ ಇಡಬೇಕಾಯ್ತು. ಇದೆಲ್ಲಾ ಎಲ್ಲಿಂದೆಲ್ಲಿಗೆ ಸಂಬಂಧ? ನನಗೊಂದು ತರಹ ಕನ್‌ಫ್ಯೂಷನ್.. ಒಂಥರಾ ಎಂಬರಾಸಿಂಗ್ ಸಿಚುಯೇಷನ್."

"ನಿನಗಿಷ್ಟವಿಲ್ಲದಿದ್ರೆ ಹೇಳಿ ಬಿಡಬೇಕಾಗಿತ್ತು. ನಾನು ಮಾಡ್ತಿದ್ದೆ"

"ಮಾವ ಹೇಳಿದಾಗ ಇಲ್ಲ ಎನ್ನುಕ್ಕಾಗ್ಲಿಲ್ಲ. ಮಾವ ಯಾಕೆ ನನ್ನ ಕೈಲಿ ಮಾಡಿಸಿದ್ರೋ...?"

"ಏನೋಪ್ಪ ನನಗೂ ಗೊತ್ತಿಲ್ಲ. ದೇವರಂತಹ ಮನುಷ್ಯ ನನ್ನ ಮಾವ ಅಂತೀಯಲ್ಲ. ಅವರು ಹೇಳಿದ್ದನ್ನ ಪಾಲಿಸಿದೀಯ. ಇನ್ನೇಕೆ ಚಿಂತೆ" ಬೇರೆಲ್ಲೋ ನೋಡುತ್ತಾ ಹೇಳಿದ.

"ನೀನೂ ಹೀಗೇ ಹೇಳ್ತಿಯಾ? ಹಾಗಾದ್ರೆ ನಾನೂ ರಾಧಿಕಾನ್ನ ಪ್ರೀತಿಸಿದ್ದೇ ತಪ್ಪಾ? ಅದರಿಂದಲೇ ಮಾವ ಹಾಗೆ ಹೇಳಿದಾಗ ನನಗೂ ಇಲ್ಲ ಎನ್ನಲಾಗಲಿಲ್ಲ."

"ಅವಳನ್ನ ಮದುವೆಯಾಗ್ತೀಯ. ರಾಧಿಕಾಳ ಗಂಡನಾಗುವವನಿಗೆ ಆ ಹಕ್ಕುಇರುತ್ತೆ. ನಿನಗೇಕೆ ಅನುಮಾನ?"

"ಪ್ರೀತಿಸಿದ ಮಾತ್ರಕ್ಕೆಇನ್ನು ಗಂಡನಾಗಲಿಲ್ಲವಲ್ಲ. ಅಲ್ಲದೇ ಈಗಲಿಂದ ಅದನ್ನೆಲ್ಲಾ ನಾನು ಯೋಚಿಸಿಲ್ಲ. ಮಾವ ಒಪ್ಪಬೇಡವೆ?"

"ಮಾವಾನಾ? ಅವರು ನಿನಗಿಂತ ಮುಂಚೆ ಒಪ್ತಾರೆ ಯಾಕೆಂದ್ರೆ" ಅಷ್ಟಕ್ಕೆ ತಡೆದ.

"ಯಾಕೋ ಸುಮ್ಮನಾದೆ? ಮಾವಂಗೆ ಅವಳನ್ನು ಕಂಡರೆ ಇಷ್ಟ ಅಂತ ನನಗೂ ಗೊತ್ತೂ. ಆದರೆ ಈಗಲಿಂದ ಆ ಮಾತನ್ನೆಲ್ಲಾ ನಾವಿಬ್ಬರೂ ಆಡುವುದಿಲ್ಲ. ಇವತ್ತಿನ ಮಾತು ನಾಳೆಗೆ ಇರುವುದಿಲ್ಲ., ನೀನೇ ನೋಡಿದ್ಯಲ್ಲ. ಮೊನ್ನೆ ಬದುಕಿದ್ದ ಅವಳ

ತಾಯಿ ಇವತ್ತು ಇಲ್ಲ. ನಾಳೆಯ ಮಾತನ್ನ ಇವತ್ತೇ ಹೇಗೆ ಹೇಳುವುದು?ಏನೇನು ಬದವಾವಣೆಗಳಾಗುತ್ತೋ?"

"ಏನೂ ಆಗುಲ್ಲ. ನೀನ್ಯಾಕೆ ಹೀಗೆ ಪೆಸಿಮಿಸ್ಟಿಕ್ ತರಹ ಮಾತನಾಡ್ತದೀಯ? ಮುಂದೆ ಒಬ್ಬ ಆದರ್ಶ ಡಾಕ್ಟರಾಗುವವನು ನೀನು, ನೀನು ಹೀಗೆ ಯೋಚಿಸಬಾರದು. ಹೀಗೆ ಮಾತನಾಡಬಾರದು. ಈ ಮುಂಚೆ ಎಂದೂ ಹೀಗಾಡಿಲ್ಲ ನೀನು?"

" ಪರಿಸ್ಥಿತಿ ಹಾಗೆ ಮಾತಾಡಿಸ್ತಿದೆ. ನಂಗೇನೂ ಗೊತ್ತಾಗ್ತಿಲ್ಲ."

"ನೀನೇನೂ ಯೋಚಿಸಬೆಡ. ಎಲ್ಲಾ ಸರಿ ಹೋಗುತ್ತೆ ...ಓ...ಕೇ. ನಾನಿನ್ನು ಬರಲೇನಯ್ಯಾ? ಮಾವನಿಗೆ ಹೆಳುವುದನ್ನು ಮರೆಯಬೇಡ."

"ರಾಧಿಕಾ ಹೇಗಿದ್ದಾಳೆ? ಸಮಾಧಾನ ಮಾಡಿಕೊಂಡಿದಾಳಾ?"

"ರಾಧಿಕಾ, ಗೀತನ ಮನೆಗೆ ಅವಳ ಜೊತೆಯಲ್ಲಿ ಹೋಗಿದಾಳೆ. ರಾತ್ರಿಯ ಹೊತ್ತಿಗೆ ವಾಪಸ್ಸು ಬರಬಹುದು. ಸಾಯಂಕಾಲ ನಮ್ಮ ಮನೆಗೆ ಬಾ ಅವಳೂ ಸಿಗಬಹುದು."

"ಅವಳ ಹತ್ತಿರ ಏನು ಮಾತನಾಡಲಿ? ಹೇಗೆ ಸಮಾಧಾನ ಹೇಳಲಿ? ಪರವಾಗಿಲ್ಲಬಿಡು. ನಿಮ್ಮ ಮನೇಲಿರ್ತಾಳೆ ಅಂದ್ರೆ, ಆರಾಮವಾಗಿರ್ತಾಳೆ."

"ಪರವಾಗಿಲ್ಲ ಬಾಪ್ಪಾ...ನಮ್ಮ ಮನೆ ಮಹಡಿ ಮೇಲಿನ ರೂಮುನಲ್ಲಿ ಕೂತು ಏನು ಬೇಕಾದ್ರೂ ಮಾತಾಡು. ಹೇಗೆ ಬೇಕಾದ್ರೂ ಸಮಾಧಾನ ಮಾಡು." ಕೀಟಲೆಯ ಧ್ವನಿಯಲ್ಲಿ ಹೇಳಿದ.

ಮನೋಜ ಪೆಚ್ಚು ಪೆಟ್ಟಾಗಿ ನಕ್ಕ. ಮುರಳಿ ಸ್ನೇಹಿತನ ಭುಜ ತಟ್ಟಿ.ಹೊರಟು ಹೋದ. ರಂಗನಾಥ ಬಂದ ಕೂಡಲೇ, ಮನೋಜ ಮುರಳಿ ಬಂದಿದ್ದ ವಿಷಯ ತಿಳಿಸಿದ.

"ಯಾಕಂತೆ?" ಅಂತ ರಂಗನಾಥ ಕೇಳಿದರೂ, ರಾಧಿಕಾ ಅಲ್ಲಿದಾಳೆ ಆಕೆಗೆ ಅದು ಇಷ್ಟವಿಲ್ಲದಿರಬಹುದು ಎನಿಸಿತು. ಅಪ್ಪ ಬದುಕಿದ್ದೂ ಮಗಳು ಅನಾಥಳಂತೆ ಯಾರ ಮನೆಯಲ್ಲೋ ಇರುವ ಸ್ಥಿತಿಗೆ ಕೆಡುಕೆನಿಸಿತು. ತಕ್ಷಣವೇ ಹೊರಟ. ಮನೋಜ ಧೀರ್ಘವಾಗಿ ಅವನನ್ನೇ ನೋಡಿದ.

ಮುರಳಿಯ ತಾಯಿಯನ್ನು ಇದುವರೆಗೂ ಸರಿಯಾಗಿ ನೋಡಿರಲಿಲ್ಲ. ಸತ್ಯಮೂರ್ತಿಯ ಹೆಂಡತಿ ಅಂತ ತಿಳಿದ ಆ ದಿನ ಅವರ ಕಣ್ಣು ತಪ್ಪಿಸಿದ್ದ. ಈಗ ಆಕೆಯೇ ಎದುರಿಗೆ ಬಂದು "ನಮಸ್ಕಾರ" ಎಂದಾಗ ಅವನೂ ಕೈ ಮುಗಿದು "ನಮಸ್ಕಾರ" ಎಂದ.

"ನಾನು ನಿಮ್ಮ ಸ್ನೇಹಿತನ ಪತ್ನಿ ಎಂಬ ಅಧಿಕಾರದಿಂದ, ಅಭಿಮಾನದಿಂದ ಒಂದು ಮಾತು ಹೇಳ್ತಿನಿ ತಪ್ಪು ತಿಳಿಯಬೇಡಿ"

ರಂಗನಾಥ ಬೆಚ್ಚಿದ. ಅಂದ್ರೆ ಇವರಿಗೆ ನಾನ್ಯಾರು ಅಂತ ತಿಳಿದು ಹೋಗಿದೆ ಎಂದುಕೊಂಡು ತೊದಲಿ., "ಹೇಳಿ ಪರವಾಗಿಲ್ಲ."

"ರಾಧಿಕಾಳ ಬಗ್ಗೆ ಏನು ಯೋಚಿಸಿದೀರಿ? ರಾಧಿಕಾ ನಿಮ್ಮ ಸ್ವಂತ ಮಗಳಾಗಿ ಅವರಿವರ ಮನೇಲಿರುವುದು ಸರಿ ಎನಿಸುತ್ತಾ ನಿಮಗೆ?"

"ನಿಮಗೆ ಹೇಗೆ ಗೊತ್ತಾಯ್ತು? ಯಾರು ಹೇಳಿದರು?" ಬೆದರಿದ್ದ.

"ನೆನ್ನೆ ದಿನ ನಿರ್ಮಲಾರವರ ಬಗ್ಗೆ ಮಾತನಾಡ್ತಿದ್ದಾಗ, ನಿಮ್ಮ ಸ್ನೇಹಿತರು ಅವರ ಬಗ್ಗೆ ಹೆಳಿದ್ದು ಜ್ಞಾಪಕಕ್ಕೆ ಬಂತು. ಊಹೆಯ ಮೇಲೆ ಗೊತ್ತಾಯ್ತು. ನೀವು ನಮ್ಮವರ

ಸ್ನೇಹಿತ, ರಂಗನಾಥರವರೇ ತಾನೇ?"

"ಹೌದಮ್ಮಾ.....ಆದರೆ ತಲೆ ಮರೆಸಿಕೊಂಡು ಹೋದವನು, ನಾನು ನಾನಾಗಿಯೇ ನಾನು ಇವನು ಅಂತ ಹೇಳಿಕೊಳ್ಳುವ ಧೈರ್ಯ ನನಗಿಲ್ಲ. ನಾನು ಅಜ್ಞಾತವಾಗಿಯೇ ಇರಬೇಕೆಂಬ ಆಸೆ. ಅದಕ್ಕೇ ನಾನಾಗಿಯೇ ಹೇಳಲಿಲ್ಲ."

"ಯಾಕೆ ? ಈಗ ಅದನ್ನು ಪ್ರಶ್ನಿಸುವವರ್‍ಯಾರೂ ಇಲ್ಲವಲ್ಲ."

"ಆದರೆ ನಿರ್ಮಲಳ ಆಸೇನೂ ಅದೇ ಆಗಿತ್ತು"

"ಅಂದ್ರೇ...ನೀವು ಅವರನ್ನೂ ಭೇಟಿಯಾಗುತ್ತಿದ್ರಾ?"

"ಅದೂ ಈಚೆಗೆ...ಎರಡು ಸಲ ಮಾತ್ರ. ಅದೂ ರಾಧಿಕಾನ್ನ ನಿಮ್ಮ ಮನೆಯಲ್ಲಿ ಕಂಡ ಮೇಲೆ, ನಂತರ ಅವಳ ಕಾಲಿಗೆ ಪೆಟ್ಟಾಗಿದ್ದಾಗ.... ನಾನಾಗಿಯೇ ಹೋಗಿ ಅವಳ ಹತ್ತಿರ ಮಾತಾಡಿದ್ದೆ."

"ಅವರು ಹೇಳಿದ್ದು ಸರಿ ಅಂತ ನನಗೂ ಈಗ ಅನ್ನಿಸುತ್ತೆ. ಈಗ ನೀವುಗಳು ಯಾರು? ನಿಮ್ಮ ಸಂಬಂಧ ಏನು ಎಂಬ ಸತ್ಯಾಂಶ ಹೊರಬಿದ್ದರೆ, ಸುಮ್ಮನೇ ಪ್ರಶ್ನೇಗಳು ಏಳುತ್ತವೆ. ಸಂಶಯ ಹುಟ್ಟುತ್ತೆ. ಸುಮ್ಮನಿರುವುದೇ ವಾಸಿ..."

"ಆದರೆ ರಾಧಿಕಾ ಒಂಟಿಯಾಗಿ ಬಿಡ್ತಾಳಲ್ಲ."

"ಅದೇ ಸಮಸ್ಯೆ ನನ್ನನ್ನೂ ಕಾಡುತ್ತಿದೆ. ನನ್ನ ಸಂಕಟ ನಿಮಗೆ ಅರ್ಥವಾಗಬಹುದು. ಅವಳನ್ನೂ ನನ್ನ ಮಗಳು ಅಂತ ರಾಜಾರೋಷವಾಗಿ ಹೇಳಿಕೊಳ್ಳುವಂತಿಲ್ಲ. ಯಾವ ಅಪವಾದಕ್ಕೂ ಹೆದರದೇ ನನ್ನ ಮನೆಯಲ್ಲಿ ಇಟ್ಟುಕೊಳ್ಳುವಂತಿಲ್ಲ."

"ಹಾಗಾದರೆ, ಅವಳನ್ನು ನಿಮ್ಮ ಸೊಸೆಯನ್ನಾಗಿ ಮಾಡಿಕೊಳ್ಳಿ. ಯಾವ ಅಪವಾದವೂ ಬರುವುದಿಲ್ಲ."

"ಅದು ನನ್ನಿ ಮನಸ್ಸಿನಲ್ಲೂ ಇದೆ. ಆದರೆ ಈಗಲೇ ಅಸಾಧ್ಯ. ಮನೋಜ ಏನಂತಾನೋ? ಇಬ್ಬರೂ ಇನ್ನು ಚಿಕ್ಕವರು. ಓದು ಮುಗಿದಿಲ್ಲ."

"ನಿಮ್ಮ ಮಾತಿಗೆ ಮನೋಜ ಇಲ್ಲ ಎನ್ನುವುದಿಲ್ಲ. ಮುರಳಿಯಂತೂ ಅವನನ್ನೂ ತುಂಬಾ ಹೊಗಳುತ್ತಾನೆ."

"ನಿಜಕ್ಕೂ ಮನೋಜ ಒಳ್ಳೆಯವನೇ, ಆದರೆ ಅವನ ವ್ಯಾಸಂಗ ಇನ್ನು ಮುಗಿದಿಲ್ಲ. ಈ ಕೋರ್ಸ್ ಮುಗಿದು ಡಾಕ್ಟರಾಗಿ ಬಿಟ್ಟರೆ, ಧೈರ್ಯ. ಅಲ್ಲೀವರೆಗೂ ರಾಧಿಕಾ ನಿಮಮ ಮನೆಯಲ್ಲಿರಲಿ..."

"ನೀವೇನೋ ಅಭಿಮಾನದಿಂದ ಈ ಮಾತು ಹೇಳುತ್ತಿದೀರಿ. ಆದರೆ ನಮ್ಮ ಮನೇಲೂ ಬರೀ ಗಂಡು ಹುಡುಗರು. ಜನ ಆಡಿಕೊಳ್ಳು ವಂತಾಗಬಾರದು. ರಾಧಿಕಾಳ ಬಾಳು ಹಾಳಾಗಬಾರದು. ಅವಳು ಅಲ್ಲಿ ಇಲ್ಲಿ ಎಲ್ಲೆಲ್ಲೋ ಇರುವ ಬದಲು ಹಾಸ್ಟೆಲ್ಲಿನಲ್ಲಿದ್ದರೆ ಒಳ್ಳೆಯದು. ಲೇಡೀಸ್ ಹಾಸ್ಟೆಲ್ಲಿಗೆ ಸೇರಿಸಿ ಬಿಡಿ."

ಈ ಮಾತು ರಂಗನಾಥನಿಗೆ ಇಷ್ಟವಾಗಲಿಲ್ಲ. ಆದರೆ ಅವರು ನೀಡಿದ ಸಲಹೆಯೂ ತಪ್ಪಲ್ಲ. ಮನೆಯಲ್ಲಿ ಆರಾಮವಾಗಿ ಬೆಳೆದ ಹುಡುಗಿಗೆ ಹಾಸ್ಟೆಲ್ಲು ಜೀವನ ಒಗ್ಗುತ್ತಾ? ಎಂತಹ ಗೆಳತಿಯರು ಸಿಗ್ತಾರೋ ಅವಳಿಗೆ ಜೀವನದಲ್ಲಿ ಬೇಸರವುಂಟಾಗಿ, ನಮ್ಮನ್ನೆಲ್ಲಾ ದೂರ ಮಾಡಿ ಬಿಟ್ಟರೆ...ತನಗೇ ಏನಾದರೂ ಅಪಾಯ ಮಾಡಿಕೊಂಡು ಬಿಟ್ಟರೇ ಏನೇನೋ ಕೆಟ್ಟ ಆಲೋಚನೆಗಳು ಚಿಂತೆಯ ಕಾರ್ಮೋಡ ಕವಿಯಿತು.

ಆಗಲಿ, ನನಗೂ ತಕ್ಷಣಕ್ಕೆ ಏನೂ ತೋಚ್ತಿಲ್ಲ. ಮನೋಜನ್ನ ರಾಧಿಕನ್ನ ಇಬ್ಬರನ್ನು ಕೇಳಬೇಕು ಒಂದು ರಿಕ್ವೆಸ್ಟ್.... ನಿರ್ಮಲೆಯ ದಿನ ಕರ್ಮ ಮುಗಿಯುವವರೆಗೆ ರಾಧಿಕಾ ನಿಮ್ಮ ಮನೆಯಲ್ಲಿರಲಿ.

ಅವಳಿಗೆಸರಿ ಹೋಗುವುದಾದರೆ ಧಾರಾಳವಾಗಿ ಇರಲಿ. ನನ್ನ ಅಬ್ಯಂತರವೇನಿಲ್ಲ. ಅವಳ ಸ್ವಭಾವವೇ ಬೇರೆ. ನಮ್ಮಗಳ ಜೊತೆಯಲ್ಲಿ ಸರಿ ಹೋಗುತ್ತೋ ಇಲ್ಲವೋ...? ಅಲ್ಲದೇ ಗೀತ ಅಷ್ಟು ದಿನವೂ ನಮ್ಮ ಮನೆಯಲ್ಲಿ ಬಂದಿರುವುದಕ್ಕೆ ಆಗುವುದಿಲ್ಲ. ಗೀತ ಮುಂದೆ ಈ ಮನೆಯ ಸೊಸೆಯಾಗುವವಳು ನಿಜ. ಆದರೆ, ನನ್ನ ತಮ್ಮ ಹತ್ತು ಹದನೈದು ನಮ್ಮ ಮನೆಯಲ್ಲಿ ಬಿಟ್ಟಿರಲು ಖಂಡಿತಾ ಒಪ್ಪುವುದಿಲ್ಲ. ಆಕೆ ಖಡಾಖಂಡಿತಾವಾಗಿ ಹೇಳಿದರೂ ರಂಗನಾಥನಿಗೆ ಬೇಸರವೆನಿಸಲಿಲ್ಲ. ಆಕೆ ಹೇಳುವ ಮಾತು.ನೂರಕ್ಕ ನೂರು ಅಂಶ ಸತ್ಯ. 'ಯಾರೂ ಮಗಳನ್ನು ಸುಮ್ಮನೇ ಇನ್ನೊಬ್ಬರ ಮನೆಗೆ ಕಳಿಸುವುದಿಲ್ಲ. ಆದರೆ ತಾನೀಗ ಮಾಡುತ್ತಿರುವುದೇನು? ರಾಧಿಕಾ ನನ್ನ ಮಗಳು. ಆದರೆ, ತಾಯಿ ಸತ್ತ ಕೂಡಲೇ ಈಗ ಅವಳು ದಿಕ್ಕು ದೆಸೆ ತಪ್ಪಿದವಳಂತೆ ಆದಳಲ್ಲ. ಅದನ್ನೂ ನೋಡಿಕೊಂಡೂ ಸುಮ್ಮನಿರುವವ ನಾನೆಂತಹವನು?ಇವತ್ತೆ ಅವಳನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಬಿಡಬೇಕೆನ್ನಿಸಿತ್ತು. ಆದರೆ ದುಡಕಬಾರದು ಎಂದು ಕೊಂಡು.

ನಾಳೆಯ ದಿನ ನಾನೂ, ಮನೋಜ ಇಬ್ಬರೂ ಪಶ್ಚಿಮವಾಹಿನಿಗೆಅಸ್ಥಿ ವಿಸರ್ಜನೆಗೋಸ್ಕರ ಹೋಗ್ತಿದೀವಿ. ನಾಳೆ ಸಾಯಂಕಾಲ ಬೇಗ ಬಂದರೆ, ನಮ್ಮ ಮನೆಗೆ ಕರೆದುಕೊಂಡು ಹೋಗ್ತೀವಿ.

ನನ್ನ ಮಾತನ್ನು ತಪ್ಪಾಗಿ ತಿಳಿಯಬೇಡಿ. ನಾನೂ ಹೆಂಗಸು. ಅನುಭವದಿಂದ ಈ ಮಾತುಗಳನ್ನೂ ಹೇಳ್ತಿದೀನಿ.

ಇಲ್ಲಮ್ಮಾ...ನಿಮ್ಮನ್ನು ತಪ್ಪಾಗಿ ತಿಳಿಯುವುದೆ?ಖಂಡಿತಾ ಇಲ್ಲ. ಸತ್ಯಮೂರ್ತಿ ನನ್ನ ಒಬ್ಬನೇ ಸ್ನೇಹಿತ. ಆಪತ್ಕಾಲದಲ್ಲಿ ನನಗೆ ನೆರವು ನೀಡಿದವನು. ನಾನು ಕೃತಜ್ಞತೆ ಕೂಡಾ ತಿಳಿಸದೇ ತಲೆ ಮರೆಸಿಕೊಂಡು ಹೋದವನು.

ಹೋಗಲಿ ಬಿಡಿ. ಅದು ಕಳೆದು ಹೋದದ್ದು. ಹಳೆ.ಯ ಮಾತು ಮರೆತ ಕಥೆ. ನೀವೂ ಬಹಳ ಕಷ್ಟ ಪಟ್ಟಿರಬೇಕು. ಮನೋಜನ್ನ ಮುಂದೆ ತರೋಕೆ...

ಹೂಂನಮ್ಮಾ..ಇಲ್ಲಿದಿದ್ರೆ ನನ್ನ ತಂಗಿಯ ಆತ್ಮಕ್ಕೆ ಶಾಂತಿ ಸಿಗುತ್ತಾ?

"ಹಾಗೇ ನೋಡಿ ರಾಧಿಕಾಳ ಬಾಳು ಹಸನಾದರೆ ನಿರ್ಮಲೆಯ ಆತ್ಮಕ್ಕೆ ಶಾಂತಿ ಸಿಗುತ್ತೆ. ಆಕೆಯೂ ಸಹ ಮಗಳಿಗಾಗಿ ಸಾಕಷ್ಟು ಕಷ್ಟ ಪಟ್ಟಿದ್ದಾಳೆ.

ಅದರ ಅರಿವು ನನಗೂ ಇದೆ. ಒಂದು ಮಗುವನ್ನೂ ಸಾಕಿ, ಸಲಹಿ ಬೆಳಸಿ ದೊಡ್ಡವರನ್ನಾಗಿ ಮಾಡುವುದು ಸುಲಭವಲ್ಲ.

ಇನ್ನು ಸುಮ್ಮನೇ ಅದನ್ನೇ ಮಾತನಾಡುವುದು ಅವನಿಗಿಷ್ಟವಾಗಿಲಿಲ್ಲ.

ನಿಮ್ಮಿಂದ ತುಂಬಾ ಉಪಕಾರವಾಯ್ತು. ನಾವಿನ್ನು ಬರ್ತಿವಿ. ಎಂದ.

ಊಟದ ಸಮಯವಾಗಿದೆ. ಊಟ ಮಾಡ್ತೀರಾ? ಆಕೆ ಕೇಳಿದಳು.

ಮನೋಜ ಕಾಯ್ತಿರ್ತಾನೆ ನಾನು ಬರ್ತೀವಿ ಎಂದು ಹೇಳಿಹೊರಟೇ ಬಿಟ್ಟ. ಅವನ ಹೃದಯ ಭಾರವಾಗಿತ್ತು. ಮನಸ್ಸುಕಲಕಿ ಹೋಗಿತ್ತು. ನಿರ್ಮಲ ಸತ್ತೂ ತನ್ನ ರಹಸ್ಯ

ಬಯಲಾಯಿತು ಎಂದು ಖತಿ ಗೊಂಡಿದ್ದ. ಛೆ...ಸಾಯುವ ವಯಸ್ಸೇ ಅವಳದ್ದು? ರಾಧಿಕಾಳ ಮದುವೆ ಮುಗಿಸಿ ಸತ್ತಿದ್ದರೆ ಚೆನ್ನಾಗಿತ್ತು ಎನಿಸಿತ್ತು. ಆದರೆ...ಅವಳ ಮನಸ್ನಲ್ಲಿ ಏನಿತ್ತೋ...ಬಲ್ಲವರ್‍ಯಾರು? ಮನೋಜನ ಬಗ್ಗೆ ಅವಳಿ ಗೆಂದೂ ಆದರವಿರಲಿಲ್ಲ. ಮಗಳು ಅವನನ್ನೂ ಪ್ರೀತಿಸುತ್ತಿದಾಳೆ ಅಂತ ತಿಳಿದಿದ್ದರೆ ಒಪ್ಪುತ್ತಿದ್ದಳೇ? ಅವನನ್ನು ಅಳಿಯ ಅಂತ ಸ್ವೀಕರಿಸುತ್ತಿದ್ದಳೇ? ಛೆ..ಯಾಕೋ ಏನೋ ಯಾವುದೂ ಸರಿ ಹೋಗಲಿಲ್ಲ ಎಂದೂ ಪೇಚಾಡಿಕೊಂಡ ತನ್ನಲ್ಲೇ

ರಾತ್ರಿ ಊಟ ಮಾಡುವಾಗ ಮನೋಜನೊಡನೆ ಹೇಳಿದ.

ನಾಳೆ ಬೆಳಿಗ್ಗೆ ಮುಂಚಿತವಾಗಿ ಪಶ್ಚಿಮ ವಾಹಿನಿಗೆ ಹೋಗಬೇಕು ಬೇಗ ಮಲಗಿಕೊಂಡ್ರೆ ಬೇಗ ಏಳಬಹುದು.

ಒಂದ್ಮಾತು ಮಾವ, ನಮಗೇನೂ ಸಂಬಂಧಿಕರಲ್ಲ ಆಕೆ. ನಾನೇಕೆ ಇದನ್ನೆಲ್ಲ ಮಾಡಬೇಕು?

"ನಿನಗಿಷ್ಟವಿಲ್ಲದಿದ್ರೆ ಮಾಡಬೇಡರೇಗಿದ

"ಅದಕ್ಕೆ ರೇಗೋದು ಯಾಕೆ?ನಾನು ಕೇಳಿದ್ದು ತಪ್ಪಾ?"

"ನನ್ನ ಮಾತನ್ನು ಎಂದೂ ಮೀರಿದವನಲ್ಲ. ನೀನು ಈಗೇಕೆ ಈ ಪ್ರಶ್ನೆ?"

"ನನ್ನ ಸ್ವಂತ ತಂದೆ ತಾಯಿಗೆ ಇವತ್ತಿನವರೆಗೂ ಒಂದು ದಿನವೂ ಏನೂ ಮಾಡಿದವನಲ್ಲ ನಾನು. ಈಗ ಅವರ್‍ಯಾರೋ? ನಾನೇಕೆ ಮಾಡಬೇಕು?"ಹಾಗನ್ನಿಸ್ತು ಅದಕ್ರಕೆ ಕೇಳಿದೆ

ನೀನು ರಾಧಿಕಾಳನ್ನು ಪ್ರೀತಿಸ್ತಿದೀಯ ತಾನೇ....?

"ನಾವಿಬ್ರೂ ಫ್ರೆಂಡ್ಸ್ ಅಷ್ಟೇ ಮನೋಜ ನಾಚಿ ನುಡಿದ.

ನೀವಿಬ್ರೂ ಬರೀ ಫ್ರೆಂಡ್ಸ್ ಅಷ್ಟೇ ಅಲ್ಲ ಎನ್ನೋದು ಎಲ್ಲರಿಗೂ ಗೊತ್ತಾಗಿದೆ. ಅನಳನ್ನು ಪ್ರೀತಿಸ್ತಾ ಇರೋದು ನಿಜವಾದರೆ, ಅವಳನ್ನು ಆದಷ್ಟು ಬೇಗ ಮದುವೆಯಗಿ ಬಿಡು.

ಮಾವಾ...ಜೋರಾಗಿ ಕೂಗಿದ. ನಾನೀಗಲೇ ಮದುವೆಯಾಗುಲ್ಲ.

ಹಾಗಾದ್ರೆ ಅವಳೀಗ ಎಲ್ಲಿರಬೇಕು ನೀನೇ ಹೇಳಿಬಿಡು.

ಲೇಡೀಸ್ ಹಾಸ್ಟೆಲ್ಲಿನಲ್ಲಿರಲಿ ಮನೋಜನ ಖಂಡಿತವಾದ ನುಡಿಗೆ ರಂಗನಾಥ ನೊಂದು ಕೊಂಡ.

ಅವಳು ಹಾಸ್ಟಚೆಲ್ಲಿನಲ್ಲಿದ್ದರೆ, ಹಾಳಾಗಿ ಹೋಗ್ತಾಳೆ. ನಿನ್ನನ್ನು ಮರೆತು ಬಿಡ್ತಾಳೆ ರಾಧಿಕಾಳಂತಹ ಹುಡುಗಿ ನಿನಗೆ ಮತ್ತೆಲ್ಲ ಇಸಿಗ್ತಾಳೆ?'

"ಅವಳೇ ಹಾಸ್ಟೆಲ್ಲಸಿನಲ್ಲಿರ್ತಿವಿ ಅಂತಂದ್ರೆ?ಅವಳನ್ನೂ ಒಂದ್ಮಾತು ಕೇಳು.

ಅವಳು ಇಲ್ಲ. ಇಲ್ಲಿ ನಿಮ್ಮ ಮನೇಲಿರ್‍ತೀವಿ ಅಂತಂದ್ರೆ ನಾನ ಬೇಡ ಅಂತ ಅನ್ನೂಲ್ಲ.

ನಂಗೊತ್ತಿಲ್ಲ. ಅದೇನು ಹೇಳ್ಕೋತೀಯೋ ಹೇಳ್ಕೋ..ಮನೋಜ ಮುನಿಸಿನಿಂದ ನುಡಿದಾಗ ರಂಗನಾಥ ನಸುನಕ್ಕ.

ಬೆಳಿಗ್ಗೆ ಬೇಗ ಎದ್ದು ಸ್ನಾನ ಇತ್ಯಾದಿ ಮುಗಿಸಿ, ಟ್ಯಾಕ್ಸಿ ಮಾಡಿಕೊಂಡು ಇಬ್ಬರೂ ಪಶ್ಚಿಮ ವಾಹಿನಿಗೆ ಹೊರಟರು. ದಾರಿಯಲ್ಲಿ ಶಾಸ್ತ್ರಿಗಳನ್ನು ಕೂರಿಸಿಕೊಂಡರು. ಎಲ್ಲಾ

ವಿಧಿವತ್ತಾಗಿ ಮುಗಿದ ಮೇಲೆ ವಾಪಸ್ಸಾದರು. ಬರುವ ಹೊತ್ತಿದೆ ಮಧ್ಯಾಹ್ನ ಎರಡು ಗಂಟೆಯಾಗಿತ್ತು. ಮನೆ ಕವಾಪಸ್ಸಾದರು. ಬರುವ ಹೊತ್ತಿಗೆ ಮಧ್ಯಾಹ್ನ ಎರಡು ಗಂಟೆಯಾಗಿತ್ತು. ಮನೆ ಬಾಗಿಲು ತೆಗೆದಿತ್ತು. ಇಬ್ಬರೂ ಗಾಭರಿಯಿಂದ ಒಬ್ಬರ ಮುಕವನ್ನೊಬ್ಬರು ನೋಡಿಕೊಂಡರು.

ಬಾಗಿಲ ಎದುರಿಗೆ ವೆರಾಂಡಾದಲ್ಲಿ ಮುರಳಿ , ರಾಧಿಕಾ , ಗೀತಾ ಮಾತನಾಡುತ್ತಾ ಕುಳಿತಿದ್ದರು. ಪಕ್ಕದ ಮನೆಯಲ್ಲಿದ್ದ ಬೀಗದ ಕೈಯನ್ನು ಕೇಳಿ ಪಡೆದಿದ್ದರು.

ಮನೋಜ ರಾಧಿಕಾಳನ್ನೇ ನೋಡಿದ ಅತ್ತೂ ಅತ್ತೂ ಕಂಗೆಟ್ಟು ಹೋಗಿದಾಳೆ ನಿಸಿತ್ತು ಅವಳಿಗೆ ಸಮಾಧಾನದ ಮಾತುಗಳನ್ನು ಹೇಳಬೆಕೆಂದುಕೊಂಡ. ಎಲ್ಲರೂ ಇದ್ದುದರೆಂದ ಸುಮ್ಮನಾದ. ಅವನೇಕೆ ಏನೂ ಮಾಪಾಡುತ್ತಿಲ್ಲ ಎಂದುಕೊಂಡಳು ರಾಧಿಕಾ. ಅಮ್ಮ ಹೇಳಿದ್ದ ಮಾತುಗಳು ನೆನಪಾದವು.

ಮನೋಜ ,ಇಬ್ರೂ ಬೇಗ ಸ್ನಾನ ಮಾಡಿಕೊಂಡು ಬನ್ನಿ.ಅಮ್ಮ ಊಟ ಕಳಿಸಿದ್ದಾಳೆ. ಮುರಳಿ ಹೇಳಿದ.

ಇಬ್ಬರಿಗೂ ಚೆನ್ನಾಗಿ ಹಸಿವಾಗಿತ್ತು. ಮುರಳಿ ಬುದ್ಧಿವಂತಿಕೆಯಿಂದ ಬಿಸಿನೀರು ಕಾಯಿಸಿ, ರೆಡಿ ಮಾಡಿದ್ದ. ಇಬ್ಬರೂ ಸ್ನಾನ ಮಾಡಿದರು.

ಕಲೆಸಿದ್ದ ಹುಳಿಯನ್ನ ಮೊಸರನ್ನ , ಉಪ್ಪಿನಕಾಯಿಯನ್ನು ಎಲ್ಲರಿಗೂ ಬಡಿಸಿಕೊಟ್ಟಳು ಗೀತ. ಎಲ್ಲರೂ ಮೌನವಾಗಿ ಊಟ ಮಾಡಿದರು. ಊಟವಾದ ಮೇಲೆ, ಪ್ಲಾಸ್ಕಿಗೆ ಹಾಕಿಸಿಕೊಂಡು ಬಂದಿದ್ದ ಕಾಫಿಯನ್ನು ಬಟ್ಟಲುಗಳಿಗೆ ಹಾಕಿ ಕೊಟ್ಟಳು. ರಂಗನಾಥ ಸುಸ್ತಾಗಿದೆ ಅಂತ ಹೋಗಿ ಮಲಗಿದ. ರಾಧಿಕಾ ಮನೋಜ ಇಬ್ಬರೂ ಮೌನವಾಗಿದ್ದರು. ಮುರಳಿ ಗೀತಾ ಇಬ್ಬರೇ ಮಾತನಾಡುತ್ತಿದ್ದುದು. ಸಣ್ಣ ನಿದ್ದೆ ಮುಗಿಸಿ ರಂಗನಾಥ ಎದ್ದು ಬಂದ.

ಮುರಳಿ ಗೀತಾ ಇಬ್ಬರೂ ಹೊರಡ್ತಿವಿ ಅಂತ ಎದ್ದರು. ರಾಧಿಕಾ ಸುಮ್ಮನೇ ಕುಳಿತೇ ಇದ್ದುದನ್ನು ಕಂಡು, ನೀನು ಬರುಲ್ವೇನೇ ಅಂತ ಗೀತ ಕೇಲಿದಳು.

ನಾನಿಲ್ಲೇ ಇರ್ತೀವಿ ಎಂದು ಅವಳು ನುಡಿದಾಗ, ಮನೋಜ ರಂಗನಾಥ ಇಬ್ಬರೂ ಮುಖ ಮುಖ ನೋಡಿಕೊಂಡರು ಇಬ್ಬರೂ ಏನೂ ಹೇಳಲಿಲ್ಲ.

ಹಾಗಾದ್ರೆ ನಾವಿನ್ನು ಹೊರಡ್ತಿವಿ ಮುರಳಿ ನುಡಿದ. ಮನೋಜ ಅವನನ್ನು ಒಂದು ಪಕ್ಕಕ್ಕೆ ಕರೆದು ಹೇಳಿದ.

ಮುರಳಿ ರಾಧಿಕಾನ್ನ ಕರೆದುಕೊಂಡು ಹೋಗು . ಅವಳು ನಮ್ಮ ಮನೆಯಲ್ಲಿರುವುದು ಸರಿಯಿಲ್ಲ ಅಂತ ಅನ್ನಿಸುತ್ತೆ."

"ಅವಳು ನಮ್ಮ ಮನೆಯಲ್ಲಿರುವುದು ಸರಿ ಅಂತ ಅನ್ನಿಸುತ್ತಾ ನಿನಗೆ?'

"ಗೀತಾಳ ಮನೆಯಲ್ಲಿರಲಿ,

ನಮಮ ಅತ್ತೆಒಂದು ತರಹ . ಇದನ್ನೆಲ್ಲ ಒಪ್ಪಕೊಳ್ಳಲ್ಲ. ನಿನಗೂಯಾಕಿಷ್ಟು ಹಠ? ಇವತ್ತೂ ಇಲ್ಲಿರಲಿ. ರಾತ್ರಿ ಅವಳಿಗೆಅದೇನು ತಿಳುವಳಿಕೆ ಹೇಳಿ,ಅದೇನು ಅನ್ವಿನ್ಸ್ ಮಾಡ್ತೀಯೋ ನೀನೇ ಮಾಡು.ನಿನ್ನ ಮಾತು ಕೇಳಬಹುದು ಅವಳು.

ತಥ್ ರೇಗಿಕೊಂಡ ಮನೋಜ.

ಯಾಕಯ್ಯಾ ರೇಗ್ತೀಯಾ? ನೀನೇನು ಅವಳನ್ನು ದ್ವೇಷಿಸ್ತಿಯೋಪ್ರೀತಿಸ್ತೀಯೋ?'

ಪ್ರೀತಿಸ್ತೀನಿ ಅಂತ ಇದೆಲ್ಲಾ ಸರಿ ಹೋಗುಲ್ಲ ನೋಡು

ಅತಿಯಾಯ್ತು. ನಿಂದು. ಏನಾದ್ರೂ ಮಾಡ್ಕೊಳ್ಳಿ ಮನೋಜ ಕೈಕಟ್ಟಿ ನಿಂತಿದ್ದ. ಮುರಳಿ ಗೀತಾ ಇಬ್ಬರೂ ಹೊರಟು ಹೋದರು. ರಂಗನಾಥ ತನಗೇನೂ ತಿಳಿಯದು ಎಂಬಂತೆ ನಿಂತಿದ್ದ ಮನೋಜನ ಕಡೆ ನೋಡುತ್ತಾ.ಮತ್ತೊಂದೆರಡು ಗಳಿಗೆಯಲ್ಲಿ ಮನೆಯಿಂದ ಆಚೆ ಹೊರಟ. ಅವರವರೇ ಮಾತನಾಡಿಕೊಂಡು ಡಿಸೈಡ್ ಮಾಡಿ ಕೊಳ್ಳಲಿ ಎಂದುಕೊಂಡು,ನಾನು ಯಾರನ್ನೋ ಕಾಣಬೇಕಾಗಿದೆ. ಈಗ ಬರ್ತೀವಿ ರಾತ್ರಿಯ ಅಡಿಗೆಗೆ ಏನಾದ್ರೂ ತರಕಾರಿ ಬೇಕಾಗಿದ್ರೆ ಹೇಳು. ಹಾಗೇ ಬರುವಾಗ ತರ್ತೀವಿ ಎಂದ.

ಹುಳಿಯನ್ನ ಮೊಸರನ್ನ ಮಿಕ್ಕಿದೆ. ಅದೇ ಸಾಕು ಎಂದ.

ಹಾಗಾದ್ರೆ ಹಣ್ಣು ತರ್ತೀವಿ. ನೀನು ಉಪಹಾರ ಲೈಟಂ ಆಗಿ ತಗೊಂಡು ಬಿಡು. ಊಟ ಮಾಡಬಾರದು. ಎಂದ. ರಂಗನಾಥ ರಾತ್ರಿಯ ಹೊತ್ತು ಊಟ ಮಾಡುತ್ತಿರಲಿಲ್ಲ. ಎಷ್ಟೋ ವರ್ಷಗಳಿಂದ ಒಪ್ಪತ್ತೇ ಊಟ,

ರಂಗನಾಥ ಅತ್ತ ಹೋದ ಕೂಡಲೇ ರಾಧಿಕಾ ಕೇಳಿದಳು.

ಮನೋಜ. ನನ್ನ ಮೇಲೆ ಸಿಟ್ಟಾ? ಮಾತಾಡ್ತಾನೇ ಇಲ್ಲವಲ್ಲ ನೀನು.

ಏನೂ ಇಲ್ಲ. ಏನು ಮಾತಾಡಲಿ? ಚುಟುಕಾಗಿ ಕೇಳಿದ.

ಪ್ಲೀಸ್ ಏನಾದ್ರೂ ಮಾತಾಡು. ನನ್ನ ಹತ್ತಿರ ಯಾರುಮಾತಾಡದಿದ್ರೂ ಪರವಾಗಿಲ್ಲ. ನೀನು ಸುಮ್ಮನಿದ್ದರೆ ಮಾತ್ರ ನನಗೆ ಹಿಂಸೆ ಆಗುತ್ತೆ. ನೋವಾಗುತ್ತೆ.

ನಂಗೆ ಅಲ್ಲೆಲ್ಲಾ ಓಡಾಡಿ ಸುಸ್ತಾಗಿದೆ. ಮೂಡ್ ಕೆಟ್ಟು ಹೋಗಿದೆ.ನೀನೇ ಮಾತವಾಡು. ನಾನು ಕೇಳ್ತಿರ್‍ತಿವಿ.

ಅಮ್ಮ ಇದ್ದಾಗ ಅವಳು ಹೇಳಿದ್ದಕ್ಕೆಲ್ಲಾ ರೇಗ್ತಿದ್ದೆ. ಈಗ ಅಮ್ಮನ್ನ ಎಷ್ಟು ಮಿಸ್ ಮಾಡ್ತಿದ್ದಿವಿ ಗೊತ್ತಾ?ವಾಪಸ್ಸು ಬರುವ ಹಾಗಿದ್ದಿದ್ದರೇ?

ಅದು ಹಾಗೇನೇ ಎದುರಿಗೆ ಇದ್ದಾಗ ಬೆಲೆ ಗೊತ್ತಾಗುಲ್ಲ.

ಅಮ್ಮನ್ನ ತುಂಬಾ ಗೋಳು ಹುಯ್ದುಕೊಂಡಿದೀನಿ. ನನಗಿದ್ದವಳು ಅವಳೊಬ್ಬಳೇ ಗಂಜಲುಬ್ಬಿ ಬಂದು ಸುಮ್ಮನಾದಳು. ತಾನೇ ಸಮಾಧಾನ ಮಾಡಿಕೊಂಡು ಹೇಳಿದಳು. ಅಮ್ಮಂಗೆ ತಾನು ಸಾಯ್ತೀನಿ ಅಂತ ಗೊತ್ತಿತ್ತು. ಅಂತತ ಕಾಣಿಸುತ್ತೆ. ನನ್ನ ಹತ್ತಿರ ಏನು ಹೇಳಿದ್ದಳು ಗೊತ್ತಾ?"

"ಏನು? ಅಂತ ಮನೋಜ ಕೇಳಿಲಿಲ್ಲ. ಅವಳೇ ಮುಂದುವರೆಸಿದಳು.

ನೀನು ಮನೋಜನ ಮನೆಯಲ್ಲಿರು. ಅವರಿಬ್ಬರೂ ನಿನ್ನನ್ನು ಚೆನ್ನಾಗಿ ನೋಡ್ಕೋತಾರೆ ಅಂತ ನನಗೆ ನಂಬಿಕೆ ಇದೆ ಅಂತ ಹೇಳಿದ್ದಳು.

ಬರೀ ಸುಳ್ಳು ... ಎಂದುಕೊಂಡು, ಇಲ್ಲಿರುಕ್ಕೆ ಒಂದು ನೆಪ ಎಂದು ಗೊಣಗಿ ಕೊಂಡ.

ಬಿಲೀವ್ ಮಿ ಮನೋಜ್ ನಾನು ಸುಳ್ಳು ಹೇಳ್ತಿಲ್ಲ. ಅಮ್ಮಂಗೆ ನಾವಿಬ್ರೂ ಪ್ರೀತಿಸ್ತಿದೀವಿ ಅನ್ನೋ ವಿಚಾರ ತಿಳಿದಿತ್ತು ಅಂತ ಕಾಣುತ್ತೆ. ಇಲ್ಲದಿದ್ದರೆ, ಈ ಮಾತನ್ನೇಕೆ ಹೇಳುತ್ತಿದ್ದಳು? ನಿಂಗೇನನ್ನಿಸುತ್ತೆ?'

ಯಾರುಏನೇ ಹೇಳಿಲಿ? ನೀನು ಇಲ್ಲಿ ನಮ್ಮ ಮನೆಯಲ್ಲಿ ಈಗ ಇರುವುದು ಸರಿಯಲ್ಲ ರಾಧಿಕಾ...ನಾನು ಹೀಗಂತೀನಿ ಅಂತ ಅಂದ್ಕೋಬೇಡ. ಯಾವುದಾದರೂ

ಹಾಸ್ಟೇಲ್ನಿಗೆ ಸೇರಿಕೊಂಡು ಬಿಡು.

ರಾಧಿಕಾ ಅಳಲು ಶುರು ಮಾಡಿದಳು. ನೋಜಿದ್ಯಾ?ಏಂಥಾ ಸ್ಥಿತಿ ಬಂತು ನನಗೆ? ಅಮ್ಮ ಇಲ್ಲ. ಪಾಪ, ಅಂತ ಕರುಣೆ ತೋರುವುದನ್ನು ಬಿಟ್ಟು ಹೀಗೆ ಹೇಳ್ತಿದೀಯಲ್ಲ.

ಇದು ನನ್ನ ನಿನ್ನ ಒಳ್ಳೆಯದಕ್ಕೆ ನಾನು ಹೇಳ್ತಾ ಇರೋದು.

ಸುಳ್ಳು ...ನೀನು ಹೀಗೆ ಮಾತ್ನಾಡುತ್ತಿರುವುದನ್ನು ನೋಡಿದರೆ ನನ್ನನ್ನೂ ಪ್ರೀತಿಸುತ್ತಿರುವುದೂ ಸುಳ್ಳೇನೋ ಅಂತನ್ನಿಸುತ್ತೆ ಮತ್ತೆ ಅಳತೊಡಗಿದಳು.

ಹುಚ್ಚೀ..ಪ್ರೀತಿ ಇರುವುದರಿಂದಲೇ ಈ ಮಾತನ್ನು ಹೇಳುತ್ತಿರುವುದು ಈ ಪ್ರೀತಿ ನಮ್ಮ ವಿದ್ಯಾಭ್ಯಾಸಕ್ಕೆ ಅಡ್ಡ ಬರಬಾರದು. ನನ್ನ ಓದು ಮುಗಿದು ಡಕ್ಟರಾಗುಕ್ಕೆ ಇನ್ನು ಒಂದು ವರ್ಷ ಬೇಕು. ಅಲ್ಲೀವರೆಗೂ?'

"ನಾನೇನು ನಿನ್ನನ್ನೂ ಮದುವೆಯಾಗು ಅಂತ ಕೇಳಿದ್ನಾ? ನಾನೀಗ ಒಂಟಿ. ನನ್ನಂತಹ ಹುಡುಗಿ ಬೇರೆ ಯಾರ ಮನೆಯಲ್ಲೂ ಇರುವುದು ಸರಿ ಅಲ್ಲ. ಇದೇ ಮಾತನ್ನೂ ನೀನೂ ಆಡಿದರೆ ನಾನು ಹೇಗೆ ಸಹಿಸಬೇಕೂ?ನಿನಗೂ ನಾನು ಬೇಡವಾದ ಮೇಲೆ, ನಾನು ಬದುಕಿರಲೇ ಬಾರದು. ಸೂಯಿಸೈಡ್ ಮಾಡ್ಕೋತೀವಿ ಅಷ್ಟೆ.

ಸೂಯಿಸೈಡ್ ಮಾಡ್ಕೋಂಡ್ರೇ ಎಲ್ಲಾ ಸರಿ ಹೋಗುತ್ತೆ ಅಂತ ನೀನು ತಿಳಿಕೊಂಡಿದ್ರೆ ಅದು ತಪು . ನಿಮ್ಮಮ್ಮ ನಿನ್ನನ್ನು ಸಾಕಿ ಬೆಳೆಸಿದ್ದು ನೀನು ಆತ್ಮ ಹತ್ಯೆ ಮಾಡಿಕೊಳ್ಳಲಿಅಂತಾನಾ? ನಿಮ್ಮಮ್ಮನೂ ಒಂಟಿಯಾಗಿರಲಿಲ್ವಾ?

ಏನಿಲ್ಲ. ಅಮ್ಮನಿಗೆ ನಾನಿದ್ದೆ . ಆದರೆ ಈಗ ನನಗೆ ಯಾರಿಲ್ಲ ಮತ್ತೆ ಅಳತೊಡಗಿದಳು,

ಛೆ. ಛೆ. ಮಾತು ಮಾತಿಗೂ ಅತ್ತರೆ ಏನು ಸಾಧಿಸಿದ ಹಾಗಾಯ್ತು?ಸವಲ್ಪ ಸುಮ್ಮನಿರ್ತೀಯಾ? ರೇಗಿದ.

ಅಮ್ಮ ಸತ್ತಾಗಲೂ ಅಳಬಾರದು ಅಂತೀಯ?ನೀನೆಂತಹ ಕಟುಕ?

"ಹೌದು. ನಾನು ಕಟುಕ. ನನ್ನಂತಹವನನ್ನೂ ನೀನು ಪ್ರೀತಿಸ್ತದೀಯಲ್ಲ. ನೀನೇನು? ಮಹಾ ಸಾಧು.

ಹಾಗಾದ್ರೆ ನಾನು ನಿನಗೆ ಅಷ್ಟುಚು ಬೇಡವಾದರೆ ಬಿಟು ಬಿಡು. ಎಲ್ಲದ್ರೂ ಹೆಳಳಾಗಿ ಹೋಗ್ತೀವಿ.

ಸದಾ ಕೆಟ್ಟ ಮಾತೇ ಬಾಯಲ್ಲಿ. ಹಾಸ್ಟೆಲ್ಲಿನಲ್ಲಿರುಅಂತ ಅಂದ್ರೆ ಅದು ತಪ್ಪಾ?ಪ್ರೀತಿಸುಲ್ಲ ಅಂತ ಅರ್ಥಾನಾ? ಆವಿಬ್ಬರೂ ಒಂದೇ ಮನೆಯಲ್ಲಿದ್ದರೆ ನಮ್ಮ ಓದಿಗೆ ಭಂಗ ಬರುಲ್ವಾ?

"ಹಾಗಂತ? ನನ್ನನ್ನಾ ಎಲ್ಲೆಲ್ಲೋ ಇರು ಅಂತೀಯ ? ಇದ್ರೆ ನಾನು ಇಲ್ಲಿರ್ತಿವಿ ಇಲ್ಲದಿದ್ದರೆ ಎಲ್ಲೋ ಹಾಳಾಗಿ ಹೋಗ್ತಿವಿ ನನ್ನ ಚಿಂತಯೇ ನಿನಗೆ ಬೇಡ. ನಮ್ಮ ಅಮ್ಮನ ಜೊತೆ ನಾನೂ ಸತ್ತು ಹೋದೆ ಅಂತ ನನ್ನ ತಿಧೀನೂ ಮಾಡಿ ಬಿಡು.ಜೋರಾಗಿ ಅಳತೊಡಗಿದಳು ಅವನು ಅಧೀರವಾದ.

ಎಯ್ ರಾಧಿಕಾ...ಸಮಾಧಾನ ಮಾಡ್ಕೋ...ನಾನೇನು ಅಂದೆ ಅಂತ ಹೀಗಾಡ್ತಿದೀಯ? ಯಾರಾದ್ರೂ ನೋಡಿದ್ರೆ ಏನಂದು ಕೊಳ್ತಾರೆ ಅವಳ ರಟ್ಟೆ ಹಿಡಿದ. ಅವಳು ಕೊಸರಿಕೊಂಡಳು. ಅವನು ಅವಳನ್ನು ಒರಟಾಗಿ ಎಳೆದು ಅವಳನ್ನು ತನ್ನೆಡೆಗೆ

ತಿರುಗಿಸಿಕೊಂಡ. ಅತ್ತು ಅತ್ತೂ ಕೆಂಪಾಗಿದ್ದವಳ ನೋಡಿದ. ರಾಧಿಕಾ ಅವನ ನೇರ ದೃಷ್ಟಿಯನ್ನೆದುರಿಸಲಾರದೇ, ತನ್ನ ಮುಖ ಮುಚ್ಚಿಕೊಂಡಳು.

ನೋಡಿದ್ಯಾ ನಾವಿಬ್ಬರೂ ಒಬ್ಬರೆದುರಿಗೆ ಒಬ್ಬರು ಸದಾ ಇದ್ದರೆ ಏನಾಗುತ್ತೆ ಅಂತ? ನಾನು ನಿನ್ನನ್ನು ನೋಡ್ತರ್ತಿವಿ. ನೀನು ನಾಚ್ಕೋತಿಯ. ಇಬ್ಬರ ಓದಿಗೂ ಸೊನ್ನೆ. ಇಷ್ಟು ವರ್ಷಗಳಿಂದ ಓದಿದ್ದೆಲ್ಲಾ ದಂಡವಾಗುಲ್ವಾ?ನಮ್ಮ ಗುರಿಯನ್ನೇ ಸಾಧಿಸದಿದ್ದರೆ ಏನುಪಯೋಗ? ನನ್ನ ಮಾವನಿಗೆ ಸಿರಾಶೆ ಆಗುತ್ತೆ. ನಿನ್ನ ತಾಯಿಯ ಆತ್ಮಕ್ಕೆ ಶಾಂತಿ ಸಿಗುತ್ತಾ? ನೀನು ಇಲ್ಲೇ ನಮ್ಮ ಮನೆಲೆ ಇರ್ತಿನಿ ಅನ್ನೋದಾದ್ರೆ ನನಗೆ ಪ್ರಾಮಿಸ್ ಮಾಡಬೇಕು.ಒಂದೇಮನೆಯಲ್ಲಿದ್ದರೂ ನಾವು ದೂರ ದೂರ ಇರಬೇಕು. ವಮ್ಮಿಬ್ಬರ ವಿದ್ಯಾಭ್ಯಾಸಕಕ್ಕೆ ಭಂಗ ಬರಬಾರದು. ನಿನ್ನಿಂದ ಇರುಕ್ಕೆ ಸಾಧ್ಯಾನಾ? ನಿನಗೆ ಒಪ್ಪಿಗೇನಾ?

ನೀನು ನನ್ನ ಜೊತಗಿದ್ದರೆ ಎಲ್ಲಾ ಸಾದ್ಯವಾಗುತ್ತೆ,ನಾನು ಪ್ರಾಮಿಸ್ ಮಾಡ್ತಿವಿ.ನೀನು ಕೋರ್ಸ್ ಮುಗಿಸಿ ಕಂಪ್ಲೀಟ್ ಆಗಿ ಡಾಕ್ಟರಾಗುವವರೆಗೂ ನಾನು ನಿನ್ನ ವಿದ್ಯಾಭ್ಯಾಸಕ್ಕೆತೊಂದರೆ ಕೊಡುವುದಿಲ್ಲ. ಅವನ ಮೇಲೆ ಕೈ ಇಟ್ಟು ಹೇಳಿದಳು.

ಸಾರಿ...ಮೇಡಂ.ಬರೀ ನನ್ನ ವಿಧ್ಯಾಭ್ಯಾಸ ಅಲ್ಲ. ನಿಮ್ಮದ್ದೂ ಸಹ. ನೀವೂ ಡಾಕ್ಟರಾಗುವವರೆಗೂ ನಾವಿಬ್ಬರೂ ದೂರ ದೂರ ಎಂದು ಮುಗುಳ್ನಗುತ್ತಾ ಅವಳಿಂದ ದೂರ ಸರಿದ.

ರಾಧಿಕಾಗೆ ನಿರಾಶೆ ಆಗಿತ್ತು. ಅವನ ಜೊತೆ ಇನ್ನು ಸ್ವಲ್ಪ ಹೊತ್ತುಹಾಗೆ ನಿಂತಿರುವ ಬಯಕೆ ಆಗಿತ್ತು. ಆದರೆ ಮನೋಜನ ಮಾತುಗಳು ಕೆಣಕಿದ್ದವಿ. ಸರಿ ಮನೋಜ್ ಐ ಆಮ್ ಹೆಲ್ಪ್ ಲೆಸ್. ನನ್ನ ಪರೀಸ್ಥಿತಿ ಏನೂಂತ ಅಥಾ ಮಾಡಿಕೊಂಡು ನನ್ನನ್ನು ನೋಡಿಕೊಂಡರೆ ಸಾಕು. ಮುದುಕಿಯಂತೆ. ಅಸಹಾಯಕಳಂತೆ ನುಡಿದಾಗ ಆ ವೈರಾಗ್ಯದ ಮಾತಿಗೆ ಅವನಿಗೆ ನಗುಬಂತು.

ವೆರಿಗುಡ್. ಮದ್ಯೆ ಎಂದಾದರೂ ಈ ಪ್ರತಿಜ್ಞೆಗೆ ಭಂಗ ಬಂದರೆ, ಅವತ್ತೆ ನಿನ್ನನ್ನು ಕರೆದುಕೊಂಡು ಹೋಗಿ ಹಾಸ್ಟೆಲ್ಲಿಗೆ ಸೇರಿಸ್ಬಿಡ್ತೀವಿ

ಒಂದು ವೇಳೆ ನೀನೇ ಭಂಗ ಮಾಡಿದರೆ

ಆಗ ನಾನೇ ಈ ಮನೆ ಬಿಟ್ಟು ಹೋಗ್ತಿವಿ.

ಅಂಥ ಮಾತನ್ನು ಮಾತ್ರ ಆಡಬೇಡ ಮನೋಜ್ . ಅಪ್ಪ ಮನೆ ಬಿಟ್ಟು ಹೋಗಿ, ಅಮ್ಮ ಎಷ್ಟು ಕಷ್ಟ ಪಟ್ಟಳು ಅಂತ ನಿನಗೇನಾದರೂ ಅಂದಾಜಿದೆಯಾ?

ಸಾರಿ . ರಾಧಿಕಾ. ನಿನಗೆ ಹರ್ಟ್ ಮಾಡಬೆಕು ಅಂತ ಹೇಳಲಿಲ್ಲ. ಹೋಗಲಿ ಬಿಡು. ಇನ್ನು ಮಾತು ಸಾಕು.ಮಾವ ಬರುವ ಹೊತ್ತಾಯ್ತು. ನೀನು ಊಟ ಮಾಡುವುದಾದರೆ ಮಾಡು. ಆಮೇಲೆ ನೀನು ನನ್ನ ರೂಮಿನಲ್ಲಿ ಮಲಗು. ನಾನು ಮಾವನ ಜೊತೆ ಇಲ್ಲಿಈ ರೂಮಿನಲ್ಲಿ ಮಲಗ್ತೀವಿ.

ರಾಧಿಕಾ ತಲೆ ಆಡಿಸಿದಳು. ಮನೋಜ ಅಡಿಗೆ ಮನೆಗೆ ಹೋದ. ರಾಧಿಕಾ ಅವನ ಹಿಂದೆಯೇ ಹೋಗಿ. ಕೈ ಕಟ್ಟಿ ನಿಂತು, ಅವನ ಚಲನವಲನಗಳನ್ನೇ ಗಮನಿಸಿದಳು.ಇವನೂ ಇಲ್ಲದಿದ್ದರೆ ನನ್ನ ಬಾಳು ಏನಾಗಿ ಹೋಗುತ್ತಿತ್ತೋ ಏನೋ ಎನಿಸಿ ದುಃಖವುಕ್ಕಿ ಬಂತು. ಅವನ ಎದುರಿಗೆ ಮತ್ತೆ ಅಳುವ ಮನಸ್ಸಾಗದೇ ಆಚೆ

ಬಂದು ನಿಂತಳು. ಅಕ್ಕ ಪಕ್ಕದವರು ಇಣುಕಿ ನೋಡಿದ್ದರು.

ರಂಗನಾಥ ಬರುವವರೆಗೂ ಹಾಗೇ ನಿಂತಿದ್ದಳು.

ಇಲ್ಯಾಕಮ್ಮಾ ನಿಂತಿದೀಯಾ?ಮನೆಜ ಏನು ಮಾಡ್ತಿದಾನೆ? ಕೇಳಿದ . ರಂಗನಾಥನ ಧ್ವನಿ ಕೇಳಿ ಎಚ್ಚೆತ್ತಳು.

ಏನಿಲ್ಲ. ಅಮ್ಮನ್ನ ನೆನೆಸಿಕೊಳ್ತಿದ್ದೆ. ಕಣ್ಣಂಚಿನಲ್ಲಿ ನೀರು ಜಿನಿಗಿತ್ತು. ಅಕ್ಕಪಕ್ಕದವರುನೋಡುತ್ತಿರಬಹುದೆಂಬ ಅನುಮಾನ ದಿಂದ ಸುಮ್ಮನಾಗಿದ್ದ. ಇಲ್ಲದಿದ್ದರೆಮಗಳನ್ನು ಎದೆಗವಚಿಕೊಂಡು ಸಮಾಧಾನ ಹೇಲುವ ಆಸೆಯಾಗಿತ್ತು. ಇಬ್ಬರೂ ಒಳಗೆ ಬಂದರು.

ರಾಧಿಕಾ ಊಟ ಮುಗಿಸಿ ಮಲಗಿದ್ದಳು.ನಿದೆದೆ ಬಂದಿತ್ತು. ರಂಗನಾಥ, ಮನೋಜ ಸಹ ಒಳ್ಳೆ ಗಾಢವಾದ ನಿದ್ದೆಯಲ್ಲಿ ಮುಳುಗಿದ್ದರು.

ಒಂದು ಹೊತ್ತಿನಲ್ಲಿ ಇದ್ದಕ್ಕಿಂದ್ದಂತೆ ರಾದಿಕಾ, ಮಮ್ಮೀ...ಮಮ್ಮೀ ಎಂದು ಅಳತೊಡಗಿದಳು. ನಿಶ್ಯಬ್ಧವಾದ ರಾತ್ರಿಯಲ್ಲಿ ಕೇಳುವವರಿಗೆಅಳ ಅಳು ಭಯ ಹುಟ್ಟಿಸುವಂತಿತ್ತು. ರಂಗನಾಥನಿಗೆಎಚ್ಚರವೇಆಯಿತು. ಒಂದುಗಳಿಗೆ ಹೆದರಿದ...ಪಕ್ಕದಲ್ಲಿ ಕೆಳಗೆ ನೆಲದ ಮೇಲೆ ಹಾಸಿಗೆಹಾಸಿಕೊಂಡು ಮಲಗಿದ್ದ ಮನೋಜನನ್ನು ಎಬ್ಬಿಸಿದ.

ಮನೂ ಮನೂ. ಏಳು ನೋಡು...ಯಾರೋ ಅಳ್ತಿದ್ದಾರೆ.

ಗಾಢವಾದ ನಿದ್ದೆಯಲ್ಲಿದ್ದ ಮನೋಜನಿಗೆ ತಕ್ಷಮ ಎಚ್ಚರವಾಗಲಿಲ್ಲ. ರಂಗನಾಥ ಮುಟ್ಟಿ ಎಬ್ಬಿಸಿದ. ಗಾಭರಿಯಿಂದೆದ್ದ ಮನೋಜ. ಅವನಿಗೂ ಅಳುತ್ತಿದ್ದುದು ಕೇಳಿಸಿತ್ತು.

ಇವಳ್ಯಾಕೇ ಅಳುತ್ತಿದಾಳೆ ಇಷ್ಟು ಹೊತ್ನಲ್ಲಿ ಗ್ರಹಚಾರ...ಎಂದು ಬೈದುಕೊಂಡು ಅವಳು ಮಲಗಿದ್ದಡೆ ಹೋದ. ರಾಧಿಕಾ ಎದ್ದು ಹಾಸಿಗೆ ಮೇಲೆ ಕುಳಿತು ಬಿಕ್ಕಿಬಿಕ್ಕಿ ಅಳುತ್ತಿದ್ಧಲು.

ಛೇ...ಇದೇನಿದು ಹುಚ್ಚಾಟ ಎಲ್ಲರಿಗೂ ಕೇಳಿಸುತ್ತೆ ಸುಮ್ಮನಿರಬಾರದಾ ಇಷ್ಟು ಹೊತ್ನಲ್ಲಿ ಎಷ್ಟು ಜೋರಾಗಿ ಅಳ್ತಿದೀಯಲ್ಲ.

ಅಮ್ಮ ಕನಸ್ನಲ್ಲಿ ಬಂದಿದ್ದಳು. ನಾನು ಕರೀತಾನೇ ಇದ್ದೆ ಹೊರಟೇ ಹೋದಳು. ಎಟ್ಟರವಾಯಿತು. ಅಮ್ಮ ಇಲ್ಲಿ ಅಂತ ತಿಳೀತು. ಅಳು ಬಂತು.ಈ

ಅದು ನಿನ್ನ ಭ್ರಮೆ. ಸುಮ್ಮನೆ ಮಲಕ್ಕೋ

ನಂಗೆ ನಿದ್ದೆ ಬರ್ತಿಲಲ. ನೀನೂ ಇಲ್ಲಿ ಕೂತ್ಕೋ...

ನಂಗೆ ನಿದ್ದೆ ಬರ್ತಿದೆ. ಸುಮ್ಮನೇ ಮಲಕ್ಕೋ...ರೇಗಿದ. ನೀನು ಹೀಗೆಲ್ಲ ಆಡಿದರೆ, ನಿನ್ನನ್ನ ಹಾಸ್ಟೇಲ್ಲಿಗೆ ಸೇರಿಸಿ ಬಿಡ್ತಿವಿ. ಹೆದರಿಸಿದ. ತನ್ನ ಪಾಡಿಗೆ ತಾನು ಬಂದು ಮಲಗಿದ. ಅರ್ಧ ನಿದ್ರೆಯಲ್ಲಿ ಎಬ್ಬಿಸಿದ್ದು ಅವನಿಗೆ ರೇಗಿ ಹೋಗಿತ್ತು. ಅವನಿಗೆ ಸಿಟ್ಟು ಬಂದಿದೆ ಎಂದು ತಿಳಿದ ರಂಗನಾಥ ಏನನ್ನು ಕೇಳಲಿಲ್ಲ. ನಿರಾಶೆಗೊಂಡು, ರಾಧಿಕಾ ಅತ್ತು ಅತ್ತೂ ಸುಸ್ತಾಗಿ ಮಲಗಿದಳು. ರಂಗನಾಥನಿಗೆಚಿಂತೆಯಾಗಿತ್ತು. ಈ ಹುಡುಗಿ ಹೀಗೇ ಆಡ್ತಿದ್ದರೆ. ಸುಧಾರಿಸುವುದು ಹೇಗೆ ಅಂತ

ಬೆಳಿಗೆ ಎದ್ದ ನಂತರ ರಾಧಿಕಾ ತಾನೇ ಹೇಳಿದಳು.

ಸಾರಿ ಕಮನೋಜ್. ನೆನ್ನೆ ರಾತ್ರಿ ನಿನ್ನ ನಿದ್ದೆ ಕೆಡಿಸಿಬಿಟ್ಟೆ. ತಡಿಯುಕ್ಕಿ ಆಗಲೇ

ಇಲ್ಲ. ಹೋಗಲಿಬಿಡು ಇವತ್ತಿಂದ ರಾತ್ರಿ ಮಲಗುಕ್ಕೆಮುಂಚೆ ಮರೆಯದೇ ಒಂದು ಸ್ಲೀಪಿಂಗ್ ಡೋಸ್ ತಗೊಂಡು ಮಲಕ್ಕೋ ಚೆನ್ನಾಗಿ ನಿದ್ದೆ ಬರುತ್ತೆ.

ಆ ಮೇಲೆ ಅದೇ ಹ್ಯಾಬಿಟ್ ಆಗುತ್ತೆ.

ಪರವಾಗಿಲ. ಎಂದಾದ್ರೂ ಅದನ್ನು ಬಿಡಿಸ್ತೀನಿ. ಈಗ ಹೇಳು ಕಾಫಿ ಕುಡೀತೀಯೋ, ಹಾಲು ಕುಡಿತೀಯೋ....?

ಯಾವುದೋ ಒಂದು ಕೊಡು. ಎರಡೂ ಸೇರುತ್ತೆ

ನಾವಿಬ್ಬರೂ ಕಾಫಿ ಕುಡಿದೆವಿ. ನೀನು ತಗೋ...ರಾಧಿಕಾ ಕಾಫಿ ಕುಡಿದಳು. ಕಾಫಿ ತುಂಬಾ ಚೆನ್ನಾಗಿದೆ. ನೀನೇ ಮಾಡಿದ್ಯಾ ?ನಂಗೂ ಈ ಕೆಲಸ ಎಲ್ಲಾ ಹೇಳಿಕೊಡ್ತೀಯಾ?

" ಈಗ ಬೇಡ. ಈಗ ನೀನು ಈ ಮನೆಯ ಗೆಸ್ಟ್. ಈ ಮನೆಯ ಹೋಸ್ಟ್ ಆಗ ಬರ್ತೀಯಲ್ಲ. ಆಗ ಇದೆಲ್ಲಾ ನಿನ್ನದೇ ಕೆಲಸ. ಎಲ್ಲಾ ಕಲಿತ್ಕೋಬೇಕು. ಎಲ್ಲಾ ಮಾಡಬೇಕು. ಇದುವರೆಗೂ ನನಗೂ ಮಾಡೀ ಮಾಡೀ ಬೆಜಾರಾಗಿ ಹೋಗಿದೆ.

ನಿನಗೂ ಬೇಜಾರಾಗುತ್ತಾ ಮನೋಜ್

ಯಾಕೆ? ನನಗೆ ಬೇಜಾರಾಗಬಾರದಾ?ನಾನು ಮನುಷ್ಯ ಅಲ್ವಾ?

ಹಾಗಲ್ಲ ಸದಾ ಎಂಗೇಜ್ ಆಗಿರ್ತೀಯಾ... ನಿನಗೂ ಬೆಜಾರಾಗುತ್ತಾ ಅಂತ ಕೇಳಿದೆ. ಅಷ್ಟೇ. ಈಗ ಏನೂ ಮಾಡ್ತಿದೀಯ?"

"ಅಡಿಗೆ ಮಾಡ್ತಿದೀನಿ. ನಿನಗೇನು ಇಷ್ಟ ಹೇಳು.

ನೀನು ಏನೇ ಮಾಡಿ ಹಾಕಿದರೂ, ಅದು ನಮ್ಮ ಅಡಿಗೆಯವರು ಮಾಡಿದ್ದಕ್ಕಿಂತ ಚೆನ್ನಾಗಿರುತ್ತೆ ಯಾವುದಾದರೂ ಸರಿ. ನನಗೆ ಊಟ ತಿಂಡಿ ಮೇಲಿನ ಆಸಕ್ತಿ ಹೊರಟು ಹೋಗಿದೆ.

ನಿನಗೆ ಒಂದೊಂದಾಗಿ ಆಸಕ್ತಿ ಎಲ್ಲದರಲ್ಲೂ ಹೋಗ್ತಿದೆ. ಅದು ತಪ್ಪು.ನನ್ನ ಮನೆಯಲ್ಲಿ ಅದು ಖಂಡಿತಾ ತಪ್ಪು.

ಈಗಲಿನಿಂದ ನನ್ನನ್ನು ಹೆದರಿಸಬೇಡ ಮಾರಾಯ...ನಾನು ಮನೆಗೆ ಹೋಗಿ ಕೆಲವು ಥಿಂಗ್ಸ್ ತಗೋಬೇಕು. ನನ್ನನ್ನು ಕರೆದುಕೊಂಡುಹೋಗ್ತೀಯಾ? ಮನೋಜ ಒಪ್ಪಿದ.

ನಾನು ಇಲ್ಲಿ ಕೂತಿರ್ತನಿ . ನಿನಗೇನು ಬೇಕೋಎಲ್ಲಾ ತಗೋ ಬೇಗ ಬೇಗ.......ಅವಸರಿಸಿದ.

ಅಷ್ಟು ಬೇಗ. ನನ್ನಿಂದಾಗುಲ್ಲಪ್ಪಾ. ಬೇಕಾದಷ್ಟು ಬುಕ್ಸ್‌ಗಳಿವೆ. ನೋಡ್ತಾ ಇರು.... ಅವನು ಅಲ್ಲ ಲ್ಲೇ ಬಿದ್ದಿದ್ದ ಮಾಗ್ಜೈನ್ಸ್‌ಗಳನ್ನು ನೋಡ ತೊಡಗಿದ.

ರಾಧಿಕಾ ಪ್ಯಾಕ್ ಮಾಡಿದಳು. ಕಿಟ್ ಬ್ಯಾಗಗಳು. ಸೂಟ್‌ಕೇಸುಗಳು. ಗೊತ್ತು ಗುರಿ ಇಲ್ಲದೇ ಏನೇನೋ ತುಂಬಿಕೊಂಡು ಭಾರವಾಗಿತ್ತು. ಮನೋಜನ್ನ ಕರೆದಳು. ಅವನು ನಕ್ಕು ಬಿಟ್ಟ. ಮನೆಲಿದ್ದುದನ್ನೆಲ್ಲ ತುಂಬಿಕೊಂಡ ಹಾಗಿದೆ.

ನಿಂಗೇನು ಗೊತ್ತು/? ಎಲ್ಲಾ ಬೇಕಾಗುತ್ತೆ!"

"ಇದು ತುಂಬಾ ಜಾಸ್ತಿ. ಸ್ವಲ್ಪ ಕಮ್ಮಿ ಮಾಡು ರೇಗಿದ. ರಾಧಿಕಾ ಪೆಚ್ಚು ಮುಕ ಮಾಡಿದಲು.

ಸ್ಕೂಟರ್‌ನಲ್ಲಿ ಇಷ್ಟನ್ನೆಲ್ಲಾ ತಗೊಂಡು ಹೋಗುಕ್ಕಾಗುಲ್ಲ. ತಡೀ ಒಂದುಆಟೋ ತರ್ತೀನಿ.

ಹೋಗಲಿ ಬಿಡು. ಈಗ ಒಂಜುಸ್ವಲ್ಪ ತಗೋತೀನಿ. ಆಗಾಗ್ಗೆ ಒಂದು ಇದನ್ನೆಲ್ಲ ತಗೊಂಡು ಹೋದ್ರಾಯ್ತು. ಅವಳು ಮತ್ತೆ ಬೇರೆ ಪ್ಯಾಕಿಂಗ್ ಶುರು ಮಾಡಿದಳು. ಮನೋಜ ಮತ್ತೆ ಮ್ಯಾಗ್ಸೈನ್‌ಸ್‌ಗಳನ್ನು ತಿರುವಿ ಹಾಕಿದ. ಅವಳು ಎಲ್ಲಾ ಮುಗಿಸಿ, ರೆಡಿ ಅಂದ ಮೇಲೆ, ಅವನು ಎದ್ದ. ಇಬ್ಬರೂ ಮನೆಗೆ ವಾಪಸ್ಸು ಬಂದರು.

ಅಬ್ಬಾ...ಅದೇನು ಪ್ಯಾಕಿಂಗ್ ನಿನ್ನದು? ಬಿಚ್ಚಿ ಕಟ್ಟಿ , ಕಟ್ಟಿ ಬಿಚ್ಚಿ , ಮಾಡಿದರೂ ಎಷ್ಟೊಂದಿದೆ? ಹೀಗಾದರೆ ಆಯ್ತು ನಿನ್ನ ಪೇಶೆಂಟ್ಸ್ ಗತಿ? ಗೋವಿಂದಾ...ಎಂದು ರೇಗಿಸಿದ.

ಆ ಅವತಾರಾನೇ ಬರುಲ್ಲ. ನಾನು ಡಾಕಕ್ಟರಾದರೆ ತಾನೇ ಆ ಮಾತು? ನನ್ನ ವಿದ್ಯಾಭ್ಯಾಸ ಹರ ಹರಾ...ಎಂದಳು ನಗುತ್ತಾ.

ಸ್ಟುಪಿಡ್. ಮತ್ತೆ ಅದೇ ರಾಗ ಹಾಡ್ತೀಯಲ್ಲ. ಮನೇಲಿ ಕೂತು ಏನು ಮಾಡ್ತೀಯ ನೀನು ಓದಲೇ ಬೇಕು.

ಈಗೇನು ಮಾಡ್ತಿದೀನೋ ಅದೇ ಜೊತೆಗೆ ನಿನಗೆ ಬೇಕಾದರೆ ಮನೆ ಕೆಲಸದಲ್ಲಿ ಸಹಾಯ ಮಾಡ್ತಿವಿ ನನಗೆ ಓದಲು ಮಾತ್ರ ಇಷ್ಟವಿಲ್ಲ. ಮೂತಿ ಉದ್ದ ಮಾಡಿದಳು.

ತಥ್ ಹಳ್ಳಿ ಗೊಡ್ಡಿ ತರಹ ಆಡಬೇಡ. ಓದುವ ಕಾಲದಲ್ಲ ಓದು ಮುಖ್ಯ ಆಮೇಲೆಅದೆಲ್ಲಾ ಉಳಿದದ್ದು . ಅವು ಎಲ್ಲಿ ಓಡಿಯೂ ಹೋಗುಲ್ಲ.

ಪ್ಲೀಸ್. ನನಗೆ ಬಲವಂತ ಮಾಡಬೇಡ...ನೋಡು ರಾಧಿಕಾ. ನಾನು ಈಗಲೇ ಹೇಳ್ತಿದೀನಿ. ನನ್ನ ಮನೇಲಿ ನನ್ನ ಜೊತೇಇರಬೇಕು ಅಂತ ಆಸೆ ಇದ್ದರೆ ,ನಾನು ಹೇಳಿದ ಹಾಗೆ ಕೇಳು. ಇಲ್ಲದಿದ್ದರೆ ಹಾಸ್ಟೆಲ್ಲಿಗೆ ಹೋಗು.

ಹೋಗ್ತಿನಿ. ಹಾಸ್ಟೆಲ್ಲಿಗೆ ಹೋಗ್ತೀನಿ. ಮತ್ತೆವಾಪಸು ಬರುಲ್ಲ ಅಲ್ಲಿರುಕ್ಕೆ ಆಗದಿದ್ರೆ ಆತ್ಮಹತ್ಯ ಮಾಡ್ಕೋತೀನಿ.

ಮಾಡ್ಕೋ...ಅದೆಷ್ಟು ಸಲ ಹೇಳ್ತೀಯಾ? ಅದರಿಂದ ನಿನಗೇ ಲಾಸ್. ನಿನಗೆನಾನಿಲ್ಲ ಅಷ್ಟೇ. ನಾನು ಬೇರೆಯಾರಾದರೊಬ್ಬಳು ಡಾಕ್ಟನ್ನೇ ಮದುವೆಯಾಗಿಸುಖವಾಗಿರ್ತೀನಿ.

ಇಷ್ಟು ಸತಯಿಸ್ತೀಯ ನನ್ನನ್ನು . ಪಾಪ. ಅಮ್ಮ ಇಲ್ಲ ಹುಡುಗಿ ಅನ್ನೋ ಕಾರಣನಾದ್ರೂ ಬೇಡ್ವಾ ನಿನಗೆ? ಸದಾ ಜಗಳ ಆಡೋಕೇ ಸಿದ್ದವಾಗಿರ್ತೀಯಲ್ಲ.

ನಿನಗೆ ಕರುಣೆ ತೋರಿಸಿದ್ರೆ. ನನ್ನ ತಲೆ ಮೆಲೆಹತ್ತಿ ಕೂತ್ಕೋತೀಯ. ನನ್ನ ಮೇಲೇನಾದ್ರೂ ಕರುಮೆ ಇದೆಯಾ ನಿನಗೆ ನಂಗು ತಂದೆ ತಾಯಿ ಇಬ್ಬರೂ ಇಲ್ಲ. ಹುಟ್ಟಿದಾಗಲೇ ಅನಾಥನಾದೆ.

ನೀನ್ಯಾಕೆ ಅನಾಥನಾಗ್ತಿಯ? ತಂದೆ ತಾಯಿಗಿಂತ ಹೆಚ್ಚಾಗಿ ಪ್ರೀತಿಸುವ ಮಾವ ಇದಾರೆ...ನಿಮ್ಮಮ್ಮನ್ನೇ ಹೋಲುವ ನಾನಿದೀನಿ...ದುಃಖವನ್ನು ಮರೆತು ಕಿಲಕಿಲನೆ ನಕ್ಕಳು.ನೀನು ಅನಾಥನಂತೂ ಅಲ್ಲ. ಅವನಿಗೂ ನಗು ಬಂತು ಮಾತಿಗೆಮಾತು ಬೆಳೆಸಿ, ಸುಮ್ಮನೇ ಟೈಂ ವೆಸ್ಟ್...ನೀನಂತೂ ಓದುಲ್ಲ ಅಂತಂದ್ರೆ, ನನ್ನನ್ನಾದ್ರೂ ಓದುಕ್ಕೆ ಬಿಡು ನನಗೆ ಡಿಸ್ಟರ್ಬ್ ಮಾಡಬೇಡ.ಓದುವುದು ಬೇಕಾದಷ್ಟಿದೆ

ನಿನ್ನ ಹತ್ತಿರಮಾತನ್ನೂ ಆಡಬಾರದಾ?

ಮಾತೂ ಇಲ್ಲ, ಕಕಡೆಯೂ ಇಲ್ಲ. ನೀನ್ಯಾರೋ ನನಗೆ ಗೊತ್ತಿಲ್ಲ ಅವನು

ಎದ್ದು ಒಲಗೆ ಹೋದ.ಇವಳು ಪೆಚ್ಚಾದಳು.

ಆ ದಿನವೆಲ್ಲಾ ಮನೋಜ.ಅವಳ ಹತ್ತಿರ ಮಾತನ್ನೇ ಆಡಲಿಲ್ಲ. ಅವನಿಗೆ ಸಿಟ್ಟು ಬಂದಿರಹಹುದೆಂದು. ರಂಗನಾಥನೂ ಏನೂ ಕೇಳಲಿಲ್ಲ. ಗೀತಾ ಮುರಳಿಯೂ ಬರಲಿಲ್ಲ. ರಾಧಿಕಾ ಮಾತಿಗೆ ಯಾರೂ ಇಲ್ಲದೆ ಮಂಕಾದಳು. ತನ್ನ ಅಸಹಾಯಕತೆಯ ಬಗ್ಗೆ ದುಃಖವಾಯಿತು.

ತಾಯಿಯ ಹತ್ತಿರ ಜಗಳವಾಡಿ, ಸಿಟ್ಟು ಮಾಡಿಕೊಂಡರೂ, ಮತ್ತೆಸರಿ ಹೋಗಿಸಿ ಕೊಂಡ ಮಾತಾಡುತ್ತಿರಲಿಲ್ಲವೇ? ಹಾಗೇ ಇಲ್ಲಿಯೂ...ಇವನ ಮನೆಯಲಿ ಇವನ ಜೊತೆ ಇರಬೇಕಾದರೆ,ಇವನ ಹತ್ತಿರವೂ ಸರಿ ಹೋಗಿಸಿಕೊಳ್ಳಳುಹಬೇಕು ಎಂದು ಕೊಂಡು, ಮನೋಜ ರೂಮಿನಲ್ಲಿ ಒಬ್ಬನೇ ಇರುವುದನ್ನು ಗಮನಿಸಿ, ಒಳಗೆ ಹೋದಳು ಮನೋಜ ಕತ್ತೆತ್ತಿ ನೋಡಲಿಲ್ಲ.

ಸಾರಿ ಮನೋಜ್...ಪ್ಲೀಸ್ ಹೀಗೆ ಮಾಡ್ಕೋಬೇಡ

ಹೂಂ ಕ್ಷಮಿಸಿದ್ದೀವಿ ಹೋಗು ಎಂದ ಕತಲೆ ಎತ್ತದೆ.

ಅದನ್ನೇ ನಗುನಗುತ್ತಾ ಹೇಳಬಾರದಾ?

"ನನಗೆ ಹೇಳುಕ್ಕೆ ಬರೋದೇ ಹೀಗೆ, ನಾನು ಓದ್ತಾ ಇದಿನಿ. ನೀನು ಹೋಗು ಎಂದ ಮತ್ತೆ.

ನನಗೆ ನಿದ್ದೆ ಬರ್ತಿದೆ. ನಾನು ಮಲಕ್ಕೋ ಬೇಕು.

ಸರಿ. ಮಾವನ ಹತ್ತಿರ ಒಂದುಸ್ಲೀಪಿಂಗ್ ಪಿಲ್ ಕೇಳಿ ತಗೊಂಡುನುಂಗಿಮಲಗು. ನೆನ್ನೇ ರಾತ್ರಿಯ ಹಾಗೆ ಅರ್ಧ ರಾತ್ರಿಲಿ ಎದ್ದು ಅತ್ತರೆ ಚೆನ್ನಾಗಿ ಚಚ್ಚಿ ಬಿಡ್ತೀವಿ. ಅಷ್ಟೇ. ಓರೆಗಣ್ಣಲಿ ಅವಳ ಕಡೆ ನೋಡಿದ

ನಾನೇನೂ ನಿನ್ನ ಹೆಂಡತಿ ಅಲ್ಲ...ನೀನು ಹೊಡಿಯೋ ಕೈಗಳನ್ನು ಅತ್ತಿಂದಿತ್ತ ತಿರುಗಿಸುತ್ತಾ ಹೇಳಿದರು. ಅವನಿಗೆ ನಗು ಆದರೂ ತಡೆದೂಕೊಂಡ.

ಹೆಂಡತೀನ, ಗಂಡ ಹೊಡೀತಾನೆ ಅಂತ ನಿನಗ್ಯಾರು ಹೇಳಿದ್ರು?

ನಮ್ಮ ಮನೆ ಕೆಲಸದವಳು ಅವಲ ಗಂಡ ದಿನಾ ಕುಡಿದು ಬಂದು ಹೊಡೆತಿದ್ನಂತೆ ರಾಗವಾಗಿ ಹೇಳಿದಾಗ, ಚಪ್ಪಾಳೆ ತಟ್ಟಿ ನಕ್ಕ

ಅಬ್ಬಾ ಅಂತೂ ನಕ್ಕೆಯಲ್ಲಾ. ನಿನ್ನ ಉರಿ ಉರಿ ಮುಕನೋಡಿ ನೋಡು ಸಾಕಾಗಿ ಹೋಗಿತ್ತು ನನಗೆ

ನಾನೂ ನೀನೂ ಹೀಗೆ ಕಾಲ ಕಳೆದರೆ ಸರಿ ಹೋಯ್ತು...ನನ್ನ ಉರಿ ಮುಖ ನೋಡಿ ನೀನು ಮಾತಾಡಿಸ್ತೀಯ ನಾನು ನಗ್ತೀನಿ. ಅಲ್ಲಿಗೆ ಮುಗೀತು ಕತೆ. ನೀನು ಹಾಸ್ಟೆಲ್ಲಿನಲ್ಲಿರುವುದೇ ಸರಿ ಎನಿಸುತ್ತೆ. ತಡೀ ಈಗಲೇ ಮಾವನ ಹತ್ತಿರ ಮಾತಾನಾಡ್ತಿನಿ ಎನ್ನುತ್ತಾ ಎದ್ದ.

ಸಾರಿ, ಸಾರಿ, ಸಾರಿ... ಎಂದು ಹೇಳುತ್ತಾ ಅವಳು ತನ್ನ ಪಾಡಿಗೆ ಬೆಚ್ಚಗೆ ಹೊದ್ದು ಮಲಗಿದಳು. ಮನೋಜ ಹೊರಗೆ ಹೋಗಿ ಬಂದು ನಿದ್ರೆಯ ಮಾತ್ರೆ ನೀರಿನ ಲೋಟ ತಂದು ಅವಳ ಕೈಗಿತ್ತ. ಹೂಂ ಕುಡಿ ಎಂದು ಹೇಳಿ ಅವಳು ಮಾತ್ರೆಯನ್ನೂ ನುಂಗುವವರೆಗೆ ಅಲ್ಲಿಯೇ ನಿಂತಿದ್ದು ರೂಮಿನ ದೀಪವನ್ನಾರಿಸಿ, ಬಾಗಿಲನ್ನು ಮುಂದಕ್ಕೆ ಎಳೆದು ಕೊಂಡು ಹೊರಕ್ಕೆ ಹೊರಟುಹೋದ. ಥೂ ಬೇಜಾರು ಎಂದು ರಾಧಿಕಾ

ಅಂದುಕೊಂಡು ನಾಲ್ಕಾರು ಸಲ ಮಗ್ಗುಲು ಬದಲಾಯಿಸುವಷ್ಟರಲ್ಲಿ ಅವಳನ್ನು ನಿದ್ದೆ ಆವರಿಸಿಕೊಂಡಿತು.

ಒಂದು ವಾರ ಕಳೆದಿತ್ತು. ರಂಗನಾಥ ನಿರ್ಮಲಳ ಕರ್ಮಾಂತರ ಗಳನ್ನು ಗೋಕರ್ಣದಲ್ಲಿ ಮಾಡಿ ಮುಗಿಸುವುದೆಂದು ತೀರ್ಮಾನಿಸಿದ್ದ. ರಾಧಿಕಾ ಮನೆಯಲ್ಲಿಯೇ ಇರುತ್ತಿದ್ದಳು. ಮನೋಜ ಮಾತ್ರ ಕಾಲೇಜಿಗೆ ಹೋಗಿ ಬರುತ್ತಿದ್ದ. ರಂಗನಾಥ ಮುರಳಿಯೊಡನೆ ಮಾತಾಡಿದ್ದ.

ಗೋಕರ್ಣಕ್ಕೆ ನಿಮ್ಮ ತಾಯಿಯೂ ಬಂದರೆ ಚೆನ್ನಾಗಿರುತ್ತೆ. ರಾಧಿಕಾ ಏನೂ ಅರಿಯದವಳು. ಅವಳ ಜೊತೆಗೆ ಒಬ್ಬರು ದೊಡ್ಡವರಿದ್ದರೆ ವಾಸಿ. ನಿಮ್ಮಮ್ಮನ್ನ ಕೇಳ್ತೀಯಾ ಗೀತಾನೂ ಬರ್ತಾಳಾ ಕೇಳು...

ಇದೇ ನೆಪ. ಮುರಳಿ ಬಲವಂತ ಮಾಡಿ ತಾಯಿಯನ್ನು ಹೊರಡಿಸಿದ ಎಷ್ಟು ವರ್ಷಗಳಾಯ್ತು ನೀನು ಎಲ್ಲಾದರೂ ಹೊರಗೆ ಹೋಗಿ... ಈಗ ಇದೇ ನೆಪ.. ಹೊರಡು.

ನಿನ್ನನ್ನೇ ಬೇಡ ಅನ್ನೋಣ ಅಂತಿದ್ದೆ. ಕಾಲೇಜು, ಪಾಠ ಬಿಟ್ಟು ಅದೇನು ಅಲೆದಾಟ ಮನೇಲಿದ್ದು ಓದಿದ್ದೇ ಕಾಣೆ ನಾನು.

"ಕಾಲೇಜು, ಪಾಠ ಇದ್ದೇ ಇರುತ್ತೆ...ನಾನು ಅದನ್ನೂ ನೋಡ್ಕೋತೀನಿ. ಅವರು ನಮ್ಮ ಆಪ್ತ ಸ್ನೇಹಿತರು. ಅವರ ನೆರವಿಗೆ ನಾವು ಆಗದಿದ್ದರೆ ಏನು ಚೆನ್ನಾ? ಮೋಹನನೂ ಬರಲಿ. ಗೀತಾನೂ ಬರ್ತಾಳೆ. ಎರಡು ಮೂರು ದಿನಗಳಲ್ಲಿ ವಾಪಸ್ಸು ಬಂದು ಬಿಡೋಣ."

"ನೀನಂತೂ ನಿಮ್ಮ ಅಪ್ಪನ ತರಬವೇ .,..ಎಂದು ಮಗನನ್ನು ಹೊಗಳಿದ್ದಳು...ಮುರಳಿ ತಾಯಿಯನ್ನೇ ಮೆಚ್ಚುಗೆಯಿಂದ ನೋಡಿದ.

ಅವತ್ತಿಗೆ ನಿರ್ಮಲ ಸತ್ತು ಹತ್ತು ದಿನಗಳು ಕಳೆದಿದ್ದವು. ಹಿಂದಿನ ದಿನವೇ ರಂಗನಾಥ ಮನೋಜ, ರಾಧಿಕಾರಿಗೆ ಗೋಕರ್ಣಕ್ಕೆ ಹೋಗಿ ಬರಲಿರುವ ವಿಷಯವನ್ನು ತಿಳಿಸಿ, ಹೇಳಿಗ್ಗೆ ಬೇನೇ ಎದ್ದು ಸಿದ್ಧರಾಗಿರಬೇಕೆಂದು ತಿಳಿಸಿದ್ದ.

ಬಸ್‌ಸ್ಟ್ಯಾಂಡಿಗೇ ಸೀದಾ ತಾವುಗಳು ಬರುವುದಾಗಿ ಮುರಳಿ ತಿಳಿಸಿದ್ದ...ಅಂತೆಯೇ ಎಲ್ಲರೂ ಬಸ್‌ಸ್ಟ್ಯಾಂಡಿನಲ್ಲಿ ಒಟ್ಟಾಗಿ, ಎಂಟು ಗಂಟೆಗೆ ಹೊರಡಲಿರುವ ಬಸ್ಸನ್ನು ಹತ್ತಿದರು. ಎಲ್ಲರೂ ತಿಂಡಿ ಕಾಫಿ ಮುಗಿಸಿ ಹೊರಟಿದ್ದರಿಂದ, ಯಾರಿಗೂ ತಕ್ಷಣಕ್ಕೆ ಹಸಿವಿನ ಚಿಂತೆ ಇರಲಿಲ್ಲ. ಹಣ್ಣು ಬಿಸ್ಕತ್ತುಗಳು ಇದ್ದವು. ಬಸ್ಸು ಗೋಕರ್ಣವನ್ನು ತಲುಪಿತು. ರಂಗನಾಥ ಧರ್ಮಛತ್ರಕ್ಕೆ ಹೋಗೋಣ ಎಂದ. ಮುರಳಿ ನಿರಾಕರಿಸಿದ.

ಬೇಡಾ ಸಾರ್. ಚತ್ರ ಅಂದ ಮೇಲೆ. ಟಾಯ್ಲೆಟ್. ಬಾತ್‌ರೂಂಗಳು ಎಲ್ಲಾ ಚೆನ್ನಾಗಿರುಲ್ಲ. ಯಾವುದಾದರೂ ಒಳ್ಳೆ ಹೋಟೋಲ್ಲಿಗೇ ಹೋಗೋಣ."

"ರಾಧಿಕಾ ಅದನ್ನೇ ಅನು ಮೋದಿಸಿದಳು. ಮನೋಜ ಗೀತಾ ಸುಮ್ಮನೇ ನಿಂತಿದ್ದರು ರಂಗನಾಥ ತನ್ನಲ್ಲೇ ಅಂದುಕೊಂಡ, ಸಿಕ್ಕಾಪಟ್ಟೇ ಖರ್ಚಾಗಿ ಹೋಗುತ್ತೇ ಏನೋ, ಆ ಮಾತನ್ನು ಈಗ ಹೇಗೆ ಹೇಳುವುದು?"

"ಮುರಳಿಯ ತಾಯಿ ಹೇಳಿದರು." ಗಂಡು ಹುಡುಗರಿಗೆ ಹೇಗೋ ಆಗುತ್ತೆ. ಹುಡುಗಿಯರಿಗೆ ಕಷ್ಟ ಆಗುತ್ತೆ ರಾಧಿಕಾ ಗೀತಾ ಕಿಸಿಕಿಸಿ ನಕ್ಕರು. ಮನೋಜ, ತನಗೆ ಬರುವುದೇ ಇಷ್ಟವಿರಲಿಲ್ಲವೇನೋ ಎಂಬಂತೆ, ಮುಖ ಮಾಡಿಕೊಂಡು ನಿಂತಿದ್ದ.

ಇವರ ಮಾತುಗಳನ್ನು ಆಲಿಸುತ್ತಾ ಹತ್ತಿರದಲ್ಲೇ ನಿಂತಿದ್ದ ವ್ಯಕ್ತಿ ಒಬ್ಬರು ಇವರ ಬಳಿಗೆ ಬಂದರು . ಎಲ್ಲರೂ ಆತನ ಕಡೆಗೆ ತಿರುಗಿದರು. ನೋಡಿದರೆ ಸಭ್ಯ ಎನ್ನುವಂತಿದ್ದರು.

" ಽಎಲ್ಲಿಗೆ ಹೋಗಬೇಕು ನೀವು? ನಾನು ಏನಾದ್ರೂ ಸಹಾಯ ಮಾಡ್ಲಾ?

"ಇಲ್ಲಿ ಹೋಟೆಲ್ಲನ್ನು ಬಿಟ್ಟು ಇಳಿದುಕೊಳ್ಳೋಕೆ ಬೇರೆ ಚೆನ್ನಾಗಿರುವ ಜಾಗಗಳಿವೆಯೋ?" ರಂಗನಾಥ ಕೇಳಿದ. ಧರ್ಮಛತ್ರ ಬೇಟ...ಬೇರೆ ಯಾವುದಾದರೂ ರೂಮು...ಮನೆಯಾದರೂ ಸರಿ.

" ನೀವುಗಳು ಊರೂ ಸುತ್ತಾಡಿ, ನೋಡುಕ್ಕೆ ಅಂತ ಬಂದಿದ್ರೆ ಹೋಟೆಲ್ಲಿನಲ್ಲಿ ಇಳಿದುಕೊಳ್ಳಿ ಅದೇ ಸರಿ. ಆದರೆ ಪಿತೃಕಾರ್ಯ, ಮಾಡಿಸುಕ್ಕೆ ಅಂತ ಬಂದಿದ್ರೆ ಇಲ್ಲಿ ಬ್ರಾಹ್ಮಣರ ಮನೆಗಳಲ್ಲಿ ಕೋಣೆಗಳು ಸಿಗುತ್ತವೆ. ಊಟ ಕಾಫಿ ಎಲ್ಲಾ ಅವರೇ ಸಪ್ಲೈ ಮೆಆಡ್ತಾರೆ. ಅನುಕೂಲಗಳಿವೆ.

" ಅದೇ ಸರಿ ಅಂತನ್ನಿಸುತ್ತೆ. ಎಲ್ಲಿದೆ ಹೇಳ್ತೀರಾ?"

"ಬನ್ನಿ ನನ್ನ ಜೊತೆ ಎಂದು ಆತ ಮುಂದೆ ಹೊರಟ ಮುರಳಿ ಗೀತ ಒಬ್ಬರು ನೋಡಿಕೊಂಡರು. ಮುರಳಿ ನಿಧಾನವಾಗಿ ಹೇಳಿದ.

"ನಾವು ಎರಡು ಮೂರು ದಿನ ಇರ್ತೀವಿ. ಎರಡು ರೂಮುಗಳಾದರೂ ಬೇಕಾಗುತ್ತೆ. ಸಿಕ್ಕುತ್ತೆ ತಾನೇ....?"

"ಧಾರಾಳವಾಗಿ...ಸುಮ್ಮನೇ ಬನ್ನಿ "ಆತ ಆಜ್ಞೆ ಮಾಡುವವನಂತೆ ಮಾತನಾಡಿದಾಗ, ಎಲ್ಲರೂ ಅನುಮಾನಿಸಿದರು. ಆದರೂ, ಹೊಸಜಾಗ ತಮಗೇನೂ ತಿಳಿಯದು. ಗಂಡಸರು, ನಾವು ನಾಲ್ಕುಜನರಿದ್ದೇವೆ. ಎಂದು ತಮ್ಮಲ್ಲೇ ಹೇಳಿಕೊಂಡು.ಆತನ ಹಿಂದೆ ನಡೆದರು.

ಆತ ಸೀದಾ ಅವರುಗಳನ್ನೂ ತನ್ನ ಮನೆಗೇ ಕರೆದುಕೊಂಡು ಹೋದರು. ಬಸ್‌ಸ್ಟ್ಯಾಂಡ್‌ಗೆ ಅತಿ ಸಮೀಪದಲ್ಲಿದ್ದ. ಮನೆ ವಿಶಾಲವಾಗಿತ್ತು. ಮಹಡಿಯ ಮೇಲೆ ಒಂದೆರಡು ಕೋಣೆಗಳಿದ್ದವು. ಆದರೆ ಎಲ್ಲಾ ಖಾಲಿಯಾಗಿರುವಂತೆ ತೋರಿತ್ತು. ಆತ ತನ್ನ ಹೆಂಡತಿಯನ್ನು ಕರೆದು ಪರಿಚಯಸಿದರು. ಹೆಂಗಸರ ಕಡೆ ತಿರುಗಿ ಹೇಳಿದರು.

''ನಿಮಗೆ ಏನು ಬೇಕೋ ಅದನ್ನು ಇವಳು ಒದಗಿಸಿ ಕೊಡ್ತಾಳೆ. ಯಾವುದಕ್ಕೂ ಚಿಂತೆ ಬೇಡ. ಎಲ್ಲರೂ ಹೋಗಿ ಕೈ ಕಾಲು ಮುಖ ತೊಳೆದು ಬನ್ನಿ. ಬಿಸಿ ಬಿಸಿ ಕಾಫಿ ಕೊಡ್ತಾಳೆ.''

ಎಲ್ಲರಿಗೂ ಆಶ್ಚರ್ಯವಾಗಿತ್ತು. ಹೆದರಿಕೆಯೂ ಆಗಿತ್ತೂ. ಮೋಹನ ಗೀತಾಳ ಕಿವಿಯಲ್ಲಿ ಕನುಡಿದ."ಒಳ್ಳೆ ಭೂತ್ ಬಂಗ್ಲಾ ಇದ್ದ ಹಾಗಿದೆ . ಅವರುಗಳ ಬದುಕಿರುವ ಮನುಷ್ಯರೇ ತಾನೇ." ಗೀತಾ ಶ್ ಎಂದಳು.

ರಂಗನಾಥ ಅವರ ಆದರಕ್ಕೆ ಹೆರಗಾಗಿದ್ದ. ಅನುಮಾನವೂ ಇತ್ತು. ಈ ಕಾಲದಲ್ಲಿ ಕೊಬ್ಬರನ್ನೊಬ್ಬರು ಪರಿಚತರಾಗಿದ್ದರೂ, ಮಾತನಾಡಿಸಲು ಹೆದರುತ್ತಾರೆ. ಅಂಥಾದ್ದರಲ್ಲಿ ಈತ ತಾವಾಗಿಯೇ ನಮಗೆ ಅನುಕೂಲಗಳನ್ನು ಒದಗಿಸುತ್ತಿರುವುದನ್ನು ನೋಡಿದರೇ...ಈತ ಎಮಹಾವ್ಯಕ್ತಿಯೇ...ದೇವರುನಮ್ಮ ಸಹಾಯಕ್ಕೆಂದೇ ಇವರನ್ನು ಕಳಿಸಿದ್ದಾನೆಂದುಕೊಂಡ.

೧ ಎಲ್ಲರೂ ಮಹಡಿ ಮೇಲಿನ ಕೋಣೆಗೆ ಬಂದರು. ರೂಮುಗಳು ಚೊಕ್ಕಟವಾಗಿದ್ದವು. ಎರಡೆರಡು ಮಂಚಗಳನ್ನು ಹಾಕಲಾಗಿತ್ತು. ಲಗೇಜ್ ಬಿಚ್ಚಿ ಎಲ್ಲರೂ ತಣ್ಣೀರಿನಲ್ಲಿ ಕೈ ಕಾಲು ಮುಖ ತೊಳೆದು, ಪ್ರಯಾಮದ ಆಯಾಸವನ್ನು ಪರಿಹರಿಸಿಕೊಂಡರು. ಆಕೆ ಎಲ್ಲರಿಗೂ ಬಿಸಿ ಬಿಸಿ ಕಾಫಿ ಕಳಿಸಿದಳು. ಕಾಫಿ ಹಿತವಾಗಿತ್ತು ಎಲ್ಲರಿಗೂ ಹಾಯೆನಿಸಿತ್ತು.

" ರಾತ್ರಿಗೆ ಎಲ್ಲರೂ ಊಟ ಮಾಡ್ತೀರೋ?ಫಲಾಹಾರ ತಗೋತೀರೋ?"

ಎಲ್ಲರೂ ಬೆಳಿಗ್ಗೆ ತಿಂಡಿಯನ್ನೂ ಮಾತ್ರ ತಿಂದಿದ್ದು. ಈಗ ಎಲ್ಲರಿಗೂ ಬಿಸಿಯಾಗಿ ಯಾವುದಾದರೂ ಸರಿ. ನಿಮಗೆ ಏನು ಅನುಕೂಲವೋ ಅದನ್ನೇ ಕೊಡಿ. ಪುಣ್ಯಕ್ಷೇತ್ರಗಳಲ್ಲಿ ಅದಕ್ಕೆಲ್ಲ ದೋಷವಿಲ್ಲ. ಅಂತಾರೆ"ಮುರಳಿಯ ತಾಯಿ ಹೇಳಿದರು.

"ಆಯ್ತು ಎಂದು ಆತ ಹೊರಟಾಗ,"ನಾನು ನಿಮ್ಮ ಕಹತ್ತಿರ ಸ್ವಲ್ಪ ಮಾತನಾಡಬೇಕು. ಎಂದ ರಂಗನಾಥ.

"ಬನ್ನಿ, ಕೆಳಗೆ ಆಫೀಸ್ನಲ್ಲಿ ಕೂತು ಮಾತಾಡೋಣ...ಎಂದರು. ಆತ. ರಂಗನಾಥ ಮುರಳಿಗೆ ಸಂಜ್ಞೆ, ಮಾಡಿ ಕರೆದ. ಇಬ್ಬರೂ ಆತನನ್ನೂ ಹಿಂಬಾಲಿಸಿದರು.

ಗೀತಾ ರಾಧಿಕಾ, ಮಂಚದ ಮೇಲೆ ಆರಾಮವಾಗಿ ಕಾಲು ಚಾಚಿ ಕುಳಿದರು. ಮೋಹಲ ಮನೋಜ ಬಂದೆಡೆ ನಿಂತು ಮಾತನಾಡುತ್ತಿದ್ದರು. ಮುರಳಿಯ ತಾಯಿ ಹಾಗೇ ಗೋಡೆಗೆ ಒರಗಿ ಕುಳಿತರು.

ಮುರಳಿ ರಂಗನಾಥ ಮಾತು ಕತೆಗಳನ್ನು ಮುಗಿಸಿ ವಾಪಸ್ಸು ಬಂದರು. ಹಿಂದೆಯೇ ಬಿಸಿ ಬಿಸಿಯಾದ ಊಟ ರೂಮಿಗೇ ಬಂದಿತ್ತು. ಅಲ್ಲೇ ಎಲಙುಲರೂ ಕೆಳಗೆ ಕೂತು ಊಟ ಮಾಡಿದರು ಕ್ಯಾರಿಯರ್‌ನಲ್ಲಿ ತಂದಿರಿಸಿದ ಊಟವನ್ನು ಮುರಳಿಯ ತಾಯಿ, ಗೀತಾ ಎಲ್ಲರಿಗೂಬಡಿಸಿದರು. ಊಟ ತುಂಬಾ ರುಚಿಯಾಗಿದೆಯೆನಿಸಿತು ಎಲ್ಲರ ಕಾದ ಹೊಟ್ಟೆಯು ತಣಿಯಿತು.

ರಾಧಿಕಾಗೆ ಇದೆಲ್ಲಾ ಹೊಸಾ ಅನುಭವಗಳು. ಮೋಹನ ಯಾನ ಸಂಕೋಚವೂ ಇಲ್ಲದೇ ಬೆರಳುಗಳನ್ನು ಚೀಪುತ್ತಿದ್ದ. ಅನ್ನ ಸಾರು, ಪಲ್ಯ ಮಜ್ಜಿಗೆ, ಉಪ್ಪಿನ ಕಾಯಿ ಇಷ್ಟೇ ಪರಿಕರಗಳು . ಆದರೂ ಊಟ ಸೊಗಸಾಗಿದೆ ಎನಿಸಿತ್ತು. ಆತ ಉಪಚಾರ ಹೇಳಿ, ಮತ್ತೆ ಏನಾದರೂ ಬೇಕಾ ಎಂದು ಕೇಳಿದರು. ಕೆಲಸದ ಹುಡುಗನೊಬ್ಬ ಬಂದು ಕ್ಯಾರಿಯರ್ ಪಾತ್ರೆಗಳನ್ನು ತೆಗೆದುಕೊಂಡು, ಆ ಜಾಗವನ್ನು ಒರಿಸಿ ಶುಚಿಗೊಳಿಸಿದ.

ಗಂಡಸರೆಲ್ಲಾ ಒಂದು ರೂಮಿನಲ್ಲಿ ಹೆಂಗಸರು ಇನ್ನೊಂದು ರೂಮಿನಲ್ಲಿ ಮಲಗಿದರು. ರಂಗನಾಥನಿಗೆ ನಿದ್ದೆ ಬಂದಿರಲಿಲ್ಲ. ಇಪ್ಪತ್ತು ವರ್ಷಗಳಲ್ಲಿ ಎಷ್ಟು ಬದಲಾವಣೆ? $ಈ ಊರೂ ಸಹ ತುಂಬಾ ಬದಲಾಗಿದೆ. ಆಗ ತಾಯಿಯ ಕರ್ಮಾಂತರಗಳನ್ನೂ ಮಾಡಲು ಬಂದಿದ್ದೆ. ಈಗ ಹೆಂಡತಿಯ ಶ್ರಾದ್ದ !ಆಗ ಇಲ್ಲಿಗೆ ಬಂದು ಹೆಂಡತಿಯನ್ನು ದೂರಮಾಡಿ ಕೊಂಡೆ. ಈಗ ಮಗಳನ್ನು ಪಡೆದುಕೊಂಡು ಮತ್ತೆ ಬಂದಿದೇನೆ. ಒಂದಕ್ಕೊಂದು ಇದೇನು ಅನುಬಂಧ? ಅರ್ಥವಾಗುಲ್ಲವಲ್ಲ.

ಬೆಳಿಗ್ಗೆ ಮನೆಯಾತ ತಂದುಕೊಟ್ಟ ಬಿಸಿ ಕಾಫಿ ಕುಡಿದು. ಸ್ನಾನ ಇತ್ಯಾದಿಗಳನ್ನು ಮುಗಿಸಿ, ಎಲ್ಲರೂ ಹೊರಗೆ ಹೊರಟರು. ಮನೆಯಾತನ ಹೆಸರು ರಾಜಣ್ಣ ಅಂತ. ಆತನದೇ ಸ್ವಂತ ವಾಹನ ಒಂದಿತ್ತು. ಅದನ್ನು ಓಡಿಸಲು ಒಬ್ಬ ಡ್ರೈವರನ್ನು ಸಹ

ಗೊತ್ತು ಮಾಡಿದ್ದರು.

"ನೀವು ಇಲ್ಲಿ ನಮ್ಮ ಮನೆಯಲ್ಲಿ ಇರುವವರೆಗೂಈ ಕಾರು ನಿಮ್ಮದು. ನೀವು ಎಲ್ಲಿಗೆ ಹೋಗಬೇಕೋ ಅಲ್ಲಿಗೆ ಈ ಡ್ರೈವರ್ರು ನಿಮ್ಮನ್ನು ಕರೆದೊಯ್ಯುತ್ತಾನೆ."

" ಈ ಮನೆಯಲ್ಲಿ ಎಲ್ಲಾ ಅನುಕೂಲಗಳೂ ಇವೆ. ಆದರೆ ಖರ್ಚು ಎಷ್ಟಾಗಿ ಹೋಗುತ್ತೋ...?" ಖರ್ಚು ಮಾಡಲು ಆಗಲೂ ನನ್ನಲ್ಲಿ ಹೆಚ್ಚಿಗೆ ಹಣವಿರಲಿಲ್ಲ. ಈಗಲೂ ಹಣವಿಲ್ಲ. ಆದರೆ ಆಗ ನಾನು ಹೆದರಿದಂತೆ ಈಗ ಹೆದರಬೇಕಾಗಿಲ್ಲ. ಮನೋಜ, ಮುರಳಿ ನನ್ನ ಸಹಾಯಕರೀಗಿದ್ದಾರೆ..

ಹೀಗೆ ಎಲ್ಲಾ ಸೌಕರ್ಯಗಳನ್ನು ಒದಗಿಸುವ ಈತ ಯಾರು? ಕಾರಣ ಏನು?ಎಂದು ಮುರಳಿ ಮನೋಜ ಚಿಂತಿಸುತ್ತಿದ್ದರು. ಆಶ್ಚರ್ಯದ ಜೊತೆಗೆ ಅನುಮಾನವೂ ಬೆರೆತಿತ್ತು. ಗೀತಾ ರಾಧಿಕಾಳ ಕಡೆ ನೋಡಿದ್ದರು.

"ಅಬ್ಬಾ...ಈ ಊರಿನಲ್ಲೂ ಇಂಥ ಪುಣ್ಯಾತ್ಮ ಒಬ್ಬರಿದಾರಲ್ಲ. ನಡೆದುಕೊಂಡು ಅಲೆಯುವುದು ತಪ್ಪಿತು" ಅಂತ ರಾಧಿಕಾ ಗೀತಾರಿಗೆ ಸಂತಸವಾಗಿತ್ತು.

ರಂಗನಾಥ , ಮುರಳಿ, ಮನೋಜ ಶ್ರಾದ್ಧ ಮಾಡಿಸುವವರ ಮನೆಯ ಹತ್ತಿರ ಇಳಿದರು.ಮುರಳಿಯ ತಾಯಿ ಸಮೀಪದಲ್ಲಿದ್ದ ದೇವಸ್ಥಾನದ ಕಟ್ಟೆಯ ಮೇಲೆ ಕುಳಿದರು.ರಾಧಿಕಾ, ಗೀತಾ, ಮೋಹನ

, ಕಡಲ ತೀರಕ್ಕೆ ಹೋದರು ಶ್ರಾದ್ಧ ಮಾಡುಸುವವರು ಮನೋಜ ರಂಗನಾಥರಿಗೆ ಕಮಡಿಬಟ್ಟೆ ಉಡಲು ಕೊಟ್ಟು ಕಡಲ ತೀರಕ್ಕೆ ಬರುವಂತೆ ತಿಳಿಸಿದರು.

ತರ್ಪಣ ಕೊಡಿಸಿ, ಪಿಂಡ ಹಾಕಿಸಿ, ಧಾನಧರ್ಮಗಳನ್ನು ಮಾಡಿಸಿ, ವಿಧಿವತ್ತಾಗಿ ಏನೇನು ಮಾಡಬೇಕೋ, ಎಲ್ಲವನ್ನು ನಡೆಸಿದರು. ನಿರ್ಮಲಳ ಆತ್ಮವನ್ನು ಋಣ ಮುಕ್ತಳಾಲ್ಗಾಗಿ ಮಾಡಿದರು. ಎಲ್ಲರನ್ನು ತಮೆಮ ಮನೆಗೇ ಕರೆದುಕೊಂಡು ಹೋಗಿ ಊಟ ಹಾಗಿದರು. ರಂಗನಾಥ ಆತನಿಗೆ ಹಣ ಎಣಿಸಿಕೊಟ್ಟಾಗ, ಮನೋಜ ಮುರಳಿಯ ಮುಖ ನೋಡಿದ ಮುರಳಿ ಅವನ ಕಣ್ಣು ತಪ್ಪಿಸಿದ.

ಊಟದ ನಂತರ ಎಲ್ಲರೂ ಕಡನ ತೀರದಲ್ಲಿ ಸ್ವಲ್ಪ ಹೊತ್ತು ತಿರುಗಾಡಿ ಮತ್ತೆ ರಾಜಣ್ಣನ ಮನೆಗೆ ಬಂದರು. ಮನೋಜ ಮೌನವಾಗಿದ್ದ. ಆದರೂ ಮಾವನ ಬಗ್ಗೆಗೆಯೇ ಚಿಂತಿಸುತ್ತಿದ್ದ. ರಂಗನಾಥ ಮನೋಜನ ಮೌನಕ್ಕೆ ಬೇರೆ ಅರ್ಥಂವನ್ನೇ ಕಟ್ಟಚಿಸಿದ್ದ. ಮುರಳಿ ಜ್ಞಾನಿಯಂತೆ ಇಬ್ಬರ ಮನಸ್ಸನ್ನು ಕಅರಿತವನಂತೆ ಸುಮ್ಮನಿದ್ದ.

ಮೇಲಿನ ಕೋಣೆಗೆ ಎಲ್ಲರೂ ಹತ್ತುವಾಗಿ, ಮುರಳಿಯ ತಾಯಿ ಕೆಳಗೇ ಉಳಿದರು."ನಾನು ಮನೆಯಾಕೆಯ ಹತ್ತಿರ ಸ್ವಲ್ಪ ಮಾತ್ನಾಡಿ ಬರ್ತೀವಿ" ಎಂದರು . ರಾಧಿಕಾ ಕುತೂಹಲದಿಂದ ಗೀತಳೊಂದಿಗೆ ತಾನೂ ಉಳಿದಳು.

ಅದೇ ತಾನೇ ಊಟ ಮುಗಿಸಿ ಮಲಗಿದ್ದ ಆಕೆ ಇವರುಗಳನ್ನು ಕಂಡು ಎದ್ದು ಕೂತು. ಬನ್ನಿ ಎಂದುರು ವಿಶ್ವಾಸದಿಂದ.ಅಲ್ಲಿ ಹಾಸಿದ್ದ ಜಮಖಾನರ ಮೇಲೆ ಇವರುಗಳು ಕೂತುರ. ಆಕೆ ಎಲ್ಲರ ಹತ್ತಿರ ವೂ ಚೆನ್ನಾಗಿ ಮಾತನಾಡಿದರು. ನಿಮ್ಮ ಹೆಸರೇನು? ಏನು ಮಾಡ್ತಿದೀರಿ ಎಂದು ಗೀತಾ ರಾಧಿಕಾರನ್ನುದ್ದೇಶಿಸಿ ಕೇಳಿದರು.

"ನಾವಿಬ್ಬರೂ ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿದೀನಿ. ನಾನೂ ಗೀತಾ...ನಾನು ರಾದಿಕಾ...ಇಬ್ಬರು ಪರಿಚಯಿಸಿಕೊಂಡರು.

"ತುಂಬಾ ಸಂತೋಷ ದೇವರು ನಿಮ್ಮಿಬ್ಬರಿಗೂ ಒಳ್ಳೆಯದನ್ನು ಮಾಡಲಿ" ಆಕೆ ಬಾಯ್ತುಂಬಾ ಹಾರೈಸಿದರು. ಗೋಕರ್ಣದ ಸ್ಥಳ ಮಾಹಾತ್ಮ ಪುರಾಣ, ಇತಿಹಾಸ ಬಂದು ಹೋಗುವವರ ಬಗ್ಗೆ , ತನಗೆ ತಿಳಿದುದನ್ನೆಲ್ಲ ಆಕೆ ವರ್ಣಿಸಿ ಹೇಳಿದರು. ಆಕೆಯೊಡನೆ ಆಡಿದ್ದ ಮಾತು ಹಿತವಾಗಿತ್ತು. ಮುರಳಿಯ ತಾಯಿ, ಗೀತಾನ ಕಡೆ ಕೈಮಾಡಿ, ಇವಳು ನನ್ನ ತಮ್ಮನ ಮಗಳು,ಮುಂದೆ ನನ್ನ ಸೊಸೆಯಾಗುವವಳು.ಅವಳು , ಇವಳ ಸ್ನೇಹಿತೆ. ಇವಳನ್ನು ಮದುವೆಯಾಗುವ ಹುಡುಗನೂ ಆಶೀರ್ವಾದ ಮಾಡಬೇಕು."

"ಧಾರಾಳವಾಗಿ , ಇಲ್ಲಿ ಬಂದು ಹೋಗುವವರೆಲ್ಲಾ ನಮ್ಮವರೇ...ನನ್ನ ಆಶೀರ್ವಾದ ಸದಾ ಅವರ ತಲೆಯ ಮೇಲಿರುತ್ತೆ....ಇಲ್ಲಿ ನಾವಿಬ್ಬರೇ ಇರುವುದು. ಆಗ ಈಗ ದೇವರಿಚ್ಚೆ ಇದ್ದಾಗ,ನಿಮ್ಮಂತಹ ಅತಿಥಿಗಳಿಗೆ ಸತ್ಕರ ಮಾಡಿ ಪುಣ್ಯಗಳಿಸಲು ಪ್ರಯತ್ನಿಸುತ್ತೇವೆ. ನಾವು ಪಾಸಿಗಳು. ಈ ಜನ್ಮದಲ್ಲಿ ನಮಗೆ ಮಕ್ಕಳಾಗಿಲಿಲ. ಮಕ್ಕಳೊಂದಿಗರು, ನಿಮ್ಮಂಥವರನ್ನು ಕಂಡರೇ ನಾವು ಧನ್ಯರಾಗುತ್ತೇವೆ."

ಇದು ಬಹಳ ದೊಡ್ಡ ಮಾತು. ಯಾವಿದೋ ಋಣಾನುಬಂಧದಿಂದ ನಾವು ಇಲ್ಲಿ ಬೇಟಿಯಾಗಿದ್ದೇವೆ. ನಾವಿರುವ ಕ್ಷೇತ್ರ ಎಂಥಾಮಹತ್ವದ್ದು. ಇಲ್ಲಿಗೆ ಬಂದದ್ದು.. ನಮ್ಮ ಪೂರ್ವಜನ್ಮದ ಪುಣ್ಯ ಎನ್ನಬೇಕು. ನಿಮ್ಮಂಥೋರ ದರ್ಶನವಾಯಿತು.

ರಾಧಿಕಾ ಗೀತ ಮುಖ ಮುಖ ನೋಡಿಕೊಂಡರು. ಗೀತಳಿಗೆ ಅಚ್ಚರಿಯಾಗಿತ್ತೂ ಅತ್ತೆ ಏಕೆ ಇಷ್ಟು ಮಾತನಾಡ್ತಿದಾರೆ ಅಂತ.

ಎಲ್ಲರ ಭವಿಷ್ಯವನ್ನೂ ಭಗವಂತ ರೂಪಿಸಿಯೇ ಇಲ್ಲಿಗೆ ಕಳಿಸ್ತಾನೆ ನಿಜ. ಆದರೂ. ಹೋಗಲಿಬಿಡಿ ಅಂದ್ಹಾಗೇ ನಮ್ಮಯಜಮಾನರು ಕೈ ನೋಡಿ, ಪ್ರಶ್ನೇ ಕೇಳಿ ಭವಿಷ್ಯ ಹೇಳ್ತಾರೆ. ಯಾರಿಗಾದರೂ ಆಸಕ್ತಿ ಇದ್ದರೆ ಕೇಳಿ ತಿಳಿದುಕೊಳ್ಳಬಹುದು. ಆಕೆ ಮಾತು ಬದಲಾಯಿಸಿದರು.

ಮುರಳಿಯ ತಾಯಿಗೆ ಆ ಮಾತಿನಲ್ಲಿ ಆಸಕ್ತಿ ಹುಟ್ಟಲಿಲ್ಲ. ರಾಧಿಕಾ ಮಾತ್ರ ಸ್ನೇಹಿತೆಯ ಕಡೆ ನೋಡಿ ಕಣ್ಣು ಸನ್ನೆ ಮಾಡಿದಳು.

"ನಾವಿನ್ನೂ ಬರ್ತಿನಿ. ನೀವು ಮಲಗಿ ವಿಶ್ರಾಂತಿ ತಗೋತಿದ್ರೋ ಏನೋ ನಮ್ಮಿಂದತೊಂದರೆಯಾಯ್ತು."

ಪರವಾಗಿಲ್ಲಮ್ಮಾ ಇದರಲ್ಲೇನು ತೊಂದರೆ? ನಿಮ್ಮಂತಹವರು ಬಂದು ಹೋಗಿ ಮಾಡದಿದ್ದರೆ , ನವಮಂತಹವರು ಬದುಕುವುದಾದರೂ ಹೇಗೆ? ಕಾಲ ಕಳೆಯುವುದು ಹೇಗೆ? ನಮಗೂ ಇದರಿಂದ ಹೊತ್ತು ಹೋಗುತ್ತೆ"

"ಬೆಂಗಳೂರಿಗೆ ಬನ್ನಿ. ನಮ್ಮ ಮನೇಲಿ ನಾಲ್ಕು ದಿನ ಇದ್ದೋರಂತೆ"

" ಈ ಮಕ್ಕಳ ಮದುವೆಗೆ ಲಗ್ನ ಪತ್ರಿಕೆ ಕಳಿಸಿ. ಖಂಡಿತಾ ಬರ್ತಿವಿ. ಗೀತಾ ರಾಧಿಕಾ ನಾಚಿದಂತೆ ಮಾಡಿ ಮುಗಳ್ನಕ್ಕರು.

"ಆಯ್ತು. ನಿಮ್ಮನ್ನು ಖಂಡಿತಾ, ಕರೆಯುತ್ತೇವೆ." ವಿಶ್ವಾಸದಿಂದ ನುಡಿದಾಗ, ಆಕೆ. ನೀವೆಲ್ಲಾ ಕಹೋಗಿ ವಿಶ್ರಾಂತಿ ತಗೊಳ್ಳಿ, ಕಾಫಿ ಬೆರಸಿ ಕಳಿಸ್ತೀವಿ"ಎಂದರು.

ಪಾಪ. ಸುಮ್ಮನೇ ತೊಂದರೆ ಏಕೆ ಕೊಡಬೇಕು? ಈ ಹುಡುಗಿಯರ ಕೈಲಿ ಕಳಿಸಿ. ನಾನಿನ್ನು ಬರ್ತಿವಿ ಎಂದು ಆಕೆ ಮಹಡಿ ಹತ್ತಿದರು. ರಾಧಿಕಾ ಗೀತ, ಮನೆಯ ಅಂದ

ಚೆಂದಗಳನ್ನು ನೋಡಿ, ವರ್ಣಿಸುತ್ತಾ ಆನಂದಿಸುತ್ತಾ ಮಾತಾಡಿಕೊಳ್ಳು ತ್ತಿದ್ದರು. ಆಕೆ ಕಾಫಿಯ ಹಬಟ್ಟಲುಗಳನ್ನು ಒಂದು ತಟ್ಟೆಯಲ್ಲಿ ಇಟ್ಟು ಕರೆದರು. ಗೀತಾ ರಾಧಿಕಾ ಒಳಬಂದರು. ಗೀತ ಕಾಫಿಯ ತಟ್ಟೆಯನ್ನು ಕೈಗಿತ್ತಿಕೊಂಡಳು. ಆಕೆ ರಾಧಿಕೆಯನ್ನೇ ಮೆಚ್ಚುಗೆಯಿಂದ ನೋಡಿದರು. ಅವಳಿಗೆ ಹೆಮ್ಮೆ ಎನಿಸಿತ್ತು. ಎಲ್ಲರೂ ಆಕೆಯ ಗುಣಗಾನ ಮಾಡುತ್ತಾ ಕಾಫಿ ಕುಡಿದರು.

ಮಾರನೇ ದಿನ ಎಲ್ಲರೂ, ಮತ್ತೊಮ್ಮೆ ಗೋಕರ್ಣೇಶ್ವರನ ದರ್ಶನ ಮಾಡಿ, ಆತ್ಮಲಿಂಗಕ್ಕೆ ಅನನ್ಯ ಭಕ್ತಿಯಿಂದ ನಮಸ್ಕರಿಸಿ, ಕಡಲ ತೀರಕ್ಕೆ ನಡೆದರು. ಗಂಟೆ ಗಟ್ಟಲೆ ಅಲ್ಲಿ ಸುತ್ತಾಡಿದರು.

ಗೋಕರ್ಣದ ನಿಸರ್ಗ ಸೌಂದರ್ಯ, ಕಡಲ ಮೊರತ, ರಾಧಿಕಾಳ ದುಃಖವನ್ನು ಬಹುಪಾಲು ಕಮ್ಮಿ ಮಾಡಿತ್ತು. ತಾನು ಇಲ್ಲಿಗೆ ಏತಕ್ಕೆ ಬಂದಿದೀನಿ ಎನ್ನುವುದನ್ನೇ ಮರೆತವಳಂತೆ ವಿಹರಿಸಿದಳು. ಸಮುದ್ರದ ಅಲೆಗಳೂಡನೆ ಅಲೆಯಾಗಿ ಸರಿದಾಡುವ ಆಸೆಯಾಗಿತ್ತು ಅವಳಿಗೆ. ಮುಂದೆ ಮುಂದೆ ಹೋಗುತ್ತಿದ್ದ ಅವಳನ್ನು ಗೀತ ತಡೆದಳು.

"ಅಲೆಗಳನ್ನು ದಾಟಿ ಮುಂದೆ ಹೋಗುವುದಂತೂ ಕೈಲಾಗದ ಮಾತು. ಸುಮ್ಮನೇ ಇಲ್ಲೇ ದಡದಲ್ಲಿ ನಿಂತು ನೋಡು ಅದರಲ್ಲೇ ಮಜ" ರಾಧಿಕಾ ಸುಮ್ಮನೇ ನಕ್ಕಳು

" ಅಡಗೂಲಬ್ಬೆಯ ತರಹ ದಡದಲ್ಲಿ ನಿಂತು ನೋಡಿದರೆ ಏನು ಮಜಾ? ಅಲೆ ಅಲೆಯೇ...ಅದರ ಏರಿಳಿತದೊಡನೆ ಒಂದಾಗಿ ಎಂಜಾಯ್ ಎಮಾಡದಿದ್ದರೆ ಅದರಲ್ಲೇನು ಮಜಾ?"ಎಂದೆನಿಸಿತ್ತು. ಆದರೆ ಗೀತಳೊಡನೆ ಆಡಲಿಲ್ಲ.

ಮನೋಜ ವಿಶಾಲವಾದ ಸಾಗರದ, ಬಲವಾದ ಅಲೆಗಳನ್ನೇ ನೋಡುತ್ತಿದ್ದ. ಈ ಅಗಾಧ ಸಾಗರಕ್ಕೆ ಅಗಾಧ ಆಕಾಂಕ್ಷೆ, ಅಲೆಗಳನ್ನು ಮತ್ತೆ ಮತ್ತೆ ದಡವನ್ನು ಮುಚ್ಚಿ ಬರಲು ಕಳಿಸುತ್ತಲೇ ಇದೆ. ಅವು ಪ್ರಯತ್ನವನನಲು ಮಾಡುತ್ತಲೇ ಇವೆ. ಈ ಆಕಾಂಕ್ಷೆ, ಈ ಆಸೆ ಮನವನಲ್ಲಿರಬೆಕು. ಈ ಸಂದೇಶ, ಮಾವನನ್ನು ತಲುಪಬೇಕು. ಆಗಲೇ ಎಲ್ಲರ ಉದ್ದೇಶ ಸಫಲವಾಗುತ್ತದೆ. ಅಲೆಗಳ ಅಲೆದಾಟವನ್ನು ನೋಡಿದಷ್ಟು ಅವನ ಮನಸ್ಸು ವಿಕಸಿತವಾಗುತ್ತಿತ್ತು. ಆರಳಿದ ಹೂವಾಗಿತ್ತು. ಬೆಂಗಳೂರಿನಂತಹ ಜನ ಜಂಗುಳಿಯ ಪ್ರದೇಶವನ್ನು ತ್ಯಜಿಸಿ, ಪ್ರಕೃತಿಯ ಮಡಿಲಲ್ಲೇ ಸದಾ ಇರುವಂತಿ ದ್ದರೆ ಎಷ್ಟು ಚೆನ್ನ ಎಂದು ಚಿಂತಿಸುತ್ತಿದ್ದ.

ಗೀತಾ, ಮುರಳಿ, ಅಕ್ಕಪಕ್ಕದಲ್ಲಿ ನಿಂತು. ತಮ್ಮ ತಮ್ಮಲ್ಲೇ ಏನೋ ಮಾತಾಡಿ ಕೊಂಡು ನಗುತತಿದ್ದರು. ರಾಧಿಕಾಗೆ ಅವರಿಬ್ಬರ ನಗುವಿನ ಅರ್ಥವಾಗಿರಲಿಲ್ಲ. ಏನೋ ಒಂದು ಆಸೆಯಿಂದ ಮನೋಜನ ಕಡೆ ನೋಡಿದಳು. ಅವನು ಸಾಗರದ ಅಲೆಗಳ ಸಂದೇಶವನ್ನು ಸವಿಯುವಿದರಲ್ಲಿ ಮಗ್ನವಾಗಿದ್ದ ಥೂ ಇವನೊಬ್ಬ... ಅನ್‌ರ್‍ಯೋಮಾಂಟಿಕ್ ಪೇಲೋ ಎಂದು ತನ್ನಲ್ಲೇ ಬೈದುಕೊಂಡಳು. ಸ್ವಲ್ಪ ದೂರದಲ್ಲಿ ಮೋಹನ ಒಬ್ಬನೇ ಅಲೆಗಳೊಡನೆ ಚೆಲ್ಲಾಟವಾಡುತ್ತಿದ್ದುದನ್ನು ಕಂಡು ಅವನ ಬಳಿಗೆ ಬಂದಳು. ಮೋಹನ ಅವಳೆಡೆ ನೋಡಿ ಕಿರುನಗೆ ಸೂಸಿದ.

ಎಷ್ಟು ಹೊತ್ತು ಕೂತಿದ್ದರೂ, ಮನ ತಮಿಯುವುದಿಲ್ಲವೆಂದು ಎಲ್ಲರಿಗೂ ತಿಳಿದಿತ್ತು. ಆದರೆ ಹೊಟ್ಟೆಯ ಚಿಂತೆ ಎಲ್ಲಿನ್ನೂ ಹೊಡೆದು ಎಬ್ಬಿಸಿತ್ತು. ಎಲ್ಲರೂ ಎದ್ದು ವಾಪಸ್ಸು ಬಂದರು. ಮನೆಯಾತ ರಾಜಣ್ಣನನ್ನು ಕಂಡ ಕೂಟಲೇ ರಾಧಿಕಾಗೆ

ತನ್ನ ಭವಿಷ್ಯವನ್ನು ತಿಳಿದು ಕೊಳ್ಳುವ ಆಸೆಯಾಯಿತು. ಗೀತಾಳ ಮೊಣಕೈ ತಿವಿದಳು.

" ನಮ್ಮ ಫ್ಯೂಚರ್ ತಿಳಿದುಕೊಳ್ಳೋಣ್ವಾ?" ಗೀತ ಒಪ್ಪಿದಳು ಚಿಕ್ಕವರೆಲ್ಲರೂ ಆತನ ಬಳಿ ಬಂದು ಕುಳಿತರು. ರಂಗನಾಥನಿಗೆ ಏನೋ ದಿಗಿಲು. ಅಲ್ಲಿಯೇ ಕುಳಿತಿರಲು ಮನಸ್ಸಾಗದೇ ತನ್ನ ಪಾಡಿಗೆ ತಾನು ಮೇಲಿನ ಕೋಣೆಗೆ ಹೊರಟು ಹೋದ. ಮುರಳಿಯ ತಾಯಿ ಆ ಸಕ್ತಿಯಿಂದ ಅಲ್ಲೇ ಉಳಿದರು. ಆತ ನಗುನಗುತ್ತಾ ಎಲ್ಲರನ್ನು ಮಾತನಾಡಿಸಿದರು. ಮೊದಲು ಮೋಹನ ತನ್ನ ಬಗ್ಗೆ ಪ್ರಶ್ನೇ ಕೇಳಿದ. ಆತ ಮನದಲ್ಲೇ ಏನೋ ಗುಣಕಾರ ಹಾಕಿ,

ನಿನ್ನ ತಂದೆ ಇಲ್ಲ. ತಾಯಿ ಇದಾರೆ. ಹಿರಿಯ ಅಣ್ಣ ಒಬ್ಬನಿದಾನೆ. ಇಂಜನಿಯರಿಂಗ್ ಓದ್ತಾ ಇದೀಯ. ಮುಂದೆ ಬಿಸಿನೆಸ್ ಮಾಡ್ತೀಯ. ಮೋಹನ ನಗುತ್ತಾ ಎಲ್ಲರ ಮುಖ ನೋಡಿದ. ಆಮೇಲೆ ರಾಧಿಕಾ ಪ್ರಶ್ನೇ ಕೇಳಿದಳು.

ನಿನಗೆ ತಾಯಿಯಿಲ್ಲ. ತಂದೆ ಮಾತ್ರ ಇದಾರೆ. ನೀನು ವೈದ್ಯಶಾಸ್ತ್ರವನ್ನು ಅಭ್ಯಾಸ ಮಾಡಿದೀಯ. ಇನ್ನು ಎರಡು ತಿಂಗಳಿನೊಳಗದೆ ನಿನ್ನ ವಿವಾಹವಾಗುತ್ತದೆ. ರಾಧಿಕಾಳ ಮುಖ ಕೆಂಪೇರಿತು. ನಾಚುತ್ತಾ ಎಲ್ಲರನ್ನು ನೋಡಿದಳು. ಮನೋಜ ಬೆವೆತು ಹೋದ.

ಗೀತಾನೀನೂ ಕೇಳೇ...ರಾಧಿಕಾ ಬಲವಂತ ಮಾಡಿದಳು.

" ನೀನು ಒಳ್ಳೇಯ ಗೃಹಣಿಯಾಗ್ತೀಯ. ಒಳ್ಳೆ ಕೀರ್ತಿ ತರ್ತೀಯ. ಹುಟ್ಟಿದ ಮನೆಗೂ, ಕಸೇರಿದ ಮನೆಗೂ. ನೆಮ್ಮದಿಯ ಜೀವನ ನಿನ್ನದು. ಗೀತಾ ಮುರಳಿಯ ಮುಖವನ್ನು ಜಂಭದಿಂದ ನೋಡಿದಳು. ಮುರಳಿ ಶಾಭಾಸ್ ಎಂದ ಮೆಲ್ಲನೆ.ಅವಳು ನಕ್ಕಳು.

ಇನ್ನುಳಿದವರು, ಮುರಳಿ, ಮನೋಜ್... ಮನೋಜ ಸುಮ್ಮನೇ ಕೂತೂಹಲ ಕ್ಕೆಂಬಂತೆ ತನ್ನ ಬಗ್ಗೆ ಪ್ರಶ್ನೆ ಕೇಳಿದ.

"ನಿನಗೆ ತಂದೆ ತಾಯಿ ಇಬ್ಬರೂ ಇಲ್ಲ. ನಿನ್ನ ಹತ್ತಿರದ ಬಂದು ಒಬ್ಬರ ಜೊತೆ ಇದೀಯ. ವಿದ್ಯಾಭ್ಯಾಸ ವೈದ್ಯ ಶಾಸ್ತ್ರಕ್ಕೆ ಸಂಬಂಧಿಸಿದ್ದು...ಯಾವ ಪರಶ್ರಮವೂ ಇಲ್ಲದೇ, ವಿದ್ಯೆಯಲ್ಲಿ ಮುಂದೆ ಬರ್ತೀಯ. ಮನೋಜ ಮುಗಳ್ನಕ್ಕೆ.

ಉಳಿದವನು ಮುರಳಿ....ಅವನು ಏನೇ ಆಗಲಿ ತನ್ನ ಭವಿಷ್ಯ ತಿಳಿದು ಕೊಳ್ಳಲು ಇಷ್ಟವಿಲ್ಲವೆಂದು ಹೇಳಿಬಿಟ್ಟ. ಯಾರ ಮಾತಿಗೂ ಸಮ್ಮತಿ ಕೊಡಲಿಲ್ಲ., ಎಲ್ಲರೂ ತಮ್ಮ ತಮ್ಮ ಭವಿಷ್ಯದ ಬಗ್ಗೆ ಚರ್ಚೆಸುತ್ತಾ ಮಹಡಿಯನ್ನೇರಿದರು ರಂಗನಾಥ ಯಾರನ್ನೂ ಆ ಬಗ್ಗೆ ವಿಚಾರಿಸಲಿಲ್ಲ. ಮುರಳಿಯ ತಾಯಿ ಮಾತ್ರ ಎಲ್ಲರಿಗೂ ಹೇಳಿದ್ದನ್ನ ಕೇಳಿ ಆಶ್ಚರ್ಯಗೊಂಡಳು. ಆತನನ್ನು ಹೊಗಳಿದರು.

ಆ ಸಾಯಂಕಾಲ ಮತ್ತೊಮ್ಮೆ, ಸಮುದ್ರದ ದಡದಲ್ಲಿ ಎಲ್ಲರೂ ಕಾಲ ಕಳೆದರು ಗಂಡಸರು ಕೆಲವರು, ಈಜಾಡುತ್ತಿದ್ದುದನ್ನು ಕಂಡ ರಂಗನಾಥನಿಗೆ ತಾನೂ ಈಜುವ ಆಸೆಯಾಯಿತು. ಸಮುದ್ರಕ್ಕೆ ಧುಮುಕಿದ. ಎಲ್ಲರಿಗೂ ಗಾಭರಿ. ಹೋ ಎಂದರು ದಡದಲ್ಲಿದ್ದವರೆಲ್ಲಾ. ಹತ್ತು ನಿಮಿಶ ಚೆನ್ನಾಗಿ ಈ ಜಾಡಿ ಮೇಲೆ ಬಂದ. ಮುರಳಿ ಮನೋಜರು ತಾವೂ ಸಮುದ್ರಕ್ಕೆ ಇಳಿಯುವ ಆಸೆಯಾಯಿತು. ಆದರೆ ಯಾರೂ ಒಪ್ಪಲಿಲ್ಲ. ಬೇಡ ಬೇಡ...ಎಂದೇ ಕಿರುಚಿಕೊಂಡರು.

ಮನೋಜನಿಗೆ ಅಚ್ಚರಿ. ಮಾವ ಎಂದೂ ತನಗೆ ಈಜು ಬರುತ್ತದೆ ಎಂದು

ಹೇಳಿಕೊಂಡಿರಲಿಲ್ಲ. ಅದೇ ಮಾತನನಲು ಮುರಳಿಯೊಂದಿಗೆ ಹೇಳಿದ. ಮಾವಂಗೆ ಈಜು ಬರುತ್ತೆ ನನಗೆ ಗೊತ್ತೇ ಇರಲಿಲ್ಲ. ಮುರಳಿ ಆಶ್ಚರ್ಯದಿಂದ ಕಣ್ಣರಳಿಸಿದ.

ರಂಗನಾಥನಿಗೆ ಬೆಂಗಳೂರಿನ ಗಡಿಬಿಡಿಯಿಂದ ಪಾರಾಗಿ ತಾವೇಕೆ ಇಲ್ಲೇ ಉಳಿದ ದಿನಗಳನನಲು ಕಳೆಯಬಾರದು ಎನಿಸಿತ್ತು ಆದರೆಅವನ ಕರ್ತವ್ಯ ಮುಗಿದಿರಲಿಲ್ಲ.

ರಾತ್ರಿಯ ಊಟ ಮುಗಿಸಿ, ಎಲ್ಲರೂ ಬೆಂಗಳೂರಿಗೆ ವಾಪಸ್ಸು ಹೊರಟರು. ಗಂಡ ಹೆಂಡತಿ ನಗುನಗುತ್ತಾ ಎಲ್ಲರನ್ನೂ ಬೀಳ್ಕೊಟ್ಟರು. ಆತ ದಿನಕ್ಕೆ ಇಪ್ಪತ್ತೈದು ರೂಪಾಯಿ ಒಬ್ಬರಿಗೆ ಎನ್ನುವ ಲೆಖ್ಖದಲ್ಲಿ ಎರಡು ದಿನಕ್ಕೆ ಏಳು ಜನರಿಗೆ ಎರಡು ದಿನದ ಎಲ್ಲಾ ಖರ್ಚುಗಳನನಲೂ ಸೇರಿಸಿ , ಏಳ್ನೂರು ರುಪಾಯಿಗಳನ್ನು ತೆಗೆದು ಕೊಂಡರು. ಎಲ್ಲಾ ಅನುಕೂಲಗಳನ್ನು ಒದಗಿಸಿಕೊಟ್ಟು ಸಿಕ್ಕಾಬಟ್ಟೆ ಕೇಳುವರೇನೋ ಎಂದು ಗಾಭರಿ ಗೊಂಡಿದ್ದ ರಂಗನಾಥನಿಗೆ ನೆಮ್ಮದಿಯಾಯ್ತು. ವಯಸ್ಸಾದ ಗಂಡ ಹೆಂಡತಿ. ಅವರಿಬ್ಬರ ಹೊರತು ಇನ್ಯಾರಿಲ್ಲ. ತಮ್ಮ ಖರ್ಚಿಗಾಗುವಷ್ಟು ಮಾತ್ರ ಸಂಪಾದಿಸುತ್ತಾರೆನೋ, ಅತೆ ಆಸೆ ಇರಲಾರದು, ಅವರೇ ಅನುಕೂಲವಾಗಿರುವಂತೆ ಅನ್ನಿಸುತ್ತದೆ. ಏನೇ ಇರಲಿ, ಇದು ಒಂದು ಅಚ್ಚಳಿಯದೇ ಉಳಿಯೂವ ನೆನಪು ಎಂದು ತನ್ನಲ್ಲೇ ಮುದಗೊಂಡ. ಕೈ ಮುಗಿದು ವಿಶ್ವಾಸದಿಂದ ನಮಸ್ಕರಿಸಿದ.

ಮಾರನೆ ದಿನ ಬೆಳಿಗ್ಗೆ ಬೆಂಗಳೂರನ್ನು ತಲುಪಿಸಿದರು. ಎಲ್ಲರೂ ಅವರವರ ಮನೆಗೇ ಹೋದರು. ರಾಧಿಕಾ ರಂಗನಾಥನ ಮನೆಯಲ್ಲಿ ಉಳಿದಳು. ಮನೆಗೆ ಬಂದ ಕೂಡಲೇ ಅವಳಿಗೆ ತಾಯಿಯ ನೆನಪು ಮರುಕಳಿಸಿತು. ಮನೋಜ ಸ್ನಾನ ಮಾಡಿ. ಬೇಗ ಬೇಗ ತಿಂಡಿ ಕಾಫಿ ಮಾಡಿ, ಕಾಲೇಜಿಗೆ ಹೊರಡಲು ಸಿದ್ದವಾದ.

"ನೀನೂ ರೆಡಿಯಾಗು. ಹೋಗೂವಂತೆ" ರಂಗನಾಥ ಹೇಳಿದಾಗ ರಾಧಿಕಾ ಆಕಳಿಸಿದಳು. ನನಗೆ ಸುಸ್ತಾಗಿದೆ. ನಾನು ರೆಸ್ಟ್ ತಗೋಬೇಕು.

ಮಗಳು ಸುಕುಮಾರಿಯಂತೆ ಬೆಳೆದಿದ್ದಾಳೆ." ಎಂದು ಕೊಂಡು ನಗುಬಂತು "ತಥ್ ಸೋಮಾರಿ" ಮನೋಜ ಬೈದುಕೊಂಡು ತನ್ನ ಪಾಡಿಗೆ ತಾನು ಹೊರಟು ಹೋದ.

ರಾಧಿಕಾ ಸ್ನಾನಮಾಡಿ, ತಿಂಡಿ ತಿಂದು ಮತ್ತೆ ಮಲಗಿ ನಿದ್ರಿಸಿದಳು.ಸ್ವಲ್ಪ ಹೊತ್ತಿನ ನಂತರ, ಎದ್ದು ರಂಗನಾಥನ ಬಳಿಗೆ ಬಂದಳು. ರಂಗನಾಥ ತೂಕಡಿಸುತ್ತಿದ್ದ. ರಾಧಿಕಾ ಅಂಕಲ್ ಎಂದು ಮಾತಿಗೆ ಪ್ರಾರಂಭೀಸಿ, ನಿರಾಳವಾದ. ಏನಮ್ಮಾ ಈಗ ಹೇಗಿದೀಯ ? ಸುಸ್ತು ಕಡಿಮೆ ಆಯ್ತಾ? ನಗುತ್ತಾ ಕೇಳಿದ.

ಹೂಂ. ಎಂದಳು ಮೈಮುರಿಯುತ್ತಾ. ಅಲ್ಲೇ ಪಕ್ಕದಲ್ಲಿದ್ದ ಕುರ್ಚಿಯ ಮೇಲೆ ಕುಳಿತಳು.ರಂಗನಾತ ಏನೋ ಯೋಚಿಸಿ.

"ಮನೋಜನ ಬಗ್ಗೆ ನಿನ್ನ ಅನಿಸಿಕೆ ಏನು?"ಕೇಳಿದ.

ಹುಂ...ಒಳ್ಳೆಯವನು ಅಂತ ಅನ್ನಿಸುತ್ತೆ...ವಯ್ಯಾರದಿಂದ ಹೇಳಿದಳು.

ಅಷ್ಟೇನಾ....?

ಹುಂ...ಅಷ್ಟೇ ಯಾಕೆ?

ಯಾಕೆ?ಅವನನ್ನು ಮದುವೆಯಾಗ್ತೀಯಾ ಹಾಗಾದ್ರೆ?"ರಾಧಿಕಾ ಕೆಂಪಾದಳು.

ಮದುವೆ? ಇಷ್ಟು ಬೇಗ? ನಾನು ಅದರ ಬಗ್ಗೆ ಯೋಚಿಸಿಯೇ ಇಲ್ಲ...ಹಾಗೆ ಹೇಳಿದರೂ, ಅವಳ ಆಂತರ್ಯದಲ್ಲಿ ಏನೋ ಬಂದು ಮಧುರವಾದ ಭಾವನೆಗಳ

ಅಲೆಗಲು.

ಈಗ, ನಾನು ಯೋಚಿಸಲೇ ಬೇಕಾಗಿದೆ... ನೀನು ಅವನನ್ನು ಮೆಚ್ಚಿದ್ದರೆ ಹೇಳಿ ಬಿಡು. ಅಥವಾ ಬೇರೆ ಯಾರಾದರೂ, ನಿನ್ನ ಮನಸ್ಸಿನಲ್ಲಿದ್ದರೆ ಸಂಕೋಚ ಪಡಬೇಡ. ಹೇಳು. ನಿನ್ನ ಮದುವೆ ಮಾಡಿ, ನಿನ್ನ ಮನೆಗೆ ನಿನ್ನನ್ನು ಸೇರಿಸುವ ಜವಾಬ್ದಾರಿ ನನ್ನ ಮೇಲಿದೆ.

"ನನಗೆ, ಮೋಹನ ಮುರಳಿಯನ್ನು ಬಿಟ್ಟರೆ ಬೇರೆ ಯಾರೂ ಗೊತ್ತೇ ಇಲ್ಲ...ರಾಧಿಕಾ ಹೇಳಿದಳು.

" ಸುಮ್ಮನೇ ತಡವರಿಸಬೇಡ. ನಿನ್ನ ಮನಸ್ನಲ್ಲಿ ಏನಿದೆ ಹೇಳಿಬಿಡು. ನಿನ್ನ ಭವಿಷ್ಯ ನಿರ್ಧಾರವಾಗವ ಸಮಯ ಇದ. ನೀನು ಸುಮ್ಮನೇ ನಮ್ಮ ಮನೆಯಲ್ಲಿದ್ದರೆ. ಜನ ಆಡಿಕೊಳ್ಳಬಹುದು....ಆದ್ದರಿಂದ, ನಿನಗೆ ಮನೋಜ ಒಪ್ಪಿಗೆಯಾಗಿದ್ದರೆ... ಆದಷ್ಟು ಬೇಗ ಮದುವೆಗೆ ಏರ್ಪಾಡು ಮಾಡ್ತಿವಿ."

"ಮನೋಜ ಏನಂತಾನೋ? ಒಪ್ತಾನಾ?"ಅವಳಿಗೆ ಒಳಗೊಳಗೇ ಖುಷಿ ಯಾಗಿತ್ತೂ. ಸಂಶಯವೂ ಆಗಿತ್ತು.

"ಅವನನ್ನು ನಾನು ಒಪ್ಪಿಸ್ತಿವಿ. ನಿನ್ನ ತಾಯಿಗೆ ಮನೋಜನ್ನ ಪರಿಚಯ ಮಾಡಿಸಿದ್ಯಾ? ಅವನ ಬಗ್ಗೆ ಹೇಳಿದ್ಯಾ?...ಅವನ ಗುಣ ಸ್ವಭಾವ ....ವಿದ್ಯೆ....ನಡೆವಳಿಕೆ.

ಅವನು ನನ್ನ ಫ್ರೇಂಡ್ ಅಂತ ಮಾತ್ರ ಅಮ್ಮನಿಗೆ ಗೊತ್ತಿತ್ತು. ಮೊದಲು ಅಮ್ಮನಿಗೆ ಅವನನ್ನು ಕಂಡರೆ ಇಷ್ಟವಿರಲಿಲ್ಲ.ಆದರೆ ಸಾಯುವ ಮೊದಲು, ಅಂದರೆ ಹಿಂದಿನ ರಾತ್ರಿ ಮಾತ್ರ...ರಾಧಿಕಾಳ ಗಂಟಲುಬ್ಬಿ ಬಂತು. ಒಂದುಗಳಿಗೆ ತಡೆದು ರಂಗನಾಥನ ಕಡೆ ನೋಡಿದಳು. ರಂಗನಾಥ ಅವಳು ಏನು ನುಡಿದಿರುವಳು ಎಂಬಂತದೆ...ರಾಧಿಕಾಳನ್ನೇ ನೋಡಿದ. ಮೈಯೆಲ್ಲಾ ಬೆವತು ಹೋಗಿತ್ತು...

"ಅಮ್ಮಾ ಏನು ಹೇಲಿದ್ದು ಗೊತ್ತಾ ಅಂಕಲ್...ನೀನೂ ಒಬ್ಬಳೇ ಇರಬೇಕಾದ ಪರಸ್ತಿತಿ ಬಂದರೆ ಮನೋಜನ ಮನೆಯಲ್ಲಿರು...ಅವರಿಬ್ಬರೂ ನಿನ್ನನ್ನ ಚೆನ್ನಾಗಿ ನೋಡ್ಕೋತಾರೆ...ಆ ನಂಬಿಕೆ ನನಗಿದೆ ಎಂದಿದ್ಧಳು. ರಂಗನಾಥ ನಿರಾಳವಾದ ಉಸಿರನ್ನು ಬಿಟ್ಟ. ತಂಗಾಳಿ ಬೀಸಿದ ಅನುಭವವಾಗಿ, ವಾತಾವರಣ ಹಿತವೆನಿಸಿತತ್ತು. ಮಗಳನ್ನೇ ಮತ್ತೆ ಮತ್ತೆ ನೋಡಿದ.

"ಆದ್ದರಿಂದಲೇ ಧೈರ್ಯವಾಗಿ ನಾನು ನಿಮ್ಮ ಮನೇಲಿದೀನಿ."

ರಂಗನಾಥ ಖುಷಿಗೊಂಡ. ಹೌದಾ?ಇನ್ನೇನೇನು ಹೇಳಿದರೂ ನಿಮ್ಮಮ್ಮ ನಿರ್ಮಲ ಇನ್ನೇಸೇಸು ಹೇಳಿರಬಹುದು ಎಂದು ತಿಳಿದುಕೊಳ್ಳುವ ಕುತೂಹಲ ಅವನಿಗೆ.

"ಇನ್ನೇನೂ ಹೇಳಲಿಲ್ಲ. ನಾನೂ ಕೇಳಲಿಲ್ಲ."

ರಂಗನಾಥನ ಕುತೂಹಲ ತಣ್ಣಗಾಯಿತು. ಅಂದರೆ ತಾನು ಯಾರೆಂದು ತಿಳಿಸಿಯೇ ಇಲ್ಲ. ಆದರೆ ಮಗಳಿಗೆ ತಂದೆಯ ಮನೆಯಲ್ಲಿ ರಕ್ಷಣೆ ಸಿಗುತ್ತೆ ಅನ್ನುವ ನಂಬಿಕೆಯಿಂದ ಆ ಸಲಹೆ ನೀಡಿದ್ದಾಳೆ ಎನಿಸಿದಾಗ ಮನಸ್ಸಿಗೆ ಪಿಚ್ಚೆನ್ನಿಸಿತ್ತು. ಆದರೂ ಸಮಾಧಾನಗೊಂಡ. ಯಾವುದೋ ಒಂದು ನೆವದಲ್ಲಿ , ನನ್ನ ಮಗಳು ನನ್ನ ಮನೆ ಸೇರಿದ್ದಾಳೆ. ಆದರೆ...ನಿರ್ಮಲ ಸಾಯಬಾರದಾಗಿತ್ತು ಎನಿಸಿತ್ತು. ಈಗ ಇವಳನ್ನು

ನನ್ನ ಮಗಳಾಗಿ ನನ್ನ ಮನೆಯಲ್ಲಿ ಇಟ್ಟುಕೊಳ್ಳಬೇಕಾದರೆ, ಇವಳ ಮದುವೆ ಮನೋಜನೊಂದಿಗ ನಡೆಯಲೇಬೇಕು. ಅದೂ ಆದಷ್ಟು ಬೇಗ...ಮುಗಿಸಿಬಿಡಬೇಕು...ಮುಂದೆ ಏನೇನಾಗುತ್ತೆ ಅಂತ ಹೇಗೆ ಹೇಳುಕ್ಕಾಗುತ್ತೆ ಎಂಬ ಆತಂಕವೂ ತಲೆದೋರಿತು.ಒಂದಂತೂ ನೆಮ್ಮದಿ ಆಗಿತ್ತು...ನಿರ್ಮಲ ತನ್ನನ್ನು ಕ್ಷಮಿಸಲಿ ಬಿಡಲಿ. ಮಗಳನ್ನು ಸೇರಿಸುವ ಜಾಗಕಕ್ಕೆ ಸೇರಿಸಿ ನಿರಾಳವಾದಳು...ಎಂದು ಕೊಂಡ.

ಒಂದೆರಡು ದಿನ ಕಳೆಯುವಷ್ಟರಲ್ಲಿ ರಾಧಿಕಾಗೆ ಮನೆಯಲ್ಲಿ ಬೇಸರವಾಗತೊಡಗಿತು. ಮನೋಜ ಕಾಲೇಜಿಗೆ ಹೊರಟು ಹೋಗುತ್ತಿದ್ದ ರಂಗನಾಥನೂ ಟುಟೋರಿಯಲ್ ಕ್ಲಾಸ್‌ಗೆ ಹೋದಾಗ ಮನೆಯಲ್ಲಿ ಇವಳೊಬ್ಬಳೇ ಅವರುಗಳು ಮಾಡಿಟ್ಟಿದ್ದ ಅಡಿಗೆ ಬಡಿಸಿಕೊಂಡು ತಿನ್ನಲು ಸಹ ಇವಳಿಗೆ ಬೆಜಾರು. ಗೀತಾ ಮುರಳಿ ಸಹ ಹೆಚ್ಚಿಗೆ ಬರುತ್ತಿರಲಿಲ್ಲ. ಗೀತಾನ ಹತ್ತಿರ ಮಾತನಾಡಿ, ಎಷ್ಟೋ ದಿನಗಳಾದವೇನೋ ಅಂತನ್ನಿಸಿತ್ತು.ಮನೆಯಲ್ಲಿ ಹೀಗೆ ಕೂತು , ನಿಂತು ಮಲಗಿ ಕಾಲ ಕಳೆಯುವ ಬದಲು, ಕಾಲೇಜಿಗೆ ಹೋಗಿ ಬಹುವುದು ವಾಸಿ ಎನಿಸಿತ್ತು.

ಮಾರನೇ ದಿ ಬೆಳಿಗ್ಗೆ ಮನೋಜ ಕಾಲೇಜಿಗೆ ಹೊರಡಲು ರೆಡಿಯಾದಾಗ ತಾನೂ ರೆಡಿಯಾದಳು. ನಾನೂ ಬರ್ತೀದೀನಿ ಕಾಲೇಜಿಗೆ ಎಂದಳು. ಇಬ್ಬರಿಗೂ ಅಚ್ಚರಿ... ನಗು.

"ನೀನು ಬಸ್ನಲ್ಲಿ ಬಾ...ನನ್ನ ಜೊತೆ ಮುರಳಿ ಬರ್ತಾನೆ"

"ಮುರಳಿ ಬಂದರೆ ನಾನು ಹೇಳ್ತೀನಿ. ನೀನು ಇವಳನ್ನು ಕರೆದುಕೊಂಡು ಹೋಗು ರಂಗನಾಥ ಅವಳಿಗೆ ಒತ್ತಾಸೆಕೊಟ್ಟ.

ರಾಧಿಕಾ ಕಾಲೇಜಿನ ಕಾಂಪೌಂಡನ್ನು ತಲುಪುತ್ತಲೇ, ಅವಳ ಗೆಳತಿಯರು ಅವಳನ್ನು ಸುತ್ತುವರೆದರು. ಎಲ್ಲರಿಗೂ ಅವಳ ತಾಯಿಯ ಸಾವಿನ ಸುದ್ದಿ ತಿಳಿದಿತ್ತು. ಎಲ್ಲರ ಅನುಕಂಪವನ್ನು ಗಳಿಸುತ್ತಾ. ತನ್ನದೇ ಆದ ಠೀವಿಯಿಂದ ನಿಂತಿದ್ದ ರಾಧಿಕಾಳನ್ನೇ ನೋಡಿದ ಮನೋಜ. ಅವರುಗಿಳು ಏನು ಕೇಲಿದರೋ, ಇವಳು ಏನು ಹೇಳಿದಳೋ ತಿಯಲಿಲ್ಲ.

ಅಷ್ಟರಲ್ಲಿ ಮನೋಜನ ಕೆಲವು ಸ್ನೇಹಿತರು ಬಂದು ಅವನ ಎದುರಿಗೆ ನಿಂತರು.

" ಅವಳು ನಿನಗೆ ಎಲ್ಲಿ · ಸಿಕ್ಕಳು? ಅವಳನ್ನು ನಿನ್ನ ಹಿಂದೆ ಸ್ಕೂಟರ್ನಿಲ್ಲ ಕೂರಿಸ್ಕೊಂಡು ಬಂದೆಯಲ್ಲಾ?

ಮನೋಜನಿಗೆ ರೇಗಿ ಹೋಯ್ತು. ಇವರಿಗ್ಯಾಕೆ ಇದೆಲ್ಲಾ ಅಂತೆನ್ನಿಸಿದರೂ ,ಪಾಪ, ಅವಳ ತಾಯಿ ಸತ್ತುಹೋದರಲ್ಲಾ?...ಅವಳ ದುಃಖ ಇನ್ನು ಕಮ್ಮಿ ಆಗಿಲ್ಲ. ಕಾಲೇಜಿಗೇ ಬರುಲ್ಲ ಅಂತ ಹಠ ಮಾಡ್ತಿದ್ಲು..ನಾನು ಒಪ್ಪಿಸಿ ಕರೆದುಕೊಂಡು ಬಂದೆ"

ಓ...ಹೌದಾ? ಎನ್ನುತ್ತಾ ಅವರೆಲ್ಲಾ ರಾಧಿಕಾಳ ಬಳಿಗೆ ಓಡಿದರು. ಮನೋಜ ತನ್ನಲ್ಲೇ ನಕ್ಕ. ತನ್ನ ಪಾಡಿಗೆ ತಾನು ತರಗತಿಯಕಡೆಗೆ ನಡೆದ. ದಿನದಂತೆ ಕ್ಲಾಸು ಮುಗಿದ ಮೇಲೆ ಸೀದಾ ಮನೆಗೆ ಬಂದ. ಒಬ್ಬನೇ ಬಂದವನನ್ನು ರಂಗನಾಥ ಅನುಮಾನದಿಂದ ನೋಡಿದ.

"ರಾಧಿಕಾ ಎಲ್ಲಿ? ಕೇಳಿದ. ಮನೋಜನ ಮುಖ ಚಿಕ್ಕದಾಯಿತು.

ರಾಧಿಕಾ ಎಂದರೆ ಎಷ್ಟು ಆಸ್ಥೆ ಈ ಮಾವನಿಗೆ ಅಂದುಕೊಂಡು ಅಸೂಯೆಯಿಂದ

ನುಡಿದ. ಅವಳದಿನ್ನು ಮಾತು ಮುಗಿದಿರಲಿಲ್ಲ. ಸ್ನೇಹಿತೆಯರೆಂದ ಬಿಡುವು ಸಿಕ್ಕರೆ, ಆ ಮೇಲೆ ಬರ್ತಾಳೆ"

"ಹಾಗೆ ಉದಾಸೀನ ಮಾಡಬೇಡವೋ...ಈಗ ಅವಳು ನಮ್ಮ ರಕ್ಷಣೆಯಲ್ಲಿರುವವು...ಅವಳನ್ನು ಬಲವಂತವಾಗಿ ಕರೆತರಬೇಕಾಗಿತ್ತು."

"ನಮ್ಮ ರಕ್ಷಣೆ ಅಲ್ಲ...ನಿನ್ನ ರಕ್ಷಣೆ...ಅವಳನ್ನು ನಾನು ದಿನಾ ನಾನು ಕಾಲೇಜಿಗೆ ಕರೆದುಕೊಂಡು ಹೋಗುಲ್ಲ. ಸ್ನೇಹಿತರು ತಮಾಷೆ ಮಾಡ್ತಾರೆ."

"ಮಾಡಿದರೆ ಮಾಡಲಿ ಬಿಡು.ಅವಳು ನಿನ್ನ ಹೆಂಡತಿಯಾಗುವಳು...ಅದಕ್ಕೆ ನಾನು ಒಂದು ಯೋಚನೆಮಾಡಿದ್ದೀನಿ. ಈ ತಿಂಗಳು ಕಳೆದ ಕೂಡಲೇ ನಿಮ್ಮಿಬ್ಬರ ಮದುವೆ ಮಾಡಿ ಮುಗಿಸಿ ಬಿಡ್ತಿವಿ."

"ಇಂಪಾಸಿಬಲ್ .ನಾನು ಓದು ಮುಗಿಯುವವರೆಗೂ ಮದುವೆ ಮಾಡಿಕೊಳ್ಳಲ್ಲ."

" ನಿನ್ನ ಮಾವನ ಮಾತಿಗೆ ಬೆಲೆ ಇಲ್ಲ ಅಂತಾಯ್ತು ಹಾಗಾದ್ರೆ"

"ಅದಕ್ಕೂ ಇದಕ್ಕೂ ಏನು ಸಂಬಂಧ? ಇದು ನನ್ನ ಭವಿಷ್ಯದ ಪ್ರಶ್ನೆ,''

"ಮದುವೆ ಆದರೆ ನಿನ್ನ ಭವಿಷ್ಯಕ್ಕೆ ಏನಾಗುತ್ತೆ?

"ವಿವಾಹಂ ವಿದ್ಯಾವನಾಶಾಯ ಅಂತ ಎಲ್ಲಾ ಹೇಳ್ತಾರೆ. ನಮ್ಮಿಬ್ಬರ ಓದಿಗೆ ಭಂಗ ಬಂದರೆ, ಭವಿಷ್ಯ ಹಾಳಾದಂತೇನೇ...."

"ಏನೂ ಇಲ್ಲ. ಅಂಥಾ ಮಾತೆಲ್ಲಾ ಎಲ್ಲಾ ಕಾಲದಲ್ಲೂ ಒಂದೇ ತರಹ ನಡೆಯುಲ್ಲ.ಅದರಲ್ಲೂ ನಿನ್ನ ವಿಷಯದ ಬಗ್ಗೆ ನನಗೆನಂಬಿಕೆ ಇದೆ. ನೀನೀಗ ನನ್ನ ಮಾತನ್ನು ಮೀರಕೂಡದು. ನಾನು ಆ ಹುಡುಗಿಗೆ ಮಾತು ಕೊಟ್ಟಿದ್ದೀನಿ."

"ನನ್ನನ್ನು ಒಂದು ಮಾತೂ ಕೇಳದೇ"

ಕೇಳಿದರೆ ನೀನು ನಿರಾಕರಿಸುವುದಿಲ್ಲ ಎಂದು ಕೊಂಡಿದ್ದೆ. ಆದರೆ ನೀನು ಈಚೆಗೆತುಂಬಾ ಬದಲಾಯಿಸಿ ಹೋಗಿದೀಯ.ಇನ್ನೊಂದು ವರ್ಷ ಕಳೆದು ಹೋದರೆ ಡಾಕ್ಟರಾಗ್ತೀಯ.ನಿನ್ನ ಕಾಲ ಮೇಲೆ ನೀನು ನಿಲ್ತೀಯ ಇನ್ನು ನನ್ನ ಮಾತುಗಳನ್ನು ಕೇಳುವುದೇಕೆ ಅಂತ ನಿನಗನ್ನಿಸಿದ್ದರೆ ಹಾಗೇ ಸರಿ. ಇನ್ನು ಮೇಲೆ ನಾನು ನಿನಗೇನೂ ಹೇಳುವುದಿಲ್ಲ ರಂಗನಾಥ ಸಪ್ಪಗೆ ಹೇಳಿದ ಮನೋಜ ಪೆಚ್ಚಾದ.

ಥೂ ಈ ರಾಧಿಕಾಳಿಂದಲೇ ಇಷ್ಟೆಲ್ಲಾ. ಈ ಮಾವನಿಗೇಕೆ ಇವಳ ಚಿಂತೆ? ಈಗ ನಾನು ಯಾರನ್ನು ಕೇಳುವುದು? ನನಗೆ ಸಲಹೆ ಕೊಡುವವರು ಯಾರೂ ಇಲ್ಲ. ಎಲ್ಲರೂ ರಾಧಿಕಾಳನ್ನೇ ಸಪೋರ್ಟ್ ಮಾಡ್ತಾರೆ. ಅವಳ ಮೇಲಿನ ಅಸೂಯೆ ಹೆಚ್ಚಾಯಿತು. ಮುರಳಿಯನ್ನು ಹುಡುಕಿಕೊಂಡು ಅವರ ಮನೆಗೆಹೋದ.

" ನಿನ್ನ ಹತ್ತಿರ ಸ್ವಲ್ಪ ಅರ್ಜೆಂಟಾಗಿ ಸ್ವಲ್ಪ ಮಾತಾಡ್ಬೇಕು ಕಣೋ..."

ಅಷ್ಟರಲ್ಲಿ ಅಲ್ಲಿಗೆ ಬಂದ ಅವನ ತಾಯಿ ಕೇಳಿದರು.

ರಾಧಿಕಾ ಹೇಗಿದಾಳೆ? ಈಗ ಸ್ವಲ್ಪ ಸಮಾಧಾನ ಮಾಡಿಕೊಂಡಿದಾಳಾ?'

"ಹೂಂ ಆಂಟಿ...ಎಂದ.

ಪಾಪ.ನೋಡು. ತನ್ನ ಪಾಡಿಗೆ ಕುಮಿದಾಡಿಕೊಂಡಿದ್ದ ಹುಡುಗಿಗೆ ಎಂತಹ ಕಷ್ಟ ಬಂತು?"ಮನೋಜನಿಗೆ ತಕ್ಷಣಕ್ಕೆ ಅರ್ಥ ಆಗುಲಿಲ್ಲಸಲ.

"ಯಾಕೆ ?ಏನಾಯ್ತು ಈಗ?

"ಪಾಪ. ಇನ್ನೇನಾಗಬೇಕು ಬೆಳೆದ ಹುಡುಗಿ, ಸುಮ್ಮನೇ ಅವರಿವರ ಮನೇಲಿರುವುದು ಅಂದ್ರೆ ಕಷ್ಟ ಅಲ್ವಾ?"ಮನೋಜನ ಮುಖ ಕೆಂಪಾಯಿತು.

ಅವಳು ಹಾಸ್ಟೆಲ್ಲಿನಲ್ಲಿರು ಅಂತಾಳೆ. ಮಾವನೂ ಒಪ್ಪಿಕೊಂಡು ನಮ್ಮ ಮನೆಯಲ್ಲಿದ್ದುಕೊಂಡಿದಾರೆ. ಮತ್ತೆನು ಕಷ್ಟ ಅವಳಿಗೆ?

"ಕಷ್ಟವಲ್ಲದೇ ಮತ್ತೇನು ಹೆಣ್ಣು ಮಕ್ಕಳು ತಾಯಿಯ ಮನೆಯಲ್ಲಿರಬೇಕು ಅಥವಾ ಗಂಡನ ಮನೆಯಲ್ಲಿರಬೇಕು." ಆಕೆ ಅರ್ಥಗರ್ಭಿತವಾಗಿ ಮಾತವಾಡಿಅವನನ್ನೇ ನೋಡಿದರು.ಯ

ಮನೋಜ ಸುಮ್ಮನಾದ. ಉತ್ತರಿಸಲಿಲ.

ನಾನು ಹೀಗಂತೀನಿ ಅಂತ ಬೇಜಾರುಮಡ್ಕೋಬೇಡಪ್ಪಾ...ನೀವಿಬ್ಬರೂ ಆದಷ್ಟು ಬೇಗ ಮದುವೆಯಾಗುವುದು ಳ್ಳೆಯದು ಅಂತ ನನಗನ್ನಿಸುತ್ತಪ್ಪಾ"

ಸ್ಟಡೀಸ್ ಮುಗಿಯುವವರೆಗೂ ಅವನಿಗೆಮದುವೆ ಆಗುವ ಆಸೆ ಇಲ್ಲ. ಮುರಳಿ ಮದ್ಯೆಬಾಯಿ ಹಾಕಿದ.

"ಬರೀ ನನ್ನ ಸ್ಟಡೀಸ್ ಅಲ್ಲ. ಅವಳ ಸ್ಟಡೀಸ್ ಸಹ ಮುಗಿಯಬೇಕು ಒತ್ತಿ ನುಡಿದ.

"ಅಷ್ಟರಲ್ಲಿ ಅವಳ ಮನಸ್ಸು ಬದಲಾಯಿಸಿ ಹೋದರೆ ಏನು ಮಾಡ್ತೀಯ?" ಮತ್ತೆ ಮುರಳಿ ಕೇಳಿದ.

"ಅದರ ಬಗ್ಗೆ ನನಗೆ ಚಿಂತೆ ಇಲ್ಲ. ಆದರೆ ನನಗೆಒಂದು ಸಂದೇಹ. ಎಲ್ಲರೂ ಯಾಕೆ ಅವಳಿಗೆಸಪೋರ್ಟ್ ಮಾಡ್ತೀರಲ್ಲ...ನನ್ನ ಬಗ್ಗೆ ಯಾರಿಗೂ ಏನೂ ಅನ್ನಿಸೋದೇ ಇಲ್ಲವಲ್ಲ"

" ಅವಳು ಹುಡುಗಿ. ಅವಳಿಗೇನಾದರೂ ಆದರೆ, ಸಮಾಜ ಅವಳನ್ನೇ ದೂಷಿಸುತ್ತೆ. ಗಂಡಸು. ನಿಭಾಯಿಸಿಕೊಳ್ತಾನೆ. ಪಾಪ, ಅವರಮ್ಮ ಸಾಕಿ ಬೆಳೆಸುಕ್ಕೆ ಎಷ್ಟು ಕಷ್ಟಪಟ್ಟಿದ್ದಾರೆ. ಮಗಳು ಸುಖವಾಗಿರಲಿ ಅಂತ ಕನಸುಗಳನ್ನು ಕಟ್ಟಿರ್ತಾರೆ. ಮಗಳ ಬಾಳು ಚೆನ್ನಾಗಿದ್ದರೆ ಅವರ ಆತ್ಮಕ್ಕೆ ಶಾಂತಿ ಸಿಗುತ್ತದೆ."

ಈಗ ಅವರ ಆತ್ಮಕ್ಕೆ ಶಾಂತಿ ಸಿಗುದಿರುವಂತಹ ಕೆಲಸ ಏನಾಗಿದೆ? ಎಂದು ತನ್ನಲ್ಲೇ ರೇಗಿಕೊಂಡ.ಮುರಳಿಯ ಕಡೆ ನೋಡಿದ. ಅವನು ನಗುತ್ತಾ ಸುಮ್ಮನೇ ನಿಂತಿದ್ದ. ಮಗಳ ವಿಧ್ಯಾಭ್ಯಾಸ ಹಾಳಾದರೆ ಅವರ ಆತ್ಮನೊಂದು ಕೊಳ್ಳಬಹುದು. ಎಂದು ಹೇಳಬೇಕೆಂದು ಕೊಂಡವನು ಸುಮ್ಮನೇ ಇವರ ಹತ್ತಿರ ವಾದ ಏನು ಎಂದುಕೊಂಡು, "ಸರಿ ಹಾಗಾದರೆ, ನಾನೀಗ ಏನು ಮಾಡಬೇಕು?"ಕೇಳಿದ

"ಸುಮ್ಮನೇ ಮದುವೆಗೆ ಒಪ್ಪಿಕೊಂಡುyfಬಿಡು" ಮುರಳಿ ಹೇಳಿದ.

ನನ್ನ ಸುಖದುಃಖವೆಲ್ಲಾ ಅವಳಮಮ್ಮ ಆತ್ಮದ ಕೈಲಿದೆ.ಎಂದ.

ಆತ್ಮಕೆ ಕೈ ಕಾಲು ಇರುತ್ತೇನೋ ಮುರಳಿ ಕೆಣಕಿದ.

"ಇಲ್ಲ. ಬುದ್ದಿ ಮಾತ್ರ ಇರುತ್ತೆ"ಎಂದ. ಮನೋಜನ ಮಾತಿಗೆ ಅವರಿಬ್ಬರೂ ನಕರು. ಇವನೂ ನಗಲೇ ಬೇಕಾಯ್ತು.

"ಕಂಗ್ರಾಟ್ಸ್ ಕಣಯ್ಯಾ" ಎಂದ ಮುರಳಿ ಅವನ ಕೈ ಕುಲಕಿ.

ಮನೋಜ ಗುರ್ ಎಂದ"ನೀನೂ ಬಾ ಮನೆಗೆ ನನಗೊಬ್ಬನಿಗೇ

ಹೋಗುಕ್ಕೆಹೆದರಿಕೆಆಗುತ್ತೆ." ಎಂದ.

" ಯಾಕೆ ಹೆದರಿಕೆ? ಇವತ್ತೇ ಏನೂ ಆಗುಲ್ಲ ಹೋಗು"

"ಬರ್ತಿಯೋ ಇಲ್ವೋ...ಪ್ರತಿಯೊಂದಕ್ಕು ಕೆಣಕಿ ಮಾತಾಡದೆ ಇದ್ರೆ ಆಗುಲ್ಲವಲ್ಲ ನಿನಗೆ?"

ಓ..ಕೇ. ಬರ್ತಿವಿ. ನಡಿ ಎಂದ ತಾಯಿಗೆ ಹೇಳಿ ಇಬ್ಬರೂ ಹೊರಟರು. ಇವರು ಮನೆಗೆ ಬರುವ ಹೊತ್ತಿಗೆ.ರಾಧಿಕಾ ಕಾಲೇಜಿನಿಂದ ವಾಪಸ್ಸು ಬಂದಿದ್ದಳು. ಅವರನ್ನು ಕಂಡ ರಂಗನಾಥ ಎಲ್ಲರಿಗೂ ಕಾಫಿ ಬಿಸ್ಕತ್ತು ತಂದಿತ್ತ.

ನಾನು ಟ್ಯೂಷನ್ ಮನೆಗೆ ಹೋಗ್ತೀನಿ. ಎಂದು ಹೇಳಿ ಹೊರಟ.

ಮುರಳಿ ಅತ್ತಿತ್ತ ನೋಡಿ. ರಾಧಿಕೆಯ ಬಳಿಸಾರಿದ. ಕಂಗ್ರಾಟ್ಸ್ ರಾಧಿಕಾ ಎಂದುಮುಗುಳ್ನಕ್ಕು

" ಅಂ ಯಾಕೆ?" ಎಂದಳು ಕಿಲಕಿಲನೆ ನಗುತ್ತಾ.

"ಮನೋಜ ಮದುವೆಗೆ ಒಪ್ಕಿಕೊಂಡಿದಾನೆ. ಈ ಮಾತಿಗೆ ರಾಧಿಕಾ ಮನೋಜ ಒಟ್ಟಿಗೆ ನಕ್ಕರು

"ಅದೇ ನಗೂದ್ಯಾಕೆ? ಮನೋಜ ನಿನ್ನನ್ನು ಮದುವೆಯಾಗಲು ಒಪ್ಪಿಕೊಂಡಿ ದಾನೆ ಅಂತಂದೆ."

ರಾಧಿಕಾ ಗಂಭೀರಳಾದಳು. ತಮಾಷೆ ಮಾಡ್ತಿಲ್ಲ ಎಂದು ಅರ್ಥವಾಗಿತ್ತು. ಮನೋಜನ ಕಡೆ ನೋಡಿದಳು.

ನೋಡು ರಾಧಿಕಾಎಲ್ಲರ ಮಾತಿಗೆಒಪ್ಪಿ, ನಿನ್ನನ್ನ ಮದುವೆ ಆಗ್ತಾಇದೀನಿ."

"ನೀನೂ ಪ್ರೀತಿಸ್ತಿದೀಯಲ್ಲಯ್ಯಾ...ಮುರಳಿ ಮಧ್ಯೆ ಹೇಳಿದ.ಯ

"ಪ್ರೀತಿ ಈಗ, ಮದುವೆ ಆಮೇಲೆ ಅಂತ ಅಂದುಕೊಂಡಿದ್ದೆ.ಆ ಗತಿ ಈಗ ನಿನ್ನ ಸೆಕ್ಯೂರಿಟಿಯಾಗಿ ನಾನು ನಿನ್ನನ್ನು ಮದುವೆ ಆಗಬೇಕಾದ ಪರಿಸ್ಥಿತಿ ಒದಗಿದೆ. ಆದರೆ...ಮುಂದೆ ಹೇಳಲು ತಡವರಿಸಿದ.

ಅಂದರೇ...ಅವನ ಅರ್ಥ,ಮದುವೆ ಈಗ ಆದಕ್ಕೂ ನಿಜವಾಗಿ ಗಂಡ ಹೆಂಡತಿ ಯರಾಗುವುದು ನಿನ್ನ ಓದು ಪೂರೈಸಿದಮೇಲೆ ಅಂತ ಅರ್ಥ...ಅದಕ್ಕೆ ನಿನ್ನ ಒಪ್ಪಿಗೆನಾ ರಾಧಿಕಾ. ಇಷ್ಟು ಹೇಳುಕ್ಕೆ ಎಷ್ಟು ಒದ್ದಾಡ್ತೀಯಲ್ಲಯ್ಯಾ...ಅಯ್ಯೋ... ಮುರಳಿ ಹೀಯಾಳಿಸಿದ.

"ಮುರಳಿ, ಇದುನಮ್ಮಿಬ್ಬರಿಗೆ ಸಂಬಂಧಿಸಿದ ವಿಷಯ. ನನಗೆ ಹೇಗೆ ಬೇಕೋ ಹಾಗೆ ಹೇಳ್ತೀವಿ. ಸ್ವಲ್ಪ ಸುಮ್ಮನಿರ್ತೀಯಾ?"

"ಓ...ಕೇ ನೀವಿಬ್ಬರೂ ಏನು ಬೇಕಾದ್ರೂ ಮಾತಾಡ್ಕೊಳ್ಳಿ ನಾನು ಹೊರಟೆ ಎಂದುಹೋರಟೇ ಬಿಟ್ಟ. ಮನೆಜತಡೆಯಲಿಲ್ಲ. ರಾಧಿಕಾಗೆವ.ಸನವಾಯ್ತು. ಮುರಳಿಗೆ ಬೇಜಾರಾಯ್ತೋ ಏನೋ ಅಂದಳು.

ಅವನು ಅಂತಹ ಹುಡುಗನಲ್ಲ. ನಾನು ಅವನನ್ನು ಎಷ್ಟೋ ವರ್ಷಗಳಿಂದ ನೋಡ್ತಿದೀನಿ.. ಅದರಲ್ಲಿ ನಾನು ಹೇಳಬೇಕೂಂತಿದ್ದೆ ಅಂತನಿನಗೆ ಅರ್ಥವಾಗಿರ ಬೇಕಲ್ವಾ?"

ಹೂಂ ಎಂದಳು. ನೆಲ ನೋಡುತ್ತಾ

ಬರೀ ಹೂಂ ಎಂದರೆ ಆಗಲಿಲ್ಲ.ನಡೆಸಬೇಕು. ನಿನ್ನ ಓದು ಮುಗಿಯುವವರೆಗೂ ನನ್ನಿಂದ ದೂರ ಇರಬೇಕು. ಅದು ನಿನ್ನಿಂದಾಗುತ್ತಾ

"ಯಾಕೆ ನನ್ನ ಮೇಲೆ ನಂಬಿಕೆ ಇಲ್ವಾ ನಿನಗೆ ?'

"ನಂಬಿಕೆ ಅಂತಲ್ಲ. ಇದು ನಮ್ಮಿಬ್ಬರಿಗೂ ಚಾಲೆಂಜಟ್. ಜೀವನ ಎಂದರೆ ಬರೀ ಮದುವೆ, ಮಕ್ಕಳು ಸಂಸಾರ ಅಲ್ಲ, ಆತ್ಮಬಲ, ಸಂಯಮ ಶಕ್ತಿ.ಇದರ ಜೊತೆಗೆ ಉದ್ದೇಶ, ಗುರಿ ಸಾಧನೆ ಎಲ್ಲಾ ಸಾಬೀತು ಮಾಡಬೇಕು.

ಸರಿ ಯಾರಿಗೆ? ಯಾರು ಸಾಬೀತು ಮಾಡಬೇಕು?

"ಎಲ್ಲರಿಗೂ ನಮಮ ಸ್ನೇಹಿತರಿಗೆ ನೆಂಟರಿಗೆ, ಮಾವನಿಗೆ ಮುರಳಿ, ಗೀತಾಗೆ... ನಾಳೆ ಅವರು ನಗುವಂತೆ ಆಗಬಾರದು ನಮ್ಮ ಜೀವನ. ನಿನ್ನ ಮನೋಜ ಜನರಿಂದ ಹೊಗಳಿಸಿಕೊಳ್ಳುವಂತೆ ಇರಲಿ ಅಂತ ನಿನಗೆ ಅನ್ನಿಸೋಲ್ವಾ ನನಗೇನೋ ನನ್ನ ರಾಧಿಕಾನನಗೆ ತಕ್ಕ ಹೆಂಡತಿಯಾಗಬೇಕು.ಹೆಮ್ಮೆಯಿಂದ ಹೇಲಿಕೊಳ್ಳುವಂತದಿರಬೇಕು ಅಂತ ಬಲು ಆಸೆ. ರಾಧಿಕಾ ಓರೆಗಣ್ಣಿನಿಂದ ಅವನನ್ನೇ ನೋಡಿದಳು.

ಓ..ಕೇ ಮನೋಜ್ ನಿನ್ನ ಆಸೆಯೇ ನನ್ನ ಆಸೆ. ನನ್ನಂದ ನಿನ ಗ್ಯಾವ ತೊಂದರೆಯೂ ಬರುಲ್ಲ.ಬೇಕಾದರೆ ಪ್ರಾಮಿಸ್ ಮಾಡ್ತೀವಿ. ಎಂದಳು ಹಠದಿಂದ.

ಪರವಾಗಿಲ್ಲ. ಪ್ರಾಮಿಸ್ ಕೆನೂಬೇಡ. ನಿನ್ನ ಮಾತಿನಲ್ಲಿ ನನಗೆ ನಂಬಿಕೆ ಇದೆ. ಮಾವನಿಗೆ ನೀನೇ ಎಲ್ಲಾ ಹೇಳಿಬಿಡು."

"ನಾನಾ?ನನಗೆ ನಾಚಿಕೆ ಆಗುತ್ತಪ್ಪಾ...ನೀನೇ ಹೇಳು.

"ನಿಗೆತಾನೇ ಮದುವೆಲಚೆರ್ಂಟ್. ನೀನೇ ಹೇಳಬೇಕು ಎಂದುಒರಟಾಗಿ ಹೇಳಿ ಒಳಗೆಹೊರಟು ಹೋದ. ಅವಳಿಗೆದಿಗಿಲಾಯಿತು.

ರಂಗನಾಥ ಟ್ಯೂಷನ್ ಮುಗಿಸಿಕೊಂಡು ಸೀದಾ ಮುರಳಿಯ ಮನೆಗೆ ಬಂದ. ಮುರಳಿಯೂ ಇದ್ದ. ಅವನ ತಾಯಿಯೊಡನೆ ಹೇಳಿದ.

ಮನೊಜ ಎಂದೂ ನನ್ನ ಮಾತನ್ನು ಮೀರಿದವನಲ್ಲ. ಈಗ ಅವನನ್ನು ಮದುವೆಗೆ ಒಪ್ಪಸುವುದೇ ಕಷ್ಟ ಆಗ್ತಿದೆ.ನನಗೆ ಏನು ಮಾಡಬೆಕೂಂತ ಗೊತ್ತಾಗ್ತಿಲ್ಲ."

"ಸಾಯಂಕಾಲ ನಮ್ಮ ಮನೆಗೆ ಬಂದಿದ್ದ . ನಾನೂ ಅವನ ಹತ್ತಿರ ಮಾತಾಡಿದೀನಿ. ಓಪ್ಪಿದಾನೆ ಅಂತ ಅನ್ನಿಸುತ್ತೆ. ಅಲ್ವೇನೋ ಮುರಳಿ'

"ಹೂಂ ಅವನೂ ರಾಧಿಕಾ ಇಬ್ಬರೂ ಒಪ್ಪಿದಾರೆ. ನಾನೂ ಅವನ ಜೊತೆಗೆ ನಿಮ್ಮ ಮನೆಗೆ ಬಂ ದಿದ್ದೆ .ಮುರಳಿ ಹೇಳಿದಾಗ ಅವನಿಗೆ ಅಚ್ಚರಿ.

ನನ್ನಿ ಬಲವಂತಕ್ಕೆ ಒಪ್ರುಪಿಲ್ಲತಾನೇ.ನಾನು ಸಾಕಿ ಬೆಳೆಸಿದ ಹುಡುಗ,ಅವನು ನೊಂದುಕೊಂಡರೆ ನನಗೂ ಹಿಂಸೆಯಾಗುತ್ತೆ.

"ಹಾಗೆನ್ನಿಸುಲ್ಲ. ಅವನಿಗೆ ಸಮಾಜಾಯಿಸಿ ಹೇಳಿದ್ದೀವಿ ಅವನು ತಿಳುವಳಿಕಸ್ಥ. ಏನೋ ಚಿಕ್ಕ ಹುಡುಗ. ವಿದ್ಯೆಗೆ ಭಂಗ ಬರಬಹುದು ಅಕೆ ನುಡಿದರು.

ಹೆದರಿಕೆ ಯಾಕೆ? ಹಿಂದಿನ ಕಾಲದಲ್ಲಿ ಚಿಕ್ಕವಯಸ್ಸಿನಲ್ಲಿಯೇ ಮದುವೆ ಮಾಡುತ್ತಿದ್ದರು.ಆಮೇಲೆ ವಿದ್ಯೆ ಮುಂದುವರೆಸಿ, ಜೀವನದಲ್ಲಿ ಹೆಸರುಗಳಿಸಿ, ಪ್ರಸಿದ್ಧರಾದ ಎಷ್ಟೋ ಜನರನ್ನು ನಾವು ಕೇಳಿಲ್ವೇ?"

"ಹಿಂದಿನ ಕಾಲದಲ್ಲಿ ಆಗುತ್ತಿದ್ದುದೇ ಹಾಗೆ. ಈಗ ಕಾಲ ಬದಲಾಗಿದೆ ಅಷ್ಟೇ."

" ಈ ಬದಲಾದ ಕಾಲದಲ್ಲಿ ಮತ್ತೊಂದುಹೊಸಬದಲಾವಣೆ ಎಂದ ಮುರಳಿ ಚಪ್ಪಾಳೆ ತಟ್ಟಿ. ಆಕೆ ಕಾಫಿ ತಂದಿತ್ತರು.ರಂಗನಾತ ಕಾಫಿ ಕುಡಿಯುತ್ತಾ ನುಡಿದ.

ಈಗ ನಿಮ್ಮನ್ನ ಬಿಟ್ಟರೆ ಬೇರೆಯಾರಿಲ್ಲ.ನಮಗೆ. ನೀವೇ ನಿಂತು ಈ ಮಂಗಳ ಕಾರ್ಯವನ್ನು ನೆರವೇರಿಸಿಕೊಡಬೇಕು. ಎಂದು ಕೈ ಮುಗಿದ.

ಅಯ್ಯೋ ಅಷ್ಟು ದೊಡ್ಡ ಮಾತೇಕೆ/?ಅವರೂ ನಮ್ಮ ಮಕ್ಕಳಿದ್ದ ಹಾಗೇ. ಎಲ್ಲಾ ಸುಸೂತ್ರವಾಗಿನಡೆಯುತ್ತೆ. ಆತಂಕ ಪಟ್ಟುಕೋಬೇಡಿ.

ರಂಗನಾಥ ನಿಶ್ಚಿಂತನಾಗಿ ಮನೆಗೆಹಿಂತಿರುಗಿದ. ಮನೆಯಲ್ಲಿ ಯಾರೂ ಮದುವೆಯ ಬಗ್ಗೆ ಮಾತೆತ್ತಲಿಲ್ಲ. ಆದರೂ ಮದುವೆಯ ಸಿದ್ದತೆಗಳು ಮಾರನೇ ದಿನದಿಂದಲೇ ಪ್ರಾರಂಭಗೊಂಡವು.

ರಾಧಿಕಾ ಹೆಚ್ಚು ಖುಷಿಯಾಗಿದ್ದಳು. ರಂಗನಾಥ ತನ್ನ ಮಗಳ ಮದುವೆಯನ್ನು ಅದ್ದೂರಿಯಾಗಿ ನೆರವೇರಿಸಬೇಕೆಂದುಕೊಂಡ. ರಾಧಿಕಾ ತನ್ನ ಮನೆಗೆ ಹೋಗಿ, ತನಗೆಅತ್ಯಗತ್ಯವೆನಿಸಿದ ವಸ್ತುಗಳನ್ನೇಲ್ಲಾ ಪ್ಯಾಕ್ ಕಮಾಡಿಕೊಂಡು ಈ ಮನೆಗೆ ತಂದಳು. ಮದುವೆಯ ದಿನವನ್ನು ಗೊತ್ತು ಮಾಡಿಯಾಗಿತ್ತು ಅಹ್ವಾನ ಪತ್ರಿಕೆ ಪ್ರಿಂಟ್ ಮಾಡಿಸಿ, ತಮಗೆ ಬೇಕಾದವರಿಗೆಲ್ಲಾ ಆಮಂತ್ರಣ ನೀಡಿದರು.

ರಾಧಿಕಾಗೆಇಷ್ಟವಾದ ಸೀರೆಗಳನ್ನು ರಂಗನಾಥ ಕೊಡಿಸಿದ. ರಾಧಿಕಾ ತನ್ನ ಹಣದಲ್ಲಿ ಮುರಳಿಗೆ ರೆಡಿಮೇಡ್ ಬಟ್ಟೆಗಳನ್ನು ಗೀತಳಿಗೆ ಸೀರೆಬ್ಲೌಸ್ ಗಳನ್ನು ಖರೀದಿಸಿದಳು. ಮನೋಜ ಸೂಟ್ ಜೊತೆಗೆ ಎರಡು ಜೊತೆ ಬಟ್ಟೆಗಳನನಲು ಹೋಲಿಸಿಕೊಂಡ. ರಂಗನಾಥ ತನಗೂ ಹೊಸಬಟ್ಟೆ ಗಳನ್ನು ಕೊಂಡು ಕೊಂಡ.

ನಿರ್ಮಲಳ ಬಳಿ ಹೆಚ್ಚಿಗೆ ಒಡವೆಗಳಿರಲಿಲ್ಲ. ಇದ್ದ ಒಂದು ಎಳೆಸರ, ಒಂದು ಜೊತೆ ಬಳೆಯ ಜೊತೆಗೆ ಮೇಲೆ ಇನ್ನು ಸ್ವಲ್ಪ ಚಿನ್ನ ಹಾಕಿಸಿ, ಒಂದೇಳೆ ಕರೀ ಮಣಿಸರಮಾಂಗಲ್ಯ ಒಂದೆಳೆ ಸಾದಾ ಚೈನು ಒಂದು ಜೊತೆ ಬಳೆ ಮಾಡಿಸಿದ. ಮನೋಜನಿಗೊಂದ .ರಾಧಿಕಾಳಿಗೊಂದು ಉಂಗುರಗಳನ್ನು ತನ್ನ ಹಣದಲ್ಲಿ ಖರೀದಿ ಮಾಡಿದೆ ಒಂದು ದಿನದ ಮಟ್ಟಿಗೆ ಒಂದು ಛತ್ರವನ್ನು ಗೊತ್ತು ಮಾಡಿದ್ದ.

ಧಾರೆ ಎರೆದು ಕೊಡುವವರು. ಎರೆಸಿಕೊಳ್ಳುವವರು ಇಲದರಿಂದ, ಆ ಶಾಸ್ತ್ರಕ್ಕೆ ಪ್ರಾಶಸ್ತ್ಯ ಕೊಡದೇ ಮದುವೆಯ ಕೆಲವೇ ಮುಖ್ಯವಾಗಿ ಸಾಸ್ತ್ರಗಳನ್ನು ಮದುಮಕ್ಕಳಿ ಬ್ಬರೇ ಕುಳಿತು ಮಾಡುವುದೆಂದು ಈ ಮೋದಲೇ ತೀರ್ಮಾನಿಸಿದ್ದರು. ಆ ದಿನ ಭಾನುವಾರವಾದುದರಿಂದ ಮನೋಜನ ಸ್ನೇಹಿತರು, ಪ್ರೋಪೇಸರುಗಳು ಸಹಪಾಠಿ ಗಳು. ರಾಧಿಕಾಳ ಗೆಳತಿಯರು ಎಲ್ಲರನ್ನೂ ಸಾಯಂಕಾಲದ ರಿಸೆಪ್ಸನ್‌ಗೆ ಆಹ್ವಾನಿಸಿದ್ದರು.

ರಂಗನಾಥ ಮರೆಯದೇ ಗೋಕರ್ಣದ ರಾಜಣ್ಣ ಮಾತ್ರ ದಯ ಮಾಡಿಸಿದ್ದರು. ಅವರ ಪತ್ನಿಯ ಆರೋಗ್ಯ ಸರಿಯಾಗಿರಲಿಲ್ಲ. ದೇಸಾಯಿ ಯವರಿಂದ ಯಾವುದೇ ಉತ್ತರವಿಲ್ಲ.

ಶುಭ ಮುಹೂರ್ತದಲ್ಲಿ ರಾಧಿಕಾ ಮನೋಜ ಹೂಮಾಲೆಗಳನ್ನು ಪರಸ್ಪರ ಹಾಗಿದರು. ಮನೋಜ ರಾಧಿಕಾಳ ಕೊರಳಿಗೆಮಂಗಳ ಸೂತ್ರವನ್ನು ಕಟ್ಟಿದ ಪ್ರಜವಲಿಸತ್ತಿರುವ ಅಗ್ನಿಯನ್ನು ಸಾಕ್ಷಿಯನ್ನಾಗಿಟ್ಟುಕೊಂಡು ಪ್ರದಕ್ಷಿಣೆಹಾಕಿ ಸಪ್ತಪದಿ ತುಳಿದು. ದಂಪತಿಗಳಾದರು. ಮನೋಜ ರಾಧಿಕಾ ಮೊದಲಿಗೆ ದೇವರಿಗೆ ನಮಸ್ಕಾರಿಸಿ,

ನಂತರ ಕೆಲವು ಹಿರಿಯರಿಗೆ ಸಮಸ್ಕರಿಸಿ ನಂತರ ಕೆಲವು ಹಿರಿಯರಿಗೆ ನಮಸ್ಕರಿಸಿ ಆಶೀರ್ವಾದ ಪಡೆದರು. ಗೋಕರ್ಣದ ರಾಜಣ್ಣ. ಉಡುಗೋರೆಯ ನ್ನಿತ್ತು ಆಶೀರ್ವದಿಸಿದರು. ಮುರಳಿಯ ತಾಯಿ ಮನಸಾರೆ ಇಬ್ಬರನ್ನು ಆಶೀರ್ವಾದಿಸಿ ಶುಭ ಹಾರೈಸಿದರು.ಮುರಳಿ ಮನೋಜನನ್ನು ತಬ್ಬಿಕೊಂಡು ಅಭಿವಂದಿಸಿದ. ರಾಧಿಕಾಳಿಗೆ ಶುಭಾಶಯ ಕೋರಿದ.

ಬಂದಿದ್ದ ಸ್ನೇಹಿತರೆಲ್ಲಾ ಇಬ್ಬರಿಗೂ ಶುಭಕೋರಿ, ಉಡುಗೊರೆಗಳನ್ನಿತ್ತು ಬೋಜನ ಮುಗಿಸಿ, ಫಲತಾಂಬೂಲಗಳೊಂದಿಗೆ ಹೊರಟರು. ಅವರಿಗೆಲ್ಲಾ ಏನೋ ಖುಷಿ. ಇಬ್ಬರ ಜೋಡಿ ಎಷ್ಟು ಚೆನ್ನಾಗಿದೆ ಅಲ್ವಾ ಅಂತ ಹೊಗಳಿದವರೇ ಹೆಚ್ಚು.

ನಂತರ ಅತ ಅದೇಯರೆಲ್ಲಾ ಒಟ್ಟಿಗೆ ಕೂತು ಊಟ ಮಾಡಿಸ್ವಲ್ಪ ವಿಶ್ರಾಂತಿ ತೆಗೆದುಕೊಂಡರು. ಸಾಯಂಕಾಲದ ರಿಸೆಪ್ಸನ್‌ಗೆ ಮತ್ತೆ ಸಿದ್ದರಾಗ ಬೇಕಾಗಿತ್ತು. ರಾಧಿಕಾ ಆಗಾಗ್ಗೆ ಕಳ್ಳಿಯಂತೆ ಮನೋಜನನ್ನೆ ನೋಡು ತ್ತಿದ್ದಳು. ಮನೋಜ ಅವಳ ಕಣ್ಣನ್ನು ತಪ್ಪಿಸುತ್ತಿದ್ದ. ಅವಳಿಗೆ ಸಂಭ್ರಮ. ಆದರೆ ಮನೋಜನಿಗೆ ಹೆದರಿ, ಅದನ್ನು ಪ್ರಕಟಗೊಳಿಸದೇ ಸುಮ್ಮನಿದ್ದಳು.

ಹಾರ ಹಾಕುವಾಗ, ತಾಳಿ ಕಟ್ಟುವಾಗ, ಕೈ ಕೈ ಹಿಡಿದು ಸಪ್ತಪದಿ ತುಳಿಯುವಾಗ ಅತ್ಯಂತ ಸನಿಹದಲ್ಲಿದ್ದ ಮನೋಜನ ಸಾಮೀಪ್ಯ ಅವಳಲ್ಲಿ ರೋಮಾಂಚನವನ್ನುಂಟು ಮಾಡಿತ್ತು.ಮಧುರ ಅನುಭವಗಳಿಂದ ರಂಗೇರಿದ್ದಳು. ಅವನೊಡನೆ ಮಾತನಾಡಿ, ತನ್ನ ಸಂತಸವನ್ನು ಹಂಚಿಕೊಳ್ಳಬೇಕೆಂಬ ಆಸೆಯಿದ್ದರೂ, ಮೂಕ ಬಸವನಂತಿದ್ದ ಅವನನ್ನು ಮಾತನಾಡಿಸಲು ಧೈರ್ಯವಿರಲಿಲ್ಲ. ಊಟ ಮಾಡುವಾಗಲೇ ಅವನು ಸ್ನೇಹಿತರೊಡನೆ ಮಾತನಾಡಿದ್ದು ಅಬ್ಬಾ....ಸಧ್ಯ ನನ್ನ ಮೇಲೆ ಕೋಪ ಇಲ್ಲ ಅಂತ ಕಾಣುತ್ತೆ ಎಂದುಕೊಂಡಳು.

ರಾಧಿಕಾ, ಗೀತಾ ಇಬ್ಬರೂ ಬ್ಯೂಟಿ ಪಾರ್ಲರ್ ನಿಂದ ಬಂದಿದ್ದ ಬೂಟೆಷಿಯನ್ಸ್ ನವರಿಂದ ಅಲಂಕರಿಸಿಕೊಂಡು. ಆರುಗಂಟೆಯ ಹೋತ್ತಿಗೆ ಸಿದ್ದರೀದರೂ ಮುರಳಿಯ ನೆರಿನಿಂದ. ಮನೋಜ ಸೂಟು ಧಜಿಸಿ ರೆಡಿಯಾದ. ಗೀತಾ, ರಾಧಿಕಾರಿಬ್ಬರ ಮುಖದ ಸೌಂದರ್ಯ ಹೆಚ್ಚಿತ್ತು. ಇಬ್ಬರನ್ನು ತಕ್ಷಣಕ್ಕೆ ಗುರುತಿಸಿಲಾಗದಷ್ಟು ವಿಶೇಷ ಅನಂಕಾರ ದಿಂದ ಹೊಳೆಯುತ್ತಿದ್ದರು. ಯಾರೋ ಹೊಸಬಳು ಎನ್ನುವಂತೆ ಮನೋಜ ದಿಟ್ಟಿಸಿದ. ರಾಧಿಕಾ ನಾಚಿಕೆಯಿಂದ ಕಣ್ಣು ಕೆಳಗೆ ಮಾಡಿದಳು. ಮನೋಜ ಮುಗುಳ್ನಕ್ಕ ಅವನ ಮುಖದಲ್ಲಿ ತೃಪ್ತಿಯ ಕಳೆ ಇತ್ತು.

ಅವನ ಕಡೆಯಿಂದ ಆಹ್ವಾನಿತರಾದವರಿಗೆ ರಾಧಿಕಾಳನ್ನು ಪರಿಚಯಿಸಿದ. ಎಲ್ಲರೂ ವಿಶ್ ಮಾಡಿದರು. ಕೆಲವರಿಗೆರಾಧಿಕಾಳ ತಾಯಿ ಸತ್ತು ಹೋಗಿರುವ ವಿಚಾರ ತಿಳಿದಿತ್ತು ಕೆಲವರಿಗೆ ತಿಳಿದಿರಲಿಲ್ಲ. ಕೋರ್ಸ್ ಮುಗಿಯದೇ ಇಬ್ಬರಿಗೂ ಅವಸರವೆನಿಸಿತ್ತು ಮದುವೆಗೆ ಎಲ್ಲೋ ಪ್ರೆಂಡ್‌ಸಷಿಪ್ ತುಂಬಾ ಮುಂದುವರೆದಿರ ಬೇಕು ತಮ್ಮ ತಮ್ಮಲ್ಲೇ ಮಾತಾಡಿಕೊಂಡರು. ಅವಳ ತಾಯಿಯ ವಿಯೋಗ ತಿಳಿದವರು, ರಂಗನಾಥನ ಮನೋಜನ ಉದಾರ ಗುಣಕ್ಕೇ ಮೆಚ್ಚಿದರು. ಹುಡುಗಿಯ ಬಾಳು ಹಾಳಾಗದಿರಲಿ ಎಂದು ಉದ್ದಾರ ಮಾಡುತ್ತಿದ್ದಾರೆ ಎಂದುಕೊಂಡರು.

ಮನೋಜನ ಸ್ನೇಹಿತರು, ಇಂಥ ಬ್ಯೂಟಿ ಸಕ್ಕರೆ ಯಾರು ಬಿಡ್ತಾರೆ, ಎಲ್ಲಿ ಕೈ

ತಪ್ಪಿಹೋಗ್ತಾಳೋ ಅಂತ ಬೇಗ ಮದುವೆ ಆಗಿ ಬಿಟ್ಟಲಿಂತ ಗೇಲಿ ಮಾಡಿದರು ಕೆಲವರು.

ರಾಧಿಕಾಳ ಗೆಳತಿಯರು ಪಿಸುದನಿಯಲ್ಲಿ ಕೇಳಿದ್ದರು. ಈಗೇನೇ ಅವಸರವಿತ್ತು ಮದುವೆಗೆ? ಕೊರ್ಸ್ ಮುಗಿದಮೇಲೆ ಮಾಡಿಕೊಂಡಿದ್ರೆ ಆಗಿರ್ತಲಿಲವಾ?ಯಾಕೆ ಒಬ್ಬರನ್ನೊಬ್ಬರುಬಿಟಖುಟಿರುಕ್ಕೇ ಆಗುಲ್ವಾ!"

ರಾಧಿಕಾಗೆರೇಗಿತು ಥೂ ಏನ್ರೇ ನೀವು ಇದು ನನ್ನ ಸೆಕ್ಯೂರಿಟಿಗೋಸ್ಕರ ಆದ ಮದುವೆ ಅಷ್ಟೆಪಿ. ನನ್ನ ಸ್ಟಡೀಸ್ ಮುಗಿಯುವವರೆಗೂ ನಾವಿಬ್ರೂ ಬರೀ ಫ್ರೇಂಡ್ಸ್ ಅಷ್ಟೇ"

"ಮನೋಜ ಸುಮ್ಮನಿರ್‍ತಾನಾ"ಕೆಣಕಿದ್ದರು

"ಉತ್ತರಾನಾ ಅವನನ್ನೇ ಕೇಳಿ ತಿಳಿದುಕೊಳ್ಳಿ ಅವಳು ಸಿಡುಕಿದಾಗ ಅವರು ಹಿಂಜರಿದರು.

ಎಷ್ಟು ಬೇಗ ಜಂಭ ಬಂದು ಬಿಟ್ಟಿದೆ ನೋಡು ಮೋದಲೇ ಅಹಂಕಾರ ಕಾಲು ಮುರಿದಾಗ ಸ್ವಲ್ಪ ಡೌನ್ ಆಗಿದ್ದಳು. ಈಗ ತಾಯಿ ಸತ್ತಿರುವ ದುಃಖ ಸಹ ಇಲ್ಲದೇ ಹೇಗೆ ಮರೀತಿದಾಳೆ. ಅವರುಗಳಾಡಿದ ಮಾತುಗಳು ಗೀತಳ ಕಿವಿಯನ್ನು ತಲುಪಿದೆವು. ರಾಧಿಕಾಳ ಬಗ್ಗೆ ಮರುಕವೆನಿಸಿತ್ತು. ಛೆ..ಇವರನ್ನೆಲ್ಲ ಮೆಡಿಕಲ್ ಸ್ಟೂಡೆಂಟ್ಸ್ ಅಂತ ಹೇಳಿ ಕೊಳ್ಳುವುದಕ್ಕೆ ಹೀವಾಯವಾಗುತ್ತೆ ಎಂದುಕೊಂಡಳು. ಗೀತಾ ಮುರಳಿಯನ್ನು ಹುಡುಕಿಕೊಂಡು ಹೋದಳು. ಅವರನ್ನೇಲ್ಲಾ ಬೇಗ ಕಳಿಸು. ಏನೇನೋ ಮಾತಡ್ತಿದಾರೆ. ರಾಧಿಕಾಳ ಕಿವಿಗೆ ಬಿದ್ದರೆ ಅಪ್ಸೆಟ್ ಆಗ್ತಾಳೆ. ಇವತ್ತು ಅವರಿಬ್ಬರಿಗೆ ಶುಭ ದಿನ. ಅದು ಹಾಳಾಗುವುದು ಬೇಡ.

ನಾಯಿ ಬೊಗಳಿದರೆ ದೇವ ಲೋಕ ಹಾಳಾಗುತ್ತಾ?ಏನೂ ಆಗುಲ್ಲ. ನೀನು ಸುಮ್ಮನಿದ್ದು ಬಿಡು. ಮನೋಜ.ರಾಧಿಕಾರ ಜೋಡಿ, ರತಿ ,ಮನ್ಮಥರಂತೆ ಅದನ್ನು ಕಂಡು ಅವರುಗಳ ಹೊಟ್ಟೆ ಉರಿದಿದೆ. ಚಪಲ ತೀರಿಸ್ಕೊಂಡಿದ್ದಾರೆ. ಅವಳಿಗೆ ಹೇಳಲೇ ಬೇಡ.

ನನಗೂ ಗೊತ್ತೂ

ಹೋಗಲಿ ಬಿಡು ನಾನು ಈ ಸೂಟ್‌ನಲ್ಲಿ ಹೇಗೆ ಕಾಣ್ತೆವಿ. ಮನೋಜ ತಂದಿರುವ ಫೈನ್ ಉಡುಗೊರೆ ನನಗೆ."

"ಮನ್ಮಥನಂತೇನೂ ಕಾಣ್ತೆಲ್ಲ ನೀನು"

"ನೀನೂ ರತಿಯಂತಿಲ್ಲ ಬಿಡು. ನಮ್ಮಿಬ್ಬರ ಜೋಡಿ ಸರಿಯಾಗಿದೆ" ಅವಳ ಕಡೆ ನೋಡಿ ನಕ್ಕ. ನಮ್ಮ ಜೊಡಿ ಬೇರೆ ಕತರಹಾ..."

"ಬೇರೆ ತರಹ? ಅಂದ್ರೆ ಯಾವ ತರಹ?

"ಏಣ್ಣೆ ಸೀಗೆಕಾಯಿ ತರಹ. ನಾನು ಹತ್ತಿರ ಬಂದರೆ ನೀನು ದೂರ ಓಡಿ ಹೋಗ್ತಿಯಾ"

"ಯಾಕೆ? ನಿನಗೂ ಮದುವೆಯ ಆಸೆ ಹತ್ತಿದೆಯಾ?"

"ಹುಂ. ನಾವೂ ಏಕೆ ಮದುವೆಯಾಗಬಾರದು ಅಂತ ಯೋಚಿಸ್ತಿದ್ದೆ ಗೀತಾ? ಇದಾವುದು ಈ ಸೀರೆ? ಈ ಸೀರೆ ನಿನಗೆ ಚೆನ್ನಾಗಿ ಒಪ್ಪುತ್ತೆ ಎನ್ನುತ್ತಾ ಮುರಳಿ ಗೀತಾಳ

ಕೈ ಹಿಡಿದ. ಅವಳು ದೂರ ಸರಿದಳು.

ನಾನು ಇಲ್ಲೇ ನಿಂತಿದ್ದರೆ, ನೀನು ಬಹಳ ರ್‍ಯೋಮಾಂಟಿಕ್ ಆಗಿಬಿಡ್ತೀಯ ಎಂದು ನಗುತ್ತಾ ಅಲ್ಲಿಂದ ದೂರ ಸರಿದಳು. ಕೆಂಪಾದ, ಗಾಭರಿಯ ಮುಖದಿಂದ ರಾಧಿಕಾಳ ಬಳಿಗೆ ಬಂದ ಅವಳನ್ನು ರಾಧಿಕಾ, ಪ್ರಶ್ನಾರ್ಥಕವಾಗಿ ನೋಡಿದಳು. ಮನೋಜನಿಗೆ ಏನೋ ಹೇಳಲೆಂದು ತಿರುಗಿದಳು. ಅವಳ ಮನಸ್ಸಿನಲ್ಲಿ ನಾನಾ ಭಾವನೆಗಳು ಎದ್ದು ಹಾರಾಡುತ್ತಿದ್ದವು. ಮನೋಜ ಯಾರೋಡನೆಯೇ ಮಾತಾಡು ತ್ತಿದ್ದ ಅವಳಿಗೆ ನಿರಾಸೆಯಾಯಿತು. ಆದರೂ ಏನೋ ಅನಿಸಿಕೆಗಳಪ.

ರಿಸೆಪ್ಸನ್ ಮುಗಿದು, ಎಲ್ಲರೂ ಡಿನ್ನರ್ ಮುಗಿಸಿ, ಅವರವರ ಮನೆಗೆ ಹೊರಟರು. ಗೀತಾ ಮುರಳಿ ಮತ್ತೊಮ್ಮೆ ಇಬ್ಬರನ್ನು ಅಭಿವಂದಿಸಿದರು. ಮುರಳಿ ಬೇಕಂತ ಕೇಳಿದ.

ಹನಿಮೂನ್‌ಗೆ ಯಾವಾಗ ಹೋಗ್ತೀರಿ?"

"ಶ್ ಎಂದಿದ್ದ ಬಾಯ ಮೇಲೆ ಬೆರಳಿಟ್ಟ ಮನೋಜ.

ರಾಧಿಕಾಳಿಗೆ ನಿರಾಶೆಯಾಯಿತು.

ನಮ್ಮ ಮದುವೆ ಆದ ಮೇಲೆ ಎಲ್ಲರೂ ಒಟ್ಟಿಗೇ ಹನಿಮೂನ್‌ಗೆ ಹೋದರಾಯ್ತು ಅಲ್ವೇನೇ ಗೀತಾ?" ಅವನ ಮಾತಿಗೆ ಎಲರಿಗೂ ನಗು. ಮುರಳಿಯ ಮಾತಿನಿಂದ ಗೀತ ಹೆದರಿದಳು..

ಹೊತ್ತಾಗುತ್ತೆ...ಮೊದಲು ನನ್ನನ್ನು ಮನೆಗೆ ಬಿಡ್ತೀಯಾ?"

ಓ...ಕೇ. ಎಂದು ಹೇಳಿ, ನವದಂಪತಿಗಳಿಗೆ ಗುಡ್‌ನೈಟ್ ಹೇಳಿದರು. ಇವರುಗಳೂ ಮನೆಗೆ ವಾಪಸ್ಸಾದರು ರಂಗನಾಥನಿಗೆ ತನ್ನ ಮದುವೆಯ ನೆನಪಾಗಿತ್ತು. ಅಂದಿನಂತೆಯೇ ಇಂದೂ, ನವಮದುಮಕ್ಕಳನನಉ ಒಳಗೆ ಬರ ಮಾಡಿಕೊಳ್ಳಲು ಮನೆಯಲ್ಲಿ ಇನ್ಯಾರಿಲ್ಲ. ಮುರಳಿಯ ತಾಯಿಗೆ, ಅಥವಾ ಪಕ್ಕದ ಮನೆಯವರಿಗೆ ಹೇಳಿದ್ದರೆ, ಯಾರನ್ನ.ಆತರೂ ಕಳಿಸಿ ಸಿದ್ದತೆ ಮಾಡರುತ್ತಿದ್ದರು.ಆಗ ಅಮ್ಮ ಬದುಕಿದ್ದಳು. ಈಗ ನಾನು ಬದುಕಿದ್ದೇನೆ ಅಷ್ಟೇ. ರಾಧಿಕಾ ಈ ಮನೆಯವಳು, ಕೆಲವು ದಿನಗಳಿಂದ ಇಲ್ಲೇ ಇದ್ದವಳು. ಇನ್ನೂ ಈ ಹೊಸ ಪರಿಯೇಕೆ ಅಂತೆನ್ನಿಸಿ ದ್ದರೂ, ಮನಸ್ಸಿನಲ್ಲಿ ಏನೋ ಅಳುಕು.

"ಇಬ್ಬರೂ ದೇವರಿಗೆ ನಮಸ್ಕಾರ ಮಾಡಿ ಬನ್ನಿ ಬೆಳಗಿನಿಂದ ಸುಸ್ತಾಗಿದ್ದೀರಿ. ಬೇಗ ಮಲಗೋರಂತೆ. ಮನೋಜ ರಾದಿಕಾ ದೇವರನ್ನೂ ಇಟ್ಟಿದ್ದ ಜಾಗಕ್ಕೆ ಹೋದರು. ರಂಗನಾಥ ಎರಡು ಲೋಟಗಳಲ್ಲಿ ಹಾಲನ್ನು ಬೆರಸಿ, ಮನೋಜನ ರೂಮಿನಲ್ಲಿ ತಂದಿತ್ತ. ರಾಧಿಕಾ ರೂಮಿನೊಳಗೆ ಹೋದ ಮೇಲೆ ಮನೋಜನನ್ನೂ ಕೂರಿಸಿಕೊಂಡು ತಿಳುವಳಿಕೆ ಹೇಳಿದ.

ನಿನ್ನ ಮದುವೆಯೂ ನಿನ್ನ ಜೀವನದಲ್ಲಿ ಒಂದು ಮುಖ್ಯವಾದ ಘಟ್ಟ.ಗಳಲ್ಲಿ ಒಂದು ಇದರಿಂದ ನಿನ್ನ ಗುರಿಸಾಧನೆಗೆ, ವಿದ್ಯಾಬ್ಯಾಸಕ್ಕೆ ಯಾವ ತೊಂದರೆಯೂ ಬರಬಾರದು. ಇದೂ ಒಂದು ತರಹದ ಎಕ್ಸ್‌ಪಿರಿಮೆಂಟ್ ನಿಮ್ಮ ನಿಮ್ಮ ಧ್ಯೇಯವನ್ನು ಸಾಧಿಸುವುದಕ್ಕೆ ಗುರಿ ತಲಪುವುದಕ್ಕೆ ಮದುವೆ ಅಡ್ಡಿಯಲ್ಲ. ಅಂತ ತೋರಿಸುವುದಕ್ಕೆ ಒಂದು ಒಳ್ಳೆಯ ಅವಕಾಶ. ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕಿ ನೀನು ಮದುವೆ ಆದರೂ, ನಿನ್ನ ಗುರಿಸಾಧನೆ ನಿನ್ನ ಕೈಲಿದೆ. ಅದಕ್ಕೆ ಚ್ಯುತಿ ಬರಬಾರದು.

ಓದುವ ವಯಸ್ನಲ್ಲಿ ಲವ್ ಅದೂ ಇದೂ ಅಂತ ತಲೆ ಕೆಡಿಸಿಕೊಂಡವನಲ್ಲ ನೀನು, ನನಗೆ ಚೆನ್ನಾಗಿ ಗೊತ್ತು. ಮದುವೆ ಆಗಿಯೂ, ಸಂಸಾರದಲ್ಲಿದ್ದುಕೊಂಡು. ವ್ಯಾಸಂಗ ಮಾಡುವ ಸಂಶೋದನೆ ನಡೆಸುವ ದಂಪತಿಗಳ ಉದಾಹರಣೆಗಳಿವೆ. ಗಂಡ ಹೆಂಡತಿಯ ಸಂಬಂಧ ಅವರ ಗುರಿ ಸಾಧನೆಗೆ ಅಡ್ಡಿ ಬರಲಿಲ್ಲ. ಅಂತಹ ದಂಪತಿಗಳು ನೀವಾಗಬೇಕು. ಸಂಸಾರಿಯಾಗಿಯೂ, ನಿನ್ನ ದ್ಯೇಯವನ್ನು ಸಾಧಿಸಬೇಕು. ರಾಧಿಕೆಯನ್ನು ಅದೇ ದಾರಿಯಲ್ಲಿ ನಡೆಸಬೇಕು. ಇದೇ ನನ್ನ ಆಸೆ. ಮನೋಜನ ಕೈ ಹಿಡಿದು ಹೇಳಿದ.

"ನನಗಿಂತ ಅವಳ ಚಿಂತೆಯೇ ಹೆಚ್ಚು ನಿನಗೆ?ಅದ್ಯಾಕೆ?" ಅಸೂಯೆ ಯಿಂದ ಕೇಳಿದ. ರಂಗನಾಥ ತಬ್ಬಿಬ್ಬಾದ. ಎಲ್ಲಾ ಹೇಳಿ ಬಿಡುವ ಮನಸ್ಸಾಯಿತು. ಆದರೆ ಇವತ್ತು ಈ ಗಳಿಗೆಯಲ್ಲಿ ಖಂಡಿತಾ ಬೆಡವೆನಿಸೆತು. ಒಂದು ಗಳಿಗೆ ತಡೆದು, ನುಡಿದ.

ಪಾಪ ಚಿಕ್ಕವಳು. ಅನ್ಯಾಯವಾಗಿ ಅನಾಥೆಯಾಗಿ ಬಿಡ್ತಾಳೆ. ಈಗ ಅವಳಿಗೆ ನಾವೇ ಬೆಂಬಲ ಅಂತ ಇಷ್ಟನ್ನು ಮಾಡಿದೆ. ನಿನಗೂ ಅವಳ ಜೊತೆ ಸ್ನೇಹವಿದೆ. ಪ್ರೀತಿ ಇದೆ. ಅವಳು ನಿನಗೆ ತಕ್ಕವಳು. ಆದರೆ ನನ್ನ ಮೇಲೇಕೆ ಗುಮಾನಿ?ಈಗ ಆ ಮಾತೆಲ್ಲಾ ಬೇಡ. ತುಂಬಾ ಹೊತ್ತಾಗಿ ಹೋಗಿದೆ. ಹೋಗು ಮಲಗು ಅವನನ್ನು ಕಳಿಸಿದ.

ಮನೋಜ ರೂಮಿಗೆ ಬರುವಷ್ಟರಲ್ಲಿ ರಾಧಿಕಾ ಬಟ್ಟೆ ಬದಲಾಯಿಸಿದ್ದ ಳು. ಅರೇ ಇಷ್ಟು ಬೇಗ ಡ್ರೆಸ್ ಚೇಂಜ್ ಮಾಡಿಬಿಟ್ಟಿಯಾ? ನಾನು ನಿನ್ನನ್ನು ಸರಿಯಾಗಿ ನೋಡಲೇ ಇಲ್ಲ. ಆ ಸೀರೆ...ಆ ಮೇಕಪ್‌ನಲ್ಲಿ ಪೇಚಾಡಿದ.

"ನೀನು ಬೇಕು ಅಂತ ನನ್ನನ್ನು ಅವಾಯ್ಡ್ ಮಾಡ್ತಿದ್ದೆ. ಹೋಗಲಿ ಮತ್ತೆ ಆ ಸೀರೇನಾ ಉಡಲಾ?"

ಬೇಡ ಬಿಡು...ಎನ್ನುತ್ತ ಅವನು ತಾನೂ ಡ್ರೆಸ್ ಬದಲಾಯಿಸಿದ. ಅವನನ್ನೇ ಗಮನಿಸುತ್ತಿದ್ದ ರಾಧಿಕೆಯ ಮನಸ್ಸು ಮಧುರಭಾವನೆಗಳಿಂದ ತುಂಬಿ ಹೋಯಿತು. ಇವನು ನನ್ನ ಪತಿ. ಇವನು ನನ್ನಾವನು. ನನ್ನ ಇವನ ಸಂಬಂಧ ಸ್ನೇಹಕ್ಕೆ ಯಾವ ಅಡ್ಡಿಯೂ ಇಲ್ಲ...ಅವನು ನನ್ನ ಬಳಿಗೆ ಬರಬಾರದೇ..ಜೀವಮಾನವೆಲ್ಲಾ ನೆನಪಿನಲಇ ಉಳಿಯುವಂತಹ ರಾತತ್ರಿ ಇದಾಗಬೇಕು...ಆದರೆ....ಆದರೆ...ಅವನು ನಿಂತಲ್ಲೇ ನಿಂತಿದ್ದಾನಲ್ಲ...ನಾನೇ ಹೋಗೋಣ ಅಂತ ಅಂದರೆ, ನನ್ನ ಕಾಲುಗಳು ನೆಲಕ್ಕೆ ಅಂಟಿದಂತಾಗಿದೆಯಲ್ಲ...

ಮನೋಜ ಟೇಬಲ್ ಮೇಲೆ ಇಟ್ಟಿದ್ದ ಹಾಲಿನ ಲೋಟಗಳನ್ನು ಗಮನಿಸಿದ. ಅರೇ ಈಗ್ಯಾಕೆ ಹಾಲು? ಹೊಟ್ಟೆ ತುಂಬಿ ಹೋಗಿದೆಯಲ್ಲಾ....? "ರಾಧಿಕಾ ನೀನು ಕುಡೀತೀಯಾ? ಕೇಳಿದ ಅವಳು ತಲೆ ಆಡಿಸಿದಳು.

ನನಗೂ ಸೇರುವ ಹಾಗಿಲ್ಲ. ಆದರೆ ಮಾವ ತಂದುಕೊಟ್ಟಿದಾನೆ. ಕುಡಿದು ಬಿಡೋಣ. ಇಬ್ಬರಿಗೂ ಒಳ್ಳೆಯದು ಎಂದು ಹೇಳಿ, ಎರಡು ಲೋಟ ಹಾಲಿಗೂ ಒಂದೊಂದು ನಿದ್ದೆಯ ಮಾತ್ರ ಮುಳುಗಿಸಿ.ಅವಳ ಕೈಗೆ ಒಂದನ್ನಿತ್ತು ತಾನೊಂದನ್ನು ಕುಡಿದ. ಲೋಟಗಳನ್ನು ಟೇಬಲ್ ಮೇಲಿಟ್ಟು ಬಂದು ಅವಳ ಪಕ್ಕದಲ್ಲಿ ಕುಳಿತ. ರಾಧಿಕಾಳ ತನುಮನಗಳು ಮೃದವಾಗಿ ಕಂಪಿಸಿದವು. "ಕಂಗ್ರಾಲ್ಸ್ ಮಿಸೆಸ್ ಮನೋಜ್" ಎಂದ ನಗುತ್ತಾ.

"ಮನೋಜ್...ನಿನಗೆ ಬೇಜಾರೇನಿಲ್ಲ ತಾನೇ...ಕೇಳಿದಳು.

"ಒಂಥರ ಬೇಜಾರು....ಒಂಥರ ಬೇಜಾರಿಲ್ಲ. ಹುಂ ನಿನಗೆನ್ನ ನ್ನಿಸ್ತಿದೆ ಈ ಕ್ಷಣದಲ್ಲಿ.

ನನಗೆ ನೀನು ಬೇಕು, ಮನೋಜ್. ನಾನು ಈ ದಿನಕ್ಕಾಗಿ ಹಂಬಲಿಸುತ್ತಿದ್ದೆ. ಸಂಕೋಚವಿಲ್ಲದೇ ಹೇಳಿದಳು.

ಸಾರಿ..ರಾಧಿಕಾ ನೀನು ಏನು ಬಯಸ್ತಿದೀಯ ಅಂತ ನನಗೆ ಗೊತ್ತು ಆದರೆ ಅದಕ್ಕೆ ನಾವಿಬ್ಬರೂ ಸಿದ್ಧರಾಗಿಲ್ಲ. ನಾವಿಬ್ಬರೂ ಚಿಕ್ಕವರು. ದೂರ ದೂರವಾಗಿರೂವುದೇ ಒಳ್ಳೆಯದು.

ಆದರೆ ನಮಗೆ ಎಲ್ಲಾ ಗೊತ್ತಿದೆ. ತಿಳುವಳಿಕೆ ಇಲ್ಲದವರೆನಲ್ಲ."

ನಿನಗೆ, ನಾನು ಹಾಕಿದ್ದ ಕಂಡೀಷನ್ ಜ್ಞಾಪಕ ಇದೇ ತಾನೇ...ನಮ್ಮಿಬ್ಬರ ಧ್ಯೇಯ ಸಾದಿಸುವವರೆಗೂ ನಾವಿಬ್ಬರೂ ಮುಂಚಿನಂತೆ ಬರೀ ಫ್ರೆಂಡ್ಸ್...ಗುಡ್‌ನೈಟ್...ಎಂದ. ರಾಧಿಕಾ ನಿರಾಸೆಯಿಂದ ಮೂತಿ ಉದ್ದ ಮಾಡಿದಳು.

"ಮುಂಚಿನಂತೆ ಅಂತ ಅಂದೆಯಲ್ಲಾ..ಹಾಗಾದ್ರೆ ಹೊರಗೇ ಹೋಗಿ ಮಲಕ್ಕೋ ಪಾಪ. ಅಂಕಲ್ ಒಬ್ಬರೇ ಮಲಗಿದಾರೆ."

" ಅದೇ ಅಂಕಲ್ ಬುದ್ದಿವಾದ ಹೇಳಿ ಕಳಿಸಿದ್ದಾನೆ. ಸುಮ್ಮನೇ ಮಲಕ್ಕೋ ಸಿಡುಕಿದ.

ಇವತ್ತಾದ್ರೂ ಸಿಡುಕದೇ ಒಳ್ಳೇ ಮಾತಾಡಬಾರದಾ ಮನೋಸಪ್ಪಗಿನ ಧ್ವನಿಯಲ್ಲಿ ಕೇಳಿದಳು.

ಸಿಡುಕದೇ, ಮುದ್ದು ಮುದ್ದಾಗಿ ಮಾತಾಡಿದ್ರೆ ಏನಾಗುತ್ತೆ ಅಂತ ನನಗೆ ಗೊತ್ತು. ನನಗೆ ನಿದ್ದೆ ಬರ್ತಿದೆ ಸುಮ್ಮನೇ ನನ್ನನ್ನು ಬಿಡು. ಹಾಗೆ ಬಾಯಿ ಹೇಳಿದ್ರೂ ಅವನಿಗೂ ನಾಚಿಕೆ ಆಗಿತ್ತು. ವ್ಯಥೆಯೂ ಆಗಿತ್ತು. ನನ್ನನ್ನು ನಂಬಿ ಮೆಚ್ಚಿ, ಮದುವೆಯಾದವಳನ್ನು ಓತೈಸಿ, ನನ್ನವಳನ್ನಾಗಿ ಮಾಡಿಕೊಳ್ಳಬೇಕಾದ ಶುಭದಿನ ಇದು. ಅಂತಹೃದರಲ್ಲಿ ಹೀಗೆ ಒರಟಾಗಿ ಮಾತನಾಡಬೇಕಾದ ಸ್ಥಿತಿ ಬಂದಿದೆ.ಅಂದುಕೊಂಡು ಕೊರಗಿದ.

ರಾಧಿಕಾಗೆ ಅವನ ಮಾತಿನಿಂದ ದುಃಖ ಒತ್ತರಿಸಿ ಬಂತು. ಅವನು ಮದುವೆಯ ಈ ಮೊದಲ ರಾತ್ರಿ ಎಲ್ಲಾ ಮರೆತು ತನ್ನನ್ನು ಮುದ್ದಿಸಿ ತನ್ನ ಮೇಲೆ ಪ್ರೇಮಧಾರೆ ಸುರಿಸುತ್ತಾನೆಂದೇ ಭಾವಿಸಿದ್ದಳು ಆದರೆ ಈಗ ?ದುಃಖ ಒತ್ತರಿಸಿಕೊಂಡು ಬಂದಿತ್ತು. ಬಿಕ್ಕಿದಳು.

"ಛಿ...ಅಳ್ತಾ ಇದೀಯ...? ಅಳುವಂಥಾದ್ದೇನಾಯ್ತು? ಯಾರಿಗಾದರೂ ಕೇಳಿಸಿದರೆತಪ್ಪು ತಿಳ್ಕೋತಾರೆ ಅಷ್ಟೇ...

ಮನೋಜ್ ನಾನು ನಿನ್ನ ಹೆಂಡತಿ. ನಿನಗೆ ಹೇಗೆ ಬೇಕೋ ಹಾಗೇ ಇರುಕ್ಕೇ ಪ್ರಯತ್ನಿಸುತ್ತಿವಿ. ನಿನ್ನ ಚಿಂತೆ ಏನೂಂತ ನನಗೂ ಅರ್ಥವಾಗುತ್ತೆ. ನಮ್ಮಿಬ್ಬರಓದಿಗೆ ಭಂಗ ಬರುವಂತಹ ತಪ್ಪು ನನ್ನಿಂದ ಖಂಡಿತಾ ನಡೆಯೋಲ್ಲ.ಇದು ನನ್ನ ಪ್ರಾಮಿಸ್. ಆದರೆ ನನ್ನನ್ನು ದೂರ ಮಾತ್ರ ಮಾಡಬೇಡ. ಒರಟು ಮಾತುಗಳಿಂದ ನನ್ನನ್ನು ನೋಯಿಸಬೇಡ. ನಿನ್ನ ಪ್ರೀತಿಯ ಮಾತುಗಳೂ ನನ್ನ ಪಾಲಿಗೆ ಇಲ್ಲದಿದ್ದರೆ ನಾನು ಹುಚ್ಚಿಯಾಗಿ ಬಿಡ್ತಿವಿ. ಮತ್ತೆ ಬಿಕ್ಕಿದಳು.

"ಛಿ. ಹುಚ್ಚಿ. ನಿನ್ನನ್ನ ದೂರ ಮಾಡ್ತಿನಾ? ನೀನಿಲ್ಲದೇ ನಾನೂ ಇರುಕ್ಕೆ ಆಗುಲ್ಲ.

ಆದರೆ, ಈಗ ಮಾತ್ರ ನೀನು. ನಾನು ಹೇಳಿದಂತೆ ಕೇಳಬೇಕು"

"ಆಗಲಿ. ಮನೋಜ್ ನೀನು ಹೇಳಿದಂತೆನೇ ಆಗಲಿ. ನೀನು ನನ್ನವನು. ಮಾವ ನನ್ನ ತಂದೆ ಸಮಾನ. ನೀವಿಬ್ಬರೂ ಹೇಳಿದಂತೆ ಕೇಳುವುದು ನನ್ನಧರ್ಮ.

"ವೆರಿಗುಡ್...ನನ್ನ ಜಾಣಿಯರಿಗೆ ಇಷ್ಟು ತಿಳುವಳಿಕೆ ಇದ್ದರೆ ಬೇಕಾದಷ್ಟು ಎಂದು ಹೊಗಳುತ್ತಾ ಅವಳ ತಲೆ ಸವರಿದ.

ನನ್ನ ಸನಿಹದಲ್ಲಿ ಕೂತು ಮಾತಾಡುತ್ತಿದ್ದವನನ್ನು ಬಾಚಿ ತಬ್ಬಿ, ಮುದ್ದಾಡಬೇಕೆಂಬ ಬಯಕೆ ಅವನಲ್ಲಿ ಪುಟಿದೆದ್ದಿತು. ಆದರೆ, ಅವನ ಮಾತುಗಳೂ, ಅವಳಿಗೆ ಸವಾಲಾಗಿ ಕಂಡವು. ನನಗೂ ಛಲ ಇದೆ, ನಾನೂ ಎಲ್ಲಾ ಸಾಧಿಸಬಲ್ಲೆ ಎಂಬ ದೃಢಮ ನಿರ್ಧಾರ ಅವಳಲ್ಲೂ ಉದಿಸಿತು. ತನ್ನನ್ನು ತಾನೇ ಆ ಅಚಲ ಬಂಧನದಲ್ಲಿ ತೊಡಗಿಸುಕೊಳ್ಳುತ್ತಿರುವಂತೆಯೇ. ನಿದ್ದೆಯ ಮಾತ್ರೆ ಅವರಿಬ್ಬರ ಮೇಲೂ ಪರಿಣಾಮ ಬೀರಿತ್ತು. ಇಬ್ಬರೂ ನಿದ್ದೆಯ ಆಳಕ್ಕೆ ಇಳಿದು ಹೋದರು.

ಬೆಳಿಗ್ಗೆ, ಇಬ್ಬರಿಗೂ ಎಚ್ಚರವಾದಾಗ, ಕಸಾಕಷ್ಟು ಬೆಳಕಾಗಿತ್ತು. ರಂಗನಾಥ ಹೊಸದಾಗಿ ಮದುವೆಯಾದವರು, ಎಬ್ಬಿಸಿದರೆ, ಏನಂದುಕೊಳ್ಳುತ್ತಾರೋ ಎನ್ನುವಂತೆ ಎಂದೆನಿಸಿ ನಾಚಿಕೆ ಆಗಿತ್ತು. ಪಕ್ಕದಲ್ಲಿ ಸಕ್ಕರೆ ನಿದ್ದೆಯಲ್ಲಿ ಮಲಗಿದ್ದ ರಾಧಿಕಾಳನ್ನೇ ದೀರ್ಘವಾಗಿ ನೋಡಿದ. ಈ ಮುದ್ದು ರಾಜಕುಮಾರಿ, ರಾತ್ರಿಯಲ್ಲಾ ನನ್ನ ಪಕ್ಕದಲ್ಲಿ ಮಲಗಿದ್ದಳು ಎನ್ನುವ ನೆನಪಾಗಿ, ಮೈಯೆಲ್ಲಿ ಹೊಸ ಅನುಭವ ಒಡೆಯಿತು. ಹಿಂದಿನ ರಾತ್ರಿ ತಮ್ಮಿಬ್ಬರ ಮಾತು ಮುಗಿಯುವ ಮುಂಚೆಯೇ ತಾವಿಬ್ಬರೂ ನಿದ್ದೆ ಹೋದ ನೆನಪಾಗಿ ,ಸಮಾಧಾನವಾಯಿತು.

"ಗುಡ್ ಮಾರ್ನಿಂಗ್ ಮೇಡಂ...ಏಳಿ...ಎಂದ ಅವಳನ್ನು ಎಬ್ಬಿಸುತ್ತಾ

ರಾಧಿಕಾ ಹೊರಳಿ ಇನ್ನೊಂದು ಪಕ್ಕಕ್ಕೆ ತಿರುಗಿ ಮಲಗಿದಳು.

''ಏಯ್...ಏಳು ಮಾವ ಕಾಯ್ತಾ ಇದಾರೆ. ಮತ್ತೆ ಎಬ್ಬಿಸಿದ. ಕಣ್ಣುಗಳನ್ನು ಹೊಸಕುತ್ತಾ ರಾಧಿಕಾ ಎದ್ದಳು.

"ನಾವು ರಾತ್ರಿಯೆಲ್ಲಾ ಮಲಗೇ ಇಲ್ಲ ಜಾಗರಣೆ ಮಾಡಿರಬಹುದು ಅಂತ ಅಂದ್ಕೋತಾನೆ ಅಷ್ಟೇ ಏಳು...ಮುಖ ತೊಳಕೋ...ನಾನು ಇಬ್ಬರಿಗೂ ಕಾಫಿ ಬೆರೆಸಿ ಕೊಂಡು ತರ್ತೀವಿ" ಎಂದ.

"ಸ್ಲೀಪಿಂಗ್ ಪಿಲ್ ತಗೊಂಡು ಮಲಗಿದ್ದೆ. ಅದಕ್ಕೆ ಬೇಗ ಎಚ್ಚರವಾಗಲಿಲ್ಲ ಅಂತ ನಾನೇ ಮಾವನಿಗೆ ಹೇಳಿ ಬಿಡ್ತೀವಿ"

"ಸಧ್ಯ ಪುಣ್ಯಾವ್ರೊತ್ತಿ.ಏನೂ ಹೇಳಬೇಡ. ಮಾವ ಏನೂ ಕೇಳುಲ್ಲ."

ಇಬ್ಬರೂ ಹೊರಗೆ ಬಂದರು. ಓರೆಗಣ್ಣಿನಿಂದ ರಾಧಿಕಾಳನ್ನೇ ರಂಗನಾಥ ಗಮನಿಸಿದ ನಲುಗದ ಹೂವಿನಂತೆ ನಳನಳಿಸುತ್ತಾ ಇದ್ದ ಮುಖವನ್ನು ಗಮನಿಸಿ ನಿರಾಳವಾದ ಉಸಿರನ್ನು ಬಿಟ್ಟ. ಅವನಿಗೆ ತನ್ನ ಮದುವೆಯ ರಾತ್ರಿ ನೆನಪಾಗಿತ್ತು. ಗುಡ್ ಮಾರ್ನಿಂಗ್ ಅಂಕಲ್ ಎಂದಳು ನಿತ್ಯದಂತೆ.

"ಮಗು ಬಾ...ಇಲ್ಲಿ" ಹತ್ತಿರ ಬರುವಂತೆ ಕರೆದ. ಬಂದಳು.

"ಇನ್ನೂ ಮೇಲೆ ನನ್ನನ್ನ ಅಂಕಲ್ ಅಂತ ಕರೆಯಬೇಡ. ನಾನು ಮನೂಗೆ ಮಾವ, ...ನಿನಗೆ ನಾನು ತಂದೆಯ ತರಹ, ಅಪ್ಪಾ ಅಥವಾ ಡ್ಯಾಡಿ ಅಂತ ಕರೀ ಪರವಾಗಿಲ್ಲ.

ರಾಧಿಕಾ ಸಂತಸದಿಂದ ಕಣ್ಣರಳಿಸಿದಳು.

"ಹುಂ ಆಗಲಿ ಡ್ಯಾಡಿ...... ಅವರಿಬ್ಬರ ಮಾತುಗಳನ್ನು ಕೇಳಿಸಿಕೊಂಡ ಮನೋಜ ಕೀಟಲೆ ಮಾಡಿದ.

ನನ್ನಂತಹ ಹಸ್ಬೆಂಡ್, ಮಾವನಂತಹ ಡ್ಯಾಡಿ, ಸಿಕ್ಕದರು ಅಂತ ಎಲ್ಲಾ ಮರೆತು ಬಿಡಬೇಡ. ಇವತ್ತಿಂದ ನಿನ್ನ ದಿನಚರಿಯೇ ಬೇರೆ. ನಾನು ಒಂದು ಟೈಂ ಟೇಬಲ್ ಹಾಕಿ ಕೊಡ್ತಿವಿ. ಅದನ್ನು ಫಾಲೋ ಮಾಡು...ಎಲ್ಲಾ ಸರಿ ಹೋಗುತ್ತೆ.

ಥೂ ಇವನೊಬ್ಬ. ನನ್ನ ಮೂಡ್‌ನೇ ಕೆಡಿಸಿ ಬಿಡ್ತಾನೆ. ಅಂತ ಬೈದು ಕೊಂಡರೂ ಅವನ ಮಾತನ್ನು ಕೇಳಲೇಬೇಕಾಗಿತ್ತು

ಅಂದಿನಿಂದ ರಾಧಿಕಾಳ ದಿನಚರಿ, ಇನ್ನೊಂದು ರೀತಿಯಲ್ಲಿ ಪ್ರಾರಂಭವಾದವು. ಬೆಳಿಗ್ಗೆ ಎದ್ದು ಮನೋಜನ ಜೊತೆ ಜೊತೆಗೆ ಮನೆಯ ಕೆಲಸಗಳನ್ನು ಕಲಿತುಕೊಂಡಳು. ಅಡಿಗೆ ಮಾಡುವುದನ್ನು ಹೇಳಿಕೊಟ್ಟ. ಕಾಲೇಜಿಗೆ ಒಟ್ಟಿಗೇ ಹೋಗಿ ಬರುತ್ತಿದ್ದರು. ಮನೆಯಲ್ಲಿ ಒಟ್ಟಿಗೇ ಕೂತು ಸ್ಟಡೀಸ್ ನಡೆಸುತ್ತಿದ್ದರು. ಇಬ್ಬರ ಮನಸ್ಸು ಚಂಚಲವಾಗದಂತೆ, ತಮ್ಮ ಛಲದ ರೇಖೆಯನ್ನು ಎಳೆದುಕೊಂಡು ಮನಸ್ತಾಪ ಬರದಂತೆ ಅನ್ಯೋನ್ಯವಾಗಿದ್ದರು.

ಕ್ರಮೇಣ ಅವಳಿಗೆ ಈ ದಿನಚರಿ ಅಭ್ಯಾಸವಾಗಿ ಹೋಯಿತು. ರಂಗನಾಥ ಅವಳನ್ನು ವಾತ್ಸಲ್ಯದಿಂದ ಕಾಣುತ್ತಾ. ಅವಳ ಕಾಲೇಜು, ಓದು ಪರೀಕ್ಷೆ ಇವುಗಳ ಬಗ್ಗೆ ವಿಚಾರಿಸುತ್ತಿದ್ದ. ಮನೋಜ ಅವಳನ್ನು ಚೆನ್ನಾಗಿ ನೋಡಿಕೊಳ್ಳುತ್ತಿದಾನೆ ಎನ್ನುವುದರ ಬಗ್ಗೆ ಯಾವ ಅನುಮಾನವೂ ಇರಲಿಲ್ಲ.

ಕಾನೂನಿನ ಪ್ರಕಾರ, ನಿರ್ಮಲಳಾಸ್ತಿಯೆಲ್ಲಾ ರಾಧಿಕಾಳ ಹೆಸರಿಗೆ ವರ್ಗಾಯಿಸಲ್ಪಟ್ಟಿತು. ಅವರಿದ್ದ ಮನೆ ಬಾಡಿಗೆ ಮನೆಯಾದುದರಿಂದ ಖಾಲಿ ಮಾಡಿದರು. ಕೆಲವು ಸಾಮಾನುಗಳನ್ನು ಮುರಳಿಯ ಮನೆಯಲ್ಲಿಟ್ಟರು. ತಮಗೆ ಬೇಕಾದ ವೈದ್ಯಕೀಯ ಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಮಾತ್ರ ತಮ್ಮ ಮನೆಗೆ ತಂದಿದ್ದರು. ಯಾವುದೋ ಕಾನ್ ಫರೆನ್ಸಿನಲ್ಲಿ ತೆಗೆದ ನಿರ್ಮಲೆಯ ಪೋಟೋವನ್ನು ರಂಗನಾಥ ಯಾರಿಗೂ ತಿಳಿಯದಂತೆ ಜೋಪಾನವಾಗಿ ತೆಗೆದಿರಿಸಿಕೊಂಡ.

ಇಬ್ಬರ ಪರೀಕ್ಷೆಗಳು ಮುಗಿದಿದ್ದವು. ರಾಧಿಕಾ ನಾಲ್ಕನೇ ವರ್ಷದ ಕೋರ್ಸ್‌ಗೆ ಸೇರುವ ಅರ್ಹತೆ ಪಡೆದಿದ್ದಳು. ಮನೋಜ ಫಸ್ಟ್ ಕ್ಲಾಸಿನಲ್ಲಿ ಚನ್ನ ಕೊನೆಯ ವರ್ಷದ ಪರೀಕ್ಷೆಯಲ್ಲಿ ಪಾಸಾಗಿದ್ದ. ಹೌಸ್‌ಮನ್ ಷಿಪ್‌ಗಾಗಿ ಹೋಗಲಾರಂಭಿಸಿದ.

ರಾಧಿಕಾಳಿಗೆ, ಒಂದೊಂದುದಿನತನ್ನ ತಾಯಿಯ ನೆನಪು ಅತಿಯಾಗಿ ಬಾಧಿಸಿದಾಗ ಯಾರಿಗೂ ತಿಳಿಯದಂತೆ ಅತ್ತೂ ಹೃದಯ ಹಗುರ ಮಾಡಿಕೊಳ್ಳುತ್ತಿದ್ದಳು.

ಅಮ್ಮಾ ನಿನಗೆ ಎಷ್ಟು ಥ್ಯಾಂಕ್ಸ್ ಹೇಳಿದರೂ ಸಾಲದು. ಮನೋಜ್ ಅಂಕಲ್ ಇಬ್ಬರೂ ನನ್ನನ್ನು ತುಂಬಾ ಚೆನ್ನಾಗಿ ನೋಡಿಕೊಳ್ಳುತ್ತಿದಾರೆ. ನಾನೀಗ ಅಂಕಲ್‌ನ ಡ್ಯಾಡೀ...ಅಂತಲೇ ಕರೀತೀನಿ...ಅವರು ನನಗೆ ತಂದೆಯ ಪ್ರೀತಿಯನ್ನೇ ತೋರಿಸುತ್ತಿದಾರೆ....ಅಮ್ಮಾ ನೀನು ಬದುಕಿದ್ದಿದ್ದರೆ ಎಷ್ಟು ಚೆನ್ನಾ ಗಿರುತ್ತಿತ್ತು. ದುಗುಡದಿಂದ ತನ್ನಲ್ಲೇ ಹೇಳಿಕೊಳ್ಳುತ್ತಿದ್ದಳು. ತಾಯಿಯ ಪೋಟೋ ಸಹ ತನ್ನಲಿಲ್ಲವೆಂದು ವ್ಯಥೆಯಾಗುತ್ತಿತ್ತು.

ಅವಳ ಮೂಡ್ ಕೆಟ್ಟಿದೆ ಎಂದು ತಿಳಿದ ದಿನ ರಂಗನಾಥ ಚಿಂತೆಗೀಡಾಗುತ್ತಿದ್ದ... ಎಲ್ಲಾದರೂ ಹೊರಗೆ ತಿರುಗಾಡಿಕೊಂಡು ಬನ್ನಿ ಎಂದುಹೇಳಿ ಬಲವಂತ ಮಾಡಿ ಹೊರಗೆ ಕಳಿಸುತ್ತಿದ್ದ ಗೀತಾನನ ಮುರಳಿಯನ್ನ ತನ್ನ ಮನೆಗೆಊಟಕ್ಕೆ ಕರೆದು. ಎಲ್ಲರೂ ನಗುನಗುತ್ತಾ ಕಾಲ ಕಳೆಯುವಂತೆ ಮಾಡಿ, ರಾಧಿಕಾಳ ಮನಸ್ಸನ್ನು ಮುದ ಗೊಳಿಸಲು ಪ್ರಯತ್ನಿಸುತ್ತಿದ್ದ. ನಿಶ್ಚಿಂತೆಯಿಂದ ದಿನಗಳನ್ನು ಕಳೆಯುತ್ತಿದ್ದ. ಹೊರಗಿನ ಕೆಲಸ, ಮನೆಯ ಕೆಲಸ ಕೂಡಾ ಕಮ್ಮಿ ಆಗಿತ್ತು. ಟುಟೋರಿಯಲ್ ಕ್ಲಾಸಿಗೆ ಮಾತ್ರ ಹೋಗಿ ಬರುತ್ತಿದ್ದ. ಲೈಬ್ರರಿ ಉಪನ್ಯಾಸಗಳಿಗೆ ಆಗಾಗ್ಗೆ ಹೋಗಿ ಬರುತ್ತಿದ್ದ.

ಮತ್ತೆ ಒಂದುವರ್ಷ. ಅತೀ ಧೀರ್ಘವೆನಿಸಿದರೂ ಅದೂ ಕಳೆದಿತ್ತು. ಈಗ ಮನೋಜ. ಎಂ. ಎಸ್. ಗೆ ಸೇರಿದ್ದ. ರಾಧಿಕಾಕಡೆಯ ವರ್ಷದ ಕೋರ್ಸ್‌ನಲ್ಲಿದ್ದಳು. ತನೀಗ ಪೈನಲ್ ಇಯರ್ ಸ್ಟೂಡೆಂಟ್, ಮನೋಜನ ಸಹಕಾರದಿಂದ ಶ್ರದ್ಧೆಯಿಂದ ಓದಿ ಡಾಕ್ಟರಾಗುತ್ತಿರುವವಳು. ತಾನು....ಅಮ್ಮ ಬದುಕಿದ್ದಿದ್ದರೇ....ಮನೋಜನಂತಹ ಅಳಿಯನನ್ನು ರಂಗನಾಥನಂತಹ ಆತ್ಮೀಯ ಗಾರ್ಡಿಯನ್‌ನ್ನೂ ನೋಡಿ. ಎಷ್ಟು ಸಂತೋಷಪಡುತ್ತಿದ್ದಳೋ ಏನೋ...ಎನಿಸಿದಾಗ ದುಃಖದಿಂದ ಮನಸ್ಸು ಚಿಕ್ಕದಾಗುತ್ತಿತ್ತು.

ಮುರಳಿಗೆ ಎಂ. ಎಸ್‌ಗೆ ಸೀಟು ಸಿಗಲಿಲ್ಲವಾದ್ದರಿಂದ, ಅವನು ಗವರ್ನಮೆಂಟ್ ಹಾಸ್ಪಟಲ್‌ನಲ್ಲಿ ಡಾಕ್ಟರಾಗಿ ಕೆಲಸಕ್ಕೆ ಸೇರಿಕೊಂಡಿದ್ದ. ಈಗಲೂ ಸಮಯ ಸಿಕ್ಕಾಗ, ನಾಲ್ಕು ಜನವೂ ಒಂದಾಗಿ, ಸೇರಿ ಹರಟೆ ಹೊಡೆಯುತ್ತಿದ್ದರು. ಪಿಕ್ಚರಿಗೋ ಹೋಟೆಲ್ಲಿಗೋ ಹೋಗಿ ಮನೋರಂಜನೆ ಪಡೆಯುತ್ತಿದ್ದರು. ರಂಗನಾತ ಇದಕ್ಕೆಲ್ಲ ಒಂದು ದಿನವೂ ಪ್ರತಿಬಂಧಕ ಹಾಕಿದವನಲ್ಲ. ಹುಡುದಗರು ಖುಷಿಯಾಗಿರಲಿ.ಅವರ ಜವಾಬ್ದಾರಿ ಅವರಿಗೆ ತಿಳಿದಿದೆಯಲ್ಲ ಅಷ್ಟು ಸಾಕು., ಎಂದು ನೆಮ್ಮದಿಯಿಂದಿರುತ್ತಿದ್ದ. ಒಬ್ಬನೇ ಮನೆಯಲ್ಲಿ ಇರುವ ಸಮಯದಲ್ಲಿ ನಿರ್ಮಲೆಯ ಪೋಟೋ ತೆಗೆದಿರಿಸಿಕೊಂಡು. ಹಿಂದಿನ ದಿನಗಳನ್ನು ನೆನೆಸಿಕೊಳ್ಳುತ್ತಾ ಆ ಲೋಕದಲ್ಲಿ ಮುಳುಗಿ ಹೋಗಿರುತ್ತಿದ್ದ.

ಹೀಗೆ ಒಂದು ದಿನ, ರಾಧಿಕಾ, ಮನೋಜ ಇಲ್ಲದ ಹೊತ್ತಿನಲಿ ನಿರ್ಮಲೆಯ ಆ ಪೋಟೋ ಇಟ್ಟುಕೊಂಡು ಆ ದಿನಗಳನ್ನು ನೆನೆಯುತ್ತಿದ್ದ. ಮನೋಜ ಬಂದದ್ದು ಗೊತ್ತಾಗಲಿಲ್ಲ. ಅವನು ಮಾವಾ ಅಂತ ಕೂಗಿದಕೂಡಲೇ ಬೆಚ್ಚಿದವನಂತೆ, ಕೈಲಿದ್ದ ಪೋಟೋವನ್ನು ಅಲ್ಲಿದ್ದ ಒಂದುಪುಸ್ತಕದೊಳಗಿಟ್ಟು ಪುಸ್ತಕವನ್ನು ದಿಂಬಿನ ಅಡಿಯಲ್ಲಿ ಮುಚ್ಚಿಟ್ಟ. ಅದನ್ನು ಗಮನಿಸಿದ ಮನೋಜನ ಮನಸ್ಸು ಹುಳ್ಳಗಾಯಿತ. ಮಾವನ ಮೇಲೆ ಸಂಶಯ ಮೂಡಿತು. ಮಾವ ಎಂದೂ ಹೀಗೆ ಬೆಚ್ಚಿ ಏನನ್ನೂ ಮುಚ್ಚಿಟ್ಟವನಲ್ಲ. ಏನಿರಬಹುದು? ಕೆಟ್ಟು ಕುತೂಹಲ ಹೆಚ್ಚಾಯಿತು.ಆಕ್ಷಮದಲ್ಲಿ ಅದನ್ನು ಗಮನಿಸದವನಂತೆ ಸುಮ್ಮನಾಗಿ ಬಿಟ್ಟ. ಆದರೆ ಆ ಸಂಶಯ ಮನದಿಂದ ತೊಲಗಲಿಲ್ಲ. ಎನೋ ಕೊರೆತ. ತಡೆಯಲಾರದೇ, ರಂಗನಾಥ ಟುಟೋರಿಯಲ್ ಕ್ಲಾಸಿಗೆ ಹೋದಾಗ, ದಿಂಬಿನಡಿಯಿಂದ ಆ ಪುಸ್ತಕವನ್ನು ಹುಡುಕಿ ತೆಗೆದ. ಅದರೊಳಗಿ ನಿಂದ ಬಿದ್ದ ಪೋಟೋ ತೆಗೆದು ನೋಡಿದ. ರಾಧಿಕೆಯ ತಾಯಿ ತಕ್ಷಮಕ್ಕೆ ಅರ್ಥವಾಗ ದಿದ್ದರೂ, ಮಾವ ಏಕೆ ಈ ಪೋಟೋ ಇಟ್ಟುಕೊಂಡು ನೋಡುತ್ತಿದ್ದ?ನನಗೆ ಕಾಣಿಸದಂತೆ ಏಕೆ

ಮುಚ್ಚಿಟ್ಟ, ಇದೆಲ್ಲಿಂದ ಸಿಕ್ಕಿತು ಅವನಿಗೆ? ಆಕೆಗೂ ಇವನಿಗೂ ಏನು ಸಂಭಂಧ ಏನೋ ಇರಬೇಕು. ಅದರಿಂದಲೇ ಅವನಿಗೆ ರಾಧಿಕೆಯ ಮೇಲೆ ಅಷ್ಟು ವಾತ್ಸಲ್ಯ...... ಆದರೆ ಈ ವಿಷಯಗಳನ್ನು ನನ್ನಿಂದ ಏಕೆ ಮುಚ್ಚಿಟ್ಟ, ಈ ಇಪ್ಪತ್ತೈದು ವರ್ಷಗಳಲ್ಲಿ ಮಾವನಿಗೆ ಸಂಬಂಧಿಸಿದ ಯಾವ ವಿಷಯವೂ ನನಗೆ ತಿಳಿಯದ್ದಲ್ಲ..... ಆದರೆಇದೇಕೆತನಗೆ ಸಂಶಯಗಳಿಂದಕಲಕಿ ಹೋಯಿತು...ಆದರೆ ಮಾವನ ಬಗ್ಗೆ ಅನುಮಾನದಿಂದ, ಕೆಟ್ಟ ದೃಷ್ಟಿಯಿಂದ ಯೋಚಿಸಲುಅವನ ಮನಸ್ಸು ಒಪ್ಪಲಿಲ್ಲ. ಆದರೆ ಆ ಸಂಶಯವನ್ನು ಮನಸ್ಸಿನಿಂದ ತೆಗೆದು ಹಾಕಲೂ ಆಗಲಿಲ್ಲ.

ರಾಧಿಕಾ ಬಂದು , ಅವನನ್ನು ನೋಡಿ ಹೆದರಿದಳು.

ಏನಾಯ್ತು ಮನೋಜ್?ಯಾಕೆ ಹೀಗಿದೀಯಾ? ಕೇಳಿದಳು.

ಅವನು ಅವಳಿಗೆ ಏನು ಹೇಳಬಲ್ಲ.? ಏನೇ ಆದರೂ, ತನ್ನಮಾವ ಅವನ ಬಗ್ಗೆ ರಾಧಿಕಾಳಿಗೆ ತಿಳಿಸಲಾರ. ಅವಳು ತನ್ನ ಮಾವನನ್ನು ಸಂಶಯದಿಂದ ನೋಡುವುದನ್ನು ಅವನು ಖಂಡಿತಾ ಸಹಿಸಲಾರ...ಅಲ್ಲದೇ ಅದುಅವಳ ತಾಯಿಗೂ ಸಂಭಂಧಿಸಿದ ವಿಷಯ. ಏನೆಂದು ಹೇಳಿಯಾನು?

" ಏನೂ ಇಲ್ಲ. ಯಾಕೋ ಬೇಜಾರಾಯ್ತು...."

"ಮನೋಜ ಎಂದೂ ನೀನು ಹೀಗಿದ್ದೊನಲ್ಲ......ಏನಾಯ್ತು ಅಂತ ನನ್ನ ಹತ್ತಿರಾನೂ ಹೇಳಬಾರದಾ?

ಹಾಸ್ಪಿಟಲ್‌ನಲ್ಲಿ ಇವತ್ತು ಯಾಕೋ ತುಂಬಾ ಬೇಜಾರಾಯಿತು. ನೆನೆಸಿಕೊಂಡರೇ,ಮನಸ್ಸು ಹೆಪ್ಪು ಗಟ್ಟಿ ಹೋಗುತ್ತೆ.ಹೊಳೆದ ಸುಳ್ಳೊಂದನ್ನು ತಕ್ಷಣಕ್ಕೆ ಹೇಳಿದ.

" ಹಾಗಾದರೆ....ಎಲ್ಲಾದರೂ ಹೊರಗೆ ತಿರುಗಾಡಿಕೊಂಡು. ಮನಸ್ಸು ರಿಫ್ರೆಷ್ ಆಗುತ್ತೆ. ನಾನು ಅಡಿಗೆ ಮಾಡ್ತಿವಿ ಇವತ್ತೂ. ನೀನು ರೆಸ್ಟ್ ತಗೋ ಅವನ ಭುಜದ ಮೇಲೆ ಕೈ ಇಟ್ಟು ಹೇಳಿದಳು. ಮೊಟ್ಟ ಮೊದಲ ಬಾರಿಗೆ ಮನೋಜ ಅವಳ ಕೈಹಿಡಿದು ತನ್ನ ತುಟಿಗಳಿಗೆ ಒತ್ತಿಕೊಂಡ. ಅದೂ ಆವನಿಗರಿವಿಲ್ಲದೆ....."

"ಹಾಂ ...ಹಾಂ...ಅತಿಯಾಯ್ತು ನಿಂದು. ಆ ಮೇಳೆ ನೀನು ನನ್ನನ್ನೇ ಬೈತೀಯ"

"ಸಾರಿ. ರಾಧಿಕಾ...ಒಂದು ಗಳಿಗೆ ನನ್ನನ್ನು ನಾನೇ ಮರೆತು ಬಿಟ್ಟಿದ್ದೆ. ಸ್ವಲ್ಪ ಮುರಳಿ ಮನೆಗೆ ಹೋಗಿ ಬರ್ತಿವಿ. ಅವನು ಸಿಕ್ಕಿದ್ರೆ ಸ್ವಲ್ಪ ಲೇಟಾಗಬಹುದು ಮನೆಗೆ ಬ ರ ್ ೂ ೀ ದ ್ ು "

"ಪರವಾಗಿಲ್ಲ ನೀನು ಹೋಗಿ ಬಾ...ಎಂದುಹೇಳಿದರೂ, ನೀನೂ ಬರ್ತಿಯಾ ಎಂದು ಅವನು ಕೇಳಲಿಲ್ಲವಲ್ಲ ಎಂದು ಚಿಂತಿಸುತ್ತಿದ್ದಳು.ಅಷ್ಟರಲ್ಲಿ ಮನೋಜ ಹೊರಟು ಹೋಗಿದ್ದ. ಮನೋಜನ ಮುಖ ನೋಡಿ ಮುರಳಿ ಅಚ್ಚರಿಗೊಂಡ.

"ಏನೋ...ಏನಾಯ್ತೋ? ಹುಶಾರಿಲ್ಲದವನ ತರಹ ಕಾಣ್ತಿಯಲ್ಲ ಸಾಯಂಕಾಲಕ್ಕೆ ಮುಂಚೆ ಸರಿಯಾಗಿದ್ದೆ ನೀನು?'

"ಮುರಳಿ...ನಿನ್ನ ಹತ್ತಿರ ಸ್ವಲ್ಪ ಪ್ರೈವೇಟಾಗಿ ಮಾತಾಡಬೇಕು"

"ಅಂಥಾದೇನಪ್ಪಾ ಸೀಕ್ರೆಟ್? ಮನೇಲಿ ಎಲ್ಲಾ ಸರಿಯಾಗಿದೆ ತಾನೇ?" ಗೆಳೆಯನನ್ನು ಮಹಡಿಯ ಮೇಲಕ್ಕೆ ಕರೆದುಕೊಂಡು ಹೋದ.

"ನೀನು ನನಗೆ ಬರೀ ಸ್ನೇಹಿತ ಅಲ್ಲ. ಒಡಹುಟ್ಟಿದವನಿಗಿಂತ ಹೆಚ್ಚು ಅಂತ ತಿಳಕೊಂಡಿದೀನಿ"

"ಪೀಠಿಕೆ ಸಾಕು.ಏನಾಯ್ತು ಅಂತ ಹೇಳಬಾರದಾ?"

"ನಂಗೆ ಹೇಳುಕ್ಕೆ ತುಂಬಾ ಕಷ್ಟ ಆಗ್ತಾದೆ. ಕಣೋ...ಎಂದರೂ ನಿಧಾನವಾಗಿ, ತನಗೆ ತನ್ನ ಮಾವನ ಬಗ್ಗೆ ಮೂಡಿದ ಸಂಶಯ ಕುರಿತು ಹೇಳಿದ. ಮುರಳಿ ಗಂಭೀರವಾದ. ಒಂದುಗಳಿಗೆ ಏನೂ ಹೇಳಲಿಲ್ಲ.

"ತಿಳಿದರೆ ಎಲ್ಲರಿಗೂ ನಿನಗೆ ಆದ ಹಾಗೇ ಶಾಕ್ ಆಗುತ್ತೆ. ಮಾವನಿಗೇಖೆ ಈಗ ಹೀಗೆ ಅಂತ...? ಅಥವಾ ಹುಚ್ಚು ಗಿಚ್ಚು?"

"ಛೆ...ಹಾಗೇನಿಲ್ಲ. ನೀನು ತಪ್ಪು ತಿಳಿಕೊಂಡಿದೀಯ...ಡಾ ನಿರ್ಮಲಾ ಅವರ ಪತ್ನಿಯಾಗಿದ್ದರು...ಮನೋಜನ ಮುಕವನ್ನೇ ನೋಡುತ್ತಾ ನುಡಿದ. ಮನೋಜ ಮುರಳಿಯ ಮಾತಿಗೆ ದಿಗ್ಗನೆ ಎದ್ದು ನಿಂತ ಅವನಿಗೆ ನಂಬಲಾಗಿರಲಿಲ್ಲ. ಧ್ವನಿ ನಡುಗಿತ್ತು.

"ನಿನಗೆ ಹೇಗೆ ಗೊತ್ತು?"ಕೆಟ್ಟ ಧ್ವನಿಯಲ್ಲಿ ಕೇಳಿದ.

ಮುರಳಿ ತನಗೆ ತಿಳಿದದ್ದನ್ನೆಲ್ಲ ಸಂಕ್ಷಿಪ್ತವಾಗಿ ತಿಳಿಸಿದ. ಮನೋಜ ಶಿಲೆಯಂತೆ ಕುಳಿತಿದ್ದ.

" ಮನೋಜ್ .ನಿನ್ನ ಮನಸ್ನಲ್ಲಿ ಏನೇನಾಗ್ತಿದಗೆ ಅಂತ ನನಗೆ ತಿಳಿಯುತ್ತೆ... ಆದರೆ..."

ಈ ಮೊದಲೇ ನೀನೇಕೆ ನನಗೆ ತಿಳಿಸಲಿಲ್ಲ.?"

ನಾನಾಗಿಯೇ ಇದನ್ನು ನಿನಗೆ ಹೇಳಿದ್ದಿದ್ರೆ ನೀನು ನಂಬ್ತಿದ್ದೆಯಾ? ಅಲ್ಲದೇ ಅದರಿಂದ ಎಷ್ಟೆಷ್ಟು ಅನರ್ಥವಾಗುತ್ತಿತ್ತು. ಯೋಚಿಸು. ನಿನಗೆ ನಿನ್ನ ಮಾವನ ಮೇಲಿನ ಗೌರವ ಕಡಿಮೆ ಆಗುತ್ತಿತ್ತು. ರಾಧಿಕಾಳ ಮೇಲಿನ ಪ್ರೀತಿ ಕಡಿಮೆ ಆಗುತ್ತಿತ್ತು. ಅವಳ ಭವಿಷ್ಯ ಹಾಳಾಗಿಹೋಗುತ್ತಿತ್ತು. ಎಲ್ಲಕ್ಕಿಂತ ಮುಖ್ಯವಾಗಿ ಎಲ್ಲರ ಮನ್ಶಾತಿ ಕದಡಿ ಹೋಗಿ ಯಾರೂ ಸುಖವಾಗಿರಲು ಸಾಧ್ಯವಾಗುತ್ತಿರಲಿಲ್ಲ. ಯಾರ‍್ಯಾರ ಭವಿಷ್ಯ ಏನಾಗಿ ಹೋಗ್ತಿತೋ...ಈಗ ನಿಮ್ಮ ಮಾವ, ರಾಧಿಕಾ ತಂದೆ ಮಗಳು ಅಂತ ಬೇರಾರಿಗೂ ತಿಳಿಯದೇ ಇರುವುದರಿಂದ ಯಾರೂ ಏನನ್ನೂ ಪ್ರಶ್ನಿಸುವುದಿಲ್ಲ. ಇಬ್ಬರೂ ಹಾಯಾಗಿದಾರೆ ಅಲ್ವಾ?"

"ಆದರೂ...ಇದೆಲ್ಲಾ ಸರಿ ಹೋಗಲಿಲ್ಲ ಅಂತನ್ನಿಸುತ್ತೆಮುರಳಿ. ನಾನೀಗಲೇ ಮಾವನ್ನ ಇದೆಲ್ಲಾ ಏನೂಂತ ಕೇಳೇ ಬಿಡ್ತಿವಿ."

"ಈಗ ಅವರನ್ನ ಕೇಳಿದ್ರೆ ಏನುಪಯೋಗ?ಸುಮ್ಮನೇ ಒಂದು ಶೀತಲ ಯುದ್ದ ಪ್ರಾರಂಭವಾಗುತ್ತೆ.ರಾಧಿಕಾಳ ಓದಿಗೆ ಭಂಗ ಬರಬಹುದು ಇಷ್ಟು ದಿನ ಒದ್ದಾಡಿ ಮಾಡಿದ್ದೆಲ್ಲಾ. ನೀರಿನಲ್ಲಿ ಹೋಮ ಮಾಡಿದಂತಾಗುತ್ತದೆ."

"ಏನಾದ್ರೂ ಆಗಿ ಹೋಗಲಿ, ನನ್ನಿಂದಂತೂ ಸುಮ್ಮನಿರಲು ಸಾಧ್ಯವಿಲ್ಲ.

"ಸರಿಯಪ್ಪಾ. ನಿನ್ನ ಇಷ್ಟು ನೀನು ಪ್ರೀತಿಸಿದ ರಾಧಿಕಾ ಈಗ ನಿನ್ನ ಹೆಂಡತಿ . ಅವಳ ಬಾಳು ಹಾಳಾದರೂ ಚಿಂತೆ ಇಲ್ಲ. ಮಾವ ನಿನ್ನನ್ನನು ನಿಸ್ವರ್ಥವಾಗಿ ಸಾಕಿ ಬೆಳೆಸಿ, ನಿನ್ನನ್ನು ಈ ಮಟ್ಟಕ್ಕೆ ತಂದರು, ಅವರಿಗೆ ದುಃಖವಾದರೂ ಪರವಾಗಿಲ್ಲ

ಅಂತ ನಿನಗನ್ನಿಸಿದರೆ ಹಾಗೇ ಮಾಡು ಆದರೆ ಆ ಮೇಲೆ ನನಗೆ ಮಾತ್ರ ಏನೂ ಹೇಳಬೇಡ. ಎಂಥಾನೋ ನೀನು...ನಿನಗೂ ಅವರಿಬ್ಬರೇ ಹೆಚ್ಚು?...."

"ಇದರಲ್ಲಿ ಹೆಚ್ಚು ಕಮ್ಮಿಯ ಪ್ರಶ್ನೆ ಎಲ್ಲಿಂದ ಬರುತ್ತೆ? ನನಗೆ ನೀವು ಮೂವರೂ ಒಂದೇ ತರಹ. ಎಲ್ಲರನ್ನು ಗೌರವಿಸ್ತಿವಿ. ನೀನೀಗ ಒಬ್ಬ ಡಾಕ್ಟರು. ಡಾಕ್ಟರನ ಕರ್ತವ್ಯ ಏನು? ರೋಗಿಗಳನ್ನು ಗುಮಪಡಿಸುವುದು. ಯಾರೂ ಅವರ ರೋಗ ಉಲ್ಬಣಿಸುವಂತೆ ಮಾಡವುದಕಕೆ ಹೋಗುವುದಿಲ್ಲ. ಅಲ್ವಾ?"

"ಅಂದ್ರೇ..."

"ಅಂದ್ರೇ ಇರುವ ತೊಂದರೇನ,. ಸಮಸ್ಯೇನ ಕಮ್ಮಿ ಮಾಡಿಕೊಡು ಹಾಯಾಗಿರಬೇಕೆ ಹೊರತು, ಜಾಸ್ತಿ ಮಾಡಿಕೊಂಡು ಕೊರಗುವುದಲ್ಲ."

"ಆದರೂ....ನಿಜ ಏನೂಂತ ಒಂದಲ್ಲ ಒಂದು ದಿನ ಎಲ್ಲರಿಗೂ ತಿಳಿದೇತಿಳಿಯುತ್ತಲ್ಲ... ಇದರಿಂದ ಕೆಟ್ಟದೇ ಆಗುತ್ತೆ ಅಂತ ಯಾಕೆ ಯೋಚಿಸ ಬೇಕು....? ಒಳ್ಳೆಯದೂ ಆಗಬಹುದಲ್ಲ."

"ಹಾಗಾದ್ರೆ...ನಿನಗೆ ಸಂಶಯ ಬಂದ ಕೂಡಲೇ ನನ್ನ ಬಳಿಗೆ ಏಕೆ ಓಡಿ ಬಂದೆ? ನೀನೇ ಇಬ್ಬರಿಗೂ ಹೇಳಿ ಬಿಡಬಹುದಾಗಿತ್ತಲ್ಲ."

"ಏನೋ...ನೀನು ನನ್ನ ಆಪ್ತ, ನಿನ್ನನ್ನು ಒಂದು ಮಾತು ಕೇಳಿ ಬಿಡೋಣ ಅಂತನ್ನಿಸ್ತು"

"ಹಾಂ ಅಂದ್ರೇ...ನಿನಗೆ ಸೆಕೆಂಡ್ ಒಪಿನಿಯನ್ ಬೇಕಾಆಯ್ತು..... ನಿನೋಬ್ಬನಿಂದ ನಿರ್ಧರಿಸಲಾಗಲಿಲ್ಲ. ಅಲ್ವಾ? ನನ್ನ ಒಪಿನಿಯನ್ ಸರಿಯೋ ತಪ್ಪೋ... ನೀನೇ ಯೋಚಿಸಿ ನಿರ್ಧಾರ ಮಾಡು"

"ಸರಿ ...ತಪ್ಪಿನ ಪ್ರಶ್ನೆ ಇರಲಿ...ಇದು ದುಃಖದ ಸಂಗತಿ ಏನಲ್ಲ. ರಾಧಿಕಾಗೆ ಇವರೇ ತನ್ನ ಅಪ್ಪ ಅಂತ ತಿಳಿದರೆ ತುಂಬಾ ಸಂತೋಶ ಪಡಬಹುದೇನೋ...."

"ಆದರೆ...ದಿಢೀರನೇ ಹೋಗಿ ಹೇಳಿದರೆ ಅವಳಿಗೇನನ್ನಿಸಬಹುದು? ಮೊದಲು ಅಪ್ಪನ ಬಗ್ಗೆ ಅವಳಿಗೆಯಾವ ಭಾವನೆ ಇತ್ತುಅಂತ ನಿನಗೇನಾದರೂ ತಿಳಿದಿದೆಯಾ? ಯಾವಾಗಲಾದರೂ, ಮೋದಲು ಇದನ್ನೆಲ್ಲ ಮಾತನಾಡಿ, ತಿಳಿದುಕೊಂಡು ಆಮೆಲೆ ಇದನ್ನು ಹೇಳು. ಅದು ವಾಸಿ ಅಂತನ್ನಿಸುತ್ತೆ"

"ನಾನು ಯಾವತ್ತು ಅವಳ ಹತ್ತಿರ ಅವಳ ಅಪ್ಪನ ಬಗ್ಗೆ ಮಾತಾಡಿಯೋ ಇಲ್ಲ. ಅವಳಿಗೆಅನುಮಾನ ಬರುವುದಿಲ್ಲವೇ?"

"ಬರಬಹುದು.ಅದಕ್ಕೇ ಹೇಳಿದ್ದು...ದುಡುಕಬೇಡ ಅಂತ. ನಿಧಾನವಾಗಿ ಹೇಳಿದರಾಯ್ತು. ಕಡೇ ಪಕ್ಷ ಅವಳ ಪರೀಕ್ಷೆ ಮುಗಿದು ಹೋಗಲಿ. ಇಲ್ಲದಿದ್ದರೆ ಸುಮ್ಮನೇ ಎಕ್ಸೈಟ್ ಮೆಂಟ್..

"ಹಾಗಾದ್ರೆ ಒಂದು ಮಾತು...ಡಾ ನಿರ್ಮಲಾ ನನ್ನನ್ನು ದ್ವೇಷಿಸುತ್ತಿದ್ದರೆ? ಅವರಿಗೆ ಆದ ಅನ್ಯಾಯಕ್ಕೆ ನಾನೇಕಾರಣ ತಾನೆ...?"

ದ್ವೇಷವಿರಲಾರದು. ಆದರೆ ಪ್ರೀತಿಯಂತೂ ಇರಲಿಲ್ಲ. ಆದರೂ, ರಾಧಿಕಾ ಪ್ರೀತಿಸಿದ್ದು ನಿನ್ನನ್ನೆ ಎನ್ನುವ ಒಂದೇ ಕಾರಣಕ್ಕೆ ನಿಮ್ಮನ್ನು ಒಂದು ಗೂಡಿಸಿದ್ದಾರೆ. ಆದರೆ ಒಂದು ಮಾತು ನಿಜ. ಅವರಿಗೆ ನಿನ್ನ ಮಾವನ ಮೇಲೆ ಕೋಪ ಇದ್ದುದು.

ಕಡೆಗೂ ಅವರನ್ನೂ ಕ್ಷಮಿಸಲಿಲ್ಲವಂತೆ...

"ನನ್ನಿಂದಲೇ...ಇಷ್ಟೆಲ್ಲಾ ಆದದ್ದು. ನಾನು ಹುಟ್ಟಲೇ ಬಾರದಾಗಿತ್ತು. ಹುಟ್ಟಿದರೂ. ಅನಾಥನೇಕೆ ಆಗಬೇಕಾಗಿತ್ತು.?"

"ಅದನ್ನೆಲ್ಲಾ ಈಗ ಚಿಂತಿಸಿ ಏನು ಪ್ರಯೋಜನ ಹೇಳು?"

"ಹಾಗಾದ್ರೆ ಮಾವ ಮಾಡಿದ್ದು ಸರಿ ಅಂತೀಯಾ?"

"ಒಂಥರಕ್ಕೆ ಸರಿಅನ್ನಿಸುತ್ತೆ. ನಿಈಈವಿಬ್ಬರೂ ಜನ ಸೇವೆ ಮಾಡುನಂಥ ಆದರ್ಶ ಡಾಕ್ಟರಾಗಳಾಗುಕ್ಕೆ ಅವರೇ ಕಾರಣ ಅಲ್ವಾ? ಒಂದೇ ಮನೆಯಲ್ಲಿ ಅದೂ ಇಬ್ಬರು..."

"ಮೊದಲು ನಮ್ಮ ಜೀವನ, ಆಮೇಲೆ ಆದರ್ಶ...."

"ಹಾಗೆನ್ನಬೇಡ. ಶ್ರೀರಾಮಚಂದ್ರ ಹಾಗೆ ಯೋಚಿಸಿದ್ದರೆ, ಅವನು ವನವಾಸಕ್ಕೆ ಹೋಗಲೇ ಹಠದಿಂದ ರಾಜ್ಯಭಾರ ಮಾಡಿಕೊಂಡಿದ್ದರೆ. ಅವನನ್ನು ಆದರ್ಶ ರಾಮ ಅಂತ ಯಾರು ಅನ್ನುತ್ತಿದ್ದರು...ಅಂತಹ ಆದರ್ಶರಾಮ ನಿನ್ನ ಮಾವ."

"ಅದು ತ್ರೇತಯುಗದ ಮಾತು. ಕಲಿಯುಗದಲ್ಲಿ ಯಾರು ಕೇಳ್ತಾರೆ ಇಂತಹ ಆದರ್ಶಾನಾ? ಆಡಿಕೊಂಡು ನಗ್ತಾರೆ ಅಷ್ಟೇ....."

"ಬರೀ ಸ್ವಾರ್ಥತೆ ತುಂಬಿಕೊಂಡಿರುವ ಈ ಕಲಿಯುಗದಲ್ಲಿ ಇಂತಹ ಆದರ್ಶ ವ್ಯಕ್ತಿಗಳಿದ್ದರೇನು ಜೀವನದಲ್ಲಿ ಒಂದು ತಿರುವು. ಸಮಾಜದಲ್ಲಿ ಒಂದು ಮುನ್ನಡೆ..."

, ನೀನು ಏನೇ ಹೇಳು. ಮಾವ ನನಗೋಸ್ಕರ. ತನ್ನ ಹೆಂಡತಿಯನ್ನು ಬಿಟ್ಟು ಹೋದದ್ದು ಅನ್ಯಾಯ . ನನಗೆ ಸರಿ ಅಂತ ಅನ್ನಿಸ್ತಿಲ್ಲ."

"ನಿನ್ನ ಮಾವ ನಿನಗೋಸ್ಕರ ಮನೆ ಬಿಟ್ಟು ಹೋದರು...ಆದರೆ ರಾಜಕುಮಾರ ಸಿದ್ಧಾರ್ಥ? ಸಿದ್ಧಾರ್ಥನಿಗೇನು ಕಮ್ಮಿ ಆಗಿತ್ತು? ಮಲಗಿದ್ದ ಪತ್ನಿ ಪುತ್ರರನ್ನು ಬಿಟ್ಟು ಏಕೆ ಹೋದ?

"ಜ್ಞಾನಾರ್ಜನೆಗೆ...ಬುದ್ಧನಾಗಲು..."

ಅಂತೂ ಅಂಥದೊಂದು ವಿಶಿಷ್ಟ ಕಾರಣ. ಅದೊಂದು ಪ್ರೇರಣೆ ಅಂತಹ ಒಂದು ಗಳಿಗೆಯಲ್ಲಿ ಮನುಷ್ಯನ್ನೂ ಆದರಿಸಿಕೊಂಡು ಅವನ ಮೇಲೆ ಒತ್ತಡ ಹಾಕಿ, ಅವನ ಮಾರ್ಗವನ್ನು ಬದಲಾಯಿಸುತ್ತದೆ. ಹಾಗೇ ನಿನ್ನ ಮಾವನಿಗೂ ಒಂದು ಪ್ರೇರಣೆ... ಒಂದು ಕಾರಣ.

"ನೀನು ಎಷ್ಟೇ ಹೇಳಿದರೂ, ನನ್ನ ಮನಸ್ಸಿಗೆ ಸಮಾಧಾನ ಸಿಗಬೇಕಾದರೆ, ನಾನು ರಾಧಿಕಾಗೆ ಎಲ್ಲಾ ಹೇಳಲೇ ಬೇಕು."

" ಅವಳ ಕಮನಸ್ಸು ಕೆಟ್ಟು ಅವಳು ನಿನ್ನಿಂದ ದೂರ ಹೊರಟು ಹೋದರೆ ಆಗೇನು ಮಾಡ್ತಿಯಾ ಈಗಲೇ ಏನೂ ಹೇಳಬೇಡ. ಸ್ವಲ್ಪ ದಿನವಾದ್ರೂ ತಡಿ.

ಹಾಗಾಗದಂತೆ ನಾನು ನೋಡಿಕೋಳ್ತಿವಿ. ಉಪಾಯವಾಗಿ ಮಾತನಾಡ್ತಿವಿ. ಅವಳ ಪರೀಕ್ಷೆ ಮುಗಿಯಲಿ. ಅವಳ ಇಷ್ಟು ದಿನದ ಒಂಟಿ ಜೀವನಕ್ಕೆ ಮುಕ್ತಾಯ ಹೇಳ್ತೀನಿ. ನಿನ್ನ ಹತ್ತಿರ ಡಿಸ್ಕಸ್ ಮಾಡಿದ್ದಕ್ಕೆ ನನ್ನಹೃದಯ ಹಗುರವಾಯ್ತು. ಇಲ್ಲದಿದ್ದರೆ, ಸಂಶಯದ ಗಾಳಿ ತುಂಬಿ ನಾನು ಬರ್ಸ್ಟ್ ಆಗಿ ಹೋಗ್ತಿದ್ದೆ. ಬರ್ತಿನಯ್ಯಾ....ತುಂಬಾ ಥ್ಯಾಂಕ್ಸ್ ಕೈ ಕುಲಕಿದ.

ಡಾಕ್ಟರ್ ಹೃದಯ ಹಗುರವಾಗಿರಬೇಕು. ಭಾರವಾಗಿರಬಾರದು ನಗುತ್ತಾ

ಸ್ನೇಹಿತನನ್ನು ಬೀಳ್ಕೊಟ್ಟ.

ಮುರಳಿ ಅಷ್ಟೆಲ್ಲಾ ಹೇಳಿದ್ದರೂ, ಮನೋಜನ ತಳಮಳ ಕಡಿಮೆ ಆಗಲಿಲ್ಲ. ಒಂದೊಂದು ಸಲ ಒಂದೊಂದು ತರಹ. ತಾನು ತಪ್ಪಿತಸ್ಥ, ಗಂಡ ಹೆಂಡತಿ, ತಂದೆ ಮಗಳ ಮದ್ಯೆ ಬಂದು, ಅವರ ಜೀವನದಸುಖವನ್ನು ಕಿತ್ತುಕೊಂಡಂತೆ ಭಾವಿಸುತ್ತಿದ್ದ. ರಾಧಿಕಾಳ ಪರೀಕ್ಷೆಗಳು ಎಂದಿಗೆ ಮುಗಿಯುವುದೋ ಎಂದು ಕಾಯುತ್ತಲಿದ್ದ. ಅವನಿಗೆ ಮೋದಲಿನಂತೆ ಇಬ್ಬರ ಹತ್ತಿರ ಮಾತನಾಡಲು ಕಷ್ಟವೆನಿಸಿತ್ತಿತ್ತು.

ರಂಗನಾಥಮನೋಜ ಬದಲಾಗಿದಾನೆ ಎನ್ನುವುದನ್ನು ಗಮನಿಸಿದ. ವಯಸ್ಸಿಗೆ ಬಂದಹುಡುಗ, ಮದುವೆಯಾಗಿದೆ. ಎಂ ಎಸ್ ಮಾಡುತ್ತಿದಾನೆ ಈಗ ನನ್ನನ್ನು ಮೆಚ್ಚಿಸಬೇಕಾದ್ದು ಏನಿದೆ ಅಂತ ಅನ್ನಿಸಿದರೂ ಮನಸ್ಸು ಮುಜುಗರಕ್ಕೊಳಗಾಗಿತ್ತು. ಇವನಿಗೋಸ್ಕರ ತಾನು ಎಷ್ಟು ಕಷ್ಟಪಟ್ಟಿದೀನಿ.ಅದೆಲ್ಲಾ ಅವನಿಗೆ ತಿಳಿಯದುಎಂದು ತನಗೆ ತಾನೇ ಹೇಳಿಕೊಂಡ.,

ರಾಧಿಕಾ ಮನೋಜನ್ನ ಅಷ್ಟಾಗಿಗಮನಿಸಲಿಲ್ಲ. ಅವಳಿಗೆಪರೀಕ್ಷೆಯ ಆತಂಕ. ಈ ಪರೀಕ್ಷೆಯೊಂದು ಮುಗಿದರೆ. ತಾನು ಗೆದ್ದಂತೆ. ಅಲ್ಲಿಗೆ ತನ್ನ ಸಾಧನೆ ಮುಗಿದಂತೆ. ಅಂತೂ ಅವನಿಗೆ ಸಮ ವಾಗಿ ಕಫಲದಲ್ಲಿ ತಾನೂ ಏನೂ ಕಮ್ಮಿ ಯಲ್ಲ ಎಂದು ಸಾಭೀತು ಮಾಡಿದೆನಲ್ಲ ಎಂದು ತನಗೆ ತಾನೇ ಶಾಭಾಸ್ ಹೇಳಿ ಕೊಳ್ಳುತ್ತಿದ್ದಳು.ಅವಳ ಅತ್ಮವಿಶ್ವಾಸ ಹೆಮ್ಮರವಾಗಿತ್ತು.

ಕಡೆಯ ದಿನದ ಪರೀಕ್ಷೆಯನ್ನು ಮುಗಿಸಿಕೊಂಕಡು. ಗೆದ್ದೆನೆಂಬ ಆನಂದದಲ್ಲಿ ಹಾಯೆಂದು ಮೈಚೆಲ್ಲಿ ಮಲಗಿದವಳಲ್ಲಿ ಮಧುರಭಾವನಂಗಳು ಹಲವಾರು. ಆಸೆಗಳು ನೂರಾರು ಮನೋಜನಿಗೂ ನೆಮ್ಮದಿ. ರೂಮು ಬಾಗಿಲು ಮುಂದೆ ಮಾಡಿ ಬಂದು, ರಾಧಿಕಾಳ ಬಳಿ ಬಂದು ಕುಳಿತ.

ರಾಧಿಕಾ, ಅಂತೂ ನೀನೂ ಛಲಗಾತಿ ಎನ್ನು ವುದನ್ನು ತೋರಿಸಿಬಿಟ್ಟೆ. ವೆರಿಗುಡ್. ಇವತ್ತು ನನಗೆ ತುಂಬಾ ಹೆಮ್ಮೆ ಅನ್ನಿಸ್ತಿದೆ. ರಿಯಲಿ, ಐ ಆಮ್ ವೆರಿಪ್ರೌಡ್ ಆಪ್ ಯೂ.. ನೀನಗೇನು ಬೇಕೋ ಕೇಲು ಕೂಡ್ತಿವಿ...ಎಂದು ವಿಶ್ವಾಸದಿಂದ ಅವಳ ಕೈ ಹಿಡಿದು ಮೃದವಾಗಿ ಅದುಮಿದ.

ರಾಧಿಕಾಳ ಹೃದಯ ಲಘುವಾಗಿ ಕಂಪಿಸಿತು.....ತಾನುಈ ದಿನಕ್ಕಾಗಿ ಕಾಯುತ್ತಿದ್ದೆ ಎಂದು ಅವನಿಗೆ ಅರಿವಾಗಬಾರದು. ಅವನನ್ನು ಸ್ವಲ್ಪ ಪತಾಯಿಸಬೇಕು ಎಂದುಕೊಂಡು. ಅವನಿಂದ ಸರಿದುಕೂತಳು.

ನನಗೆ ಡೈವೋಸ್ ಬೇಕು ಎಂದಳು ಗಂಭೀರವನ್ನು ನಟಿಸುತ್ತಾ. ಮನೋಜ ಬೆಚ್ಚಿದ. ನಿಜಕ್ಕೂ ಅವಳು ಈ ಮಾತುಹೇಳುತ್ತಿದಾಳೆಯೇ ಎಂಬ ಅನುಮಾನದಿಂದ ಪ್ರಶ್ನಾರ್ಥಕವಾಗಿ ಅವಳನ್ನೇ ಕನೋಡಿದ.

ಮತ್ತಿನ್ನೇನು? ಎರಡು ವರ್ಷದಿಂದ ನಿನ್ನ ಎದುರಿಗಿದ್ದರೂ, ನಿನ್ನಿಂದ ದೂರ ದೂರವೇ ಇದ್ದು ನನಗೆ ಅದೇ ಅಭ್ಯಾಸವಾಗಿ ಹೋಗಿದೆ. ಇನ್ನು ನಾನ್ಯಾಕೆ?ಸ್ವತಂತ್ರವಾಗಿ ಇರಬಲ್ಲೆನೆಂಬ ಧಿಮಾಕು ಬಂದಿದೆ ನಿನಗೆ. ಆಧನಾನ ಜ್ಞಾಪಿಸ್ಕೋ ಹಾಸ್ಟೆಲ್ಲಿಗೆಸೇರುಸಲ್ಲ ಅಂತ ಅತ್ತಿದ್ದೆ . ಪಾಪ ಅಂತ ನಾನು ನಿನ್ನನ್ನು ಮದುವೆಯಾಗಿ ರಕ್ಷಣೆ ಕೊಡದೇ ಇದ್ದಿದ್ರೆ...ಇಷ್ಟು ಹೊತ್ತಿಗೆ ಪುಟ್ ಪಾತ್‌ನಲ್ಲಿರುತ್ತಿದ್ದೆ ತಿಳಕೋ.

"ಹಾಗಾದ್ರೆ ಇಷ್ಟೇನಾ ನಿನಗೆ ನನ್ನ ಮೇಲಿನ ಪ್ರೀತಿ...ನಾನು ಫುಟ್ ಪಾತ್‌ನಲ್ಲಿದ್ದರೆ ನಿನಗೆ ಸಂತೋಷಾನಾ ಗಂಟಲುಬ್ಬಿ ಬಂದಿತ್ತು.

"ಹಾಗೆಲ್ಲಾ ಆಗಬಾರದು ಅಂತಲ್ವಾ, ನಾನೂ ಮಾವ ಇಬ್ಬರೂ ಶ್ರಮ ಪಟ್ಟಿದ್ದು ಇವತ್ತು ನಮಖುಮಿಬ್ಬರಿಗೂ ಎಷ್ಟು ಸಂತೋಷವಾಗಿದೆ ಗೊತ್ತಾ?ಅದನ್ನು ನಾನು ಹೇಗೆ ಹೇಳಲಿ?

"ಹೀಗೇ.....ಎನ್ನುತ್ತಾ ರಾಧಿಕಾ ಅವನ ಬಳಿ ಸಾರಿ ಯಾವ ಅಳುಕೂ ಇಲ್ಲದೇ ಅವನನ್ನು ತಬ್ಬಿ ಹಿಡಿದು ಕೆನ್ನೆಗೆ ಮುತ್ತಿಟ್ಟಳು. ಮನೋಜ ಬೆದರಿದ.

"ಏಯ್...ಏಯ್..ಏನ್ಮಾಡ್ತಿದೀಯ...ಎನ್ನುತ್ತಾ ಹಿಂದಕ್ಕೆ ಸರಿದ.

"ನಾನು ಇದುವರೆಗೆ ಸುಮ್ಮನಿದ್ದುದೇ ಹೆಚ್ಚು.ಮದುವೆಯಾಗಿ ಎರಡು ವರ್ಷಗಳಾದವು. ಒಂದು ಅಪ್ಪುಗೆ ಇಲ್ಲ. ಒಂದು ಚುಂಬಿನವಿಲ್ಲ. ಕಡೆಗೆ ಒಂದು ಪ್ರೇಮದ ಮಾತಿಲ್ಲ. ಕಾನ್ವೆಂಟಿನ ನನ್ ತರಹ ಇದ್ದೂ ಇದ್ದೂ ನನಗೆ ಸಾಕಾಗಿ ಹೋಗಿದೆ. ಇವತ್ತು ನೀನು ಏನೂ ಹೇಳುವ ಹಾಗಿಲ್ಲ."

"ಏಯ್ ಗಂಡು ಬೀರಿ ಹುಡುಗಿ. ಗಂಡು ಹುಡುಗ ನಾನೇಸುಮ್ಮನಿರುವಾಗ ಅತಿಯಾಯ್ತು. ಯಾರಾದ್ರೂ ಗೊತ್ತಾದ್ರೆ ನಗ್ತಾರೆ ಅಷ್ಟೇ"

"ನೀನು ಏನು ಬೇಕಾದ್ರೂ ಅಂದ್ಕೋ...ನನ್ನ ಗಂಡನ ಹತ್ತಿರ ನಾನು ಹೀಗೆ ಇದ್ದರೇ ಚೆನ್ನ. ನಿನಗೆ ಏನೂ ಆಸೆ ಆಗುಲ್ವಾ ಮನೋಜ"

"ನನಗೂ ಆಸೆ ಆಗುತ್ತೆ...ಆದರೆಹೊತ್ತುಗೊತ್ತು ಸಮಯ ಸಂದರ್ಭ ಅಂತ ಒಂದು ಇರುತ್ತಲ್ಲ ಮುಂಬಾಗಿಲು ಹಾಕಿಲ್ಲ. ಮಾವನೂ ಮನೇಲಿದಾನೆ. ಏನಂದು ಕೊಳ್ತಾನೆ?"

"ಏನೂ ಇಲ್ಲ. ಗಂಡ ಹೆಂಡತಿ ರೋಮಾನ್ಸ್ ಮಾಡ್ತಿದಾರೆ. ಪಾಪ. ಚಿಕ್ಕ ಹುಡುಗರು ಅಂತ ಕಂಡರೂ ಕಾಣದಂತೆ ಸುಮಮ್ಮಿರುತ್ತಾರೆ. ಎಂದು ತಾನಾಗಿಯೇ ಬಲವಾಗಿಅಪ್ಪಿ ಎರಡು ಕೆನ್ನೆಗಳಿಗೂ ಮುತ್ತಿಟ್ಟಳು. ಮನೋಜ ಅವಳನ್ನು ಸರಿಸಿದ.

ಬಿಡು ರಾಧಿಕಾ....ನಿನಗೆ ಲಜ್ಜೆ ಭಯ ಇದ್ದರೇ ಚೆನ್ನ...ಕಾಮಾತು ರಾಗಾಂ ನಲಜ್ಜಾ ನಭಯಂ ಅನ್ನೋ ಹಾಗೆ ಆಡಿದ್ರೆ ಚೆನ್ನಾಗಿರುಲ್ಲ."

"ಆ ಚೆನ್ನ ಭಾರ ಎಲ್ಲಾನಿನಗೆ ಇರಲಿ. ಬ್ರಹ್ಮಚಾರಿ ಮಾವನ ಜೊತೆ ಇದ್ದು ಇದ್ದೂನೀನೂ ಬ್ರಹ್ಮಚಾರಿಸನ್ಯಾಸಿಯಾಗಿ ಬಿಟ್ಟಿದೀಯ....."

ಆ ಮಾತು ಕಿವಿಗೆಬಿದ್ದ ಕೂಡಲೇ ಮನೋಜ ಒರಟಾಗಿಅವಳನ್ನು ದೂರ ಸರಿಸಿದ. ಅವನ ಮುಖದಲ್ಲಿನ ವಿಲಕ್ಷಣ ಕಳೆಯನ್ನು ಕಂಡುರಾಧಿಕಾ ಬೆದರಿದಳು.

ಸಾರಿ. ಮನೋಜ್...ನಿನಗೆ ಬೇಜಾರಾಯ್ತಾ? ಪ್ಲೀಸ್ ನನ್ನನ್ನು ದೂರ ಮಾತ್ರ ಮಾಡಬೇಡ. ಇಷ್ಟು ದಿನ ಹೀಗಿದ್ದು ಸಾಕಾಗಿದೆ. ಸದಾ ಹೀಗೇಇರಬೇಕು ಅಂತ ಆಸೆ ಎನ್ನುತ್ತಾ ಅವನ ಭುಜಕ್ಕೆ ಒರಗಿದಳು.

ಏನೋ ಆಲೋಚಿಸುತ್ತಿದ್ದವನು ಮೆತ್ತಗಾದ. ಅವಳ ಬೆನ್ನ ಮೇಲೆ ಕೈಯಾಡಿಸಿದ.

ಮನೋಜ್....ನಾನೀಗ ಪ್ರೀಯಾಗಿದೀವಲ್ಲ ಹನಿಮೂನ್‌ಗೆ ಹೋಗೋಣ್ವಾ?"

'ನಿನಗೆ ಹೋಗಲೇಬೇಕು ಅಂತ ಆಸೆ ಇದ್ರೆ ಹೋಗೋಣ. ಇಲ್ದಿದ್ರೆ ನನಗೇನೂ ಅಂತಹ ಆಸೆ ಇಲ್ಲ. ಥೂ ಎಂಥೋನಪ್ಪ ನೀನು? ನೀನು ಹತ್ತನೇ ಶತಮಾನದಲ್ಲಿರ

ಬೇಕಾಗಿತ್ತು ಈ ಶತಮಾನಕ್ಕೆ ಲಾಯಕ್ಕಿಲ್ಲ."

"ಸರಿ ಹಾಗೇ ಅಂದ್ಕೋ...ನಿನಗೆ ಲಾಯಕ್ಕಿಲ್ಲ ಅಂತ ಬೇಕಾದ್ರೂ ಅಂದ್ಕೋ...ಬೇಕಾದ್ರೆ ಡೈವೋರ್ಸ್ ತಗೋ....ಆಗಲೇ ಹೇಳಿದೆಯಲ್ಲ"

"ತಮಾಷೆಗೆ ಹಾಗೆಂದೆಅಷ್ಟೇ...ಯಾಕೆನಿನಗೆ ನನ್ನ ಮೇಲಿನ ಪ್ರೀತಿ ಕಮ್ಮಿ ಆಗಿ ಹೋಯ್ತು? ಅಥವಾ....ಅಷ್ಟಕ್ಕೆ ನಿಲ್ಲಿಸಿದಳು.

"ಅಥವಾ ಇನ್ನೇನು.....?"ಹೊಡೆಯುವನಂತೆ ಮುಂದೆ ಬಂದ.

"ಏನಿಲ್ಲ. ಏನಿಲ್ಲ....ನಕ್ಕು ಬಿಟ್ಟು ದೂರ ಓಡಿದಳು.

"ಏನಂದೇ? ನನಗೆ ಅರ್ಥವಾಗುಲ್ಲ ಅಂತ ಅಂದ್ಕೊಂಡು ನನ್ನನ್ನು ಕೆಣಕ್ತೀಯ...ತಡಿ ಬಂದೆ. ಎನ್ನುತ್ತಾರೂಮಿನ ಬಾಗಿಲನ್ನು ಭದ್ರವಾಗಿ ಮಂಚದ ಹಾಸಿಗೆಯ ಮೇಲೆ ಮಲಗಿಸಿದ.

ನೀನು ಹೆಣ್ಣು. ನೀನೇ ಇಷ್ಟು ಭಂಡತನದಿಂದ ಮುಂದುವರೆದಿರುವಾಗ, ನಾನು ಗಂಡಸು ನನಗೆಹೇಳಿಕೊಡ್ತೀಯಾ ಎಂದು ಅವಳೆಡೆಗೆ ಬಾಗಿದ. ನಗುತ್ತಾ ಕೊಸರಿಕೊಳ್ಳಲು ಪ್ರಯತ್ನಿಸಿದ ಅವಳನ್ನು ಒರಟಾಗಿ ತನ್ನ ಬಾಹು ಬಂಧನದಲ್ಲಿ ಬಿಗಿಗೊಳಿಸಿದ. ರಾಧಿಕಾ ಮೆತ್ತಗಾಧಳು.

ಥೂ ಶುದ್ಧ ಒರಟ ನೀನು ಎಂದಳು ಮೆತ್ತಗೆ.

ಮತ್ತೆ ನನ್ನನ್ನ ಕೆರಳಿಸಿದರೆ ಹೀಗೇನೇ. ನಾನಾಗಿಯೇ ನಾನು ನಿನ್ನೆಡೆಗೆ ಬರುವವರೆಗೆ ತಡೆದುಕೊಂಡಿದ್ದರೆ, ಈ ಆ ಕ್ರಮೇಣ ಇರುತ್ತಿರಿಲಲ್ಲ...ಏನಿವೇ...ಸಾರಿ ರಾಧಿಕಾ ....ಡೋಂಟ್ ಫೀಲ್ ಬ್ಯಾಡ್"

"ನೋ....ನೋ.....ವಿರಹಿಗಳ ತರಹ ಇದ್ದೂ ಇದ್ದೂ ಸಪ್ಪೆಯಾಗಿ ಬಿಟ್ಟುದ್ದೆವು . ಇದೂ ಒಂದು ತರಹ ಥ್ರಿಲ್ ಎಂದಳು ಖುಶಿಯಿಂದ.

"ಥೂ, ಭಂಡ ಹೆಣ್ಣು ನೀನು...ಎಂದ ಅವಳ ಮುಂಗುರುಳು ಸವರಿ. ನಾನು ಭಂಡಿಯಾಗಿದ್ದಕ್ಕೇ ಏನು ಬೇಕೋ ಅದನ್ನು ಗಿಟ್ಟಿಸಿದೆ. ಇಲ್ಲದಿದ್ದರೆ ಇನ್ನು ಎಷ್ಟು ದಿನ ಕಾಯಬೇಕಾಗ್ತಿತ್ತೋ......?

"ಹಾಗೆನ್ನಿಲ್ಲ . ರಾತ್ರಿವರಿಗೆ ಕಾದಿದ್ದರೆ ಸಾಕಾಗಿತ್ತು. ನಿನಗೆ ಅವಾಂತರ. ದುಡುಕು. ಈಗ ಹೊರಗೆ ಹೇಗೆ ಹೋಗುವುದು? ಮಾವ ಏನಂದು ಕೊಳ್ತಾನೋ...?

ಹೋಗುವುದೇ ಬೇಡ. ಹೀಗೇ ಇದ್ದು ಬಿಡೋಣ"

"ಹೀಗೆ ಇದ್ದು ಬಿಡುಕ್ಕೆ ನಾವೇನು ಪ್ರಾಣಿಗಳೇ...ಏಳು ಎದ್ದುಹೋಗಿ ಕಾಫಿ ಮಾಡು. ಇದ್ದಕ್ಕಿದ್ದಂತೆ ಮನೋಜ ಜಬರದಸ್ತಿನಿಂದ ಗದರಿದಾಗ ರಾಧಿಕಾ ಕಣ್ಣು ಕಣ್ಣು ಬಿಟ್ಟಳು. ಎದ್ದು ಹೋಗಿ ಮುಕ ತೊಳೆದುಕಾಫಿ ರೆಡಿ ಮಾಡಿದಳು. ರಂಗನಾಥ ಎಲ್ಲಿಯೂ ಕಾಣಲಿಲ್ಲ.

"ಮನೋಜ ಮಾವ ಕಾಣ್ತಾ ಇಲ್ಲ. ಹೋರಗೆ ಹೋರಟು ಹೋದ್ರೂಂತ ಕಾಣೆಸುತ್ತೆ."

"ಮತ್ತಿನ್ನೇನು ಮಾಡ್ತಾನೆ? ನಾವಿಲ್ಲಿ ಸರಸ ಆಡುತ್ತಿದ್ದೆವು.. ಕಾಫಿಗಾಗಿ ಕಾದೂ ಕಾದೂ ಸಾಕಾಗಿ ಹೊರಟು ಹೋಗಿರಬೇಕು.

. ಕಾಫೀನ ಅವರೇ ಮಾಡ್ಕೋಬಹುದಾಗಿತ್ತಲ್ಲ"

"ಮನೆಗೆಸೊಸೆ ಬಂದ ಮೇಲೆ...ಅಷ್ಟೇ ಹೇಳಿ ಸುಮ್ಮನಾದ. ರಾಧಿಕಾ ಅಚ್ಚರಿಯಿಂದ ಅವನನ್ನೇ ನೋಡಿದಳು. ಅವನು ಮುಂದೆ ಏನೂ ಹೇಳಲಿಲ್ಲ.

"ಸಾರಿ ಮನೋಜ್.....ಇವತ್ತಿನ ತನಕ ನಾನು ಹುಡುಗಿಯ ತರಹ ಇದ್ದು ಬಿಟ್ಟೆ. ಮಾವಾ ಬೇಜಾರುಮಾಡ್ಕೋಂಡಿರ್ತಾರೆ ಅಂತೀಯ....?"

ಮಗಳು ಏನು ಮಾಡಿದರೂ ಮಾವಂಗೆ ಬೇಜಾರಾಗುಲ್ಲ ಅಂತ ಹೇಳ ಬೇಕೆಂದುಕೊಂಡ. ಆದರೆ ಆ ಮಾತಿಗೆ ಇದು ಸಮಯವಲ್ಲವೆಂದುಕೊಂಡು ಸುಮ್ಮನಾದ.

ಟ್ಯೂಷನ್ ಮುಗಿಸಿಕೊಂಡುರಂಗನಾಥ ಮನೆಗೆ ಬಂದಾಗ, ಅವನೆದುರಿಗೆ ಬಂದು ಅವನಿಗೆ ಮುಖ ತೋರಿಸಲು ನಾಚಿಕೆಯಾಯಿತು. ರಾಧಿಕಾಳಿಗೆ.

ಅಮ್ಮಾ ರಾಧಿಕಾ ಅಡಿಗೆ ಯಾಗಿದ್ರೆ ಊಟ ಮಾಡಿ ಬಿಡ್ತಿವಿ. ಯಾಕೋ ತುಂಬಾ ಹೊಟ್ಟೆ ಹಸಿಯುತ್ತಿದೆ.

ಇ ರಾಧಿಕಾ ದಢ ದಢನೆ ಸಾರು ಬಿಸಿ ಮಾಡಿ ರಂಗನಾಥನಿಗೆ ಬಡಿಸಿದಳು. ಮಗಳು ಮನೆ ಕೆಲಸಗಳನ್ನೆಲ್ಲಾ ಕಲಿತಿದ್ದಾಳೆಂದು ಅವನಿಗೆ ಖುಷಿಯಾಗಿತ್ತು.

ಮನೋಜ ಎಲ್ಲಿ ಕಾಣ್ತಾ ಇಲ್ಲ. ಈ ನಡುವೆ ಅವನು ತುಂಬಾ ಬದಲಾಯಿಸಿ ಹೋಗಿದ್ದಾನೆ. ಆಕ್ಷೇಪಣೆ ಮಾಡಿದ.

" ಸಣ್ಣಗೆ ತಲೆ ನೋಯ್ತಿದೆಯಂತೆ.ಮಲಗಿರಬೇಕು."

ಸುಮ್ಮನೆ ತಿರುಗ್ತಾನೆ. ತಲೆ ನೋಯದೇ ಇನ್ನೇನಾಗುತ್ತೆ?ನೀನೂ ಅಷ್ಟೇ... ಹೌಸ್‌ಮೆನ್‌ಷಿಪ್ ಶುರುವಾಗಗುವವರೆಗೂ ಎಲ್ರೂ ಹೋಗಕೂಡದು. ಮನೇಲಿ ಆರಾಮವಾಗಿರಬೇಕು. ರಾಧಿಕಾ ನಿರಾಸೆಯನ್ನು ತೋರಗೊಡದೆ ಸುಮಮ್ಮಾಧಳು.

ರಾತ್ರಿ ಮತ್ತೆ ಮನೋಜ ನೋಡನೆ ಮಾತು ತೆಗೆದಳು.

ಮನೋಜ್ ಮಾವ ಎಲ್ಲೂ ಹೊರಗೆ ಹೋಗೋದು ಬೇಡ ಅಂತಾರೆ. ಹನಿಮೂನ್‌ಗೆ ಹೋಗೋದು ಹ್ಯಾಗೆ?'

ಔಹದು ಅವು ಹಕೇಳೋದು ಸರಿ. ನಾವ್ಯಾಕೆ ಹೋಗಬೇಕು? ಹೊಸದಾಗಿ ಮದುವೆಯಾದವರು ಹೋಗ್ತಾರೆ. ನಮ್ಮ ಮದುವೆಯಾಗಿ ಎರಡು ವರ್ಷವಾಯ್ತು. ಇನ್ಯಾಕೆ ಹನಿಮೂನಿನ ಸಡಗರ?

"ಥೂ ನೀನು ವೆರಿ ಅವ್ ರ್‍ಯೋಮಾಂಟಿಕ್ ಹೊರಗೆಲ್ಲಾದರೂ ನಾಲ್ಕು ದಿನಹಾಯಾಗಿ ಸುತ್ತಾಡಿದರೆಏನಾಗುತ್ತೆ?ಎಲ್ರೂ ಹೋಗುಲ್ವಾ?" ಅವನ ಎದೆಗೆ ಒರಗಿ ಹೇಳಿದಾಗ ಅವನಿಗೆರೇಗೆ ಹೋದರಾಯ್ತು.

ನಿನಗೆ ಅಷ್ಟೊಂದು ಇಷ್ಟ ಇದ್ದರೆಹೋಗೋಣ. ಎಲ್ಲಿಗೆ ಯಾವಾಗಿ ಅಂತ ನೀನೇ ಡಿಸೈಡ್ ಮಾಡು. ನನಗೆದೆಲ್ಲಾತಿಳಿಯುಲ್ಲ. ನಾನೂ ಅನ್ ರ್‍ಯೋಮಂಟಿಕ್ ಅಂತ ನೀನೇ ಹೇಳಿದ್ದೆಲ್ಲಾ"

"ಎಲ್ಲಾ ಮಾತಿಗೂ ಕೋಪಿಸ್ಕೋತೀಯಲ್ಲ. ನನ್ನ ಬಲವಂತಕ್ಕೆ ಹೋಗೋದು ಬೇಡ. ಮುಗಿಸಿಕೊಂಡು ದೂರ ಸರಿದು ಮಲಗಿದಾಗ ಅವನಿಗೆ ಕನಿಕರನೆನಿಸಿತ್ತು.

ಸಾರಿ .ರಾಧಿಕಾ...ಈಚೆಗೆ ನನ್ನ ಮೂಡ್‌ಗೆ ಏನೋ ಆಗಿ ಹೋಗಿದೆ. ಯಾಕೋ ಏನೋ ಇದ್ದಕ್ಕಿದ್ದಂತೆ. ಎಲ್ಲಾ ಬೆಜಾರಾಗಿ ಹೋಗತ್ತೆ. ನಾನು ಏನೋ ತಪ್ಪು

ಮಾಡಿದ್ದೀವಿ. ಅಂತ ಅನ್ನಿಸುತ್ತೆ. ಬೇಗ ಕೊಪ ಬಂದು ಬಿಡುತ್ತೆ...ಯಾಕೆಂತನನಗೆ ಗೊತ್ತಾಗುಲ್ಲ."

"ಅದಕ್ಕೇ ಹೇಳಿದ್ದು ಒಂದುಚೆಂಚ್ ಇರಲಿ ಅಂತ ಬೇರೆ ಕಕಡೆ ಹೊರಗೆಲ್ಲಾದರೂ ತಿರುಗಾಢಿ ಬಂದರೆ, ಟೆನ್ಸ್ ಎಷ್ಟೋ ಕಮ್ಮಿಯಾಗುತ್ತೆ.

ಅವನು ಉತ್ತರಿಸಿಲಿಲ್ಲ.ಅವನದೇ ಏನೋ ಆಲೋಚನೆ.

ಕಡೆಗೂ ಹನಿಮೂನ್‌ಗೆ ಹೋಗಿ ಬರುವುದೆಂದು ನಿರ್ಧರಿಸಿದರು. ರಂಗನಾಥನಿಗೆ ವಿಷಯ ತಿಳಿದಾಗ ಅವನು ಅತಿಯಾಗಿಚಿಂತಿಸಗೊಂಡ. ಅ ವರು ಹೋಗದಿರುವುದೇ ಸರಿ, ತನಗೆ ಆದ ಹಾಗೆ, ಅವರಿಬ್ಬರಲ್ಲಿಯೂವಿರಸ ಮೂಡಿದರೆ. ...ಅಂತೆನಿಸಿ, ಬೇಡವೆ ಬೇಡ ಎಂದು ಹೇಳಿ ಬಿಡಬೇಕೆನಿಸಿತ್ತು. ಆದರೆಚಿಕ್ಕ ಹುಡುಗರ ಆಸೆಯನ್ನು ಮುರಿಯಲು ಮನಸ್ಸು ಇಲ್ಲ...ಯೋಚಿಸಿದ. ಆಗ ನಾನಿದ್ದ ಸ್ಥಿತಿಯೇ ಬೇರೆ.ಅದಕ್ಕೂ ಇದಕ್ಕೂಏನು ಸಂಬಂಧ ಎಂದುಕೊಂಡು ತಾನೇ ಖುದ್ದಾಗಿ ಹೋಗಿ ಕಾಶ್ಮಿರಕ್ಕೆ ಎರಡು ಪ್ಲೇನ್ ಟಿಕೆಟ್‌ಗಳನ್ನು ಖರೀದಿಸಿದ. ಮನೋಜನಿಗೇಇದು ಸರಿ ಎನಿಸಲಿಲ್ಲ. ನಿರುತ್ಸಾಹದಿಂದ ಮಾವನ ಮುಖ ನೋಡಿದ. ರಂಗನಾಥ ಟಿಕೆಟ್ಟುಗಳನ್ನು ಮನೋಜನ ಕೈಗಿತ್ತು ಬೆನ್ನು ತಟ್ಟಿದ.

"ಅಷ್ಟೆಂದೆಲ್ಲಾ ಹಣ ಖರ್ಚು ಮಾಡಿ ಅಲ್ಲಿಗ್ಯಾಕೆ ಹೋಗ್ಬೇಕು? ಇಲ್ಲೇ ಎಲ್ಲದ್ರೂ ಹತ್ತಿರವೆ ಹೋಗಿ ಬರ್ತಿವಿ. ಅಂಗೈ ಉಜ್ಜುತ್ತಾ ಹೇಳಿದ.

''ಇರಲಿ ಬಿಡು. ಹನಿಮೂನ್‌ಗೇನು ಪದೇ ಪದೇ ಹೋಗ್ತೀರಾ?ನಾನು ಖರ್ಚು ಮಾಡಿ ಕಳಿಸುತ್ತಿರುವಾಗ ನಿನಗೇನು ಚಿಂತೆ ಸುಮ್ಮನೇ ಹೋಗಿ ಬನ್ನಿ"

ಮನೋಜ ಪೆಚ್ಚಾದ. ಮಗಳನ್ನು ಆಸಕ್ತಿಯಿಂದ ಹನಿಮೂನ್‌ಗೆ ಕಳಿಸುತ್ತಿದ್ದಾನೆ ನಿಸಿದಾಗ ಮನಸ್ಸಿಗೆ ಏನೋ ಅಸಮಾಧಾನ ಆದರೂ ಅದನ್ನು ಮುಖದಲ್ಲಿ ತೋರ್ಪಡಿಸಲಿಲ್ಲ.

"ಹದಿನೈದು ದಿನ ಹಾಯಾಗಿದ್ದು ಬನ್ನಿ. ಖುಷಿಯಾಗಿ ಕಾಲಕಳೆಯಿರಿ. ಖರ್ಚಿಗೇನೂ ಚಿಂತೆ ಮಾಡಬೇಡಿ . ಲೋ ಮನೋಜ.ಅಲ್ಲಿ ಯಾವ ಚಿಪುಣತನ ವನ್ನು ತೋರಿಸಬೇಡ. ರಾಧಿಕಾ ಏನು ಕೆಳ್ತಾಳೋ ಅದನ್ನು ಧಾರಳವಾಗಿಕೊಡಿಸು. ಆಮೇಲೆ ಮರುಗುವಂತಾಗಬಾರದು ರಂಗನಾಥ ಆ ಮಾತನ್ನು ತನ್ನ ಆ ದಿನಗಳಿಗೆ ಹೋಲಿಸಿಕೊಂಡು ನುಡಿದಿದ್ದ.

ಆದರೆ ಮನೋಜ ಬೇರೆ ಅರ್ತದಲ್ಲಿಭಾವಿಸಿ ಸಿಡಿಮಿಡಿಗೊಂಡಿದ್ದ. ಆದರೂ ಉದ್ವೇಗದಿಂದ ಏನನ್ನು ಆಡಬಾರದೆಂದುಕೊಂಡು ತಾಳ್ಮೆ ತಂದುಕೊಂಡ ಮುರಳಿ ಗೀತಾ ಇಬ್ಬರೂ ಇವರಿಬ್ಬರೂ ಹನಿಮೂನ್‌ಗೆ ಹೋಗಲಿರುವ ವಿಷಯ ತಿಳಿದು ಕೊಂಡು ಸಂತೋಶಗೊಂಡರು. ಮುರಳಿ ನಗುತ್ತಾ ನುಡಿದಿದ್ದ.

ನಮ್ಮಿಬ್ಬರ ಮದುವೇನೂ ಮುಗಿದಿದ್ರೆ ನಾವೂ ನಿಂಚೊತೇನೇ ಬಂದು ಬಿಡಬಹುದಾಗಿತ್ತು ಅಲ್ವೇನೇ ಗೀತಾ?"

"ಮದುವೇನೇ ಆಗ್ಬೇಕು ಅಂತೇನು ನೀನು ಕರೆದುಕೊಂಡುಹೋಗೋದಾದರೆ ನಾನು ರೆಡಿ. ಎಂದುಗೀತಾ ಮುಗುಳ್ನಕ್ಕಳು.

"ಪರವಾಗಿಲ್ವೇ...ಎಷ್ಟು ಚೇಂಜ್ ಆಗಿದೀಯಾ...ತಡಿ ಅತ್ತೆಗೆಹೇಳ್ತಿನಿ"

"ಅತ್ತೆಗೆ ಹೇಳು ಏನೋ ಮಾಡ್ಕೊಂಡು ಬಿಟ್ಟಿದಾರೆ. ಅಂತ ಬೇಗ ಮದುವೆ ಮಾಡಿ ಮುಗಿಸ್ತಾರೆ. ಎಲ್ಲರೂ ಮತ್ತೆ ನಕ್ಕರು.

"ಏನೇ ಅಜ್ಜಿ ತರಹ ನನಗೆ ಉಪದೇಶ ಮಾಡ್ತಿದ್ದೆ. ಈಗ ನನ್ನನ್ನು ಮೀರಿಸಿದೀಯಲ್ಲ"

"ಸಾಹವಾಸ ದೋಷ...." ಎಂದಳು ಗೀತಾ ರಾಗವಾಗಿ.

ಮನೋಜ ತನಲ್ಲೇ ಕಯೋಚಿಸುತ್ತಿದ್ದ."ಈ ಹುಡುಗಿಯರು, ಅಬ್ಬಾ ಪ್ರಳಯಾಂತಕರು. ನಾನು ರಾಧಿಕಾಳನ್ನೇನೂ ದೂಷಿಸಬೇಕಾಗಿಲ್ಲ. ಇವರೆಲ್ಲಾ ಒಂದೇ ಜಾತಿ"

"ಏನಯ್ಯಾ ಏನೋ ಯೋಚಿಸ್ತಾ ನಿಂತು ಬಿಟ್ಟೆ?ಯಾಕೆ ಹೆದರಿಕೇನಾ?"

ಯಾಕಯ್ಯಾ ಹೆದರಿಕೆ?ಮದುವೆಯಾಗಿ ಎರಡು ವರ್ಷಗಳು ಕಳೆದಿವೆ. ಅಮ್ಮಾವ್ರ ಗೂಲಾಮ ನಾನು. ಅವರ ಅಪ್ಪಣೆಗಾಗಿ ಕಾಯುತ್ತಾ ನಿಂತಿದ್ದೆ. "ಮನೋಜ ನಾಟಕೀಯವಾಗಿ ಬೆನ್ನು ಬಾಗಿಸಿ ನುಡಿದಾಗ, ರಾಧಿಕಾ ಹಂಗಿಸಿದಳು.

ಆ ಹಾ.....ಹಾ...ಗುಲಾಮ ಅಂತ ಸುಳ್ಳು ಯಾಕೆ ಹೇಳ್ತಿಯಾ?ಸರದಾರ ಅನ್ನು ಸರದಾರ. ಮುರಳಿ, ಗೀತಾ, ನಿನ್ನ ಮಾತೇ ನಿಜ ಅಂತ ನಂಬಿ ಬಿಡ್ತಾರೆ ಅಷ್ಟೇ....ಮೂತಿ ಸೊಟ್ಟ ಮಾಡಿದಳು.

"ಗುಲಾಮ ಸರದಾರನ ಮಾತೇಕೆ ಈಗ?ನೀವು ಇಬ್ಬರೂ ಈಗ ಹೋಗುತ್ತಿರು ವುದು ದಂಡಯಾತ್ರೆಗಲ್ಲ. ಹನಿಮೂನ್‌ಗೆ. ಅನ್ಯೋನ್ಯವಾಗಿ ಹ್ಯಾಪಿಯಾಗಿ ಕಾಲ ಕಳೆದು ಬನ್ನಿ. ಆಲ್ ದಿ ಬೆಸ್ಟ್ ವಿಷಸ್...... ಹ್ಯಾಪಿ ಜರ್ನಿ ಎಂದು ಕೈ ಕುಲಕಿ ಹಾರೈಸಿದ ಮುರಳಿ. ಗೀತಾ ಅವನನ್ನೇ ಅನುಸರಿಸಿ, ಇಬ್ಬರಿಗೂ ಹಾರೈಸಿದಳು.

ಪ್ಲೋನ್ ಹತ್ತಿ. ಕೈಯಾಡಿಸಿ, ಇಬ್ಬರೂ ಒಳಗೆ ಹೋಗುವವರೆಗೂ ತನ್ನ ಕದುಗುಡವನ್ನು ತಡೆದಿದ್ದ ರಂಗನಾಥ. ಬಾಗಿಲನ್ನು ಮುಚ್ಚಿದ ಕೂಡಲೇ ತಡೆಯಲಾರದೇ ಬಿಕ್ಕಿ ಬೆಕ್ಕಿ ಅತ್ತ. ಜೊತೆಯಲ್ಲಿದ್ದ ಮುರಳಿಗೂ ಇರುಸು ಮುರುಸು. ಸಮಾಧಾನ ಹೇಳಿದ.

"ಇದುವರೆಗೂ. ಒಂದು ದಿನ ನನ್ನನ್ನು ಬಿಟ್ಟು ಎಲ್ಲಿಗೂ ಹೋದವನಲ್ಲ. ಅವನಿಲ್ಲದೇ ನಾನು ಒಬ್ಬನೇ ಹೇಗಿರಲಿ?"ಮಗುವಿನಂತೆ ಅಳತೊಡಗಿದಾಗ,

"ಹದಿನೈದು ದಿನ ನೀವು ನಮ್ಮ ಮನೆಯಲ್ಲಿರಿ" ಮುರಳಿ ಆತ್ಮೀಯವಾಗಿ ಹೇಳಿದಾಗ, ರಂಗನಾಥ ಕಣ್ಣೊರೆಸಿಕೊಂಡ. ಆದರೂ ಮನೋಜನ ಅಗಲಿಕೆ ತನ್ನಿಂದ ತಾಳಲಾಗುವುದಿಲ್ಲ ಎನ್ನುವಂತೆ ತಲೆಯಾಡಿಸಿದ. ತಲೆ ಧಿಂ ಎಂದಿತು. ಸಾವರಿಸಿ ಕೊಂಡು, ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತ.

ತಮ್ಮ ತಮ್ಮ ಸೀಟುಗಳಲ್ಲಿ ಕುಳಿತು, ಗಗನ ಸಖಿಯರ ಆದೇಶದಂತೆ, ಕುರ್ಚಿಯ ಬೆಲ್ಟ್‌ನ್ನು ತಮ್ಮ ಸೊಂಟಕ್ಕೆ ಬಿಗಿದುಕೊಳ್ಳುವಾಗ ಮನೋಜ ರಾಧಿಕಾಳೊಡನೆ ನುಡಿದ.

"ಇದುವರೆಗೂ, ನಾನು ಮಾವನನ್ನು ಬಿಟ್ಟು ಒಂದು ದಿನವೂ ಎಲ್ಲಿಗೂ ಹೋದವನಲ್ಲ, ಅವನಿಗೆ ಸಂಕಟವಾಗುತ್ತಿರುತ್ತೆ."

"ಹಾಗಂತ, ಸದಾ ಅವರ ಜೊತೇಲೇ ಇರುಕ್ಕಾಗುತ್ತಾ?ನಾನು ಅಮ್ಮ ನನ್ನನ್ನು

ಬಿಟ್ಟು ಹೋದ ಮೇಲೆ, ನಿಮ್ಮ ಜೊತೆ ಅಡ್ಜಸ್ಟ್ ಮಾಡಿಕೊಂಡಿಲವಾ?'

"ಅದು ಬೇರೆ ಮಾತು. ಅಲ್ಲದೇನೀನು ಹುಡುಗಿ. ಒಂದಲ್ಲ ಒಂದು ದಿನ, ನಿನ್ನ ಗಂಡನ ಮನೆಗೆ ಹೋಗುವವಳೇ ಅಂತ ಅದನ್ನು ಯೋಚಿಸಿದ್ದೆ ಅಲ್ವಾ?"

"ಆದರೇನು? ನಮಗೇನು ಮನಸ್ಸಿಲ್ವಾ? ಅಪ್ಪ ಇಲ್ಲದಿದ್ದಾಗ ಅದನ್ನೇ ಅಡ್ಜಸ್ಟ್ ಮಾಡಿಕೊಂಡೆ. ಅಮ್ಮ ಇಲ್ಲವಾದ ಮೇಲೆ ಅದನ್ನೇ ಅದನ್ನೇ ಅಡ್ಜಸ್ಟ್ ಮಾಡ್ಕೋತೀಯ ಹಾಗಾದರೆ ಕೀಟಲೆಯ ಧ್ವನಿಯಲ್ಲಿ ಕೇಳಿದ.

"ವ್ಹಾಟ್? ಇಂಪಾಸಿಬಲ್....ಅಮ್ಮ ಬದುಕೇ ಇಲ್ಲವಲ್ಲ........"

"ಏನು ಇಂಪಾಸಿಬಲ್?.....ಹೋಗಲಿ ಈ ಅಮ್ಮ ಬೇಡ...ನಿನ್ನ ಅಪ್ಪ ಎದುರಿಗೆ ಬಂದು ನಾನೇ ನಿನ್ನ ಅಪ್ಪ ಅಂತ ಹೇಳಿಕೊಂಡರೆ, ಒಪ್ಪಿಕೊಳ್ತಿಯ. ಇರಲಿ...ಸುಮ್ಮನೇ ಹೇಳು."

"ನೀನು ಹೇಳೋದು ನನಗೆ ಅರ್ಥವಾಗ್ತಿಲ್ಲ ಮನೋಜ್......ಅಮ್ಮ ಎಂದೂ ಅಪ್ಪನ ಬಗ್ಗೆ ಹೇಳಿದವಳೇ ಅಲ್ಲ...ಹಾಗಾದ್ರೆ ಅಪ್ಪ ಬೇರೆ ಮದುವೆ ಮಾಡಿಕೊಂಡಿದ್ರು ಅಂತೀಯ....? ಅಮ್ಮ ಹಾಗೆ ಹೇಳಿದ ನೆನಪೇ ಇಲ್ಲ ನನಗೆ. ಅವರ ಬಗ್ಗೆ ಮಾತನ್ನೇ ಆಡ್ತಿರಲಿಲ್ಲ. ಕೆಟ್ಟ ಮಾತುಗಳನ್ನಾಡುತ್ತಿರಲಿಲ್ಲ. ಬೈಯುತ್ತಿರಲಿಲ್ಲ.... ನನಗೆ ಅವರ ಬಗ್ಗೆಯಾವ ವಿವರವೂ ತಿಳಿಯದು.... ಅಂಥಾದ್ದರಲ್ಲಿ"

"ಹೋಗಲಿ, ನಿನಗೆ ನಿನ್ನ ಅಪ್ಪನ ಬಗ್ಗೆ ಏನು ಅಭಿಪ್ರಾಯ?"

"ಇವತ್ಯಾಕೆ ಇದನ್ನೆಲ್ಲ ಕೇಳ್ತಿದೀಯಾ? ಅದೂ ಈಗ ಇಲ್ಲಿ.."

"ಸುಮ್ಮನೇ ಕೇಳ್ತಿದೀನಿ....ನನಗೆ ನಿನ್ನ ಅಪ್ಪನ ಬಗ್ಗೆ ಕೇಳೋಣ ಅಂತ ಅನ್ನಿಸ್ತು...ಟೈಂ ಪಾಸ್ ಮಾಡಬೇಕಲ್ಲ ಈಗ ಇಲ್ಲಿ......"

ಕಾಣದ ಅಪ್ಪನ ಬಗ್ಗೆ ನನಗ್ಯಾವ ಭಾವನೆಗಳೂ ಇಲ್ಲ ಮನೋಜ್. ಮೊದ ಮೊದಲು ಅಪ್ಪನನ್ನು ನೋಡಬೇಕು ಅಂತ ನಾನು ಹಠ ಮಾಡಿ ಅತ್ತಾಗ ಅಮ್ಮ ಬೈದು ಬಾಯಿ ಮುಚ್ಚಿಸುವಾಗ, ಅಮ್ಮನೇ ಕೆಟ್ಟವಳು ಅಂತ ಅನ್ನಿಸುತ್ತಿತ್ತು. ಆದರೆ ದೊಡ್ಡವಳಾದ. ಮೇಲೆ ಅಪ್ಪನೂ ಕೆಟ್ಟವರಿರಬಹುದೇನೋ ಅಂತ ಅನ್ನಿಸಿದರೂ ಆ ಬಗ್ಗೆತಲೆ ಕೆಡಿಸಿಕೊಳ್ಳಲಿಲ್ಲ. ಆದರೆ ಅಮ್ಮನನ್ನು ಕಳೆದುಕೊಂಡ ಮೇಲೆ, ನನ್ನ ಹಣೆಯಲ್ಲಿ ಅಪ್ಪ ಅಮ್ಮನ ಯೋಗವೇ ಇಲ್ಲ ಅಂತ ಅಂದು ಕೊಂಡು ಅದಕ್ಕೂ ಹೊಂದಿಕೊಂಡೆ.... ಆ ಸಮಯದಲ್ಲಿ ನಿನ್ನ ಮಾವ ನನಗೆ ತಂದೆಯ ವಾತ್ಸಲ್ಯ ತೋರಿದರು. ತನ್ನನ್ನು ಡ್ಯಾಡಿ ಅಂತ ಕರಿ ಅಂತ ಹೇಳಿದರು. ನನಗೆ ಅದಕ್ಕಿಂತ ಇನ್ನೇನು ಬೇಕು ಈಗ ನನಗೆ ಅವರೇ ಅಪ್ಪಾ....ಅಮ್ಮಾ ಎಲ್ಲಾ.."

"ಅಷ್ಟು ರೆಸ್ಪೆಕ್ಟಾ ನಿನಗೆ, ನನ್ನ ಮಾವನ ಮೇಲೆ"

"ಹೊಸದಾಗಿ ಕೇಳ್ತೀಯಲ್ಲ. ನಿನಗಿಲ್ಲವಾ ಅವರ ಮೇಲೆ ರೆಸ್ಪೆಕ್ಟ್?"

"ನನಗೆ ಮೊದಲ್ನಿಂದ ಮಾವನ ಮೇಲೆ ಅತೀ ರೆಸ್ಪೆಕ್ಟ್, ಅಭಿಮಾನ ಎಲ್ಲಾ ಇತ್ತು. ಆದರೆ ಇತ್ತೀಚೆಗೆ ಯಾಕೋ ಒಂಥರಾ ಅಂತನ್ನಿಸುತ್ತೆ.

"ಯಾಕೆ? ಅವರೇನು ಮಾಡಿದರು?"

"ಅವನು, ನನಗೋಸ್ಕರ, ನನ್ನನ್ನು ಸಾಕಿ, ಬೆಳಸಿ, ಸಲಹಿ ದೊಡ್ಡವನನ್ನಾಗಿ ಮಾಡಿ, ಈ ಪೊಸಿಷನ್‌ಗೆ ತರುವುದಕ್ಕೋಸ್ಕರ, ತನ್ನ ಸ್ವಂತ ಸಂಸಾರವನ್ನು

ತೊರೆದು...ಅನಾಥನಾಗಿದ್ದ ನನ್ನನ್ನು ಪೋಷಿಸಿದ್ದರೂ....ನನ್ನನ್ನು ಉದ್ಧಾರ ಮಾಡಿದ್ದರೂ...."

"ನಿನ್ನ ಮಾತೇ ಅರ್ಥವಾಗ್ತಿಲ್ಲ ನನಗೆ...."

"ಅವರು ಬ್ರಹ್ಮಚಾರಿಯೇನಲ್ಲ ರಾಧಿಕಾ. ಮದುವೆಯಾಗಿದ್ದವರು. ಅವರಿಗೂ ಸಂಸಾರವಿತ್ತು. ನನಗೋಸ್ಕರ, ಒಂದು ದಿನ ತಮ್ಮ ಹೆಂಡತಿಯನ್ನು ಬಿಟ್ಟು ದೂರ ಇದ್ದು. ನನ್ನನ್ನು ಇಷ್ಟು ದೊಡ್ಡವನನ್ನಾಗಿ ಮಾಡಿದ್ದಾರೆ....ಅವರು ಸನ್ಯಾಸಿಯಂತೆ ಬದುಕಿರಲು ನಾನೇ ಕಾರಣ....ನನ್ನಿಂದಲೇ ಹೀಗಾದದ್ದು, ಆ ಕೊರಗು ನನ್ನನ್ನು ಬಾಧಿಸುತ್ತಿದೆ....ನಾನೇನು ಮಾಡಲಿ?" ಅವನು ಹೇಳಿದ ವಿಷಯ ಹೊಸದೇ ಆದರೂ, ರಾಧಿಕಾ ಅವನಿಗೆ ಸಮಾಧಾನ ಹೇಳಿದಳು.

"ಇದರಲ್ಲಿ ನಿನ್ನದೇನು ತಪ್ಪು? ನೀನೇನು ಅವರನ್ನು ಹೀಗೆ ಮಾಡಿ ಅಂತ ಕೇಳಿಕೊಂಡಿದ್ಯಾ? ನೀನೇಕೆ ಕೊರಗಬೇಕು?"

"ಆದರೂ, ನನಗೆ ಏನೇನೋ ಅನ್ನಿಸುತ್ತೆ ರಾಧಿಕಾ...ಅವರ ಹೆಂಡತಿ ನನ್ನನ್ನೂ ಎಷ್ಟು ಬೈದಿರಬಹುದು....ಅವರು ಎಷ್ಟು ನೊಂದಿರಬಹುದು?"

"ನನಗನ್ನಿಸುತ್ತೆ......ನಿನ್ನ ಮಾವ ಹೀಗೆ ಮಾಡಲು, ಅವರ ಹೆಂಡತಿಯೇ ಕಾರಣ ಇರಬಹುದು ಅಲ್ವಾ? ಅನಾಥವಾಗಿದ್ದ ನಿನ್ನನ್ನೂ ಸಾಕಿ ಬೆಳಸಲು ಅವರು ನಿರಾಕರಿಸಿರಬಹುದು ಅಲ್ವಾ?"

"ಇರಬಹುದು.ನನಗೀ ವಿಚಾರ ಹೊಳದೇ ಇರಲಿಲ್ಲ. ನಿನಗೆ ಹೇಗೆ ಹೊಳೆಯಿತು?" ರಾಧಿಕಾಳ ಮಾತಿನಿಂದ ಅವನ ಮನಸ್ಸು ತಿಳಿಯಾಯಿತು.

"ಎರಡು ಕೈ ಸೇರದೇ ಚಪ್ಪಾಳೆ ಆಗುಲ್ಲ ಅಂತಾರೆ. ಹಾಗೇ, ಗಂಡನಿಗೆ ಬೇಕಾದ ನೀನು, ಆಕೆಗೆ ಕಣ್ಣುರಿಯಾಗಿ ಕಂಡಿದ್ದರೆ, ಅದು ಆಕೆಯ ತಪ್ಪೇ.... ಸ್ವಾರ್ಥತನ, ಎಲ್ಲೋ ಮಲತಾಯಿ ತರಹ ಆಡಿರಬೇಕು. ಅದನ್ನು ಸಹಿಸಲಾರದೇ ನಿನ್ನ ಮಾವ ಈ ನಿರ್ಧಾರ ತಗೊಂಡಿರಬಹುದು...ಆದರೆ ನೀನು ಇದನ್ನೆಲ್ಲ ಕಥೆ ತರಹ ನನಗ್ಯಾಕೆ ಹೇಳ್ತಿದೀಯಾ?" ಅನುಮಾನದ ರಾಗ ಎಳೆದಳು.

"ಯಾಕೆ ಅಂದ್ರೇ....ಉಗುಳು ನುಂಗುತ್ತಾ ನುಡಿದ. ನಾನೇ ಆ ಪಾಪಿ ರಾಧಿಕಾ .......ನಿನ್ನ ತಂದೆ ತಾಯಿಯರ ಮಧ್ಯೆ ಬಂದವನು, ನಾನೇ ಕಾರಣ ಇದಕ್ಕೆಲ್ಲಾ....."ಮನೋಜನೂ ಉದ್ವೇಗದಿಂದ ನುಡಿದ.

ರಾಧಿಕಾ ನಂಬದವಳಂತೆ ಅವನ ಕೈಗಳನ್ನು ಹಿಡಿದಳು.

"ಏನ್ಹೇಳ್ತಿದೀಯ ನೀನು? ಏನು ಹೇಳ್ತಿದೀಯಾ? ಎದ್ದು ನಿಲ್ಲಲು ನೋಡಿದಳು.ಆದರೆ ಆಗಲಿಲ್ಲ. ಅವಳ ಚಿತ್ತಗೊಂದಲದಿಂದ ತುಂಬಿ ಹೋಗಿತ್ತು. ಅಂದ್ರೆ....ನಿನ್ನ ಮಾವ ನನ್ನ ತಂದೆ...ನನಗೇಕೆ ಈ ವಿಷಯವನ್ನು ಮೊದಲೇ ತಿಳಿಸಿಲಿಲ್ಲ?" ಉದ್ವಿಗ್ನಳಾಗಿ ಒದರ ತೊಡಗಿದಳು.

"ಕೂಲ್ ಡೌನ್.....ರಾಧಿಕಾ......ಕೂಲ್ ಡೌನ್....ಎಲ್ಲರೂ ನಮ್ಮನ್ನೇ ನೋಡ್ತಿದಾರೆ. ಅವಳ ಕೈಗಳನ್ನೂ ಹಿಡಿದ. ನನಗೂ ಈ ವಿಷಯ ಗೊತ್ತಿರಲಿಲ್ಲ. ಕೆಲವೇ ದಿನಗಳ ಹಿಂದೆ ತಿಳಿಯಿತು. ಅದೂ ಮುರಳಿ ಹೇಳಿದ್ದರಿಂದ"

"ಮುರಳಿ ಹೇಳಿದ್ನಾ? ಅಂದ್ರೆ, ಮುರಳಿಗೆ, ಗೀತಾಗೆ ಎಲ್ಲರಿಗೂ ನನ್ನ ವಿಚಾರ

ಗೊತ್ತು. ಆದರೆ, ನನ್ನ ವಿಚಾರ ನನಗೇ ಗೊತ್ತಿರಲಿಲ್ಲ. ನೀನೂ ಯಾಕೆ ಮುಚ್ಚಿಟ್ಟೆ ನನ್ನಿಂದ?" ಅಳತೊಡಗಿದಳು.

"ಪ್ಲೀಸ್ ಅಳಬೇಡ ರಾಧಿಕಾ. ಎಲ್ಲಾ ಏನಂದ್ಕೊಳ್ತಾರೆ? ಮುರಳಿ, ನಿನಗೆ ತಿಳಿಸುವುದೇ ಬೇಡ, ಅವಳ ಮನಸ್ಸು ಕೆಟ್ಟು ಹೋಗುತ್ತೆ. ನಿನ್ನ ಮಾವನ ಬಗ್ಗೆ ತಿರಸ್ಕಾರ ಹುಟ್ಟುತ್ತೆ ಅಂತ ಅಂದಿದ್ದ. ಆದರೆ ಇದು ನನಗೆ ಸಂಬಂಧಪಟ್ಟ ವಿಷಯ, ಸಮಯ ಬಂದಾಗ ನಾನು ಹೇಳೇ ಹೇಳ್ತೀನಿ ಅಂತ ಅಂದಿದ್ದೆ...ನಾನು, ನಿನ್ನ ಜೀವನದಲ್ಲಿ ವಿಲನ್ ತರಹ ಬಂದು ಬಿಟ್ಟೆ...ನನ್ನನ್ನು ಕ್ಷಮಿಸು ರಾಧಿಕಾ..." ಅವಳ ಕೈಗಳನ್ನು ಒತ್ತಿ ಕೇಳಿಕೊಂಡ. ರಾಧಿಕಾ ಕಣ್ಣೊರೆಸಿಕೊಂಡಳು.

"ನಿನ್ನನ್ನು ನೀನು ವಿಲನ್ ಅಂತ ಅಂದ್ಕೋಬೇಡ ಪ್ಲೀಸ್, ಏನೇ ಆದರೂ ನೀನು ನನ್ನ ಹೀರೋ..." ಅವನ ಕೈಯನ್ನು ವಿಶ್ವಾಸದಿಂದ ಅದುಮಿದಳು.

"ಅದು ನಿನ್ನ ದೊಡ್ಡ ಗುಣ ರಾಧಿಕಾ...ಆದರೂ......"

"ವಿಲನ್‌ಗಿರುವ ಒಂದೇ ಒಂದು ಕೆಟ್ಟ ಗುಣ ನಿನ್ನಲ್ಲಿಲ್ಲ..... ಹೀರೋಗಿರ ಬೇಕಾದ ಉದಾತ್ತ ಗುಣಗಳೆಲ್ಲ ನಿನ್ನಲ್ಲಿವೆ." ಅವಳ ಹೊಗಳಿಕೆ ಅವನನ್ನು ಮುದಗೊಳಿಸಿತು.

"ಅಂದ್ರೆ.....ನೀನು ನನ್ನನ್ನೂ ಕ್ಷಮಿಸಿದ್ದೀಯಾ?"

"ನಿನ್ನ ತಪ್ಪೇ ಇಲ್ಲದ ಮೇಲೆ, ನಿನ್ನನ್ನೂ ಕ್ಷಮಿಸುವ ಮಾತು ಎಲ್ಲಿಂದ ಬರುತ್ತೆ?" ನನಗೀಗ ಸಂತೋಷ ಪಡಬೇಕೋ...ಅಥವಾ ಅಮ್ಮ ಬದುಕಿಲ್ಲವಲ್ಲ ಅಂತ ದುಃಖಪಡಬೇಕೋ ಅಂತ ತಿಳೀತಿಲ್ಲ."

"ನಿನಗೇನನ್ನಿಸುತ್ತೋ ಅದೇ ಸರಿ. ಅದನ್ನೂ ಹೊರಗೆಡವಿ ಬಿಡು. ಮನಸ್ಸಿನಲ್ಲಿಟ್ಟುಕೊಂಡು ಕೊರಗಬೇಡ. ಮಾವನ ಮೇಲೆ ಕೋಪ ತೀರಿಸ್ಕೋ ಬೇಕೂಂತ ಇದ್ರೆ ಚೆನ್ನಾಗಿ ಬೈದು ಬಿಡು. ನನ್ನ ಸಹವಾಸ ಬೇಡಾಂತ ಅನ್ನಿಸಿದರೆ, ನನಗೆ ಡೈವರ್ಸ್ ಕೊಟ್ಟುಬಿಡು. ಆದರೆ ಕೊರಗಿ ಕೊರಗಿ ಜೀವನ ಮಾತ್ರ ಹಾಳು ಮಾಡಿಕೋ ಬೇಡ"

"ನನ್ನ ಮಾತೊಂದನ್ನ ನಡೆಸಿ ಕೊಡ್ತೀಯಾ ಮನೋಜ್?"

"ಹುಂ ಹೇಳು"

"ಈ ಹನಿಮೂನ್ ಗಿನಿಮೂನ್ ಯಾವುದೂ ಬೇಡ. ಈಗಿಂದೀಗಲೇ ಬೆಂಗಳೂರಿಗೆ ವಾಪಸ್ಸು ಹೋಗಿಬಿಡೋಣ. ನಿಜಾಂಶ ಏನೂಂತ ತಿಳ್ಕೋಳ್ಳೋಣ. ಅಮ್ಮ ತಪ್ಪು ಮಾಡಿದ್ರೆ. ಅಮ್ಮನ ಪರವಾಗಿ, ನಾನು ಅಪ್ಪನಲ್ಲಿ ಕ್ಷಮೆ ಕೇಳ್ತಿವಿ"

"ಹಾಗಾದ್ರೆ...ವಾಪಸ್ಸು ಹೊರಟು ಹೋಗೋಣ ಅಂತೀಯ?"

"ಹುಂ. ನನ್ನ ಮನಸ್ಸು ಅಪ್ಪನ ಕಡೆ ಎಳೆಯುತ್ತಿದೆ. ಅವರು ನಿಜಕ್ಕೂ ಕೆಟ್ಟವ ರಾಗಿದ್ದಿದ್ರೆ... ನನಗೆ ಅಷ್ಟು ಪ್ರೀತಿ ತೋರುತ್ತಿದ್ರಾ?ಹಗಲು ರಾತ್ರಿ ನನ್ನ ವಿಧ್ಯಾಭ್ಯಾಸ ಕ್ಕೋಸ್ಕರ ಒದ್ದಾಡುತ್ತಿದ್ರಾ? ನನ್ನನ್ನ ತನ್ನ ಮನೆಯಲ್ಲಿರಿಸಿಕೊಂಡು ಜೋಪಾನ ಮಾಡ್ತಿದ್ರಾ? ನನ್ನನ್ನ ನಿನ್ನ ಹೆಂಡತಿಯನ್ನಾಗಿ ಮಾಡ್ತಿದ್ರಾ? ಅವರು, ನಿನ್ನನ್ನೆಷ್ಟು ಪ್ರೀತಿಯಿಂದ ಸಾಕಿದ್ದಾರೋ, ಅಷ್ಟೇ ಪ್ರೀತಿಯಿಂದ ನನ್ನನ್ನು ನೋಡಿಕೊಂಡಿದ್ದಾರೆ ನಿಜಕ್ಕೂ ಅವರು ಮಹಾವ್ಯಕ್ತಿ"

"ಮುರಳಿಯೂ ಇದೇ ಮಾತನ್ನು ಹೇಳಿದ. ನಿಜ ಹೇಳ್ತೀನಿ, ಮೊದ ಮೊದಲು ನನಗೆ ನಿನ್ನ ಮೇಲೆ ಅಸೂಯೆಯಾಗಿತ್ತು. ಆದರೆ, ಈಚೆಗೆ ನಾನೇ ತಪ್ಪು ಮಾಡಿದವನು, ಎಂಬ ಕೀಳುಭಾವನೆ ನನ್ನನ್ನು ಬಾಧಿಸುತ್ತಿತ್ತು. ಇದನ್ನೆಲ್ಲ ಹೇಳಿಕೊಳ್ಳ ಲಾಗದೇ ಒದ್ದಾಡುತ್ತಿದ್ದ ನನ್ನನ್ನು ನೀನು ಅಲ್ ರ್‍ಯೋಮಾಂಟಿಕ್ ಅಂತ ಭಾವಿಸಿ, ಹಂಗಿಸಿದೆ."

"ಸಾರಿ ಮನೋಜ್...ನನಗಿದೆಲ್ಲಾ ಎಲ್ಲಿ ತಿಳಿದಿತ್ತು? ತಿಳೀದೇ ನಿನಗೆ ಹರ್ಟ್ ಮಾಡಿದೆ"

"ಈಗ ನಿನ್ನ ಮನಸ್ಸು ಸಮಾಧಾನ ಗೊಂಡಿದೆಯಲ್ಲ. ಹನಿಮೂನ್ ಬೇಕೋ ಬೇಡವೋ?"

"ಬೇಡವೇ ಬೇಡ. ಸೀದಾ ಊರಿಗೆ ವಾಪಸ್ಸು ಹೋಗೋಣ. ಮನಸ್ಸಿನಲ್ಲಿ ಈ ತಳಮಳಗಳನ್ನೆಲ್ಲ ಇಟ್ಟುಕೊಂಡು ಹಾಯಾಗಿ ತಿರುಗಾಡುಕ್ಕೆ ಆಗುತ್ತೆ ಅಂತೀಯಾ?"

"ಈ ಮುಂಚೆ ನನ್ನ ನೆಮ್ಮದಿಯೇ ಕೆಟ್ಟು ಹೋಗಿತ್ತು ರಾಧಿಕಾ...ಈಗ ನಿನಗೆ ಎಲ್ಲಾ ಹೇಳಿದ ಮೇಲೆ, ನನ್ನ ಮನಸ್ಸು ನಿರಾಳವಾಗಿದೆ. ಆದರೆ ನನಗೆ ಒಂದು ಸಂಶಯ. ನೀನು ಮಾವನ ಮೇಲೆ ಕಿರುಚಾಡ್ತೀಯ....ನನ್ನ ಮೇಲೆ ಕೂಗಾಡ್ತಿಯ ಅಂತ ಅಂದುಕೊಂಡಿದ್ದೆ. ಆದರೆ...ನೀನು ಅದ್ಹೇಗೆ ಸುಮ್ಮನಿದೀಯ? ಅದೂ ನಿನ್ನ ಸ್ವಭಾವಕ್ಕೆ ವಿರುದ್ಧವಾಗಿ"

"ಸಹವಾಸ ದೋಷ. ನಿನ್ನಂಥ ಗಂಡ, ಮಾವನಂಥ ತಂದೆಯ ಜೊತೆ, ಇರೋಳಿಗೆ, ತಾಳ್ಮೆ ಸಹನೆ, ತ್ಯಾಗ, ನಿಸ್ವಾರ್ಥತೆ ಎಲ್ಲಾ ತಾನೇ, ತಾನಾಗಿ ಬರುತ್ತೆ. ನನ್ನದೇನು ಹೆಚ್ಚುಗಾರಿಕೆ?

"ಸುಮ್ಮನೇ ಸುಳ್ಳು ಸುಳ್ಳೇ ಹೊಗಳಬೇಡ ಮಹಾರಾಯಿತಿ. ಹಾಗಾದ್ರೆ ನಿನಗೆ ನನ್ನ ಮಾವನ ಮೇಲೆ ಕೋಪ ಏನಿಲ್ಲ ತಾನೇ....?"

"ಸ್ವಲ್ಪ. ಕೋಪವೆಲ್ಲಾ ಅಮ್ಮನ ಮೇಲೇ....ಅವಳದೇ ತಪ್ಪಿರಬೇಕು. ಒಂದು ದಿನವಾದರೂ, ಅಪ್ಪನ್ನ ಕೆಟ್ಟದಾಗಿ ಬೈದಿರಲಿಲ್ಲ. ಅಪ್ಪನು ತಪ್ಪಿದ್ದರೆ, ಖಂಡಿತಾ ಬೈದಿರುತ್ತಿದ್ದಳು. ನನಗೆ ಹಾಗೆನ್ನಿಸುತ್ತೆ. ನಿನಗೆ?"

"ನಿನ್ನ ಅಮ್ಮನ ಸ್ವಭಾವ ನನಗೆ ಹೇಗೆ ಗೊತ್ತಾಗಬೇಕು?ಆದರೂ ಅವರು ನಮ್ಮಿಬ್ಬರನ್ನೂ ಕ್ಷಮಿಸಲಿಲ್ಲ ಅಂತ ಗೊತ್ತು."

"ಕ್ಷಮಿಸದಿದ್ದರೇನಾಯ್ತು?ಶಾಪ ಹಾಕಲಿಲ್ಲವಲ್ಲ."

"ಕಡೇ ಸಮಯದಲ್ಲಿ ನಿಮ್ಮ ಮನೆಯಲ್ಲಿರುವಂತೆ ನನಗೆ ಹೇಳಿದ್ದವಳು. ಅವಳೇ ಅದಕ್ಕೇ ಹಾಸ್ಟೆಲ್ಲಿಗೆ ಸೇರಲಿಲ್ಲ. ನಾನು ನಿಮ್ಮ ಮನೆಯಲ್ಲಿ ಸೇಫ್ ಆಗಿ ನಾನು ಇರಬಲ್ಲೆ ಎಂಬ ನಂಬಿಕೆ ಅಮ್ಮನಿಗಿತ್ತು. ಆದರೆ ನನಗೆ ಯಾವ ಸುಳಿವೂ ಅನುಮಾನ ಇರಲಿಲ್ಲ. ನಿನ್ನನ್ನೂ ಅವಳು ನನಗಾಗಿ ಮೆಚ್ಚಿದ್ದಾಳೆ. ವುಡ್ ಬೀ ಅಳಿಯ ಅಂತ ತೀರ್ಮಾನಿಸಿದ್ದಾಳೆ ಅಂತ ಅಂದ್ಕೊಂಡಿದ್ದೆ."

ಅಷ್ಟರಲ್ಲಿ ಡೆಲ್ಲಿಯ ಏರ್ ಪೋರ್ಟ್‌ನಲ್ಲಿ ಪ್ಲೇನ್ ಲ್ಯಾಂಡ್ ಆಗುತ್ತಿರುವು ದನ್ನು ಗಗನ ಸಖಿ ಸೂಚಿಸಿದಳು. ಇಳಿದ ಕೂಡಲೇ, ಮನೋಜ, ಏರ್‌ಪೋರ್ಟ್ ನಲ್ಲಿ ಮರು ಫ್ಲೈಟ್‌ಗಾಗಿ ವಿಚಾರಿಸಿದ.

" ಇವತ್ತು ಬೆಂಗಳೂರಿಗೆ ಮತ್ತೆ ಫ್ಲೈಟ್ ಇಲ್ಲ. ಇನ್ನು ನಾಳೆ ಬೆಳಿಗ್ಗೇ ನೇ.."

ಅಂತ ತಿಳಿಸಿದರು. ಅರ್ಜೆಂಟ್ ಅಂತ ಹೇಳಿ ಮಾರನೆಯ ದಿನದ ಪ್ರಯಾಣಕ್ಕೆ ಎರಡು ಟಿಕೆಟ್‌ಗಳನ್ನು ಕೊಂಡು ಕೊಂಡ. ಶ್ರೀನಗರದ ಟಿಕೆಟ್‌ಗಳನ್ನು ಕ್ಯಾನ್ಸಲ್ ಮಾಡಿಸಿದ.

ಲಗೇಜ್‌ಗಳನ್ನು ಹಿಡಿದು, ಇಬ್ಬರೂ ಏರ್ ಪೋರ್ಟ್‌ನಿಂದ ಹೊರಗೆ ಬಂದರು. ಡೆಲ್ಲಿಗೆ ಮೊಟ್ಟಮೊದಲಬಾರಿಗೆ ಬಂದಿದ್ದರೂ, ಸುತ್ತ ಮುತ್ತ ನೋಡುವ ಕೌತುಕವಿರಲಿಲ್ಲ. ಟ್ಯಾಕ್ಸಿ ಹಿಡಿದು. ಸಮೀಪದ ಒಂದು, ಲಕ್ಷುರಿ ಹೋಟೆಲ್ಲಿನಲ್ಲಿ ಇಳಿದುಕೊಂಡರು. ಆ ರಾತ್ರಿಯನ್ನು ಅಳು. ನಗು, ದುಃಖ ಸಂತೋಷಗಳ ಸಮ್ಮಿಶ್ರ ಭಾವನೆಗಳಿಂದ ಕಳೆದರು. ಬೆಳಗಾಗುವುದನ್ನೇ ಕಾದಿದ್ದು. ಸ್ನಾನ ತಿಂಡಿ ಇತ್ಯಾದಿ ಮುಗಿಸಿ. ಮತ್ತೆ ಏರ್‌ಪೋರ್ಟ್‌ಗೆ ಬಂದರು.

ಬೆಂಗಳೂರನ್ನು ತವಕದಿಂದ ತಲುಪಿದರು. ಮನೆಗೆ ಬಂದು ನೋಡಿದಾಗ ಮುಂಬಾಗಿಲಿಗೆ ಬೀಗ ಹಾಕಿತ್ತು. ಎಲ್ಲಿಗೆ ಹೋಗಿರಬಹುದು ಎಂದು ಚಿಂತಿಸುತ್ತಾ ಮತ್ತೆ ಆಟೋ ಹಿಡಿದು, ಮುರಳಿಯ ಮನೆಗೆ ಬಂದರು. ಮುರಳಿಯ ತಾಯಿ ಅವನನ್ನು ಕಂಡೊಡನೆ,

"ಸಧ್ಯ ಬಂದೆಯಪ್ಪಾ...? ನಿನ್ನನ್ನ ಹೇಗೆ ಕಾಂಟ್ಯಾಕ್ಟ್ ಮಾಡುವುದು ಅಂತ ಅದನ್ನೇ ಚಿಂತಿಸುತ್ತಿದ್ದೆವು." ಮನೋಜ ಗಾಭರಿಗೊಂಡ.

"ಯಾಕೆ ಆಂಟಿ? ಏನಾಯ್ತು? ಮಾವ ಹುಶಾರಾಗಿದ್ದಾನೆ ತಾನೇ?" ಆತಂಕದಿಂದ ವಿಚಾರಿಸಿದ. "ಇಲ್ಲ ಹುಶಾರಿಲ್ಲದೆ ಅವರನ್ನು ನರ್ಸಿಂಗ್ ಹೋಂಗೆ ಅಡ್ಮಿಟ್ ಮಾಡಿದ್ದಾರೆ. ಮುರಳಿ ಅಲ್ಲಿಯೇ ಇದಾನೆ." ನರ್ಸಿಂಗ್ ಹೋಂನ ವಿಳಾಸ ತಿಳಿಸಿದರು ಆಕೆ.

ರಾಧಿಕಾ. ಮನೋಜ ತಡಮಾಡದೇ ನರ್ಸಿಂಗ್ ಹೋಂ ತುಲುಪಿದರು. ಎದುರಿಗೆ ಮುರಳಿ ಸಿಕ್ಕಿದ.

"ಸಧ್ಯ ಬಂದೆಯಾ? ನಿನಗೆ ವಿಷಯ ಹೇಗೆ ಗೊತ್ತಾಯ್ತು?"

" ಅದನ್ನೆಲ್ಲ ನಿಧಾನವಾಗಿ ಹೇಳ್ತಿವಿ. ಮಾವ ಎಲ್ಲಿ? ಹೇಗಿದಾನೆ?"

" ನೀನೇ ನೋಡೂವಂತೆ ಬಾ...." ಮುರಳಿ ಅವನ ಕೈ ಹಿಡಿದ. ಅವನ ಮುಖದ ಕಸಿವಿಸಿ ಕಂಡು ಏನಾಗಿರಬಹುದು. ಯಾವ ಸ್ಥಿತಿಯಲ್ಲಿರಬಹುದು ಎಂದು ಮನೋಜ ಊಹಿಸಿದ.

ಸ್ಪೆಷಲ್ ವಾರ್ಡಿನ ಬೆಡ್ ಮೇಲೆ, ಮೂಗು ಬಾಯಿಗಳಲ್ಲಿ ಪೈಪುಗಳನ್ನು ಇಟ್ಟುಕೊಂಡು ಕಣ್ಣು ಮುಚ್ಚಿ ಮಲಗಿದ್ದ ಮಾವನನ್ನು ಕಂಡು ಮನೋಜನಿಗೆ ದುಃಖ ಒತ್ತಿ ಬಂತು. ಅವನ ಹಿಂದೇಯೇ ಬಂದ ರಾಧಿಕಾ. ನಿದ್ದೆಯ ಮಂಪರಿನಲ್ಲಿ ಮಲಗಿದ್ದ ರಂಗನಾಥನನ್ನು ಕಂಡು ಅಪ್ಪಾ ಅಪ್ಪಾ. ಎಂದು ಬಿಕ್ಕಳಿಸಿದಳು. ಮುರಳಿ, ಸಂದೇಹದಿಂದ ಮನೋಜನ ಕಡೆ ನೋಡಿದ. ಮನೋಜ ತಲೆ ಆಡಿಸಿ. ಅವಳಿಗೆ ಎಲ್ಲಾ ತಿಳಿದಿದೆ ಎನ್ನುವುದನ್ನು ಸೂಚಿಸಿದ.

ಅರೆ ನಿದ್ರೆಯಿಂದ ಎಚ್ಚೆತ್ತ ರಂಗನಾಥ ಅತ್ತಿತ್ತ ನೋಡಿದ. ಎದುರಿಗೆ ನಿಂತಿದ್ದ ರಾಧಿಕಾ. ಮನೋಜರನ್ನು ಗುರುತಿಸಿದ. ಅವನ ಕಣ್ಣುಗಳಲ್ಲಿ ಹೊಳಪು ಮೂಡಿತು. ಮಾತನಾಡಲೆಂದು ಬಾಯಿ ತೆರೆದ. ಆದರೆ ಧ್ವನಿ ಹೊರಡಲಿಲ್ಲ. ಇಬ್ಬರೂ ಅವನ ಸಮೀಪಕ್ಕೆ ಹೋಗಿನಿಂತರು. ಇಬ್ಬರೂ ಅವನ ಕೈಯನ್ನು ತಮ್ಮ ಕೈಗಳಲ್ಲಿ ಹಿಡಿದು

ಪ್ರೀತಿಯನ್ನು ಸೂಚಿಸಿದರು.

"ಮಾವಾ..."ಎಂದು ಕರೆದ ಮನೋಜ. ರಂಗನಾಥ ಅವನ ಕಡೆ ತಿರುಗಿದ. ಆದರೆ ಮಾತನಾಡಲು ಕಷ್ಟ ಪಡುತ್ತಿದಾನೆ ಎನಿಸಿತ್ತು. ಮುರಳಿ ಹಿಂದಿನಿಂದ ಪಿಸುದನಿಯಲ್ಲಿ "ಪೆರಾಲಿಟಿಕ್ ಸ್ಟ್ರೋಕ್..." ಎಂದಿದ್ದು ರಾಧಿಕಾಳಿಗೆ ಕೇಳಿಸಿತು. ಅವಳು ನಡುಗಿದಳು.

" ಅಪ್ಪಾ........" ಎಂದು ಅಳುತ್ತಾ. ರಂಗನಾಥನ ಕೈ ಹಿಡಿದು ತನ್ನ ಕಣ್ಣುಗಳಿಗೊತ್ತಿ ಕೊಂಡಳು.

ಅವಳ ಕಡೆ ಮಮತೆಯ ದೃಷ್ಟಿ ಬೀರಿದ ರಂಗನಾಥ ಆಯಾಸದಿಂದ ಕಣ್ಣುಗಳನ್ನು ಮುಚ್ಚಿದ. ಅವನಿಗೆ ಏನೋ ಬಾಧೆಯಾಗುತ್ತಿದೆ ಎನ್ನುವುದನ್ನು ಮೂವರೂ ಅರಿತರು. ಹಿರಿಯ ಡಾಕ್ಟರನ್ನು ಕರೆತರಲು ಮುರಳಿ, ಮನೋಜ್ ಸ್ಟಾಫ್ ಕಡೆಗೆ ಓಡಿದರು. ರಾಧಿಕಾ ರಂಗನಾಥನ ಮಗ್ಗುಲಲ್ಲಿ ಕುಳಿತು.. ಅವನ ಕೈಗಳನ್ನು ತನ್ನ ಅಂಗೈಯಲ್ಲಿ ಹಿಡಿದ ಮೂಕವಾಗಿ ರೋಧಿಸ ತೊಡಗಿದಳು.

ಡಾಕ್ಟರು ಮತ್ತೆ ಬಂದು ಚೆಕ್ ಮಾಡುವಷ್ಟರಲ್ಲಿ ಸಾಕಷ್ಟು ಸಮಯ ಕಳೆದಿತ್ತು. ಆಯಾಸದಿಂದ ಮುಚ್ಚಿದ ಕಣ್ಣುಗಳನ್ನು ರಂಗನಾಥ ಮತ್ತೆ ತೆರೆಯಲಿಲ್ಲ. ಡಾಕ್ಟರ್‌ನ ಮುಖವನ್ನೇ ಗಮನಿಸುತ್ತಿದ್ದ ಮುರಳಿಗೆ ಎಲ್ಲಾ ಅರ್ಥವಾಗಿತ್ತು, ಮನೋಜನ ಬೆನ್ನು ತಟ್ಟಿ ಸಾಂತ್ವನ ಹೇಳಿದ. ಮನೋಜ ಮುರಳಿಯ ಇಂಗಿತವನ್ನು ಅರ್ಥ ಮಾಡಿಕೊಂಡ. ರಾಧಿಕಾಳ ಕೈಯನ್ನು ಮಾವನ ಕೈನಿಂದ ಬೇರ್ಪಡಿಸಿದ. ನಿಶ್ಚೇತನ ಗೊಂಡ ಮಾವನ ಅಂಗೈ ಶಾಖವನ್ನು ನಿಧಾನವಾಗಿ ಕಳೆದುಕೊಳ್ಳುತ್ತಿತ್ತು. ತಬ್ಬಿಬ್ಬು ಗೊಂಡ ಮನೋಜ ರಾಧಿಕಾಳನ್ನು ಎಬ್ಬಿಸಿ ತನ್ನ ಭುಜಕ್ಕೆ ಒರಗಿಸಿಕೊಂಡ. ಅಪ್ಪನನ್ನೇ ನೋಡುತ್ತಿದ್ದ ರಾಧಿಕಾ... ಅಪ್ಪಾ ಎಂದು ಬಿಕ್ಕಳಿಸಿ ಅಳತೊಡಗಿದಳು.

**ಅವಳ ಕರೆಯನ್ನಾಗಲೀ, ರೋಧನವನ್ನಾಗಲೀ, ಕೇಳಲು ಅಸಾಧ್ಯವಾಗು ವಷ್ಟು ದೂರಕ್ಕೆ ರಂಗನಾಥ ಹೊರಟು ಹೋಗಿದ್ದ.... ನಿರ್ಮಲೆಯ ಹತ್ತಿರಕ್ಕೆ ..... ಕ್ಷಮೆ ಕೇಳಲು.**





ದೂರವಾದರು ಒಂದು ಸಾಮಾಜಿಕ ಕಾದಂಬರಿ. ಒಂದೇ ಕುಟುಂಬದ ಎರಡು ಪೀಳಿಗೆಯವರ ನಡುವೆ ಈ ಕಥೆ ಸಾಗುತ್ತದೆ.

ಕಥೆಯ ಪೂರ್ವಾರ್ಧದ ನಾಯಕ ರಂಗನಾಥ. ಮಧ್ಯಮ ವರ್ಗದ ಕುಟುಂಬದಲ್ಲಿ ಹುಟ್ಟಿ ಬೆಳೆದು ವಿದ್ಯಾವಂತನಾಗಿ, ಕಾಲೇಜಿನಲ್ಲಿ ಅಧ್ಯಾಪಕನಾಗಿರುತ್ತಾನೆ. ಡಾ. ನಿರ್ಮಲಾಳನ್ನು ಪ್ರೀತಿಸಿ ಮದುವೆ ಯಾಗುತ್ತಾನೆ. ಪರಿಸ್ಥಿತಿಯ ವಿಕೋಪಕ್ಕೆ ಬಲಿಯಾಗಿ ಕಣ್ಮರೆಯಾದ ತನ್ನ ತಂಗಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲು , ತನ್ನ ಪತ್ನಿಯಿಂದ ದೂರವಾಗುತ್ತಾನೆ. ತಂಗಿಯ ಮಗನನ್ನು ಒಬ್ಬ ಜವಾಬ್ದಾರಿಯುತ, ಆದರ್ಶ ಡಾಕ್ಟರನ್ನಾಗಿ ಮಾಡುವುದು ತನ್ನ ಮೊದಲ ಕರ್ತವ್ಯ ಎಂದು ಪರಿಗಣಿಸಿ ಅದಕ್ಕೆ ಪ್ರಾಧಾನ್ಯತೆ ಯನ್ನು ಕೊಡುತ್ತಾನೆ.

ಮನೋಜ ಮಾವನ ಮುದ್ದಿನ ಕಣ್ಮಣಿಯಾಗಿ ಬೆಳೆದು ಮಾವನ ವಿಶ್ವಾಸಕ್ಕೆ ಕುಂದು ಬರದಂತೆ, ತನ್ನ ಇತಿಮಿತಿಯನ್ನು ಅರಿತುಕೊಂಡು ಮಾವನ ಶ್ರಮವನ್ನು ಸಫಲ ಗೊಳಿಸಿ, ಸಾರ್ಥಕತೆ ಹೊಂದುತ್ತಾನೆ....